ಆನಂದ ಕರ್ಣಾಟಕ ಗ್ರಂಥರತ್ನಮಾಲೆ

ಶ್ರೀಃ

ಶ್ರೀವ್ಯಾಸಮಹರ್ಷಿಪ್ರಣೀತ

# ಶ್ರೀಮದ್ಭಾಗವತವು

ಕರ್ಣಾಟಕ ವಚನವು

(ತೃತೀಯಸ್ಕಂಧವು)




ಶ್ರೀಮದ್ಯದುಶೈಲನಿವಾಸರಸಿಕ

ಪಂಡಿತ, ದೇವಶಿಖಾಮಣಿ ಅಳಸಿಂಗರಾಚಾರ್ಯ ವಿರಚಿತವು

Vol. II




ಆರ್. ವೆಂಕಟೇಶ್ವರ್ ಅಂಢ್ ಕಂಪನಿ

135, ಭೀಮಸೇನಾ ಗಾರ್ಡನ್ಸ್, ಮೈಲಾಪುರ

ಮದ್ರಾಸು–4

 [Price Rs. 4–50

Dedicated to the memory of

H. BHIMASENA RAU

*Accountant General*

for whose unstinted support
the publisher is grateful.

# ತೃತೀಯಸ್ಕಂಧದ ವಿಷಯಾನುಕ್ರಮಣಿಕೆ

## ತೃತೀಯಸ್ಕಂಧದೊಳಗಣ ಚಿತ್ರಪಟಗಳು

---



ಶ್ರೀಕೃಷ್ಣಾಯನಮಃ

# ಶ್ರೀಮದ್ಭಾಗವತವು

## ತೃತೀಯಸ್ಕಂಧವು

{ ವಿದುರನು ಉದ್ಧವನನ್ನು ಕಂಡು ಕೃಷ್ಣ ವೃತ್ತಾಂತ ವನ್ನು ಕೇಳಿದುದು. }

ತಿರುಗಿ ಶುಕಮುನಿಯು ಪರೀಕ್ಷಿದ್ರಾಜನನ್ನು ಕುರಿತು ಹೇಳುವನು. "ಎಲೈ ರಾಜೇಂದ್ರನೆ ಕೇಳು! ನಿನ್ನ ಮುತ್ತಾತಂದಿರಾದ ಪಾಂಡವರಿಗೆ ಮಂತ್ರಿಯಾಗಿಯೂ, ಲೋಕಾಧಿಪತಿಯಾದ ಯಮದೇವನ ಅಂಶದಿಂದ ಹುಟ್ಟಿದವನಾಗಿಯೂ ಇದ್ದ ವಿದುರನು, ತನ್ನ ಸಮಸ್ತಸೌಭಾಗ್ಯದಿಂದ ಕೂಡಿದ ಮನೆಯನ್ನು ಬಿಟ್ಟು ವನವನ್ನು ಪ್ರವೇಶಿಸಿದ ಮೇಲೆ, ಒಂದಾನೊಂದು ಸ್ಥಳದಲ್ಲಿ ಮೈತ್ರೇಯ ಮಹರ್ಷಿಯನ್ನು ಸಂಧಿಸಿ, ಆ ಮಹಾತ್ಮನ ಪಾದಪದ್ಮಗಳಿಗೆ ನಮಸ್ಕರಿಸಿ, ನೀನು ಈಗ ನನ್ನನ್ನು ಕುರಿತು ಪ್ರಶ್ನೆ ಮಾಡಿದ ವಿಷಯಗಳನ್ನೇ ಪ್ರಶ್ನೆಮಾಡಿರುವನು. ಅದಕ್ಕೆ ಮೈತ್ರೇಯ ಮಹರ್ಷಿಯು ಹೇಳಿದ ಪ್ರತ್ಯುತ್ತರವನ್ನೇ ಈಗ ನಿನಗೂ ನಾನು ತಿಳಿಸುವೆನು" ಎಂದನು. ಇಷ್ಟರಲ್ಲಿ ಪರೀಕ್ಷಿದ್ರಾಜನು ಶುಕನನ್ನು ಕುರಿತು "ಎಲೈ ಮಹಾತ್ಮನೆ! ವಿದುರನು ಮೈತ್ರೇಯ ಮಹಾಮುನಿಯನ್ನು ಸಂಧಿಸಿದುದೆಲ್ಲಿ? ಅವರಿಬ್ಬರಿಗೂ ಸಂವಾದವು ನಡೆದ ಕಾಲವಾವುದು? ಯಾವಾಗಲೂ

ಶ್ರೀಕೃಷ್ಣನಲ್ಲಿಯೇ ನಟ್ಟ ಮನಸ್ಸುಳ್ಳ ವಿದುರನು, ಮೈತ್ರೇಯನನ್ನು ಕೇಳಿದ ಪ್ರಶ್ನೆಗಳೆಲ್ಲವೂ ಭಗವಂತನ ಸಚ್ಚರಿತ್ರಗಳಿಂದ ಕೂಡಿರುವುದರಲ್ಲಿ ಸಂದೇಹವಿಲ್ಲ. ಅದರಲ್ಲಿರತಕ್ಕ ವಿಷಯಗಳೂ ಸರ್ವೋತ್ತಮವಾದ ಪುರುಷಾರ್ಥವನ್ನು ಕೈಗೂಡಿಸುವುವಲ್ಲದೆ, ಅಲ್ಪಪ್ರಯೋಜನಗಳಲ್ಲಿ ಪರ್ಯವಸಾನ ಹೊಂದತಕ್ಕುವಲ್ಲ. ಆದುದರಿಂದ ಆ ವಿಷಯಗಳನ್ನು ಅತ್ಯವಶ್ಯಕವಾಗಿಯೇ ಕೇಳಿ ತಿಳಿಯಬೇಕೆಂದಿರುವೆನು. ನನ್ನಲ್ಲಿ ಅನುಗ್ರಹವಿಟ್ಟು ಅವೆಲ್ಲವನ್ನೂ ತಿಳಿಸಬೇಕು. ಆ ವಿದುರನೋ ಮಹಾತ್ಮನು! ಮೈತ್ರೇಯ ಮಹರ್ಷಿಯೂ ಕೂಡ ಪರಾಪರತತ್ವಗಳನ್ನು ಯಥಾಸ್ಥಿತವಾಗಿ ತಿಳಿದವನು. ಎಣೆಯಿಲ್ಲದ ಗುಣಾತಿಶಯದಿಂದ ಕೂಡಿದವನು. ಅವರಿಬ್ಬರ ಸಂವಾದಗಳೆಲ್ಲವೂ ಸಚ್ಚರಿತ್ರಗಳಿಂದಲೇ ತುಂಬಿರಬೇಕು. ಆದುದರಿಂದ ಅದೇ ವಿಷಯಗಳನ್ನು ಕೃಪೆಯಿಟ್ಟು ತಿಳಿಸು" ಎಂದನು. ಪರೀಕ್ಷಿದ್ರಾಜನು ಕೇಳಿದ ಈ ಪ್ರಶ್ನೆಗಳಿಗಾಗಿ ಶುಕಮುನಿಯು ಬಹಳ ಸಂತೋಷಗೊಂಡು, ಆ ವಿಷಯವನ್ನೇ ವಿಸ್ತಾರವಾಗಿ ತಿಳಿಸತೊಡಗಿದನು. "ಎಲೈ ರಾಜೇಂದ್ರನೇ! ವಿದುರನು ಹಸ್ತಿನಾಪುರವನ್ನು ಬಿಟ್ಟು ವನಪ್ರವೇಶ ಮಾಡುವುದಕ್ಕೆ ಕಾರಣವೇನೆಂಬುದನ್ನು ಮೊದಲು ತಿಳಿಸುವೆನು ಕೇಳು! ಕೌರವರಾಜನಾದ ಧೃತರಾಷ್ಟ್ರನು, ಸ್ವಲ್ಪಮಾತ್ರವೂ ಧರ್ಮದಲ್ಲಿ ದೃಷ್ಟಿಯಿಲ್ಲದವನಾಗಿ, ದುಷ್ಟರಾದ ತನ್ನ ಮಕ್ಕಳನ್ನು ಶಿಕ್ಷಿಸಲಾರದೆ, ಅವರ ದಾರಿಯನ್ನೇ ಅನುಸರಿಸಿ ಹೋಗುತ್ತಿದ್ದನು. ಇತ್ತಲಾಗಿ ಪಾಂಡವರು ತಮ್ಮ ತಂದೆಯಾದ ಪಾಂಡುಮಹಾರಾಜನ ಮರಣದಿಂದ ನೊಂದು, ದಿಕ್ಕಿಲ್ಲದೆ ತನ್ನಲ್ಲಿ ಮರೆಹೊಕ್ಕು ಬಂದರೂ, ಧೃತರಾಷ್ಟ್ರನು ಅವರಲ್ಲಿ ಸ್ವಲ್ಪವಾದರೂ ಕನಿಕರವನ್ನು ತೋರಿಸದೆ ಹೋದನು. ಕ್ರೂರಸ್ವಭಾವವುಳ್ಳ ತನ್ನ ಮಗನಾದ ದುರ್ಯೋಧನನ ದುರ್ಬೋಧನೆಯಿಂದ ಅವರಿಗೆ ತನ್ನಲ್ಲಿ ಆಶ್ರಯವನ್ನು ಕೊಡದಿದ್ದುದು ಮಾತ್ರವಲ್ಲ! ಆ ಪಂಚಪಾಂಡವರನ್ನು ಅರಗಿನ ಮನೆಯಲ್ಲಿ ಸೇರಿಸಿ, ಸುಡುವುದಕ್ಕೂ ಅವಕಾಶವನ್ನು ಕೊಟ್ಟನು. ಇಷ್ಟುಮಾತ್ರವೇ ಅಲ್ಲದೆ, ದುರಾತ್ಮನಾದ ದುಶ್ಶಾಸನನೆಂಬ ತನ್ನ ಮಗನು, ಪರಮ ಪತಿವ್ರತೆಯಾದ ದ್ರೌಪದಿಯ ತಲೆತುರುಬನ್ನು ಹಿಡಿದು, ಸಭಾ ಮಧ್ಯಕ್ಕೆಳೆದು ತಂದು, ಅವಳ ಉಟ್ಟ ಬಟ್ಟೆಯನ್ನೆಳೆಯುವುದಕ್ಕೆ ಹೋದಾಗಲೂ ಸುಮ್ಮನಿದ್ದನು. ಈ ವಿಧವಾದ ಮಾನಭಂಗವು

ತನಗೆ ಸಂಭವಿಸಿದುದಕ್ಕಾಗಿ, ದ್ರೌಪದಿಯು ಆ ಸಭಾ ಮಧ್ಯದಲ್ಲಿ ಧಾರೆ ಧಾರೆಯಾಗಿ ಕಣ್ಣೀರನ್ನು ಬಿಟ್ಟು ಗೋಳಿಡುವುನ್ನು ಕೇಳಿಯೂ, ಕುರುಡನಾದ ಆ ಧೃತರಾಷ್ಟ್ರನು ತನ್ನ ಮಕ್ಕಳನ್ನು ಈ ಅಕೃತ್ಯದಿಂದ ತಡೆಯದೆ ಹೋದನು. ಅದರಿಂದಾಚೆಗೆ ಜೂಜಿನಲ್ಲಿ ಪರಾಜಿತನಾದ ಧರ್ಮರಾಜನು, ತನ್ನ ಸತ್ಯಕ್ಕೆ ಕಟ್ಟುಬಿದ್ದು, ತನ್ನ ಭಾರ್ಯೆಯಾದ ದ್ರೌಪದಿಯನ್ನೂ ಸಹೋದರರಾದ ಭೀಮಾದಿಗಳನ್ನೂ ಕರೆದುಕೊಂಡು ಕಾಡಿನಲ್ಲಿ ಹನ್ನೆರಡು ವರುಷಗಳನ್ನು ಕಳೆದು, ಒಂದು ವರುಷದ ಅಜ್ಞಾತವಾಸವನ್ನೂ ತೀರಿಸಿ, ಹಿಂತಿರುಗಿ ಬಂದಮೇಲೆಯೂ, ತಿರುಗಿ ತಾನಾಗಿ ಧೃತರಾಷ್ಟ್ರನ ಕಾಲನ್ನು ಹಿಡಿದು "ಈಗಲಾದರೂ ನಮ್ಮ ತಂದೆಯ ರಾಜ್ಯವನ್ನು ನಮಗೆ ಕೊಡಿಸಬೇಕು" ಎಂದು ದೈನ್ಯದಿಂದ ಯಾಚಿಸಿದನು. ಬುದ್ಧಿಹೀನನಾದ ಧೃತರಾಷ್ಟ್ರನು, ಅದಕ್ಕೂ ಸಮ್ಮತಿಸದೆ ಹೋದನು. ಕೊನೆಗೆ ಪಾಂಡವರು ಬೇರೆ ದಾರಿಯಿಲ್ಲದೆ, ತಮಗೆ ಆಪದ್ಬಂಧುವಾದ ಶ್ರೀಕೃಷ್ಣನನ್ನು ದುರ್ಯೋಧನನ ಸಭೆಗೆ ರಾಯಭಾರಿಯನ್ನಾಗಿ ಮಾಡಿ ಕಳುಹಿಸಿದನು. ಆ ಶ್ರೀವತ್ಸಲನಾದ ಶ್ರೀಕೃಷ್ಣನು, ಪಾಂಡವರ ಮಾತನ್ನು ಮೀರಲಾರದೆ, ಹಸ್ತಿನಾಪುರಕ್ಕೆ ಬಂದು, ಸಭಾಮಧ್ಯದಲ್ಲಿ ದುರ್ಯೋಧನನನ್ನು ಕುರಿತು, ಕಿವಿಗಿಂಪಾದ ಮೃದುಮಧುರ ವಾಕ್ಯಗಳಿಂದ ಎಷ್ಟೋ ವಿಧದಲ್ಲಿ ಹಿತವಾದವನ್ನು ಹೇಳಿದನು. ಶ್ರೀಕೃಷ್ಣನ ಹಿತೋಕ್ತಿಗಳನ್ನು ಕೇಳಿ ಅಲ್ಲಿದ್ದ ಭೀಷ್ಮಾದಿಗಳು ಮಿತಿಮೀರಿ ಸಂತೋಷಗೊಂಡು, ಮಾತುಮಾತಿಗೂ ಅದನ್ನನುಮೋದಿಸುತ್ತಿದ್ದರು. ದುಷ್ಟನಾದ ಧೃತರಾಷ್ಟ್ರನು ಮಾತ್ರ ಸಂತೋಷಿಸಲಿಲ್ಲ. ಆದರೆ ಧೃತರಾಷ್ಟ್ರನು ಈ ವಿಷಯದಲ್ಲಿ ಮುಂದಾಲೋಚನೆಯನ್ನು ಮಾಡುವುದಕ್ಕಾಗಿ ತನಗೆ ಮುಖ್ಯಮಂತ್ರಿಯಾಗಿಯೂ ಹಿತೈಷಿಯಾಗಿಯೂ ಇದ್ದ ವಿದುರನನ್ನು ಕರೆಸಲು, ವಿದುರನು ಧೃತರಾಷ್ಟ್ರನ ಅರಮನೆಗೆ ಹೋದನು. ಆಗ ಧೃತರಾಷ್ಟ್ರನು, ವಿದುರನನ್ನು ಸತ್ಕರಿಸಿ ಕುಳ್ಳಿರಿಸಿಕೊಂಡು ಆತನಿಗೆ ಹಿಂದೆ ಸಂಗತಿಗಳೆಲ್ಲವನ್ನೂ ತಿಳಿಸಿ, ಮುಂದಿನ ಕಾರ್ಯಾಲೋಚನೆಯೇನೆಂದು ಪ್ರಶ್ನೆ ಮಾಡಲು, ವಿದುರನು ಅಂಧನಾದ ಈ ಧೃತರಾಷ್ಟ್ರನಿಗೆ ಹಿತೋಪದೇಶವನ್ನು ಮಾಡತೊಡಗಿದನು. "ಎಲೈ ಮಹಾರಾಜನೆ! ನೀನು ಉದಾಸೀನನಾಗಿರುವುದನ್ನು ನೋಡಿ ನಿನ್ನ ಮಕ್ಕಳಾದ ದುರ್ಯೋಧನಾದಿಗಳು, ಪಾಂಡವರ

ವಿಷಯದಲ್ಲಿ ನಡೆಸಿದ ಅಪರಾಧಗಳನ್ನು ಅಷ್ಟಿಷ್ಟೆಂದು ಹೇಳಿತೀರದು! ಅವೆಲ್ಲವೂ ನಿನಗೆ ತಿಳಿಯದ ವಿಷಯಗಳಲ್ಲವಷ್ಟೆ? ನಿನ್ನ ಮಕ್ಕಳು ಮಾಡಿದ ಒಂದೊಂದು ಕೃತ್ಯವೂ ಪಾಂಡವರಿಗೆ ಪ್ರಾಣಾಪಾಯಕರವಾದುದೇ ಹೊರತು ಬೇರೆಯಲ್ಲ! ಇಷ್ಟಾದರೂ ಧರ್ಮರಾಜನು ಬಹಳ ಶಾಂತ ಸ್ವಭಾವನಾದುದ ರಿಂದ, ಸ್ವಲ್ಪಮಾತ್ರವೂ ಕೋಪವನ್ನು ತೋರಿಸದೆ, ಅವೆಲ್ಲವನ್ನೂ ಸಹಿಸಿ ಕೊಂಡು, ನಿನ್ನಲ್ಲಿಗೆ ಬಂದು ತನ್ನ ತಂದೆಯ ದಾಯಭಾಗವನ್ನು ಕೊಡ ಬೇಕೆಂದು ದೈನ್ಯದಿಂದ ಯಾಚಿಸಿದನು. ಆಗಲೂ ನಿನಗೆ ಕರುಣೆ ಹುಟ್ಟ ಬೇಡವೇ? ಹೀಗೆ ಪಾಂಡವರಲ್ಲಿ ನೀನು ವಿರೋಧವನ್ನು ಬೆಳೆಸುವುದು ಸರ್ವಥಾ ಯುಕ್ತವಲ್ಲ! ಇನ್ನಾದರೂ ನೀನು ಅವರಿಗೆ ಸೇರಬೇಕಾದ ರಾಜ್ಯ ವನ್ನು ಹಂಚಿ ಕೊಡದಿದ್ದ ಪಕ್ಷದಲ್ಲಿ ನಿನ್ನ ವಂಶವು ನಿರ್ಮೂಲವಾಗದಿರದು! ನಿನ್ನ ಮಕ್ಕಳ ಹೆಸರನ್ನು ಕೇಳಿದ ಮಾತ್ರದಲ್ಲಿಯೇ ಭೀಮಸೇನನು ಕಾಲಿಂದ ಮೆಟ್ಟಿದ ಕಾಳಸರ್ಪದಂತೆ ಅತ್ಯಾಕ್ರೋಶದಿಂದ ರೇಗಿ ಬೀಳುವನು. ಆ ಭೀಮನ ಕೈಯಿಂದಲೇ ನಿನ್ನ ಮಕ್ಕಳಿಗೆ ಸಾವು ಸಿದ್ಧವು! ರಾಜೇಂದ್ರಾ! ಈ ವಿಷಯವನ್ನು ನಾನು ಮೊದಲಿಂದಲೇ ನಿನಗೆ ಸಾರಿ ಹೇಳುತ್ತಿರುವೆನು! ನಿನ್ನ ಮಕ್ಕಳು ಎಷ್ಟೇ ಬಲವಂತರಾಗಿದ್ದರೂ, ದೈವಬಲವಿಲ್ಲದ ಮೇಲೆ ಹುಲ್ಲಿಗಿಂತಲೂ ಕಡೆಯೆಂಬುದನ್ನು ನೀನು ತಿಳಿಯದವನಲ್ಲ. ಅಂತಹ ದೈವ ಬಲವು ಈಗ ನಿನಗಾಗಲೀ, ನಿನ್ನ ಮಕ್ಕಳಿಗಾಗಲೀ ಸ್ವಲ್ಪ ಮಾತ್ರವೂ ಇಲ್ಲ. ಪಾಂಡವರಿಗಾದರೋ ಆ ದೈವಬಲವು ಪೂರ್ಣವಾಗಿರುವುದು. ರಾಜೇಂದ್ರಾ! ಆ ಧರ್ಮರಾಜನು ಕೈಲಾಗದ ಅಶಕ್ತನಾದುದರಿಂದ ಹೀಗೆ ಸಾಧುತ್ವವನ್ನು ತೋರಿಸುವನೆಂದೆಣಿಸಬೇಡ! ಯುದ್ಧದಲ್ಲಿ ಯಾವ ಶತ್ರು ಗಳಿಗೂ ಭೆಯಪಟ್ಟು ಓಡದೆ ಸ್ಥಿರವಾಗಿ ನಿಲ್ಲತಕ್ಕವನಾದುದರಿಂದಲ್ಲವೇ ಅವನಿಗೆ ಯುಧಿಷ್ಠಿರನೆಂದು ಹೆಸರು! ಮತ್ತು ಅವನಿಗೆ ಬೆಂಬಲವಾಗಿರುವ ನಾಲ್ವರು ಸಹೋದರರಲ್ಲಿ ಭೀಮಸೇನನ ಪರಾಕ್ರಮವನ್ನು ಕಾಣೆಯಾ? ಯಾವನು ನಿನ್ನ ಮಕ್ಕಳ ಹೆಸರನ್ನು ಕೇಳಿದ ಮಾತ್ರಕ್ಕೆ ಕೋಪದಿಂದ ಕಾಳ ಸರ್ಪದಂತೆ ಬುಸುಗುಟ್ಟುತ್ತಿರುವನೋ, ಅಂತಹ ಭೀಮಸೇನನು ತನ್ನಣ್ಣನ ಮನೋನುವರ್ತಿಯಾಗಿ ಅವನಿಗೆ ಬೆಂಬಲವಾಗಿ ನಿಂತಿರುವನಲ್ಲವೇ? ಇವೆ ಲ್ಲವೂ ನಿನಗೆ ತಿಳಿಯದ ವಿಷಯಗಳಲ್ಲವಷ್ಟೇ? ಇದು ಹಾಗಿರಲಿ! ಆ

ಪಾಂಡವರಿಗೆ ದೈವಬಲವುಂಟೆಂಬುದನ್ನು ನಾನು ಹೇಗೆ ಬಲ್ಲೆನೆಂದು ಕೇಳು ವೆಯಾ? ಈ ವಿಷಯವು ಎಲ್ಲರಿಗೂ ಪ್ರತ್ಯಕ್ಷಸಿದ್ಧವು! ಜ್ಞಾನ, ಶಕ್ತಿ, ಬಲಾದಿಗಳಾದ ಷಡ್ಗುಣಗಳಿಂದ ಪೂರ್ಣನಾಗಿಯೂ, ಭೋಗಮೋಕ್ಷಪ್ರದ ನಾಗಿಯೂ ಇರುವ ಭಗವಂತನಾದ ಶ್ರೀಕೃಷ್ಣನೇ "ಮಮ ಪ್ರಾಣಾಹಿ ಪಾಂಡವಾಃ" ಎಂಬುದಾಗಿ, ತನಗೆ ಪಾಂಡವರೇ ಪ್ರಾಣಸಮಾನರೆಂದು ಪರಮಪ್ರೇಮದಿಂದ ನೋಡುತ್ತಿರುವನು. ಇಂತಹ ಪರದೈವವೇ ಪಾಂಡವ ರನ್ನು ಕೈಹಿಡಿದಿರುವಾಗ, ಅವರಿಗೆ ದೈವಬಲವುಂಟೆಂಬುದಕ್ಕೆ ಬೇರೆ ಪ್ರಮಾಣ ವೇಕೆ? ರಾಜೇಂದ್ರಾ! ಆ ಕೃಷ್ಣನನ್ನು ಯಾರೆಂದು ಬಲ್ಲೆ? ಬ್ರಾಹ್ಮಣ ರೆಲ್ಲರೂ ಆತನನ್ನೇ ತಮಗೆ ಪರದೈವವೆಂದು ಭಾವಿಸಿ ಪೂಜಿಸುತ್ತಿರುವರು. ಅವರೆಲ್ಲರಿಗೂ ಆತನೇ ಸರ್ವಶ್ರೇಯಸ್ಸನ್ನೂ ಉಂಟುಮಾಡತಕ್ಕವನು. ಅಂತಹ ಶ್ರೀಕೃಷ್ಣನು, ಎಲ್ಲಿ ತನ್ನ ವಾತ್ಸಲ್ಯವನ್ನು ತೋರಿಸುತ್ತಿರುವನೋ ಅಲ್ಲಿ ಜಯವೆಂಬುದು ಸಿದ್ಧವು. "ಎಲ್ಲಿಯೋ ಬಹು ದೂರದಲ್ಲಿ ಏಕಾಕಿಯಾಗಿರುವ ಆ ಭಗವಂತನು ಇಲ್ಲಿ ನಮ್ಮನ್ನೇನು ಮಾಡಬಲ್ಲನು?" ಎಂದೆಣಿಸಬೇಡ. ಅವನು ತನ್ನ ಪಟ್ಟಣದಲ್ಲಿಯೇ ಇರುವನು. ಸಾತ್ಯಕಿ, ಪ್ರದ್ಯುಮ್ನ, ಅನಿ ರುದ್ಧರೇ ಮೊದಲಾದ ಅನೇಕ ಯಾದವಶ್ರೇಷ್ಠರು ಅವನ ಆಜ್ಞಾಧೀನರಾಗಿ ನಡೆಯುತ್ತಿರುವರು. ಮತ್ತು ಆ ಶ್ರೀಕೃಷ್ಣನು ಮದಾಂಧರಾದ ಕ್ಷತ್ರಿಯ ರನ್ನು ನಿಗ್ರಹಿಸಿ, ಅವರ ರಾಜ್ಯವನ್ನು ಕೈಕೊಂಡು ಧರ್ಮಶೀಲರಾದ ರಾಜರ ಕೈಗೆ ಒಪ್ಪಿಸಿರುವನು. ಅಂತಹ ರಾಜರೆಲ್ಲರೂ ಅವನಿಗೆ ದಾಸಾನುದಾಸ ರಾಗಿ ನಡೆಯುತ್ತಿರುವರು. ಇಂತಹ ಶ್ರೀಕೃಷ್ಣಪರಮಾತ್ಮನೇ ಪಾಂಡವರಿಗೆ ಬೆಂಬಲವಾಗಿರುವಾಗ ಅವರನ್ನು ಜಯಿಸುವುದು ಮತ್ತೊಬ್ಬರಿಗೆ ಸಾಧ್ಯವೆ? ಎಲೈ ರಾಜೇಂದ್ರನೇ! ಆ ಪಾಂಡವರ ವಿಷಯವು ಹಾಗಿರಲಿ! ನಿನ್ನ ಮಕ್ಕಳ ಶೀಲಸ್ವಭಾವಗಳನ್ನೂ ತಿಳಿಸುವೆನು ಕೇಳು! ನೀನು ಯಾವನನ್ನು ನಿನ್ನ ಮೋಹದ ಮಗನೆಂದೂ, ಜ್ಯೇಷ್ಠಪುತ್ರನೆಂದೂ, ಪ್ರೇಮದಿಂದ ಪೋಷಿಸುತ್ತ ಬಂದೆಯೋ, ಆ ದುರ್ಯೋಧನನೆಂಬವನು ಸಕಲ ವಿಧವಾದ ದೋಷಗಳಿಗೂ, ನಿವಾಸಸ್ಥಾನನಾಗಿರುವನು. ನಿನ್ನ ಜನ್ಮಾಂತರದ ಪಾಪ ರಾಶಿಯೇ ಈ ಆಕೃತಿಯನ್ನು ಹೊಂದಿ ನಿನ್ನ ಕುಲವನ್ನು ನಿರ್ಮೂಲ ಮಾಡುವುದಕ್ಕಾಗಿ ನಿನ್ನ ಮನೆಯಲ್ಲಿ ಹೊಕ್ಕಿರುವುದೇ ಹೊರತು ಬೇರೆಯಲ್ಲ.

ರಾಜೇಂದ್ರಾ! ನಾನು ಹೇಳುವ ಮಾತನ್ನು ಅಸತ್ಯವೆಂದೆಣಿಸಬೇಡ. ನಿನ್ನ ಮಕ್ಕಳಲ್ಲಿ ಅಂತಹ ದೋಷವೇನೆಂದು ಕೇಳುವೆಯಾ? ಮುಖ್ಯವಾಗಿ ಭಗವಂತನನ್ನು ದ್ವೇಷಿಸುತ್ತಿರುವುದೇ ಅವನ ಮುಖ್ಯ ಸ್ವಭಾವವಾಗಿರುವುದು. ಈಗಲೂ ಆ ಶ್ರೀಕೃಷ್ಣನ ವಿಷಯದಲ್ಲಿ ಕೇವಲ ವಿಮುಖನಾಗಿರುವನು, ಈ ಕಾರಣದಿಂದಲೇ ಅವನ ಸಕಲೈಶ್ವರ್ಯವೂ ಕೈಬಿಟ್ಟುಹೋಗುವುದಕ್ಕೆ ಕಾಲವು ಸಮೀಪಿಸುವುದು. ಎಲೈ! ರಾಜನೆ! ಈಗಲೂ ನೀನು ನಿನ್ನ ಕುಲವನ್ನು ರಕ್ಷಿಸಿಕೊಳ್ಳಬೇಕೆಂಬ ಆಸೆಯುಳ್ಳವನಾಗಿದ್ದರೆ, ಮುಂದೆಯೂ ನಿನ್ನ ಕುಲಕ್ಕೆ ಕ್ಷೇಮವನ್ನು ಕೋರುವವನಾಗಿದ್ದರೆ, ಈ ನಿನ್ನ ಮಗನಾದ ದುರ್ಯೋಧನನನ್ನು ಈ ಕ್ಷಣವೇ ತೊರೆದುಬಡು! ವಂಶದ ಕ್ಷೇಮಕ್ಕಾಗಿ ಮಗನನ್ನು ತೊರೆದರೂ ಅದರಿಂದ ದೋಷವಿರದು. ಈ ವಿಷಯದಲ್ಲಿ ಮಾತ್ರ ನೀನು ಕಾಲ ನಿರೀಕ್ಷಣೆಯನ್ನೂ ಮಾಡಬೇಡ! ಮೊದಲು ಈ ಕಾರ್ಯವನ್ನು ಮಾಡಿ ನಿನ್ನ ವಂಶವನ್ನುಳಿಸಿಕೊಳ್ಳುವುದಕ್ಕೆ ದಾರಿಯನ್ನು ನೋಡು! ಈ ಕ್ಷಣವೇ ಈ ದುರ್ಯೋಧನನನ್ನು ಮನೆಯಿಂದ ಹೊರಡಿಸಿಬಿಡು" ಎಂದನು. ಹೀಗೆ ವಿದುರನು ಧೃತರಾಷ್ಟ್ರನಿಗೆ ಹಿತವನ್ನು ಹೇಳುತ್ತಿದ್ದಾಗ, ದುರ್ಯೋಧನನೂ ಅದನ್ನು ಆಮೂಲಾಗ್ರವಾಗಿ ಕೇಳುತ್ತಿದ್ದನು. ದುರ್ಯೋಧನನಿಗೆ ಮೇಲೆ ಮೇಲೆ ಕೋಪವು ಉಕ್ಕಿಬರುತ್ತಿತ್ತು! ತಡೆಯಲಾರದ ಕೋಪದಿಂದ ತುಟಿಗಳು ನಡುಗುತ್ತಿದ್ದುವು. ಅವನು ಕರ್ಣ, ದುಶ್ಶಾಸನ, ಶಕುನಿಗಳೊಡಗೂಡಿ, ಪರಮ ಸಾಧುವಾಗಿಯೂ, ಸಮಸ್ತ ಜನರಿಂದಲೂ ಆದರಿಸಲ್ಪಟ್ಟ ಗುಣವುಳ್ಳವನಾಗಿಯೂ ಇರುವ ವಿದುರನನ್ನು ಕ್ರೂರವಾಕ್ಯಗಳಿಂದ ತಿರಸ್ಕರಿಸತೊಡಗಿದನು. "ಎಲೈ ಪರೀಕ್ಷಿದ್ರಾಜನೆ! ಮಹಾತ್ಮನಾದ ವಿದುರನ ವಿಷಯದಲ್ಲಿ ದುರ್ಯೋಧನನು ನುಡಿದ ಅವಾಚ್ಯವಾಕ್ಯಗಳನ್ನು ತಿಳಿಸುವೆನು ಕೇಳು: ನೀಚಬುದ್ಧಿಯುಳ್ಳ ಆ ದುರ್ಯೋಧನನು ಸಮೀಪದಲ್ಲಿದ್ದ ವಿದುರನನ್ನು ನೋಡಿ, "ಛೀ! ಕುಟಿಲಬುದ್ಧಿಯುಳ್ಳ ಈ ದಾಸೀಪುತ್ರನನ್ನು ಇಲ್ಲಿಗೆ ಕರೆದವರಾರು? ನಮ್ಮ ಮನೆಯ ಕೂಳನ್ನು ತಿಂದು ಕೊಬ್ಬಿದ ಈ ನೀಚನು, ನಮ್ಮಲ್ಲಿಯೇ ವಿರೋಧವನ್ನು ತೋರಿಸಿ, ಶತ್ರುಗಳಿಗೆ ಕ್ಷೇಮವನ್ನು ಕೋರುತ್ತಿರುವನು! ಉಂಡ ಮನೆಗೆ ಎರಡನ್ನು ಬಗೆಯುವ ಈ ಶೂದ್ರಜಾತಿಯವನನ್ನು ಮೊದಲು ನಮ್ಮ ಮನೆಯಿಂದ ಹೊರಕ್ಕೆ ಕಳು

ಹಿಸಿರಿ. ಶ್ಮಶಾನವನ್ನು ಹೇಗೋ ಹಾಗೆ ಈತನನ್ನು ಕಣ್ಣೆತ್ತಿ ನೋಡು ವುದೂ ಯೋಗ್ಯವಲ್ಲ! ನಮ್ಮ ಕೈಕೂಳನ್ನು ತಿಂದು ನಮ್ಮನ್ನೇ ನಿಂದಿಸು ತ್ತಿರುವ ಈ ಕೃತಘ್ನನು, ಈಗ ನಮಗೆ ಧರ್ಮೋಪದೇಶವನ್ನು ಮಾಡುವು ದಕ್ಕೆ ಬಂದನೇ? ಇನ್ನು ಈ ಪಾಪಿಷ್ಠನನ್ನು ಮನೆಯಲ್ಲಿರಿಸಬಾರದು" ಎಂದನು. ಹೀಗೆ ದುರ್ಯೋಧನನು, ಕೇಳುವವರ ಕಿವಿಗೆ ಶೂಲವನ್ನು ನಾಟಿ ದಂತೆ ಕ್ರೂರವಾಕ್ಯಗಳನ್ನು ನುಡಿಯುತ್ತಿರಲು, ವಿದುರನು ಮರ್ಮಭೇದಕ ಗಳಾದ ಆ ಮಾತುಗಳಿಂದ ಮನಸ್ಸಿನಲ್ಲಿ ಬಹಳವಾಗಿ ನೊಂದಿದ್ದರೂ, ಬಹಳ ತಾಳ್ಮೆಯುಳ್ಳವನಾದುದರಿಂದ ಸ್ವಲ್ಪಮಾತ್ರವೂ ಕೋಪವನ್ನು ತೋರಿಸದೆ ಮುಖದಲ್ಲಿ ಮುಗುಳ್ನಗೆಯನ್ನೇ ತೋರಿಸುತ್ತ, ತನ್ನಲ್ಲಿ ತಾನು, 'ಆಹಾ! ಭಗವಂತನ ಮಾಯೆಯ ಪ್ರಭಾವವೇ ಪ್ರಭಾವವು! ಎಂದು ಶ್ರೀಕೃಷ್ಣನ ಮಾಯೆಯನ್ನು ಕೊಂಡಾಡುತ್ತ, ಅದೇ ಮುಖವಾಗಿ ಆ ಮನೆಯನ್ನು ಬಿಟ್ಟು ಹೊರಟು, "ಇನ್ನು ಇಲ್ಲಿರುವುದು ಯುಕ್ತವಲ್ಲ! ಈ ಧನುಸ್ಸಿನಿಂ ದಲೂ ನಮಗೆ ಆಗಬೇಕಾದ ಪ್ರಯೋಜನವಿಲ್ಲ! ಪುಣ್ಯತೀರ್ಥ ಯಾತ್ರೆಗಾಗಿ ಹೊರಡುವೆನು" ಎಂದು ಮನಸ್ಸಿನಲ್ಲಿ ನಿಶ್ಚಯಿಸಿ, ತಾನು ಕೈಯಲ್ಲಿ ಹಿಡಿದಿದ್ದ ಧನುಸ್ಸನ್ನು ಆ ಮನೆಯ ಬಾಗಿಲಲ್ಲಿಯೇ ಇರಿಸಿ, ಕೌರವರ ಗುಂಪಿನಲ್ಲಿ ನಿಲ್ಲ ಲಾರದೆ ಹೊರಟುಬಿಟ್ಟನು. ಇದೇ ವ್ಯಾಜದಿಂದ ವಿದುರನು ಹಸ್ತಿನಾ ಪತಿಯನ್ನು ಬಿಟ್ಟು ಹೊರಟ ಕೂಡಲೇ, ಕೌರವರ ಭಾಗ್ಯವೇ ಆ ಪಟ್ಟಣ ವನ್ನು ಬಿಟ್ಟು ಹೊರಟಂತಾಯಿತು. ಕೌರವರಿಗೆ ಪೂರ್ವಾರ್ಜಿತಪುಣ್ಯಲಭ್ಯ ವಾಗಿದ್ದ ವಿದುರ ಸಹವಾಸವೂ ಕೈಬಿಟ್ಟುಹೋಯಿತು! ಹೀಗೆ ವಿದುರನು ಪಟ್ಟಣವನ್ನು ಬಿಟ್ಟು ಹೊರಟಕೂಡಲೇ, ಅಲ್ಲಲ್ಲಿ ಪುಣ್ಯಕ್ಷೇತ್ರಗಳನ್ನೂ, ಪುಣ್ಯತೀರ್ಥಗಳನ್ನೂ ಸುತ್ತುವುದಕ್ಕೆ ತೊಡಗಿದನು. ಗಂಗಾಜನಕನಾದ ಶ್ರೀಭಗವಂತನು ಬಗೆಬಗೆಯ ಅರ್ಚಾವತಾರ ದಿವ್ಯಮಂಗಳ ವಿಗ್ರಹಗಳನ್ನು ಕೈಕೊಂಡು ಯಾವಯಾವ ಸ್ಥಾನಗಳನ್ನು ತನ್ನ ಸಾನ್ನಿಧ್ಯದಿಂದ ಪವಿತ್ರ ಗಳನ್ನಾಗಿ ಮಾಡಿದ್ದನೋ, ಶ್ರೀರಂಗ, ವೆಂಕಟಾಚಲ, ಹಸ್ತಿಗಿರಿ (ಯಾದವ ಗಿರಿ) ಮೊದಲಾದ ಅಂತಹ ದಿವ್ಯಕ್ಷೇತ್ರಗಳೆಲ್ಲವನ್ನೂ ಕ್ರಮವಾಗಿ ಸೇವಿಸುತ್ತ ಬಂದನು. ಭಗವಂತನಲ್ಲಿ ನಿಶ್ಚಲವಾದ ಭಕ್ತಿಯುಳ್ಳ ಆ ವಿದುರನು ಅಲ್ಲಲ್ಲಿ ಪರಿಶುದ್ಧವಾದ ಉದ್ಯಾನಗಳಿಂದಲೂ, ಪೊದೆಗಳಿಂದಲೂ, ನಿರ್ಮಲ ಜಲ

ದಿಂದಲೂ, ಅಂದವಾದ ಪಟ್ಟಣಗಳಿಂದಲೂ, ಪುಣ್ಯನದಿಗಳಿಂದಲೂ, ಪುಣ್ಯ ಸರಸ್ಸುಗಳಿಂದಲೂ, ಅರ್ಚಾರೂಪವಾದ ವಿಷ್ಣುಮೂರ್ತಿಗಳಿಂದಲೂ, ಶೋಭಿತಗಳಾದ ದಿವ್ಯಸ್ಥಲಗಳೆಲ್ಲವನ್ನೂ ಏಕಾಕಿಯಾಗಿ ಸುತ್ತುತ್ತ ಬಂದನು. ಹೀಗೆ ವಿದುರನು ಭೂಮಿಯೆಲ್ಲವನ್ನೂ ಸುತ್ತುವಾಗ ವರ್ಣಾಶ್ರಮ ನಿಮಿತ್ತ ದೋಷಗಳೊಂದೂ ಇಲ್ಲದ ಶುದ್ಧಾನ್ನವನ್ನೇ ಭುಜಿಸುವನು ! ಯಾವಾಗಲೂ ಸ್ನಾನಾದಿ ಕಾರ್ಯಗಳನ್ನು ಯಥಾವಿಧಿಯಾಗಿ ನಡೆಸುವನು ! ಬರೀ ನೆಲದ ಮೇಲೆ ಮಲಗುವನು. ಅಭ್ಯಂಜನವೇ ಮೊದಲಾದ ದೇಹಸಂಸ್ಕಾರಗಳೆಲ್ಲವನ್ನೂ ಬಿಟ್ಟನು. ತನ್ನ ದೇಹಸಂಬಂಧವುಳ್ಳವರೊಬ್ಬರಿಗೂ ಕಣ್ಣಿಗೆ ಬೀಳದಂತೆ, ಅವಧೂತಾಶ್ರಮದಲ್ಲಿರುವವರು ಧರಿಸತಕ್ಕ ಜಡೆ, ನಾರುಮಡಿ ಮುಂತಾದ ವೇಷಗಳನ್ನು ಧರಿಸಿ ಶ್ರೀಮಹಾವಿಷ್ಣು ಪ್ರೀತ್ಯರ್ಥವಾದ ವ್ರತಗಳೆಲ್ಲವನ್ನೂ ತಪ್ಪದೆ ನಡೆಸುತ್ತಿದ್ದನು. ಹೀಗೆ ಭಾರತವರ್ಷವೆಲ್ಲವನ್ನೂ ಪ್ರದಕ್ಷಿಣ ಮಾಡಿ ಸುತ್ತಿಬಂದನು. ಕೊನೆಗೆ ಈತನು ಪ್ರಭಾಸ ತೀರ್ಥಕ್ಕೆ ಬಂದು ಮುಟ್ಟುವಷ್ಟರಲ್ಲಿ, ಇತ್ತಲಾಗಿ ಧರ್ಮರಾಜನು ಶ್ರೀಕೃಷ್ಣಾರ್ಜುನರ ಸಹಾಯದಿಂದ ತನ್ನ ಶತ್ರುಗಳಾದ ಕೌರವರೆಲ್ಲರನ್ನೂ ಕೊಂದು ಸಮಸ್ತ ಭೂಮಂಡಲವನ್ನೂ ತನ್ನ ಏಕಛತ್ರಾಧಿಪತ್ಯಕ್ಕೆ ಈಡುಮಾಡಿಕೊಂಡು ರಾಜ್ಯವನ್ನಾಳುತ್ತಿದ್ದನು. ಯುಧಿಷ್ಠಿರನು ಹೀಗೆ ಸಾರ್ವಭೌಮ ಪದವಿಯಿಂದ ಅತ್ಯಂತ ವೈಭವದೊಡನೆ ತಾನಾಗಿ ರಾಜ್ಯವನ್ನಾಳುತ್ತ ಅಜಾತ ಶತ್ರುವೆಂಬ ಖ್ಯಾತಿಯನ್ನು ಪಡೆದನು. ಇಷ್ಟರಲ್ಲಿ ಇತ್ತಲಾಗಿ ವಿದುರನು ಪ್ರಭಾಸ ತೀರ್ಥಕ್ಕೆ ಬಂದು, ಆ ತೀರ್ಥದ ತೀರದಲ್ಲಿ ಸಂಚರಿಸುತ್ತಿದ್ದಾಗ, ತನ್ನ ಬಂಧುಗಳಾದ ಕೌರವರೆಲ್ಲರೂ ಬಿದಿರುಮೆಳೆಯಲ್ಲಿರುವ ಬಿದಿರುಗಳು ಒಂದಕ್ಕೊಂದು ತೇಯುವುದರಿಂದುಂಟಾಗುವ ಬೆಂಕಿಯಿಂದ ಮೊತ್ತಕ್ಕೆ ತದಾಶ್ರಯವಾದ ವನವೆಲ್ಲವೂ ದಗ್ಧವಾಗುವಂತೆ, ಕೌರವರೆಲ್ಲರೂ ಪರಸ್ಪರ ದ್ವೇಷದಿಂದ ಹೊಡೆದಾಡಿ ಸತ್ತರೆಂಬ ಸುದ್ದಿಯು ಆತನ ಕಿವಿಗೆ ಬಿದ್ದಿತು. ಈ ಬಂಧು ಮರಣವನ್ನು ಕೇಳಿ ವಿದುರನು ಮನಸ್ಸಿನಲ್ಲಿ ಅನುತಾಪಗೊಂಡವನಾಗಿ, ಬೇರೆ ಮಾತಾಡದೆ ಪಶ್ಚಿಮಾಭಿಮುಖವಾಗಿ ಹೊರಟು, ಸರಸ್ವತೀನದಿಯ ತೀರಕ್ಕೆ ಬಂದು ಸೇರಿದನು. ಅಲ್ಲಿ ತ್ರಿತತೀರ್ಥವೆಂದೂ, ಉಶನಸ್ತೀರ್ಥವೆಂದೂ, ಮನುತೀರ್ಥವೆಂದೂ, ಪೃಥುತೀರ್ಥವೆಂದೂ, ಅಗ್ನಿ, ಅಸಿತ

ವಾಯು, ಸುದಾಸ, ಗೋತೀರ್ಥ, ಗುಹತೀರ್ಥ, ಯಮತೀರ್ಥಗಳೆಂದೂ ಪ್ರಸಿದ್ಧಗಳಾದ ತೀರ್ಥಗಳೆಲ್ಲವನ್ನೂ ಸುತ್ತಿ, ಅಲ್ಲಲ್ಲಿ ಸ್ನಾನ ಮಾಡುತ್ತ ಬಂದನು. ಮತ್ತು ಆಯಾ ತೀರ್ಥಗಳಲ್ಲಿ ಅನೇಕ ಮಹರ್ಷಿಗಳಿಂದಲೂ ಪ್ರತಿಷ್ಠಿತಗಳಾಗಿ, ದರ್ಶನ ಮಾತ್ರದಿಂದಲೇ ಶ್ರೀಕೃಷ್ಣನ ಸ್ಮರಣೆಯನ್ನು ಹುಟ್ಟಿಸತಕ್ಕವುಗಳಾಗಿ ಶ್ರೀಮಹಾವಿಷ್ಣುವಿನ ಆಯುಧಗಳಾದ ಶಂಖ ಚಕ್ರಾದಿ ಚಿಹ್ನಗಳಿಂದಲಂಕೃತಗಳಾಗಿಯೂ ಇದ್ದ ಅನೇಕ ದೇವಾಲಯ ಗಳನ್ನೂ, ಅಲ್ಲಲ್ಲಿನ ವಿಷ್ಣುಮೂರ್ತಿಗಳನ್ನೂ ದರ್ಶನಮಾಡುತ್ತ ಬಂದನು. ಹೀಗೆ ಪುಣ್ಯತೀರ್ಥಗಳನ್ನೂ, ಪುಣ್ಯಕ್ಷೇತ್ರಗಳನ್ನೂ, ದೇವಾಲಯಗಳನ್ನೂ ಕ್ರಮಕ್ರಮವಾಗಿ ಸೇವಿಸುತ್ತ, ಸರಸ್ವತೀನದಿಯಿಂದಾಚೆಗೆ ಭಾಗ್ಯಸಮೃದ್ಧ ಗಳಾದ ಸೌರಾಷ್ಟ್ರ, ಸೌವೀರ ದೇಶಗಳೆರಡನ್ನೂ ದಾಟಿ, ಮತ್ಸ್ಯ ಕುರು ಜಾಂಗಲ ದೇಶಗಳನ್ನೂ ಅತಿಕ್ರಮಿಸಿ, ಯಮುನಾತೀರಕ್ಕೆ ಬಂದು ಮುಟ್ಟಿ ದನು. ವಿದುರನು ಯಮುನಾತೀರಕ್ಕೆ ಬಂದು ಸೇರಿದ ಸಮಯಕ್ಕೆ ಸರಿ ಯಾಗಿ ಯದುಕುಲಕ್ಕೆ ಮಂತ್ರಿಯಾಗಿಯೂ, ಭಾಗವತೋತ್ತಮನಾಗಿಯೂ, ಶಾಂತಸ್ವಭಾವನಾಗಿಯೂ, ಬೃಹಸ್ಪತಿಯಿಂದಲೇ ಸಾಕ್ಷಾತ್ತಾಗಿ ನೀತಿಶಾಸ್ತ್ರ ಗಳನ್ನೋದಿ ತಿಳಿದವನಾಗಿಯೂ ಇದ್ದ ಪ್ರಖ್ಯಾತನಾದ ಉದ್ಧವನೂ ದೈವೀಕ ವಾಗಿ ಅಲ್ಲಿಗೆ ಬಂದು ಸೇರಿದನು. ವಿದುರನು ಅವನನ್ನು ಕಂಡೊಡನೆ ಅತ್ಯಂತ ಸಂತೋಷಭರಿತನಾಗಿ, ಪರಮಪ್ರೇಮದಿಂದ ಮುಂದೆ ಹೋಗಿ ಗಾಢಾಲಿಂಗನ ಮಾಡಿಕೊಂಡು, ತನಗೆ ಪ್ರಿಯಬಂಧುವಾದ ಶ್ರೀಕೃಷ್ಣನ ಮಕ್ಕಳು, ಮುಮ್ಮಕ್ಕಳು ಮುಂತಾಗಿ ಆಯಾ ಕುಟುಂಬದ ಕ್ಷೇಮಲಾಭವನ್ನೂ ವಿಚಾರಿ ಸುತ್ತ "ಎಲೈ ಮಂತ್ರಿಶ್ರೇಷ್ಠನೆ! ತನ್ನ ನಾಭಿಕಮಲದಲ್ಲಿ ಹುಟ್ಟಿದ ಚತುರ್ಮುಖಬ್ರಹ್ಮನ ಪ್ರಾರ್ಥನೆಯ ಮೇಲೆ, ಈ ಭೂಲೋಕದಲ್ಲಿ ಲೀಲಾ ಮಾನುಷ ವಿಗ್ರಹದಿಂದವತರಿಸಿ, ಸಮಸ್ತಜಗತ್ತಿಗೂ ಕ್ಷೇಮವನ್ನುಂಟುಮಾ ಡುತ್ತಿರುವ ಪುರಾಣಪುರುಷರಾದ ರಾಮಕೃಷ್ಣರಿಬ್ಬರೂ ವಸುದೇವಗೃಹದಲ್ಲಿ ಸುಖದಿಂದಿರುವರಷ್ಟೆ? ಕುರುವಂಶದಲ್ಲಿ ಹುಟ್ಟಿದ ನಮ್ಮೆಲ್ಲರಿಗೂ ಪ್ರಾಣ ಮಿತ್ರನಾಗಿಯೂ, ನಮಗೆ ಭಾವನಾಗಿಯೂ, ಪೂಜ್ಯನಾಗಿಯೂ ಇರುವ ವಸುದೇವನಿಗೆ ಕ್ಷೇಮವಷ್ಟೆ? ಆ ವಸುದೇವನು ತನ್ನ ತಂಗಿಯರಿಗೂ ಅವರನ್ನು ಕೈಹಿಡಿದ ಪತಿಗಳಿಗೂ ಬೇಕುಬೇಕಾದ ಪ್ರಿಯವಸ್ತುಗಳನ್ನು

ಕೊಟ್ಟು ತೃಪ್ತಿಪಡಿಸಿ, ಹೆತ್ತ ತಂದೆಗಿಂತಲೂ ಹೆಚ್ಚಾಗಿ ಅವರನ್ನು ಪ್ರೇಮದಿಂದ ಪೋಷಿಸಿದವನು. ಇಂತಹ ಮಹೌದಾರ್ಯದಿಂದ ಪ್ರಖ್ಯಾತನಾದ ವಸುದೇವನು ಕುಶಲಿಯಷ್ಟೆ? ರುಕ್ಮಿಣಿಯು ಅನೇಕ ವಿಧದಿಂದ ಬ್ರಾಹ್ಮಣರನ್ನಾರಾಧಿಸಿ, ಅವರ ಆಶೀರ್ವಾದ ಬಲದಿಂದ ಪ್ರದ್ಯುಮ್ನನೆಂಬ ಯಾವ ಪುತ್ರನನ್ನು ಪಡೆದಿರುವಳೋ, ಆ ಪ್ರದ್ಯುಮ್ನನೇ ಪೂರ್ವಜನ್ಮದ ಮನ್ಮಥನಾಗಿದ್ದವನು. ಕೃಷ್ಣಪುತ್ರನಾಗಿಯೂ ಯಾದವ ಸೇನಾಪತಿಯಾಗಿಯೂ ಇರುವ ಆ ಪ್ರದ್ಯುಮ್ನನಿಗೆ ಕ್ಷೇಮವಷ್ಟೆ? ಪುಂಡರೀಕಾಕ್ಷನಾದ ಶ್ರೀಕೃಷ್ಣನು ಕಂಸನನ್ನು ಕೊಂದ ಮೇಲೆ, ಆತನ ಸಿಂಹಾಸನದಲ್ಲಿ ತಾನೇ ಕುಳ್ಳಿರಬೇಕಾಗಿದ್ದರೂ, ಅದರಲ್ಲಿ ಸ್ವಲ್ಪಮಾತ್ರವೂ ಆಸೆಯನ್ನಿಡದೆ, ಉಗ್ರಸೇನನಿಗೆ ಪಟ್ಟವನ್ನು ಕಟ್ಟಿ ರಾಜ್ಯಾಭಿಷೇಕವನ್ನೂ ಮಾಡಿದನು. ಹೀಗೆ ಕೃಷ್ಣನ ಪರಮಪ್ರೀತಿಗೆ ಪಾತ್ರನಾಗಿ ಯಾದವರು, ವೃಷ್ಣಿಗಳು, ಭೋಜರು, ದಾಶಾರ್ಹರು, ಇವರೆಲ್ಲರಿಗೂ ಮುಖ್ಯಾಧಿಪತಿಯಾಗಿ, ಅವರನ್ನು ಅವರವರ ಧರ್ಮಗಳಲ್ಲಿ ಪ್ರವರ್ತಿಸುವಂತೆ ನಿಯಮಿಸುತ್ತಿರುವ ಮಹಾತ್ಮನಾದ ಆ ಉಗ್ರಸೇನನಿಗೆ ಕ್ಷೇಮವಷ್ಟೇ? ಜಾಂಬವತೀದೇವಿಯು ಅನೇಕ ವ್ರತಗಳನ್ನಾಚರಿಸಿ, ಪೂರ್ವದಲ್ಲಿ ಪಾರ್ವತೀ ಪುತ್ರನಾದ ಕುಮಾರಸ್ವಾಮಿಯನ್ನೇ ತನ್ನ ಗರ್ಭದಲ್ಲಿ ಧರಿಸಿ, ಸಾಂಬನೆಂಬ ಪುತ್ರನನ್ನು ಪಡೆದಳು ಹೀಗೆ ಷಣ್ಮುಖನ ಅಂಶಾವತಾರವಾಗಿಯೂ ರಥಿಕಾಗ್ರಣಿಯಾಗಿಯೂ ಇರುವ ಸಾಂಬನಿಗೆ ಕ್ಷೇಮವಷ್ಟೇ? ಶ್ರೀಕೃಷ್ಣನಿಗೆ ಪ್ರಿಯ ಸಹೋದರನಾಗಿ, ಯಾವಾಗಲೂ ಶ್ರೀಕೃಷ್ಣನ ಶುಶ್ರೂಷೆಯಲ್ಲಿಯೇ ನಿರತನಾಗಿರುವ ಸಾತ್ಯಕಿಗೆ ಕ್ಷೇಮವಷ್ಟೆ? ಆತನು ಅರ್ಜುನನಿಂದ ಧನುರ್ವಿದ್ಯಾರಹಸ್ಯಗಳೆಲ್ಲವನ್ನೂ ತಿಳಿದವನು. ಮತ್ತು ಸರ್ವಕಾಲಗಳಲ್ಲಿಯೂ ಭಗವಂತನಾದ ಶ್ರೀಕೃಷ್ಣನ ಸೇವೆಯಲ್ಲಿಯೇ ನಿರತನಾಗಿ, ಅವನ ಶುಶ್ರೂಷೆಯನ್ನು ಮಾಡುತ್ತ, ಅವನ ಪೂರ್ಣದಯೆಗೆ ಪಾತ್ರನಾಗಿರುವನು. ಇದರಿಂದ ಆತನು ಮಹಾಯೋಗಿಗಳಿಗೂ ದುರ್ಲಭವಾದ ಉತ್ತಮಗತಿಯನ್ನು ಸುಖವಾಗಿ ಪಡೆಯತಕ್ಕವನಾಗಿರುವನು. ಅಂತಹ ಸಾತ್ಯಕಿಯು ಕುಶಲಿಯಷ್ಟೆ?! ಭಕ್ತಾಗ್ರೇಸರನಾಗಿಯೂ, ವಿವೇಕಶೀಲನಾಗಿಯೂ, ಪಾಪರಹಿತನಾಗಿಯೂ ಇರುವ ಅಕ್ರೂರನಿಗೆ ಕ್ಷೇಮವಷ್ಟೆ! ಎಲೈ ಮಂತ್ರಿವರ್ಯನೆ! ಆ ಅಕ್ರೂರನಿಗೆ ಭಗವಂತನಾದ ಶ್ರೀಕೃಷ್ಣನಲ್ಲಿರುವ ಭಕ್ತಿವಿಶೇಷವನ್ನು

ನಾನೇನೆಂದು ಹೇಳಲಿ! ಅವನು ಶ್ರೀಕೃಷ್ಣನನ್ನೇ ತನಗೆ ಪರಮಗತಿಯೆಂದು ಭಾವಿಸಿ, ಆವನ ಪಾದಪದ್ಮಗಳನ್ನು ನಂಬಿದವನು. ಒಮ್ಮೆ ಈ ಅಕ್ರೂರನು ತಾನು ಹೋಗುತ್ತಿದ್ದ ದಾರಿಯಲ್ಲಿ ಶ್ರೀಕೃಷ್ಣನ ಹೆಜ್ಜೆಯ ಗುರುತುಗಳನ್ನು ಕಂಡನು. ಅವುಗಳನ್ನು ಕಂಡೊಡನೆ ಮಿತಿಮೀರಿದ ಸಂತೋಷದಿಂದ ಮೈಮರೆತು, ಮುಂದೆ ಆ ದಾರಿಯಲ್ಲಿ ತಾನು ಕಾಲಿಡುವುದಕ್ಕೆ ಧೈರ್ಯ ವಿಲ್ಲದೆ, ಆ ನೆಲದ ಧೂಳಿಯಲ್ಲಿ ಮಲಗಿ ಹೊರಳಿದನು. ಅಂತಹ ಪರಮ ಭಕ್ತನು ಕುಶಲಿಯಷ್ಟೆ? ದೇವಕನ ಮಗಳಾಗಿಯೂ, ಪತಿವ್ರತೆಯರಿಗೆ ಶಿರೋಮಣಿ ಪ್ರಾಯಗಳಾಗಿಯೂ, ಇರುವ ದೇವಕೀದೇವಿಗೆ ಕ್ಷೇಮವಷ್ಟೆ? ಶ್ರುತಿಗಳು ಯಾಗಾರ್ಥಗಳನ್ನೊಳಕೊಂಡಂತೆ, ಭಗವಂತನನ್ನು ತನ್ನ ಗರ್ಭ ದಲ್ಲಿ ಧರಿಸಿದ ಆ ದೇವಕಿಯು ದೇವಮಾತೆಯಾದ ಅದಿತಿಯಂತೆ ಸುಖದಿಂ ದಿರುವಳಷ್ಟೆ? ಉದ್ಧವಾ! ಅನಿರುದ್ಧನನ್ನು ಸಾಕ್ಷಾದ್ಭಗವಂತನೆಂದೇ ಹೇಳ ಬಹುದು! ಆತನು ಮಹಾನುಭಾವನು. ನಿಮ್ಮಂತಹ ಭಕ್ತರ ಕೋರಿಕೆ ಗಳೆಲ್ಲವನ್ನೂ ಈಡೇರಿಸತಕ್ಕವನು, ಈ ಅನಿರುದ್ಧನನ್ನು ಪುರಾತನ ಮಹರ್ಷಿ ಗಳು ಕೇವಲ ಶಾಸ್ತ್ರಪ್ರಮಾಣಗಳಿಂದಲೇ ವೇದ್ಯನೆಂದೂ, ಭಗವಂತನ ನಾಲ್ಕನೆಯ ಅಂಶವೆಂದೂ, ಯೋಗಶುದ್ಧವಾದ ಮನಸ್ಸಿನ ಪರಿಪಾಕದಿಂದ ಲ್ಲದೆ ಲೌಕಿಕ ಪ್ರಮಾಣಗಳಿಂದ ತಿಳಿಯಲಸಾಧ್ಯನೆಂದೂ ನಿರ್ಣಯಿಸಿರುವರು. ಅಂತಹ ಅನಿರುದ್ಧನು ಕುಶಲಿಯಷ್ಟೆ? ಯಾವಾಗಲೂ ಕೃಷ್ಣನನ್ನೇ ದೈವವೆಂದೂ, ಅಧಿಪತಿಯೆಂದೂ ಭಾವಿಸಿ, ಆವನೊಬ್ಬನನ್ನೇ ಭಕ್ತಿಯಿಂದ ನಂಬಿರುವ, ಹೃದೀಕ, ಗದ, ಮುಂತಾದ ಯಾದವ ಪ್ರಧಾನರೆಲ್ಲರಿಗೂ ಕ್ಷೇಮವಷ್ಟೆ? ಎಲೈ ಮಹಾತ್ಮನೆ! ಧರ್ಮರಾಜನು ಧರ್ಮದಿಂದ ರಾಜ್ಯ ವನ್ನಾಳುತ್ತಿರುವನಷ್ಟೆ? ಯಾವನು ತನಗೆ ಎರಡು ಭುಜಗಳಂತಿರುವ ಕೃಷ್ಣಾರ್ಜುನರ ಸಹಾಯದಿಂದ ಸಮಸ್ತ ರಾಜ್ಯವನ್ನೂ ತನಗಧೀನವನ್ನಾಗಿ ಮಾಡಿಕೊಂಡು ಸಂತೋಷದಿಂದ ಪ್ರಜೆಗಳನ್ನು ಪಾಲಿಸುತ್ತಿರುವನೋ, ಆ ಧರ್ಮರಾಜನು ನಿಶ್ಚಿಂತನಾಗಿರುವನೆ? ವೇದೋಕ್ತವಿಧಿಯಿಂದ ವರ್ಣಾಶ್ರಮ ಧರ್ಮಗಳನ್ನು ಸರಿಯಾಗಿ ರಕ್ಷಿಸುತ್ತ ಬರುವನೆ? ದುರ್ಯೋಧನನು ಆಗಾಗ ಅರ್ಜುನನ ಅಸಾಧಾರಣ ಸಾಮರ್ಥ್ಯವನ್ನು ನೋಡಿ, ಪಾಂಡವರಿಗೆ ಜಯವೂ, ಧರ್ಮರಾಜನಿಗೆ ಸಾಮ್ರಾಜ್ಯ ಪದವಿಯೂ ಎಂದಿಗೂ ತಪ್ಪಿದು

ದಲ್ಲವೆಂದು ತನ್ನ ಮನಸ್ಸಿನಲ್ಲಿ ದೃಢವಾಗಿ ತಿಳಿದು, ಅದಕ್ಕಾಗಿ ಅನವರತವೂ ತನ್ನ ಮನಸ್ಸಿನಲ್ಲಿ ಚಿಂತಿಸಿ ಕೊರಗುತ್ತಿದ್ದನು. ಕೊನೆಗೆ ಅವನ ಮನಸ್ಸಿನಲ್ಲಿದ್ದಂತೆಯೇ ನಡೆದುಹೋಯಿತು? ಆದರೇನು! ಹಿಂದೆ ಆಗಾಗ ತನಗೆ ಅನೇಕ ವಿಧದಲ್ಲಿ ಅಪರಾಧವನ್ನು ಮಾಡಿದ ಆ ದುರ್ಯೋಧನಾದಿಗಳ ಹೆಸರನ್ನು ಕೇಳಿದ ಮಾತ್ರಕ್ಕೆ, ಈಗಲೂ ಭೀಮನು ಕ್ರೂರ ಸರ್ಪದಂತೆ ಕೋಪಾವೇಶದಿಂದ ಬುಸುಗುಟ್ಟುತ್ತಿರುವನು. ಹಿಂದಿನ ಯುದ್ಧಕಾಲದಲ್ಲಿ ರಣರಂಗದ ನಡುವೆ ತನ್ನ ಗದಾದಂಡವನ್ನು ವಿಚಿತ್ರಗತಿಯಿಂದ ತಿರುಗಿಸುತ್ತ, ತನ್ನ ಪಾದಘಾತದಿಂದಲೇ ಸಮಸ್ತ ಭೂಮಿಯೂ ನಡುಗುವಂತೆ ಹೆಜ್ಜೆಗಳನ್ನಿಡುತ್ತ, ತನ್ನ ಭುಜಬಲದಿಂದ ಕುರುಕುಲವೆಲ್ಲವನ್ನೂ ಧ್ವಂಸ ಮಾಡಿದ ಆ ಭೀಮಸೇನನು ಈಗಲಾದರೂ ತನ್ನ ಕೋಪವನ್ನು ಮರೆತು ಶಾಂತಚಿತ್ತನಾಗಿ ಸುಖದಿಂದಿರುವನೆ? ರಥಿಕಾಗ್ರೇಸರರಲ್ಲಿ ಪ್ರಮುಖನಾಗಿಯೂ, ಕಿರಾತ ರೂಪಿಯಾದ ಶಿವನನ್ನು ತನ್ನ ಬಾಣ ಸಮೂಹಗಳಿಂದ ತೃಪ್ತಿಪಡಿಸಿ, ಅವನ ಅನುಗ್ರಹದಿಂದ ಪಾಶುಪತಾಸ್ತ್ರವನ್ನು ಪಡೆದು ಬಂದವನಾಗಿಯೂ, ಲೋಕವಿಖ್ಯಾತನಾಗಿಯೂ ಇರುವ ಅರ್ಜುನನು, ತನ್ನ ಶತ್ರುಗಳೆಲ್ಲರನ್ನೂ ಜಯಿಸಿ, ಶಾಂತಮನಸ್ಕನಾಗಿ ಸುಖದಿಂದಿರುವನೆ? ಕಣ್ಣೆವೆಗಳು ಕಣ್ಣುಗಳಿಗೆ ರಕ್ಷಕವಾಗಿರುವಂತೆ, ಧರ್ಮರಾಜ ಭೀಮಾರ್ಜುನರು ಮೂವರೂ ಯಾರನ್ನು ನಿರಪಾಯರಾಗಿ ರಕ್ಷಿಸುತ್ತಿರುವರೋ, ಕುಂತೀದೇವಿಯು ಯಾರನ್ನು ತನ್ನ ಮುದ್ದು ಮಕ್ಕಳನ್ನಾಗಿ ಭಾವಿಸಿ ಪೋಷಿಸುತ್ತಿರುವಳೋ, ಮಹಾತ್ಮರಾದ ಆ ನಕುಲಸಹದೇವರಿಬ್ಬರೂ ಆಗಾಗ ಶತ್ರುಗಳನ್ನು ಜಯಿಸಿ, ಗರುಡನು ಸ್ವರ್ಗದಿಂದ ಅಮೃತಕಲಶವನ್ನು ತಂದಂತೆ, ಶತ್ರುಧನವನ್ನು ತಂದು ಧರ್ಮರಾಜನಿಗೆ ಒಪ್ಪಿಸುತ್ತ ಕ್ಷೇಮದಿಂದಿರುವರಷ್ಟೆ? ಅತಿರಥರಲ್ಲಿ ಶ್ರೇಷ್ಠನಾಗಿಯೂ, ಇತರರ ಸಹಾಯವನ್ನಪೇಕ್ಷಿಸದೆ ತನ್ನ ಧನುಸ್ಸಿನಿಂದಲೇ ನಾಲ್ಕು ದಿಕ್ಕುಗಳನ್ನೂ ಜಯಿಸಿ, ಎಣೆಯಿಲ್ಲದ ಭಾಗ್ಯವನ್ನೂ ಯಶಸ್ಸನ್ನೂ ಸಂಪಾದಿಸಿದವನಾಗಿಯೂ ಇದ್ದ ಪಾಂಡು ಮಹಾರಾಜನು ಲೋಕಾಂತರವನ್ನೈದಿದಾಗ, ಆತನಿಗೆ ಪ್ರಾಣವಲ್ಲಭೆಯಾಗಿಯೂ, ಪರಮ ಪತಿವ್ರತೆಯಾಗಿಯೂ ಇರುವ ಕುಂತೀದೇವಿಯು ಮೊದಲು ಸಹಗಮನವನ್ನು ಮಾಡುವುದಕ್ಕಾಗಿ ನಿಶ್ಚಯಿಸಿದ್ದು, ಕೊನೆಗೆ ತನ್ನ ಮಕ್ಕಳು

ದಿಕ್ಕಿಲ್ಲದೆ ಅಲೆಯಬೇಕಾಗುವುದೆಂಬ ಭಯಕ್ಕಾಗಿ ಆ ಪ್ರಯತ್ನವನ್ನು ಬಿಟ್ಟು, ಆ ಮಕ್ಕಳ ಕ್ಷೇಮಕ್ಕಾಗಿಯೇ ಆದಿಯಿಂದಲೂ ಕಷ್ಟಪಡುತ್ತಿದ್ದಳು. ಆ ಕುಂತೀದೇವಿಯು ಈಗ ನಿಶ್ಚಿಂತಳಾಗಿ ಸಂತೋಷದಿಂದಿರುವಳಷ್ಟೆ? ಅಹಾ! ಉದ್ಧವಾ! ವಿವೇಕಶೂನ್ಯನಾಗಿ ಅಧೋಗತಿಗೆ ಬೀಳುತ್ತಿರುವ ಆ ಕುರುಡನಾದ ಧೃತರಾಷ್ಟ್ರನ ವಿಷಯವಾಗಿ ನಾನು ಬಹಳವಾಗಿ ಚಿಂತಿಸಿ ಪರಿತಪಿಸುತ್ತಿರುವೆನು. ಆತನು ತನ್ನ ಪ್ರಿಯ ಸಹೋದರನಾದ ಪಾಂಡುರಾಜನು ಸತ್ತಮೇಲೆ, ಅವನ ಮಕ್ಕಳಿಗೆ ದ್ರೋಹವನ್ನು ಮಾಡಿ, ಭ್ರಾತೃದ್ರೋಹಿಯೆನಿಸಿಕೊಂಡನು. ಅವನು ಪಾಂಡುಪುತ್ರರ ವಿಷಯದಲ್ಲಿ ತನ್ನ ಮಕ್ಕಳಿಗಿಂತಲೂ ಹೆಚ್ಚಾದ ಪ್ರೇಮವನ್ನು ತೋರಿಸಬೇಕಾದುದು ಯುಕ್ತವಾಗಿದ್ದರೂ, ಅವರ ರಾಜ್ಯವನ್ನೂ ಕೊಡಿಸದೆ, ಅವರೆಲ್ಲರಿಗೂ ದ್ರೋಹವನ್ನೇ ಮಾಡಿದನು. ನಾನು ಆತನಿಗೆ ಬಂಧುವಾಗಿಯೂ ಮಿತ್ರನಾಗಿಯೂ ಇದ್ದುದರಿಂದ, ಅವನ ಕ್ಷೇಮವನ್ನು ಕೋರಿ ಹಿತೋಪದೇಶವನ್ನು ಮಾಡಬೇಕೆಂದು ಪ್ರಯತ್ನಿಸಿದ ಮಾತ್ರಕ್ಕೆ ಆತನು ನನ್ನಲ್ಲಿಯೇ ಕೋಪಗೊಂಡು, ತನ್ನ ಮಕ್ಕಳ ದುರ್ಬೋಧನೆಗೊಳಗಾಗಿ, ನನ್ನನ್ನೂ ಮನೆಯಿಂದ ಹೊರಡಿಸಿಬಿಟ್ಟನಲ್ಲವೆ? ಆದರೇನು? ನಾನು ಆ ದುಸ್ಸಹವಾಸವನ್ನು ಬಿಟ್ಟು ಬರುವುದಕ್ಕೆ ಅದೊಂದು ಒಳ್ಳೆಯ ನೆಪವಾಯಿತು! ಮನುಷ್ಯರೂಪದಿಂದ ತನ್ನ ಮಹಾಮಹಿಮೆಯನ್ನು ಮರೆಸಿಟ್ಟುಕೊಂಡು ಜಗತ್ತನ್ನು ಮೋಹಗೊಳಿಸತಕ್ಕವನಾಗಿಯೂ, ಸಕಲ ಜಗನ್ನಿಯಾಮಕನಾಗಿಯೂ ಇರುವ ಶ್ರೀಕೃಷ್ಣನ ಅನುಗ್ರಹದಿಂದ, ಆತನಿಗೆ ವಿಭೂತಿರೂಪವಾದ ಸಮಸ್ತ ಜಗತ್ತನ್ನೂ ನೋಡುತ್ತ, ಮನಸ್ಸಿನ ಕುತೂಹಲವನ್ನು ನೀಗಿಸಿಕೊಂಡೆನು. ನಾನು ಇಂತವನೆಂಬುದನ್ನು ಬೇರೊಬ್ಬರಿಗೆ ತಿಳಿಸದಹಾಗೆ ಪ್ರಚ್ಛನ್ನ ವೇಷಧಾರಿಯಾಗಿ ಭೂಮಂಡಲವೆಲ್ಲವನ್ನೂ ತಿರುಗುತ್ತಿರುವೆನು. ಉದ್ಧವಾ! ಈಗ ನನ್ನ ಮನಸ್ಸು ಬೇರೊಂದನ್ನು ಗಮನಿಸದೆ ಆ ಶ್ರೀಕೃಷ್ಣನೊಬ್ಬನಲ್ಲಿಯೇ ಕ್ರೀಡಿಸುತ್ತಿರುವುದು. ಈ ಸಂಗತಿಯು ಹಾಗಿರಲಿ! ಶ್ರೀಕೃಷ್ಣನು ಸರ್ವಜಗನ್ನಿಯಾಮಕನೆಂದೂ, ಆಶ್ರಿತರನ್ನುದ್ಧರಿಸತಕ್ಕವನೆಂದೂ ಹೇಳಿದೆನಷ್ಟೆ? "ಹಾಗಿದ್ದರೆ ತನ್ನ ಸ್ವಶಕ್ತಿಯಿಂದಲೇ ಕೌರವರನ್ನು ನಿಗ್ರಹಿಸಿ ಪಾಂಡವರನ್ನು ರಕ್ಷಿಸದೆ ಹೋದುದೇಕೆ?" ಎಂದು ನೀನು ಶಂಕಿಸಬಹುದು. ಅದಕ್ಕೆ ಸಮಾಧಾನವನ್ನು ಹೇಳುವೆನು ಕೇಳು.

ಈಗ ಲೋಕದಲ್ಲಿ ಅನೇಕ ರಾಜರು ಕುಲಮದದಿಂದಲೂ, ಧನಮದದಿಂದಲೂ ವಿದ್ಯಾಮದದಿಂದಲೂ ಕೊಬ್ಬಿ ವೈತಿಳಿಯದೆ ದಾರಿ ತಪ್ಪಿ ದುರ್ಮಾರ್ಗದಲ್ಲಿ ನಡೆಯುತ್ತಿರುವರು. ಇಂತಹ ಮದಾಂಧರಾದ ರಾಜರು, ತಮ್ಮ ಸೈನ್ಯಗಳ ಭಾರದಿಂದ ಭೂಮಿಯನ್ನು ನಡುಗಿಸಿ, ಆಗಾಗ ಅದಕ್ಕೆ ಬಾಧೆಯನ್ನುಂಟು ಮಾಡುತ್ತಿರುವರು. ತನ್ನ ಭಕ್ತರಾದ ಪಾಂಡವರನ್ನುದ್ಧರಿಸುವ ನೆಪದಲ್ಲಿ ಇಂತಹ ರಾಜರೆಲ್ಲರನ್ನೂ ನಿಗ್ರಹಿಸಬೇಕೆಂಬುದಕ್ಕಾಗಿಯೇ ಶ್ರೀಕೃಷ್ಣನು, ತಾನು ಸರ್ವಶಕ್ತನಾಗಿದ್ದರೂ, ಅಪರಾಧಿಗಳಾದ ದುರ್ಯೋಧನಾದಿಗಳನ್ನು ಆಗಲೇ ನಿಗ್ರಹಿಸದೆ, ಇದುವರೆಗೂ ಅವರ ವಿಷಯದಲ್ಲಿ ಉದಾಸೀನನಾಗಿಯೇ ವರ್ತಿಸುತ್ತಿದ್ದನು. ಆಗಲೇ ಕೃಷ್ಣನು ಕೌರವರನ್ನು ಮಾತ್ರ ನಿಗ್ರಹಿಸಿ ಬಿಟ್ಟಿದ್ದರೆ ಇತರ ಕ್ಷತ್ರಿಯರನ್ನು ಕೊಲ್ಲುವುದಕ್ಕೆ ಅವಕಾಶವಿಲ್ಲದೆ ಹೋಗುತ್ತಿತ್ತು. ಮದಾಂಧರಾಗಿ ಲೋಕಕಂಟಕರಾಗಿದ್ದ ಕ್ಷತ್ರಿಯರೆಲ್ಲರನ್ನೂ ಭಾರತಯುದ್ಧವೆಂಬ ನೆವದಿಂದ ಒಂದು ಕಡೆಯಲ್ಲಿ ಸೇರಿಸಿ, ಒಬ್ಬರಿಂದೊಬ್ಬರನ್ನು ಕೊಲ್ಲಿಸಬೇಕೆಂಬ ಉದ್ದೇಶದಿಂದಲೇ, ಇದುವರೆಗೆ ಕೃಷ್ಣನು ಪಾಂಡವರ ಕಷ್ಟವನ್ನೂ, ಕೌರವರ ದುಷ್ಕೃತ್ಯಗಳನ್ನೂ ತನ್ನ ಕಣ್ಣಾರೆ ನೋಡಿಯೂ ಸಹಿಸುತ್ತ ಬಂದನು. ಇಷ್ಟೇ ಹೊರತು ತನ್ನ ಕೈಲಾಗದುದಕ್ಕಾಗಿ ಸುಮ್ಮನಿದ್ದವನಲ್ಲ. ಕೌರವರನ್ನು ಮಾತ್ರವೇ ಕೊಲ್ಲಬೇಕೆಂದಿದ್ದರೆ, ತಾನು ಪಾಂಡವ ದೂತನಾಗಿ ಹೋಗಿದ್ದ ದಿನದಲ್ಲಿಯೇ ಆ ಕಾರ್ಯವನ್ನು ನೆರವೇರಿಸಿಬಿಡುತ್ತಿದ್ದನು. "ಆದರೆ, ಸಮಸ್ತ ಜಗತ್ತನ್ನೂ ತನ್ನ ಸಂಕಲ್ಪ ಮಾತ್ರದಿಂದಲೇ ನಿಯಮಿಸಬಲ್ಲವನು ಮನುಷ್ಯರೂಪದಿಂದ ನಟಿಸಿ ಕಾರ್ಯಗಳನ್ನು ಸಾಧಿಸಬೇಕಾದ ಅವಶ್ಯಕತೆಯೇನು" ಎನ್ನುವೆಯಾ? ಆತನಿಗೆ ನಮ್ಮಂತೆ ಕರ್ಮಸಂಬಂಧವಾದ ಉತ್ಪತ್ತಿವಿನಾಶಗಳೊಂದೂ ಇಲ್ಲವೆಂಬುದೇನೋ ನಿಜವು. ಅವನು ತನ್ನ ಸಂಕಲ್ಪ ಮಾತ್ರದಿಂದಲೇ ಜನಿಸುವನು. ಆತನು ಮನುಷ್ಯರೂಪವನ್ನು ನಟಿಸುವುದೂ ಕೂಡ ದುಷ್ಟನಿಗ್ರಹ ಶಿಷ್ಟಪರಿಪಾಲನೆಗಳಿಗಾಗಿಯೇ ಹೊರತು ಬೇರೆಯಲ್ಲ. ಅವನು ಮನುಷ್ಯರೂಪದಿಂದ ನಡೆಸತಕ್ಕ ಕಾರ್ಯಗಳೆಲ್ಲವೂ ಲೋಕದ ಪ್ರಾಣಿಗಳಿಗೆ ಹೀಗೆಯೇ ನಡೆಯಬೇಕೆಂದು ದಾರಿಯನ್ನು ತೋರಿಸತಕ್ಕವುಗಳಾಗಿರುವುವು. ಈ ವಿಧವಾದ ಲೋಕಸಂಗ್ರಹಕ್ಕಾಗಿಯೇ ಅವನು ಜನ್ಮಗಳನ್ನೆತ್ತುವನು. "ಈಶ್ವರನು ಕರ್ಮಾಧೀನನಲ್ಲದಿದ್ದ ಮೇಲೆ ಅವನಿಗೆ ಈ ವಿಧವಾದ

ಕರ್ಮಾಚರಣಗಳೇಕೆ?" ಎಂದು ಕೇಳುವೆಯಾ? "ಲೋಕದ ಜನಗಳೂ ತನ್ನ ಹಾಗೆಯೇ ಸತ್ಕರ್ಮಪರರಾಗಿ ನಡೆದುಕೊಂಡು ಉತ್ತೀರ್ಣರಾಗಲಿ" ಎಂಬ ಕನಿಕರವನ್ನಿಟ್ಟು, ತನ್ನಿಂದ ಸೃಷ್ಟವಾದ ಚರಾಚರಾತ್ಮಕ ಪ್ರಪಂಚವನ್ನುದ್ಧರಿಸುವುದಕ್ಕಾಗಿಯೇ, ತಾನೂ ಆಯಾ ಕರ್ಮಗಳನ್ನಾಚರಿಸಿ ತೋರಿಸುತ್ತಿರುವನು, ಇಷ್ಟೇ ಹೊರತು ಶ್ರೀಕೃಷ್ಣನಿಗೆ ಕರ್ಮಾಧೀನವಾದ ಜನ್ಮಾದಿಗಳೊಂದೂ ಇರುವುದಿಲ್ಲ. ಆದುದರಿಂದ ಭಗವಂತನು ದುಷ್ಟನಿಗ್ರಹಕ್ಕಾಗಿ ಜನ್ಮವನ್ನೆತ್ತಿ, ಜನಗಳಿಗೆ ದಾರಿ ತೋರಿಸುವುದಕ್ಕಾಗಿ ಕರ್ಮಗಳನ್ನೂ ಆಚರಿಸುತ್ತಿರುವನು. ಎಲೈ ಮಿತ್ರನೆ! ಹೀಗೆ ಭಗವಂತನು, ತನ್ನನು ಮರೆಹೊಕ್ಕು ತನ್ನ ಆಜ್ಞಾಧೀನರಾದ ಇಂದ್ರಾದಿ ಲೋಕಪಾಲಕರ ಕೋರಿಕೆಯನ್ನೀಡೇರಿಸುವುದಕ್ಕಾಗಿ, ಯದುವಂಶದಲ್ಲಿ ಶ್ರೀಕೃಷ್ಣಾವತಾರವನ್ನೆತ್ತಿರುವನಷ್ಟೆ? ಆ ಕೃಷ್ಣನ ಯೋಗಕ್ಷೇಮಗಳೆಲ್ಲವನ್ನೂ ನೀನು ವಿಸ್ತರವಾಗಿ ನನಗೆ ತಿಳಿಸಬೇಕು." ಎಂದು ವಿದುರನು ಉದ್ಧವನನ್ನು ಪ್ರಾರ್ಥಿಸಿದನು. ಇಲ್ಲಿಗೆ ಮೊದಲನೆಯ ಅಧ್ಯಾಯವು.

---

ಉದ್ಧವನು ಶ್ರೀಕೃಷ್ಣನ ಅಗಲಿಕೆಯಿಂದ ದುಃಖಿಸುತ್ತ, ವಿದುರನಿಗೆ ಆ ಕೃಷ್ಣನ ವೃತ್ತಾಂತಗಳನ್ನು ತಿಳಿಸಿದುದು.

"ಎಲೈ ಪರೀಕ್ಷಿದ್ರಾಜನೆ ಕೇಳು! ಉದ್ಧವನಾದರೋ ವಿಷ್ಣುಭಕ್ತರಲ್ಲಿ ಶಿರೋರತ್ನಪ್ರಾಯನು! ಅವನು ಐದು ವರ್ಷದ ಬಾಲನಾಗಿದ್ದಂದಿನಿಂದಲೇ ಶ್ರೀಕೃಷ್ಣನ ವಿಷಯದಲ್ಲಿ ಪರಮಭಕ್ತಿಯುಳ್ಳವನಾಗಿ, ಆಟಪಾಟಗಳಲ್ಲಿಯೂ ಆ ಕೃಷ್ಣನನ್ನೇ ಪೂಜಿಸುತ್ತಿದ್ದವನು. ಒಮ್ಮೆ ಉದ್ಧವನು ಹೀಗೆ ಕೃಷ್ಣನ ಪೂಜೆಯಿಂದ ವಿನೋದಿಸುತ್ತಿರುವಾಗ, ಅವನ ತಾಯಿಯು ಬಂದು ಬೆಳಗಿನ ಊಟಕ್ಕಾಗಿ ಅವನನ್ನು ಕರೆಯುತ್ತ "ಕುಮಾರಾ! ಏಳು! ಹೊತ್ತಾಯಿತು! ನೀನು ಬಹಳ ಹಸಿದಿರುವೆ! ಬೇಗ ಬಾ!" ಎಂದು ಬಹಳವಾಗಿ ನಿರ್ಬಂಧಿಸಿದಳು. ಎಷ್ಟೆಷ್ಟು ಪ್ರಾರ್ಥಿಸಿದರೂ ಉದ್ಧವನು, ಅವಳ ವಾಕ್ಯವನ್ನು ಲಕ್ಷ್ಯಕ್ಕೆ ತಾರದೆ ಕೃಷ್ಣ ಪೂಜೆಯಲ್ಲಿಯೇ ನಿರತನಾಗಿಬಿಟ್ಟನು. ಹೀಗೆ

ಬಾಲ್ಯದಿಂದಲೂ ಹಸಿವು ಬಾಯಾರಿಕೆಗಳನ್ನೂ ಲಕ್ಷ್ಯಮಾಡದೆ ಕೃಷ್ಣನನ್ನು ಧ್ಯಾನಿಸುತ್ತಿದ್ದ ಆ ಉದ್ಧವನಿಗೆ, ಈಗ ವಿದುರನು ಕೃಷ್ಣನ ವೃತ್ತಾಂತವನ್ನು ಕುರಿತು ತನ್ನನ್ನು ಪ್ರಶ್ನೆಮಾಡಿದ ಕೂಡಲೇ, ಆ ಕೃಷ್ಣನ ಸ್ಮರಣೆಯು ಬಂದು, ಅವನ ವಿಯೋಗದುಃಖವನ್ನು ಸಹಿಸಲಾರದೆ ಮುಹೂರ್ತಮಾತ್ರದ ವರೆಗೆ ಮೈಮರೆತು ಪರವಶನಾಗಿದ್ದನು. ಕ್ಷಣಕಾಲದವರೆಗೆ ಯಾವ ಉತ್ತರ ವನ್ನೂ ಹೇಳಲಿಲ್ಲ. ಆ ಮೇಲೆ ಸ್ವಲ್ಪ ಸ್ವಲ್ಪವಾಗಿ ಚೇತರಿಸಿಕೊಂಡು, ಶ್ರೀಕೃಷ್ಣನ ಪಾದಾರವಿಂದಗಳನ್ನು ಧ್ಯಾನಿಸುತ್ತ, ಅದರಿಂದುಂಟಾದ ಮಿತಿ ಮೀರಿದ ಸಂತೋಷದಿಂದುಬ್ಬುತ್ತಿದ್ದನು. ಆತನ ಕಣ್ಣುಗಳಲ್ಲಿ ಆನಂದಬಾ ಷ್ಪವೂ ಸುರಿಯಲಾರಂಭಿಸಿತು. ಅವನ ಮೈಯೆಲ್ಲವೂ ಪುಳಕಿತವಾಯಿತು. ಹೀಗೆ ಸಂತೋಷಪರವಶನಾಗಿದ್ದ ಉದ್ಧವನು, ವಿದುರನಿಗೆ ಆ ಶ್ರೀಕೃಷ್ಣನ ನಿರ್ಯಾಣವನ್ನು ಹೇಗೆ ತಿಳಿಸುವುದೆಂಬ ದುಃಖದಿಂದ, ಕಣ್ಣುಗಳನ್ನು ಮುಚ್ಚಿ ಕೊಂಡು, ಕ್ಷಣಕಾಲದವರೆಗೆ ಮೌನದಿಂದಿದ್ದುದನ್ನು ಕಂಡು, ವಿದುರನು "ಆಹಾ! ಈತನಲ್ಲವೇ ಕೃತಾರ್ಥನು!" ಎಂದು ಆತನ ಭಕ್ತಿವಿಶೇಷವನ್ನು ಕೊಂಡಾಡುತ್ತ ಆಶ್ಚರ್ಯಪರವಶನಾಗಿದ್ದನು. ಉದ್ಧವನು ತನ್ನ ಕಣ್ಣುಗಳಲ್ಲಿ ತುಳುಕುತ್ತಿದ್ದ ದುಃಖಬಾಷ್ಪವನ್ನು ತೊಡೆದುಕೊಂಡು, ಮೃದುವಾಕ್ಯದಿಂದ ವಿದುರನನ್ನು ಕುರಿತು ಹೀಗೆಂದು ಹೇಳತೊಡಗಿದನು. "ಓ ವಿದುರಾ! ನೀನು ನಮ್ಮ ಕ್ಷೇಮಲಾಭವನ್ನು ಕೇಳುತ್ತಿರುವೆಯಲ್ಲಾ! ಅದಕ್ಕೆ ನಾನೇನುತ್ತರ ವನ್ನು ಕೊಡಲಿ! ಶ್ರೀಕೃಷ್ಣನೆಂಬ ಸೂರ್ಯನು ಅಸ್ತಮಿಸಿಬಿಟ್ಟನು. ಕಾಲ ವೆಂಬ ಮಹಾಸರ್ಪವು ನಮ್ಮ ಮನೆಗಳಲ್ಲಿ ಪ್ರವೇಶಿಸಿ, ನಮ್ಮಂತಹ ಸಮಸ್ತ ಪ್ರಾಣಿಗಳ ಪ್ರಾಣವಾಯುವನ್ನೂ ಅಪಹರಿಸಿತು! ನಮ್ಮ ಗೃಹಾಂಗಣಗಳೆ ಲ್ಲವೂ, ಕಾಂತಿಹೀನವಾದುವು. ಇನ್ನು ನಮ್ಮ ಕ್ಷೇಮವನ್ನೇನೆಂದು ಹೇಳಲಿ! ಅಕಟಾ! ಈಗ ಈ ಸಮಸ್ತ ಭೂಮಂಡಲವೂ ನಿರ್ಭಾಗ್ಯವಾಯಿತು! ಅದರ ಲ್ಲಿಯೂ ನಮ್ಮ ಯಾದವರನ್ನು ಪರಮ ನಿರ್ಭಾಗ್ಯರೆಂದೇ ಹೇಳಬಹುದು. ಯಾದವರೆಲ್ಲರೂ ಇದುವರೆಗೆ ಆ ಕೃಷ್ಣನೊಡನೆ ಬಹಳ ಸಲಿಗೆಯಿಂದಿದ್ದು, ಅವನನ್ನೂ ತಮ್ಮಂತೆಯೇ ಸಾಮಾನ್ಯ ಮನುಷ್ಯನೆಂದು ಭಾವಿಸುತ್ತಿದ್ದರೇ ಹೊರತು, ಆತನ ನಿಜಸ್ಥಿತಿಯನ್ನು ಯಾರೂ ತಿಳಿಯಲಾರದೆ ಹೋದರು. ಆಹಾ! ಆ ಯಾದವರ ಅಜ್ಞಾನವನ್ನೇನೆಂದು ಹೇಳಲಿ! ಬಾಲ್ಯದಿಂದಲೂ

ಆ ಕೃಷ್ಣನೊಡನೆ ಆಟಪಾಟಗಳಲ್ಲಿ ಸಂಗಡ ಕಲೆತಿದ್ದರೂ, ಅವನ ಅಸಾಧಾರಣ ಮಹಿಮೆಯನ್ನು ತಿಳಿಯದಿದ್ದಮೇಲೆ, ಅವರೆಲ್ಲರೂ ಅಜ್ಞಾನಾಂಧಕಾರದಲ್ಲಿ ಮುಳುಗಿದವರೆಂಬುದಕ್ಕೆ ಸಂದೇಹವೇನಿದೆ? ಮೀನುಗಳು ಸಮುದ್ರದಲ್ಲಿ ತಿರುಗುತ್ತಿರುವ ಹಡಗುಗಳನ್ನು ಆಗಾಗ ನೋಡುತ್ತಿದ್ದರೂ, ಅವುಗಳನ್ನು ತಮಗೆ ಸಮಾನಗಳಾದ ಜಲಜಂತುಗಳನ್ನಾಗಿಯೇ ತಿಳಿಯುವುವೇ ಹೊರತು, ಜನರನ್ನು ಅಪಾಯವಿಲ್ಲದೆ ಮಹಾಸಮುದ್ರಮಧ್ಯದಿಂದುದ್ಧರಿಸತಕ್ಕ ಸಾಧನವನ್ನಾಗಿ ತಿಳಿಯಲಾರವಷ್ಟೆ? ಹಾಗೆಯೇ ಮೋಹಸಮುದ್ರದಲ್ಲಿ ಮುಳುಗಿರುವ ಯಾದವರೂ ಕೂಡ, ಶ್ರೀಕೃಷ್ಣನು ಸಂಸಾರಸಾಗರದಿಂದುದ್ಧರಿಸತಕ್ಕ ಪರಮಾತ್ಮಸ್ವರೂಪನೆಂಬುದನ್ನು ತಿಳಿಯಲಾರದೆ ಹೋದರು. ವಿದುರಾ! ಆ ಯಾದವರೂ ಸಾಮಾನ್ಯರಲ್ಲ! ಪರಹೃದಯವನ್ನು ತಿಳಿಯುವುದರಲ್ಲಿ ಬಹಳ ನಿಪುಣರು! ಮಹಾಬುದ್ಧಿವಂತರು! ಹೀಗಿದ್ದರೂ ಸರ್ವಕಾಲಗಳಲ್ಲಿಯೂ ತಮ್ಮ ಸಂಗಡಲೇ ಇದ್ದ ಕೃಷ್ಣನ ನಿಜವನ್ನು ತಿಳಿಯಲಾರದೆ ಹೋದಮೇಲೆ, ಅವರ ದೌರ್ಭಾಗ್ಯಕ್ಕಿಂತಲೂ ಮೇಲೆ ದೌರ್ಭಾಗ್ಯವುಂಟೆ? ಆ ಯಾದವರು ಮಾತ್ರವೇ ಅಲ್ಲ! ಭಗವಂತನ ಮಾಯೆಯಿಂದ ಮೋಹಿತರಾಗಿಯೂ, ಅಚೇತನಗಳಾದ ಶಬ್ದಾದಿ ವಿಷಯಗಳನ್ನೇ ತಮಗೆ ಭೋಗ್ಯವಸ್ತುಗಳನ್ನಾಗಿ ತಿಳಿದವರಾಗಿಯೂ ಇರುವ ಶಿಶುಪಾಲನೇ ಮೊದಲಾದ ಇನ್ನೂ ಅನೇಕರೂ ಕೂಡ, ಆ ಕೃಷ್ಣನ ನಿಜವನ್ನರಿಯಲಾರದೆ, ಅವನನ್ನೂ ತಮ್ಮಂತೆ ಒಬ್ಬ ಜೀವನನ್ನಾಗಿ ತಿಳಿದು ಮರುಳಾಗಿದ್ದರು. ಆದರೆ "ಅವನ ನಿಜಸ್ಥಿತಿಯನ್ನು ತಿಳಿದವರೊಬ್ಬರೂ ಇಲ್ಲವೆ?" ಎಂದು ನೀನು ಕೇಳಬಹುದು- ಹಾಗೆ ತಿಳಿಯಬೇಡ! ಪರಮಾತ್ಮನಾದ ಆ ಶ್ರೀಕೃಷ್ಣನಲ್ಲಿಯೇ ಸಟ್ಟಮನಸ್ಸುಳ್ಳ ಕೆಲವು ಮಹಾತ್ಮರ ಬುದ್ಧಿಯು ಮಾತ್ರ, ಆ ಭಗವನ್ಮಾಯೆಯಿಂದ ಮರುಳಾಗದೆ, ಶುದ್ಧವಾಗಿರುವುದು. ಇವರಿಗೆ ಕೃಷ್ಣನು ಮನುಷ್ಯಮಾತ್ರನೆಂಬ ಭ್ರಾಂತಿಯೂ ಹುಟ್ಟಲಾರದು! ವಿದುರಾ! ಈ ವಿಚಾರವಿರಲಿ! ಕೃಷ್ಣನ ವೃತ್ತಾಂತವನ್ನು ಕೇಳಿದೆಯಲ್ಲವೆ? ಅದನ್ನು ವಿವರಿಸುವೆನು ಕೇಳು. ಮಹಾತ್ಮನಾದ ಆ ಕೃಷ್ಣನು ತಪಸ್ಸಿದ್ಧರಾದ ಯೋಗಿಗಳಿಗೆ ಮಾತ್ರವೇ ಗೋಚರಿಸತಕ್ಕ ಲೋಕಮೋಹಕವಾದ ತನ್ನ ರೂಪವನ್ನು ನಮ್ಮೆಲ್ಲರಿಗೂ ತೋರಿಸುತ್ತಿದ್ದು, ಆ ಸ್ವರೂಪದೊಡನೆಯೇ

ಅಂತರ್ಧಾನವನ್ನೂ ಹೊಂದಿಬಿಟ್ಟನು! ಆಹಾ! ಏನಾಶ್ಚರ್ಯವಿದು! ಆ ಮಹಾತ್ಮನ ಸ್ವರೂಪವು ಕಣ್ಮರೆಯಾದರೂ, ಇನ್ನೂ ನನ್ನ ಮನಸ್ಸನ್ನು ಬಿಟ್ಟು ಕದಲದಂತಿರುವುದು! ಮನುಷ್ಯಲೀಲೆಗೆ ಯೋಗ್ಯವಾಗಿಯೂ, ತನ್ನ ಯೋಗಬಲವನ್ನು ಲೋಕಕ್ಕೆ ಪ್ರಕಟಿಸುತ್ತಿದ್ದುದಾಗಿಯೂ, ಅತ್ಯದ್ಭುತ ವಾಗಿಯೂ, ಸೌಂದರ್ಯಸಮೃದ್ಧಿಯಿಂದೊಪ್ಪುತ್ತಿದ್ದುದಾಗಿಯೂ, ಕೌಸ್ತು ಭಾದ್ಯಾಭರಣಗಳಿಗೂ ಆಭರಣದಂತೆ ಅಂದವನ್ನು ಕೊಡತಕ್ಕ ಅವಯವ ಗಳಿಂದ ಕೂಡಿದುದಾಗಿಯೂ ಇದ್ದ ಆ ದಿವ್ಯಾಕೃತಿಯು ಈಗ ಕಣ್ಮರೆಯಾ ಯಿತಲ್ಲಾ! ಇನ್ನು ನಮಗೆ ಆ ದಿವ್ಯರೂಪವನ್ನು ನೋಡುವ ಭಾಗ್ಯವೆಲ್ಲಿ? ಯುಧಿಷ್ಠಿರನು ರಾಜಸೂಯಯಾಗವನ್ನು ನಡೆಸಿದಾಗ, ಆ ಸಭಾಮಧ್ಯದಲ್ಲಿ ನೆರೆದ ಮೂರು ಲೋಕದ ಜನರೂ, ತಮಗೆ ನೇತ್ರಾನಂದಕರವಾದ ಆ ಶ್ರೀಕೃಷ್ಣನ ದಿವ್ಯರೂಪವನ್ನು ನೋಡಿ ತಮಗೆ ತಾವು "ಆಹಾ! ಮನುಷ್ಯ ಸೃಷ್ಟಿಯಲ್ಲಿ ಬ್ರಹ್ಮನು ತೋರಿಸತಕ್ಕ ಚಾತುರ್ಯವೆಲ್ಲವೂ ಈ ಮೂರ್ತಿಯೊಂ ದರಲ್ಲಿಯೇ ಅಡಗಿರುವುದು," ಎಂದು ಪರಮಾಶ್ಚರ್ಯಭರಿತರಾಗಿದ್ದರಲ್ಲವೆ! ಅಂತಹ ರೂಪವು ಈಗ ನಾಮಮಾತ್ರ ಶೇಷವಾಯಿತು! ಯಾವ ಶ್ರೀಕೃಷ್ಣನ ಅನುರಾಗಸೂಚಕಗಳಾದ ಮಂದಹಾಸಗಳಿಂದಲೂ, ಕ್ರೀಡೆಗಳಿಂದಲೂ, ಅಭಿ ಪ್ರಾಯಗರ್ಭಗಳಾದ ನೋಟಗಳಿಂದಲೂ ಗೌರವಿಸಲ್ಪಡುತ್ತಿದ್ದ ಗೋಪ ಸ್ತ್ರೀಯರೆಲ್ಲರೂ, ಆತನ ಸೌಂದರ್ಯಾದಿಗಳಲ್ಲಿಯೇ ನಟ್ಟ ಮನಸ್ಸುಳ್ಳವರಾಗಿ, ಮನೆಮಂದಿಮಕ್ಕಳನ್ನೂ ಮರೆತು, ಕೃತ್ಯಾಕೃತ್ಯ ವಿವೇಕಶೂನ್ಯರಾಗಿ ಹಂಬಲಿಸುತ್ತಿದ್ದರೋ, ಅಂತಹ ಜಗನ್ಮೋಹನಮೂರ್ತಿಯನ್ನು ಇನ್ನು ನಾವು ಬೇರೆಲ್ಲಿಯೂ, ಯಾವ ಕಾಲದಲ್ಲಿಯೂ ನೋಡಲಾರೆವು! ಭಗವಂತನು ಜೀವಗಳಿಗೆ ದೇವಮನುಷ್ಯಾದಿ ಶರೀರಭೇದಗಳನ್ನು ಕೊಟ್ಟು, ತಾನೂ ಆ ಜೀವನಲ್ಲಿ ಅಂತರಾತ್ಮನಾಗಿ ವರ್ತಿಸತಕ್ಕವನಾದುದರಿಂದ ಗುಣತ್ರಯಾತ್ಮಕ ವಾದ ಈ ಸಮಸ್ತ ಪ್ರಪಂಚವೂ ಆ ಭಗವಂತನ ಶರೀರಗಳಲ್ಲದೆ ಬೇರೆಯಲ್ಲ! ಆದರೆ ಅವುಗಳಲ್ಲಿ ಸತ್ವಗುಣಪ್ರಧಾನರೆನಿಸಿ ಶಾಂತರಾದ ಸಜ್ಜನರು, ರಜೋ ಗುಣ ತಮೋಗುಣ ಪ್ರಧಾನರಾದ ದುರಾತ್ಮರಿಂದ ಪೀಡಿತರಾಗಿ ದುಃಖಪಡು ವುದನ್ನು ನೋಡಿ, ಆ ಭಗವಂತನು ದಯಾರ್ದ್ರಚಿತ್ತನಾಗಿ, ತಾನು ಪರಾವ ರೇಶ್ವರನೆನಿಸಿ, ಜನ್ಮಕರ್ಮಾದಿರಹಿತನಾಗಿದ್ದರೂ ದಾರುವಿನಲ್ಲಿ ಅಗ್ನಿಯು

ಜನಿಸುವಂತೆ, ದೇವಮಾನವಾದಿಶರೀರಗಳಲ್ಲಿ ಉತ್ಪನ್ನವಾಗುವುದುಂಟು. ಅವನಿಗೆ ಈ ಶರೀರಗಳು ತನ್ನ ಸಂಕಲ್ಪಮಾತ್ರದಿಂದುಂಟಾಗುವುವೇ ಹೊರತು ಕರ್ಮಾಧೀನಗಳಲ್ಲ. ಭಗವಂತನು ದುಷ್ಟರಾದ ಶಿಶುಪಾಲಾದಿಗಳನ್ನಡಗಿಸಿ, ಭೂಭಾರವನ್ನು ಪರಿಹರಿಸಿ, ಲೋಕಕ್ಷೇಮವನ್ನುಂಟುಮಾಡಬೇಕೆಂಬ ಕೋರಿಕೆಯಿಂದ, ವಸುದೇವನ ಮನೆಯಲ್ಲಿ, ತನಗೆ ಮೊದಲು ಜನಿಸಿದ ಬಲರಾಮನೆಂಬ ನಿಜಾಂಶದೊಡನೆ ಕೃಷ್ಣರೂಪದಿಂದವತರಿಸಿದ್ದನು. ಕರ್ಮನಿಮಿತ್ತವಾದ ಜನನಮರಣಾದಿಗಳೊಂದೂ ಇಲ್ಲದವನಾದರೂ ಆ ಭಗವಂತನು, ವಸುದೇವನು ಸೆರೆಯಲ್ಲಿ ಸಿಕ್ಕಿಬಿದ್ದಾಗ, ಸಾಮಾನ್ಯ ಜೀವರಾಶಿಯಂತೆ ಅವನಿಗೆ ಪುತ್ರನಾಗಿ ಜನಿಸಿದನು. ದುರಾತ್ಮನಾದ ಕಂಸನಿಗೆ ತಾನು ಭಯಪಟ್ಟವನಂತೆ ನಂದಗೋಕುಲದಲ್ಲಿಯೇ ವಾಸಿಸುತ್ತಿದ್ದನು. ಆದರಿಂದಾಚೆಗೆ ಮಥುರಾಪುರಿಯಲ್ಲಿ ಕೊಂಚಕಾಲವಿದ್ದು, ಅಲ್ಲಿ ದುಷ್ಟರಾದ ಕಾಲಯವನಾದಿಗಳ ಹಿಂಸೆಯನ್ನು ತಡೆಯಲಾರದವನಂತೆ ಆ ಪಟ್ಟಣವನ್ನು ಬಿಟ್ಟು ತಪ್ಪಿಸಿಕೊಂಡೂ ಹೋದನು. ಎಣೆಯಿಲ್ಲದ ವೀರ್ಯವುಳ್ಳವನಾಗಿಯೂ ಅಪ್ರಾಕೃತಶರೀರವುಳ್ಳವನಾಗಿಯೂ ಇರುವ ಆ ಕೃಷ್ಣನು ನಡೆಸಿದ ಆಶ್ಚರ್ಯಕಾರ್ಯಗಳೆಲ್ಲವನ್ನೂ ನೆನೆಸಿಕೊಂಡರೆ, ನನ್ನ ಮನಸ್ಸು ಮರುಳಾಗುವುದು. ಇವೆಲ್ಲವೂ ಆ ಭಗವಂತನು ತನ್ನ ಮಹಿಮೆಯನ್ನು ಮರೆಸಿಡುವುದಕ್ಕಾಗಿ ಮಾಡಿದ ಕಾರ್ಯಗಳೇ ಹೊರತು ಬೇರೆಯಲ್ಲ. ಇದಲ್ಲದೆ ಆ ಕೃಷ್ಣನು ಕಂಸನನ್ನು ಕೊಂದು ಬಂದಮೇಲೆಯೂ ಕೂಡ, ದೇವಕೀವಸುದೇವರ ಪಾದಗಳಲ್ಲಿ ಬಿದ್ದು, "ಅಮ್ಮಾ! ಜನಕಾ! ನಾನೂ ಕಂಸನ ಭಯಕ್ಕಾಗಿಯೇ ಬಹುಕಾಲದವರೆಗೆ ನಿಮ್ಮನ್ನಗಲಿ ಬೇರೆಕಡೆಯಲ್ಲಿರಬೇಕಾಯಿತು. ಅಷ್ಟು ದೀರ್ಘಕಾಲದವರೆಗೆ ನಿಮ್ಮ ಪಾದ ಶುಶ್ರೂಷೆಯನ್ನು ಮಾಡುವುದಕ್ಕೂ ಇಲ್ಲದೆ ಹೋಯಿತು. ಹೀಗೆ ಮಹಾಪರಾಧಿಯಾದ ನನ್ನ ವಿಷಯದಲ್ಲಿಯೂ, ಬಲರಾಮನ ವಿಷಯದಲ್ಲಿಯೂ ಕೋಪಗೊಳ್ಳದೆ, ನಮ್ಮ ತಪ್ಪನ್ನು ಮನ್ನಿಸಬೇಕು." ಎಂದು ಎಷ್ಟೋ ವಿನಯದಿಂದ ಪ್ರಾರ್ಥಿಸುತ್ತಿದ್ದನಲ್ಲವೆ? ಈ ಚರಿತ್ರವೊಂದೊಂದೂ ನನ್ನ ಮನಸ್ಸನ್ನು ಕಲಗಿಸುತ್ತಿರುವುದು. ಆದರೆ "ಕೃಷ್ಣನು ತಾನೇ ಸರ್ವನಿಯಾಮಕನಾಗಿರುವಾಗ ಹೀಗೆ ಇತರರಲ್ಲಿ ದೈನ್ಯವನ್ನು ತೋರಿಸಬೇಕಾದುದೇಕೆ" ಎಂದು ಕೇಳುವೆಯಾ? ಈ ಚರ್ಯೆಗಳೆಲ್ಲವೂ

ಲೋಕದ ಜನಗಳಿಗೆ ಮೋಹವನ್ನುಂಟುಮಾಡುವುದಕ್ಕಲ್ಲದೆ ಬೇರೆಯಲ್ಲ. ಮನುಷ್ಯ ಲೀಲೆಯನ್ನೇ ಅನುಸರಿಸುತ್ತ, ನಡುನಡುವೆ ತನ್ನ ಮಹಾಮಹಿಮೆಯನ್ನೂ ಐಶ್ವರ್ಯವನ್ನೂ ತೋರಿಸುತ್ತಿದ್ದನು. ಆತನು ಸರ್ವೇಶ್ವರನಲ್ಲದಿದ್ದ ಪಕ್ಷದಲ್ಲಿ ಈ ಅದ್ಭುತ ಕಾರ್ಯಗಳು ಮತ್ತೊಬ್ಬರಿಗೆ ಹೇಗೆತಾನೇ ಸಾಧ್ಯವಾಗುವುದು? ಅಂತಹ ಶ್ರೀಕೃಷ್ಣನ ಪಾದಾರವಿಂದಗಳನ್ನು ನಂಬಿ, ಆತನ ಪಾದಧೂಳಿಯನ್ನಾಘ್ರಾಣಿಸಿ, ಒಂದಾವರ್ತಿ ಅದರ ರುಚಿಯನ್ನು ನೋಡಿದ ಯಾವ ಮನುಷ್ಯನು ತಾನೇ ಅವನನ್ನು ಮರೆತುಬಿಡಬಲ್ಲನು! ಮತ್ತು ಆ ಶ್ರೀಕೃಷ್ಣಮೂರ್ತಿಯು ಹುಬ್ಬಿನಾಟಗಳನ್ನನುಸರಿಸಿಯೇ ಮೃತ್ಯುದೇವತೆಯು ಲೋಕದಲ್ಲಿರುವ ದುರ್ಮಾರ್ಗರೆಲ್ಲರನ್ನೂ ಸಂಹರಿಸಿ ಭೂಭಾರವನ್ನಪಹರಿಸುತ್ತಿರುವನು. ಇವೆಲ್ಲವೂ ಆ ಈಶ್ವರನ ಕಾರ್ಯವಲ್ಲದೆ ಬೇರೆಯಲ್ಲ. ಅವನ ಸಂಕಲ್ಪಮಾತ್ರದಿಂದಲೇ ಪ್ರಪಂಚವ್ಯಾಪಾರವೆಲ್ಲವೂ ನಡೆಯುತ್ತಿರುವುದು. ಧರ್ಮರಾಜನು ರಾಜಸೂಯಯಾಗವನ್ನು ನಡೆಸಿದಾಗ, ಶಿಶುಪಾಲನು ಆಡಬಾರದ ಮಾತುಗಳನ್ನಾಡಿ, ಕೃಷ್ಣನನ್ನು ನಿಂದಿಸಿ, ಕೊನೆಗೆ ಆ ಶ್ರೀಕೃಷ್ಣನಿಂದಲೇ ಸಂಹೃತನಾಗಿ, ಯೋಗೀಶ್ವರರಿಗೂ ದುರ್ಲಭವಾದ ಮೋಕ್ಷಸಿದ್ಧಿಯನ್ನು ಹೊಂದಿ, ಆ ಭಗವಂತನ ಪಾದಾರವಿಂದಗಳಲ್ಲಿಯೇ ಹೋಗಿ ಸೇರಿದನು. ಈ ಚರಿತ್ರೆಗಳೆಲ್ಲವನ್ನೂ ನೀನೂ ಕಣ್ಣಾರೆ ನೋಡಿದವನಷ್ಟೆ? ಹೀಗೆ ಶ್ರೀಕೃಷ್ಣನು ತನ್ನ ಶತ್ರುಗಳಲ್ಲಿಯೂ ವಾತ್ಸಲ್ಯವನ್ನು ತೋರಿಸಿ, ಸರ್ವೋತ್ತಮವಾದ ಮೋಕ್ಷಫಲವನ್ನು ಕೊಟ್ಟಿರುವಾಗ, ತನ್ನ ಮಿತ್ರರನ್ನೂ, ಆಶ್ರಿತರನ್ನೂ ಉದ್ಧರಿಸುವನೆಂಬುದರಲ್ಲಿ ಸಂದೇಹವೇನುಂಟು? ಹೀಗೆ ಸರ್ವಸಮವಾದ ಪ್ರೇಮವನ್ನು ತೋರಿಸುತ್ತಿರುವ ಆ ಶ್ರೀಕೃಷ್ಣನ ವಿಯೋಗವನ್ನು ಯಾರು ತಾನೇ ಸಹಿಸಬಲ್ಲರು? ಇದಲ್ಲದೆ ಕುರುಕ್ಷೇತ್ರದ ಯುದ್ಧದಲ್ಲಿಯೂ ಕೂಡ, ಎಷ್ಟೋ ಮಂದಿ ರಾಜರು ಲೋಕಮೋಹನಮೂರ್ತಿಯಾದ ಆ ಕೃಷ್ಣನ ರೂಪವನ್ನು ಕಣ್ಣೆದಿರಿಗೆ ನೋಡುವುದರಿಂದಲೂ, ಅರ್ಜುನನ ಬಾಣದಿಂದಲೂ ಪವಿತ್ರತೆಯನ್ನು ಹೊಂದಿ, ಪರಮಪದವನ್ನು ಹೊಂದಿದರಲ್ಲವೆ? ಆ ಮಹಾನುಭಾವನ ಎಣೆಯಿಲ್ಲದ ಮಹಿಮೆಯನ್ನು ಹೇಳಬೇಕಾದುದೇನು? ಸಮಸ್ತಸೃಷ್ಟಿಗಳಿಗೂ ಕಾರಣಭೂತನು! ಸತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳಿಗೂ ಅಧಿಪತಿ! ಇತರಾಪೇಕ್ಷೆಯಿಲ್ಲದೆ, ತನಗೆ

ತಾನೇ ಬಂದೊದಗುತ್ತಿರುವ ಐಶ್ವರ್ಯ, ವೀರ್ಯ, ಯಶಸ್ಸು ಮುಂತಾದುವು ಗಳ ಸಮೃದ್ಧಿಯಿಂದ ಪೂರ್ಣಕಾಮನೆನಿಸಿದವನು! ಲೋಕಪಾಲಕರೆಲ್ಲರೂ ಬಗೆಬಗೆಯ ಪೂಜಾಸಾಮಗ್ರಿಗಳೊಡನೆ ಬಂದು, ಆತನ ಪಾದಾರವಿಂದ ಗಳನ್ನು ಸೇವಿಸುತ್ತಿರುವರು. ಓ ವಿದುರಾ! ಶ್ರೀಕೃಷ್ಣನು ಇಷ್ಟೊಂದು ಮಹಾಮಹಿಮೆಯುಳ್ಳವನಾಗಿದ್ದರೂ, ಯಾದವಕುಲದ ಚಕ್ರವರ್ತಿಪಟ್ಟದಲ್ಲಿ ಉಗ್ರಸೇನನನ್ನು ಕುಳ್ಳಿರಿಸಿ ತಾನು ಸಾಮಾನ್ಯ ಭೃತ್ಯನಂತೆ ಅವನ ಸೇವೆ ಯನ್ನು ಮಾಡುತ್ತ ಅವನ ಆಜ್ಞಾಧೀನನಾಗಿ 'ಮಹಾಪ್ರಭು! ಲಾಲಿಸಬೇಕು' ಇತ್ಯಾದಿ ವಿನಯಪೂರ್ವಕಗಳಾದ ವಿಜ್ಞಾಪನಾವಾಕ್ಯಗಳಿಂದಲೂ, ದಾಸ್ಯ ಕಾರ್ಯಗಳಿಂದಲೂ ಅವನನ್ನೋಲಗಿಸುತ್ತಿದ್ದನಲ್ಲವೆ? ಇವೆಲ್ಲವೂ ನನಗೆ ಆತ್ಯಾ ಶ್ಚರ್ಯವನ್ನು ಉಂಟುಮಾಡುತ್ತಿರುವುದು. ಆ ಕೃಷ್ಣನು ಇನ್ನೂ ಶಿಶುವಾಗಿದ್ದ ಕಾಲದಲ್ಲಿಯೇ, ಪೂತನೆಯೆಂಬ ರಾಕ್ಷಸಿಯು, ಕಂಸನ ಪ್ರೇರಣೆಯಿಂದ ತನ್ನ ಸ್ತನಾಗ್ರಗಳಿಗೆ ಕಾಲಕೂಟದಂತೆ ಘೋರವಾದ ವಿಷವನ್ನು ಸವರಿಕೊಂಡು, ಆ ಶಿಶುವಿಗೆ ಮೊಲೆಯೂಡಿಸುವುದಕ್ಕಾಗಿ ಬಂದಳು. ಅಲ್ಲಿದ್ದ ಗೋಪಸ್ತ್ರೀ ಯರೆಲ್ಲರೂ ಬೇಡಬೇಡವೆಂದು ಎಷ್ಟೋ ವಿಧದಿಂದ ತಡೆಯುತ್ತಿದ್ದರೂ, ಕೇಳದೆ, ಅವಳು ಕೃಷ್ಣನನ್ನು ಕೊಲ್ಲಬೇಕೆಂಬ ದುರುದ್ದೇಶದಿಂದ ಆ ಶಿಶು ವನ್ನೆತ್ತಿಕೊಂಡು ಸ್ತನ್ಯವನ್ನು ಕೊಡುತ್ತಿದ್ದಳು. ಆಗ ಕೃಷ್ಣನು ಅವಳ ಸ್ತನವನ್ನು ಕುಡಿಯುವ ನೆವದಿಂದಲೇ ಆ ರಾಕ್ಷಸಿಯ ಜೀವವನ್ನು ಹೀರಿ ಬಿಟ್ಟನಲ್ಲವೆ? ಆ ಶ್ರೀಕೃಷ್ಣನು ಸಾಕ್ಷಾದ್ಭಗವಂತನ ಪೂರ್ಣಾಂಶವಲ್ಲದಿದ್ದ ಪಕ್ಷದಲ್ಲಿ ಈ ಕಾರ್ಯವು ಹೇಗೆ ತಾನೇ ಸಾಧ್ಯವಾಗುತ್ತಿತ್ತು? ಅದು ಹೋಗಲಿ! ಶಿಶುಹತ್ಯೆಯನ್ನು ಮಾಡುವುದಕ್ಕಾಗಿಯೇ ಬಂದ ಈ ಪೂತನೆಯು ಪರಮ ದುಷ್ಟೆಯೆಂಬುದರಲ್ಲಿ ಸಂದೇಹವಿಲ್ಲವಷ್ಟೆ? ಇಷ್ಟು ದುರಾತ್ಮಳಾಗಿದ್ದರೂ ಕೂಡ ಆ ಪೂತನೆಯು ಕೃಷ್ಣಾನುಗ್ರಹದಿಂದಲೇ ಯಶೋದಾದೇವಿಗೆ ಸಲ್ಲ ತಕ್ಕ ಪರಮಪದವನ್ನೇ ಹೊಂದಿದಳು. ಹೀಗೆ ತನಗೆ ಅಪರಾಧವನ್ನು ಮಾಡಿದ ಶತ್ರುಗಳಿಗೂ ಕೂಡ ಮೋಕ್ಷಸುಖವನ್ನು ಕೊಡತಕ್ಕ ಶ್ರೀಕೃಷ್ಣ ನನ್ನು ಬಿಟ್ಟು ಬೇರೆ ದೇವತೆಗಳನ್ನು ಮರೆಹೊಗುವುದಕ್ಕೆ ಯಾವನು ತಾನೇ ಆಸೆಪಡುವನು? ಆದರೆ ಭಕ್ತಿಯೊಂದು ಹೊರತು ಮುಕ್ತಿಗೆ ಬೇರೆ ಮಾರ್ಗ ವಿಲ್ಲವೆಂದು ಶ್ರುತಿ, ಸ್ಮೃತಿಗಳೆಲ್ಲವೂ ಉದ್ಘೋಷಿಸುತ್ತಿರುವಾಗ, ಭಕ್ತಿಹೀನರಾಗಿ

ಭಗವಂತನಲ್ಲಿ ವೈರವನ್ನು ಬೆಳೆಸಿದ ಮಹಾತ್ಮರೂ ಕೂಡ ಮೋಕ್ಷವನ್ನು ಹೊಂದಿದರೆಂಬುದು ಅಸಂಗತವಲ್ಲವೆ" ಎಂದು ನೀನು ಆಪೇಕ್ಷಿಸಬಹುದು. ವಿದುರಾ! ಅದಕ್ಕೂ ಸಮಾಧಾನವನ್ನು ಹೇಳುವೆನು ಕೇಳು, ಭಗವಂತನಾದ ಶ್ರೀಕೃಷ್ಣನಲ್ಲಿ ದ್ವೇಷವನ್ನು ಬೆಳೆಸಿ, ಯುದ್ಧವನ್ನೂ ಮಾಡಿ ಆ ಶ್ರೀಕೃಷ್ಣನ ಕೈಯಿಂದಲೇ ಹತರಾಗಿ, ಪ್ರಾಣಗಳನ್ನು ಬಿಡುವಾಗ, ಗರುಡಾರೂಢನಾಗಿಯೂ, ಚಕ್ರಪಾಣಿಯಾಗಿಯೂ ಇರುವ ಆ ಭಗವಂತನನ್ನು ಕಂಡವರು ಯಾರು ಯಾರುಂಟೋ, ಅವರೆಲ್ಲರೂ ದೇವಸ್ವಭಾವದಿಂದ ಹುಟ್ಟಿದ ಭಗವದ್ಭಕ್ತರೆಂದೇ ನನಗೆ ತೋರುವುದು. ವಿದುರಾ! ಭಗವಂತನು ಬ್ರಹ್ಮಾದಿಗಳ ಪ್ರಾರ್ಥನೆಯನ್ನಂಗೀಕರಿಸಿ ಕೃಷ್ಣರೂಪದಿಂದವತರಿಸಿದುದು ಮೊದಲು, ಅವನು ನಡೆಸಿದ ಧನ್ಯಚೇಷ್ಟಿತಗಳೆಲ್ಲವನ್ನೂ ಸಂಗ್ರಹಿಸಿ ತಿಳಿಸುವೆನು ಕೇಳು. ಜ್ಞಾನಶಕ್ತಿ ಬಲೈಶ್ವರ್ಯಾದಿ ಷಡ್ಗುಣ ಪರಿಪೂರ್ಣನಾದ ಭಗವಂತನು, ಬ್ರಹ್ಮದೇವನ ಪ್ರಾರ್ಥನೆಯ ಮೇಲೆ, ಈ ಲೋಕಕ್ಕೆ ಕ್ಷೇಮವನ್ನುಂಟುಮಾಡಬೇಕೆಂಬ ಉದ್ದೇಶದಿಂದಲೇ, ಕಂಸನ ಸೆರೆಮನೆಯಲ್ಲಿ ವಸುದೇವದೇವಕಿಯರಿಗೆ ಪುತ್ರನಾಗಿ ಅವತರಿಸಿದನು. ಕಂಸನ ಭಯದಿಂದ ನಡುಗುತ್ತಿದ್ದ ವಸುದೇವನ ಮನಸ್ತುಷ್ಟಿಗಾಗಿ, ನಂದಗೋಕುಲಕ್ಕೆ ಹೋಗಿ, ಅಲ್ಲಿ ಹನ್ನೊಂದು ಸಂವತ್ಸರಗಳವರೆಗೆ ತನ್ನ ಶಕ್ತಿಯೊಂದನ್ನೂ ಹೊರಕ್ಕೆ ತೋರಿಸದೆ, ತನ್ನಣ್ಣನಾದ ಬಲರಾಮನೊಡಗೂಡಿ, ಗೊಲ್ಲರೊಡನೆ ಸೇರಿ, ತಾನೂ ಹಸುಗಳನ್ನು ಕಾಯುತ್ತಿದ್ದನು. ಕಿವಿಗಿಂಪಾದ ಸ್ವರದಿಂದ ಕೂಗುತ್ತಿರುವ ನಾನಾಜಾತಿಯ ಪಕ್ಷಿಗಳಿಂದ ತುಂಬಿದ ಯಮುನಾತೀರದ ಕಾಡುಗಳಲ್ಲಿ ವಿನೋದದಿಂದ ವಿಹರಿಸುತ್ತಿದ್ದನು. ಸರ್ವಾಂತರ್ಯಾಮಿಯಾದ ಆ ಭಗವಂತನು ಅಲ್ಲಿನ ಕಾಡುಜನರೆಲ್ಲರನ್ನೂ ಮೋಹಗೊಳಿಸುವಂತೆ, ಬಗೆಬಗೆಯ ಬಾಲಚೇಷ್ಟೆಯನ್ನೂ ನಟಿಸುತ್ತಿದ್ದನು. ಒಳಗೊಳಗೆ ಮಂದಹಾಸಪೂರ್ವಕವಾಗಿ ನಗುತ್ತಲೇ, ಮೇಲೆ ಮಾತ್ರ ಅಳುವಹಾಗೆ ಕಾಣಿಸುವನು! ಸಿಂಹದೃಷ್ಟಿಯಂತೆ ಗಂಭೀರವಾದ ನೋಟದಿಂದ ಯಮುನಾತೀರದ ಉಪವನಗಳಲ್ಲಿ ಕ್ರೀಡಿಸುತ್ತಿದ್ದನು. ಈ ಸಮಯದಲ್ಲಿ ಮಾಯಾವಿಗಳಾಗಿಯೂ, ಆಗಾಗ ಇಷ್ಟಬಂದಂತೆ ರೂಪವನ್ನು ತೋರಿಸತಕ್ಕ ಕಾಮರೂಪಿಗಳಾಗಿಯೂ ಇದ್ದ ಶಕಟ, ಧೇನುಕರೇ ಮೊದಲಾದ ಕೆಲವು ರಾಕ್ಷಸರು ಕಂಸನಿಂದ ಪ್ರೇರಿತರಾಗಿ, ತನ್ನನ್ನು ಕೊಲ್ಲುವುದಕ್ಕೆ

ಬಂದಾಗ, ಅವರೊಡನೆ ತಾನೂ ಆಟವಾಡುವ ಹಾಗೆಯೇ ಸೇರಿ, ಲೀಲಾ ಮಾತ್ರದಿಂದಲೇ ಅವರನ್ನು ಕೊಂದು ಕೆಡಹಿದನು. ಮತ್ತೊಮ್ಮೆ ಕೆಲವು ಹಸುಗಳು ಕಾಳಿಯವೆಂಬ ಮಡುವಿನಲ್ಲಿ ವಿಷಜಲವನ್ನು ಪಾನಮಾಡಿ ಸಾಯುವ ಸ್ಥಿತಿಯಲ್ಲಿದ್ದುದನ್ನು ನೋಡಿ ಕೃಷ್ಣನು, ಅದರ ಕಾರಣವನ್ನು ತಿಳಿದು, ಆ ಮಡುವಿನಲ್ಲಿ ಧುಮುಕಿ, ಅಲ್ಲಿದ್ದ ಕಾಳಿಯನೆಂಬ ಸರ್ಪರಾಜನನ್ನು ತನ್ನ ಕಾಲಿಂದ ಮೆಟ್ಟಿ ನಿಗ್ರಹಿಸಿ, ಮೂರ್ಛೆಬಿದ್ದ ಪಶುಗಳಿಗೆ ಪ್ರಾಣದಾನ ವನ್ನು ಮಾಡಿದುದಲ್ಲದೆ, ಆ ಮಡುವಿನ ಜಲವನ್ನು ವಿಷರಹಿತವನ್ನಾಗಿ ಮಾಡಿ, ಗೋಪಾಲರನ್ನೂ ರಕ್ಷಿಸಿದನು. ಮತ್ತೊಮ್ಮೆ ನಂದಗೋಕುಲದಲ್ಲಿದ್ದ ಗೊಲ್ಲರೆಲ್ಲರೂ ಮಳೆಯನ್ನಪೇಕ್ಷಿಸಿ ದೇವೇಂದ್ರನ ಪ್ರೀತಿಗಾಗಿ ಒಂದು ಯಾಗವನ್ನು ಮಾಡಬೇಕೆಂದು ಪ್ರಯತ್ನಿಸುತ್ತಿರಲು, ಅದನ್ನು ನೋಡಿ ಶ್ರೀಕೃಷ್ಣನು, ಆ ಯಾಗಕ್ಕಾಗಿ ಗೊಲ್ಲರು ಸಂಗ್ರಹಿಸಿಟ್ಟಿದ್ದ ಸಮಸ್ತ ದ್ರವ್ಯ ರಾಶಿಗಳನ್ನೂ ಸತ್ಪಾತ್ರದಲ್ಲಿ ಉಪಯೋಗಿಸಬೇಕೆಂಬ ಉದ್ದೇಶದಿಂದ, ಗೋ ಪೂಜೆಯನ್ನಾರಂಭಿಸಿ, ಆ ನೆವದಲ್ಲಿ ಅನೇಕ ಬ್ರಾಹ್ಮಣರನ್ನೂ, ಗೋವು ಗಳನ್ನೂ, ಗೋಪಾಲರನ್ನೂ ತೃಪ್ತಿಪಡಿಸಿದನು. ಆಗ ದೇವೇಂದ್ರನು ತನಗೆ ನಡೆಯುತ್ತಿದ್ದ ಪೂಜೆಯನ್ನು ತಪ್ಪಿಸಿದುದಕ್ಕಾಗಿ ಕೋಪಗೊಂಡು, ಗೋಪಾ ಲರ ಮೇಲೆ ಕಲ್ಮಳೆಯನ್ನು ಕರೆಯುವುದಕ್ಕೆ ತೊಡಗಿದನು. ಇದನ್ನು ನೋಡಿ ಶ್ರೀಕೃಷ್ಣನು ಆ ಕ್ಷಣವೇ ಸಮೀಪದಲ್ಲಿದ್ದ ಒಂದು ಪರ್ವತವನ್ನು ತನ್ನ ಕಿರುಬೆರಳಿನಿಂದ ಕೊಡೆಯ ಹಾಗೆ ಮೇಲಕ್ಕೆತ್ತಿ ಹಿಡಿದು, ಸಮಸ್ತ ಗೋವುಗಳನ್ನೂ, ಗೊಲ್ಲರನ್ನೂ, ಮಳೆಯ ಬಾಧೆಯಿಂದ ತಪ್ಪಿಸಿ ರಕ್ಷಿಸಿದನು. ಈ ನೆವದಿಂದಲೇ ಇಂದ್ರನ ಗರ್ವವನ್ನೂ ಅಡಗಿಸಿಬಿಟ್ಟನು. ಅದರಿಂದಾಚೆಗೆ ಶರತ್ಕಾಲದಲ್ಲಿ ಪೂರ್ಣಚಂದ್ರನ ಕಿರಣಗಳಿಂದ ಮನೋಹರವಾದ ಒಂದಾ ನೊಂದು ರಾತ್ರಿಯಲ್ಲಿ, ಅವ್ಯಕ್ತಮಧುರವಾದ ವೇಣುಗಾನವನ್ನಾರಂಭಿಸಿ, ಅದರಿಂದ ಗೋಪಸ್ತ್ರೀಯರೆಲ್ಲರನ್ನೂ ಮೋಹಗೊಳಿಸಿ, ಅವರೊಡನೆ ಆಟ ವಾಡುತ್ತಿದ್ದನು. ಶ್ರೀಕೃಷ್ಣನು ನಡೆಸಿದ ಈ ದಿವ್ಯಚೇಷ್ಟಿತಗಳೆಲ್ಲವನ್ನೂ ನಾನು ಹೇಗೆ ತಾನೇ ಮರೆಯಲಿ!" ಎಂದನು. ಇದು ಎರಡನೆಯ ಅಧ್ಯಾಯವು.

---

## ಶ್ರೀಕೃಷ್ಣನು ಮಥುರೆಯಲ್ಲಿ ನಡೆಸಿದ ಕಂಸ ವಧವೇ ಮೊದಲಾದ ಚರಿತ್ರೆಗಳು.

“ಓ, ವಿದುರಾ! ಕೃಷ್ಣನು ನಂದಗೋಕುಲದಲ್ಲಿ ನಡೆಸಿದ ಸಂಗತಿಗಳನ್ನು ಸಂಗ್ರಹವಾಗಿ ತಿಳಿಸಿದೆನಷ್ಟೆ. ಅದರಿಂದಾಚೆಗೆ ಮಥುರೆಯಲ್ಲಿಯೂ, ದ್ವಾರಕೆಯಲ್ಲಿಯೂ ಆತನು ನಡೆಸಿದ ದಿವ್ಯಚೇಷ್ಟಿತಗಳನ್ನೂ ಸೂಕ್ಷ್ಮವಾಗಿ ತಿಳಿಸುವೆನು ಕೇಳು! ಹೀಗೆ ಕೃಷ್ಣನು ನಂದಗೋಕುಲದಲ್ಲಿ ಸ್ವಲ್ಪಕಾಲದವರೆಗೆ ವಿಹರಿಸುತ್ತಿದ್ದಾಗ, ಅತ್ತಲಾಗಿ ಮಥುರಾಪುರಿಯಲ್ಲಿ ತನ್ನ ತಾಯಿತಂದೆಗಳಾದ ದೇವಕೀವಸುದೇವರು, ದುರಾತ್ಮನಾದ ಕಂಸನ ಸೆರೆಯಲ್ಲಿ ಸಿಕ್ಕಿ ಬಹಳವಾಗಿ ಕಷ್ಟಪಡುತ್ತಿರುವ ಸಂಗತಿಯು ಅವನ ನೆನಪಿಗೆ ಬಂದಿತು. ಅವರಿಗೆ ಸೆರೆಯನ್ನು ತಪ್ಪಿಸಿ, ಕ್ಷೇಮವನ್ನುಂಟುಮಾಡಬೇಕೆಂಬ ಕೋರಿಕೆಯಿಂದ, ಬಲರಾಮನೊಡಗೂಡಿ, ಆಗಲೇ ಗೋಕುಲವನ್ನು ಬಿಟ್ಟು ಮಥುರಾಪುರಿಗೆ ಬಂದು ಸೇರಿದನು. ಅಲ್ಲಿ ಒಂದಾನೊಂದು ನೆವದಿಂದ ಕಂಸನ ಅರಮನೆಗೆ ಪ್ರವೇಶಿಸಿ, ಸಿಂಹಾಸನದಲ್ಲಿ ಕುಳಿತಿದ್ದ ಕಂಸನನ್ನು ಕೆಳಕ್ಕೆಳೆದು, ಅವನನ್ನು ನೆಲದಲ್ಲಿ ತಿಕ್ಕಿ ಕೊಂದುಬಿಟ್ಟನು. ಅದರಿಂದಾಚೆಗೆ ಕೃಷ್ಣನು ಬಲರಾಮ ಸಮೇತನಾಗಿ ಕಾಶಿಗೆ ಹೋಗಿ, ಅಲ್ಲಿ ಸಾಂದೀಪನಿಯೆಂಬ ಗುರುವಿನಲ್ಲಿ ಷಡಂಗಗಳಿಂದ ಕೂಡಿದ ನಾಲ್ಕು ವೇದಗಳನ್ನೂ, ಅಭ್ಯಾಸಮಾಡುವಂತೆ ನಟಿಸುತ್ತ, ಲೀಲಾಮಾತ್ರದಿಂದಲೇ ಅವೆಲ್ಲವನ್ನೂ ಗ್ರಹಿಸಿದನು. ಇಷ್ಟರಲ್ಲಿಯೇ ತನ್ನ ಉಪಾಧ್ಯಾಯನಾದ ಆ ಸಾಂದೀಪನಿಯ ಪುತ್ರನನ್ನು, ಸಮುದ್ರಮಧ್ಯದಲ್ಲಿದ್ದ ಪಂಚಜನನೆಂಬ ಅಸುರನೊಬ್ಬನು ನುಂಗಿಬಿಡಲು, ಈ ಕೃಷ್ಣನು ಆ ಅಸುರನನ್ನು ಕೊಂದು, ಅವನ ಹೊಟ್ಟೆಯನ್ನು ಭೇದಿಸಿ, ಅಲ್ಲಿ ಮೃತನಾಗಿದ್ದ ಗುರುಕುಮಾರನನ್ನು ಬದುಕಿಸಿ ಕರೆತಂದು, ಆ ಪುತ್ರನನ್ನೇ ಗುರುದಕ್ಷಿಣೆಯಾಗಿ ಸಮರ್ಪಿಸಿದನು. ಅದರಿಂದಾಚೆಗೆ ರುಕ್ಮಿಣೀದೇವಿಯ ಪ್ರಾರ್ಥನೆಯಿಂದ ರಥವನ್ನೇರಿ ಹೊರಟು, ಅವಳ ವಿವಾಹಕ್ಕಾಗಿ ರುಕ್ಮಿಯಿಂದ ಕರೆಸಲ್ಪಟ್ಟಿದ್ದ ಗರ್ವಾಂಧರಾದ ರಾಜರೆಲ್ಲರನ್ನೂ ಲೀಲೆಯಿಂದಲೇ ತಿರಸ್ಕರಿಸಿ, ಗಾಂಧರ್ವವಿವಾಹದಿಂದ ಅವಳನ್ನು ಕೈಹಿಡಿದು ದ್ವಾರಕೆಗೆ ಕರೆತಂದನು. ಮತ್ತೊಮ್ಮೆ ನಗ್ನಜಿತ್ತೆಂಬವನು, ಬಲದಿಂದ ಕೊಬ್ಬಿ ಭಯಂಕರಗಳಾಗಿ ತನ್ನಲ್ಲಿದ್ದ ಏಳು ಮಹಾವೃಷಭಗಳಿಗೆ (ಗೂಳಿಗಳಿಗೆ) ಮೂಗು

ದಾರವನ್ನು ಬೀರಿ ಅವುಗಳ ಕೊಬ್ಬನ್ನಡಗಿಸಿ ಸ್ವಾಧೀನಪಡಿಸಿಕೊಂಡವರಿಗೆ ತನ್ನ ಮಗಳನ್ನು ಕೊಡುವುದಾಗಿ ಪ್ರತಿಜ್ಞೆಮಾಡಿದ್ದನು. ಇದನ್ನು ಕೇಳಿ ಕೃಷ್ಣನು, ಅವುಗಳನ್ನು ಲೀಲಾಮಾತ್ರದಿಂದ ಸ್ವಾಧೀನಪಡಿಸಿ, ಆ ರಾಜಕುಮಾರಿಯನ್ನೂ ವರಿಸಿದನು. ಈ ಬಲಾತಿಶಯವನ್ನು ನೋಡಿ ಸಹಿಸಲಾರದೆ ತನ್ನನ್ನಿದಿರಿಸುವುದಕ್ಕಾಗಿ ಬಂದ ಅನೇಕ ದುಷ್ಟರಾಜರನ್ನೂ ನಿಮಿಷಮಾತ್ರದಲ್ಲಿ ಜಯಿಸಿದನು. ಮತ್ತು ಆ ಕೃಷ್ಣನು ತಾನೇ ಸರ್ವತಂತ್ರ ಸ್ವತಂತ್ರನಾಗಿ ಮತ್ತೊಬ್ಬರಿಗೆ ಅಧೀನನಲ್ಲದಿದ್ದರೂ, ಸ್ತ್ರೀಮೋಹಪರವಶರಾದ ಅಲ್ಪಜನರಂತೆ, ಸತ್ಯಭಾಮೆಯ ಕೋರಿಕೆಯನ್ನು ಈಡೇರಿಸಬೇಕೆಂಬ ಪ್ರಯತ್ನದಿಂದ, ಸ್ವರ್ಗಲೋಕದಲ್ಲಿದ್ದ ಪಾರಿಜಾತವೃಕ್ಷವನ್ನೇ ಕಿತ್ತು ತಂದು ಆ ಸತ್ಯಭಾಮೆಯ ಮುಂದೆ ಇರಿಸಿದನು. ಈ ಪಾರಿಜಾತವೃಕ್ಷಕ್ಕಾಗಿ ವಜ್ರಧಾರಿಯಾದ ದೇವೇಂದ್ರನೂ ಕೂಡ, ತನ್ನ ಅಂತಃಪುರಸ್ತ್ರೀಯರಿಂದ ಪ್ರೇರಿತನಾಗಿ, ಅನೇಕ ದೇವಸೈನ್ಯಗಳೊಡನೆ ಕೋಪದಿಂದ ಹೊರಟು, ಹಿಂದುಮುಂದು ತಿಳಿಯದೆ ಕೃಷ್ಣನನ್ನಿದಿರಿಸಿ ಯುದ್ಧಕ್ಕೆ ನಿಂತನು. ಹೀಗೆ ಸ್ತ್ರೀಯರಲ್ಲಿ ಮೋಹಪರವಶನಾಗಿ ಅವರ ಕೈಯಾಟದ ಬೊಂಬೆಯಂತೆ ಆಡುತ್ತಿದ್ದ ದೇವೇಂದ್ರನು, ಸಮಸ್ತಲೋಕವೂ ಆ ಕೃಷ್ಣನಿಗೆ ಅಧೀನವೆಂಬುದನ್ನು ತಿಳಿಯದೆ, ಐಶ್ವರ್ಯಮದದಿಂದ, ಸ್ವರ್ಗದಲ್ಲಿರುವ ಸಮಸ್ತವಸ್ತುಗಳೂ ತನಗೆ ಮಾತ್ರವೇ ಅಧೀನವೆಂದೂ, ತಾನೇ ಸ್ವತಂತ್ರನೆಂದೂ ಭ್ರಮೆಗೊಂಡಿದ್ದನು. ತನಗೆ ಯಾವುದರ ಮೇಲೆಯೂ ಎಷ್ಟುಮಾತ್ರವೂ ಅಧಿಕಾರವಿಲ್ಲವೆಂಬುದನ್ನೂ, ಯಾವ ವಿಧದಲ್ಲಿಯೂ ತಾನು ಸ್ವತಂತ್ರನಲ್ಲವೆಂಬುದನ್ನೂ, ಆ ಇಂದ್ರನು ಸ್ವಲ್ಪಮಾತ್ರವೂ ಯೋಚಿಸಲಿಲ್ಲ. ಸರ್ವೇಶ್ವರನ ಸ್ವತ್ತನ್ನು ತನ್ನದೆಂದು ಭಾವಿಸಿದ ಅಜ್ಞಾನಾಂಧನಾದ ಆ ಇಂದ್ರನು ಯುದ್ಧಕ್ಕೆ ನಿಂತೊಡನೆ, ಕೃಷ್ಣನು ನಿಮಿಷಮಾತ್ರದಲ್ಲಿ ಅವನನ್ನು ಸಮಸ್ತಪರಿವಾರಗಳೊಡನೆ ಸೋಲಿಸಿ, ಪಾರಿಜಾತವೃಕ್ಷವನ್ನು ತಂದುಬಿಟ್ಟನು. ಇದಲ್ಲದೆ ಕೃಷ್ಣನು ತನ್ನ ದೇಹದಿಂದಲೇ ಆಕಾಶವನ್ನಳೆಯುವಂತೆ ಅದ್ಭುತಾಕಾರದಿಂದಿದ್ದ ನರಕನೆಂಬ ಅಸುರನನ್ನು ಯುದ್ಧರಂಗದಲ್ಲಿ ತನ್ನ ಚಕ್ರಾಯುಧದಿಂದ ಕ್ಷಣಮಾತ್ರದಲ್ಲಿ ಛೇದಿಸಿಬಿಟ್ಟನು. ಇದನ್ನು ನೋಡಿ ಭೂದೇವಿಯು, ತನ್ನ ಪುತ್ರನಾದ ಆ ನರಕನ ಸಾವಿಗಾಗಿ ದುಃಖಿಸುತ್ತ ಕೃಷ್ಣನನ್ನು

ಪ್ರಾರ್ಥಿಸಲು, ಆ ನರಕಾಸುರನ ಪುತ್ರನಾದ ರಾಜಕುಮಾರನನ್ನೇ ಕರೆತಂದು ತಂದೆಯ ರಾಜ್ಯದಲ್ಲಿ ಅಭಿಷೇಕವನ್ನು ನಡೆಸಿದನು. ಮತ್ತು ಆ ನರಕಾಸುರನು ಹಿಂದೆ ತನ್ನ ದಿಗ್ವಿಜಯಕಾಲದಲ್ಲಿ ನಾನಾರಾಜ್ಯಗಳಿಂದ ಸೆರೆಹಿಡಿದು ತಂದಿದ್ದ ರಾಜಕನ್ಯೆಯರೂ, ದೇವಕನ್ಯೆಯರೂ ಅಲ್ಲಿ ಕಷ್ಟಪಡುವುದನ್ನು ನೋಡಿ, ಅವರೆಲ್ಲರನ್ನೂ ಸೆರೆಯಿಂದ ಬಿಡಿಸಿದನು. ಆ ಸುಂದರೀಮಣಿಯರೆಲ್ಲರೂ ತಮಗೆ ಆಪದ್ಬಂಧುವಾಗಿ ಬಂದೊದಗಿದ ಶ್ರೀಕೃಷ್ಣನ ಲೋಕಮೋಹನಾಕಾರವನ್ನು ನೋಡಿ ಮೋಹಗೊಂಡು, ಲಜ್ಜೆಯಿಂದಲೂ, ಅನುರಾಗದಿಂದಲೂ ಕೂಡಿದ ದೃಷ್ಟಿಗಳಿಂದ ಆತನನ್ನು ತಮತಮಗೆ ಪತಿಯನ್ನಾಗಿ ಅಂಗೀಕರಿಸುತ್ತಿದ್ದರು. ಆಗ ಕೃಷ್ಣನು ಅವರೆಲ್ಲರ ಕೋರಿಕೆಯನ್ನೂ ಏಕಕಾಲದಲ್ಲಿಯೇ ಈಡೇರಿಸಬೇಕೆಂಬ ಉದ್ದೇಶದಿಂದ, ತಾನೂ ಆ ಸ್ತ್ರೀಯರ ಸಂಖ್ಯೆಗೆ ತಕ್ಕಂತೆ ಅನೇಕ ರೂಪಗಳನ್ನು ಧರಿಸಿ, ಎಲ್ಲರನ್ನೂ ತನ್ನ ಭಾರ್ಯೆಯರನ್ನಾಗಿ ಸ್ವೀಕರಿಸಿ, ಆದರಿಸಿದನು. ಒಬ್ಬೊಬ್ಬರಿಗೂ ತನ್ನ ಸಂಕಲ್ಪದಿಂದಲೇ ಬೇರೆ ಬೇರೆ ಅರಮನೆಗಳನ್ನೂ ನಿರ್ಮಿಸಿಕೊಟ್ಟನು. ಅವರೆಲ್ಲರಿಗೂ ಮನಸ್ಸಂತೋಷವಾಗುವಂತೆ ಆಗಾಗ ತನ್ನ ಸಹವಾಸಸೌಖ್ಯವನ್ನೂ ತೋರಿಸುತ್ತಿದ್ದನು. ಆದರಿಂದಾಚೆಗೆ ಸ್ವಲ್ಪದಿನಗಳಲ್ಲಿಯೇ ಪರಮಾತ್ಮರೂಪಿಯಾದ ಆ ಕೃಷ್ಣನು, ತನಗಧೀನವಾಗಿರುವ ಪ್ರಕೃತಿತತ್ವದ ಬೆಳವಣಿಕೆಯು ಈ ವಿಧವೆಂಬುದನ್ನು ಅವರೆಲ್ಲರಿಗೂ ತೋರಿಸಿಕೊಡಬೇಕೆಂಬ ಉದ್ದೇಶದಿಂದ, ಒಬ್ಬೊಬ್ಬ ಭಾರ್ಯೆಯಲ್ಲಿಯೂ ತನಗೆ ಸಮಾನರಾದ ಪುತ್ರರನ್ನು ಪಡೆದನು. ಮತ್ತೊಮ್ಮೆ ಕಾಲಯವನ ಜರಾಸಂಧರೇ ಮೊದಲಾದ ಕ್ಷತ್ರಿಯರು, ಅನೇಕ ಸೈನ್ಯಗಳೊಡನೆ ಬಂದು ಆಗಾಗ ತನ್ನ ಪಟ್ಟಣವನ್ನು ಮುತ್ತಿರಲು, ಅವರಲ್ಲಿ ಕೆಲವರನ್ನು ತನ್ನ ಕೈಯಿಂದ ತಾನೇ ಸಂಹರಿಸಿದನು. ಕೆಲಕೆಲವು ಕಾಲಗಳಲ್ಲಿ ತನ್ನ ದಿವ್ಯತೇಜಸ್ಸನ್ನೇ ಭೀಮಾರ್ಜುನಾದಿಗಳಲ್ಲಿ ಆರೋಪಿಸಿ, ಜರಾಸಂಧಾದಿಗಳನ್ನು ಅವರ ಕೈಯಿಂದಲೂ ಸಂಹರಿಸಿದನು. ಶಂಬರ, ದ್ವಿವಿದ, ಮೊದಲಾದವರನ್ನು ಬಲರಾಮನಿಂದ ಕೊಲ್ಲಿಸಿದನು. ದಂತವಕ್ತ್ರ, ಬಾಣ, ಪಲ್ವಲ, ಕೇಶಿ ಮೊದಲಾದ ಬೇರೆ ಕೆಲವರನ್ನು ತನ್ನ ಕೈಯಿಂದಲೇ ವಧಿಸಿದನು. ಆಮೇಲೆ ಈ ಮಹಾತ್ಮನು, ಭರತಕುಲದಲ್ಲಿ ಅಣ್ಣತಮ್ಮಂದಿರ ಮಕ್ಕಳಾದ ಕೌರವ ಪಾಂಡವರಿಬ್ಬರೂ ರಾಜ್ಯದಲ್ಲಿ ತಮ್ಮ

ದಾಯಭಾಗಕ್ಕಾಗಿ ಹೋರಾಡುವುದಕ್ಕೆ ತೊಡಗಿರುವುದನ್ನೂ, ಆ ಉಭಯ ಪಕ್ಷಗಳಿಗೂ ಅನೇಕ ರಾಜರು ತಮ್ಮ ತಮ್ಮ ದೊಡ್ಡ ಸೈನ್ಯದೊಡನೆ ಸಹಾಯಕ್ಕೆ ನಿಂತಿರುವುದನ್ನೂ ನೋಡಿ, ಆ ದುಷ್ಟರಾಜರನ್ನಡಗಿಸಿ ಭೂಭಾರವನ್ನು ತಗ್ಗಿಸುವುದಕ್ಕೆ ಇದೇ ತಕ್ಕ ಸಮಯವೆಂದು ತಿಳಿದು, ತಾನೂ ಪಾಂಡವರ ಪಕ್ಷವನ್ನು ಹಿಡಿದು, ಆ ಯುದ್ಧದಲ್ಲಿ ಒಬ್ಬರಿಂದೊಬ್ಬರನ್ನು ಕೊಲ್ಲಿಸಿದನು. ಕರ್ಣ, ದುಶ್ಶ್ಯಾಸನ, ಶಕುನಿ, ವಿಕರ್ಣಾದಿಗಳೆಲ್ಲರೂ ಬೇರೆ ಬೇರೆ ಉಪಾಯಗಳಿಂದ ಸಂಹೃತರಾದರು. ಕರ್ಣಾದಿಗಳ ದುರ್ಬೋಧನೆಗೊಳಪಟ್ಟು ಬುದ್ಧಿಹೀನನಾಗಿ ಪ್ರವರ್ತಿಸಿದ ದುರ್ಯೋಧನನ ಐಶ್ವರ್ಯವೂ, ಆಯುಸ್ಸೂ ನಾಶಹೊಂದಿ, ಕೊನೆಗೆ ಅವನೂ ತೊಡೆಮುರಿದು ರಣರಂಗದಲ್ಲಿ ಮಲಗಿಬಿಟ್ಟನು. ಈ ವಿಧವಾಗಿ ಹದಿನೆಂಟಕ್ಷೋಹಿಣೀ ಸೈನ್ಯಗಳೂ ಕುರುಕ್ಷೇತ್ರದಲ್ಲಿ ಬಿದ್ದು ಸತ್ತಿರುವುದನ್ನು ನೋಡಿಯೂ, ಈ ಭೂಭಾರ ಪರಿಹಾರದ ವಿಷಯದಲ್ಲಿ ಕೃಷ್ಣನ ಮನಸ್ಸಿಗೆ ತೃಪ್ತಿಯಿಲ್ಲದೆ ಹೋಯಿತು. ತಾನು ಇಷ್ಟು ಸೈನ್ಯಗಳನ್ನು ಕೊಲ್ಲಿಸಿದರೂ, ದುರ್ಜಯವಾದ ಯಾದವ ಬಲವೊಂದು ಮಾತ್ರ ಇನ್ನೂ ಉಳಿದಿದ್ದುದರಿಂದ, ಮದಾಂಧರಾದ ಆ ಯಾದವರನ್ನು ಕೊಲ್ಲಿಸಿದ ಹೊರತು ಭೂಭಾರವನ್ನು ಸಂಪೂರ್ಣವಾಗಿ ನೀಗಿಸಿದಂತಾಗುವುದಿಲ್ಲವೆಂದೆಣಿಸಿ, ಮುಂದೆ ಅದಕ್ಕೆ ತಕ್ಕ ಉಪಾಯವನ್ನೂ ತನ್ನ ಮನಸ್ಸಿನಲ್ಲಿ ಸಂಕಲ್ಪಿಸಿಬಿಟ್ಟನು. ಯಾದವರೆಲ್ಲರೂ ಮದ್ಯಪಾನದಿಂದ ಮೈಮರೆತಿರುವಾಗ ಅವರಲ್ಲಿಯೇ ಒಬ್ಬರಿಂದೊಬ್ಬರನ್ನು ಕೊಲ್ಲಿಸುವುದಾಗಿ ನಿಶ್ಚಯಿಸಿಕೊಂಡನು. ಇತ್ತಲಾಗಿ ದುಷ್ಟಕ್ಷತ್ರಿಯರೆಲ್ಲರೂ ಅಡಗಿ ರಾಜ್ಯವು ನಿಷ್ಕಂಟಕವಾದಮೇಲೆ, ಧರ್ಮರಾಜನಿಗೆ ಪಟ್ಟಾಭಿಷೇಕವನ್ನು ಮಾಡಿ, ಆತನಿಗೆ ಕ್ರಮವಾಗಿ ವರ್ಣಾಶ್ರಮ ಧರ್ಮಗಳನ್ನೂ, ರಾಜನೀತಿಗಳನ್ನೂ ಉಪದೇಶಿಸಿದನು. ಅದರಿಂದಾಚೆಗೆ ಅಶ್ವತ್ಥಾಮನ ಬಾಣದುರಿಯಿಂದ ಉತ್ತರೆಯ ಗರ್ಭದಲ್ಲಿದ್ದ ಪರೀಕ್ಷಿತ್ತೆಂಬ ಶಿಶುವು ಬೆಂದು ಹೋಗುವ ಸ್ಥಿತಿಯಲ್ಲಿದ್ದುದನ್ನು ತಿಳಿದು, ತನ್ನ ಸುದರ್ಶನಚಕ್ರದ ಶಕ್ತಿಯಿಂದ, ಆ ಬ್ರಹ್ಮಶಿರೋಸ್ತ್ರವನ್ನಡಗಿಸಿ, ಆ ಗರ್ಭಶಿಶುವನ್ನು ರಕ್ಷಿಸಿ, ಪೂರುವಂಶವನ್ನುದ್ಧಾರಮಾಡಿದನು. ಆದರಿಂದಾಚೆಗೆ ಧರ್ಮರಾಜನಿಂದ ಮೂರಾವರ್ತಿ ಅಶ್ವಮೇಧಯಾಗಗಳನ್ನು ಮಾಡಿಸಿದನು. ಹೀಗೆ ಧರ್ಮರಾಜನು ಕೃಷ್ಣಾನುಗ್ರಹದಿಂದ ಯಾಗಗಳನ್ನು ಪೂರೈಸಿದಮೇಲೆ,

ಕೃಷ್ಣನ ಪಾದಾರವಿಂದಗಳನ್ನು ಸೇವಿಸುತ್ತ, ತನ್ನ ತಮ್ಮಂದಿರೊಡನೆ ಸುಖವಾಗಿ ರಾಜ್ಯವನ್ನು ಪಾಲಿಸುತ್ತಿದ್ದನು. ಸರ್ವಾತ್ಮಕನಾದ ಶ್ರೀಕೃಷ್ಣನೂ ಕೂಡ ಸಾಮಾನ್ಯ ಮನುಷ್ಯನಂತೆ ಶ್ರೌತಸ್ಮಾರ್ತಾದಿ ಧರ್ಮಗಳಲ್ಲಿ ನಿರತ ನಾಗಿ ಸಂಸಾರಸುಖವನ್ನನುಭವಿಸುತ್ತಿದ್ದು, ಈ ಲೋಕದಲ್ಲಿ ಕೆಲವರನ್ನು ತನ್ನ ಕೃಪಾಕಟಾಕ್ಷದಿಂದಲೂ, ಬೇರೆ ಕೆಲವರನ್ನು ತನ್ನ ಶುದ್ಧವಾದ ನಡತೆ ಯಿಂದಲೂ, ಇನ್ನು ಕೆಲವರನ್ನು ಲಕ್ಷ್ಮಿಗೆ ನಿತ್ಯನಿವಾಸವಾದ ತನ್ನ ಶರೀರ ದಿಂದಲೂ ಸಂತೋಷಪಡಿಸುತ್ತ, ಇವರೆಲ್ಲರಿಗಿಂತಲೂ ವಿಶೇಷವಾಗಿ ಯಾದವ ರನ್ನಾನಂದಪಡಿಸುತ್ತ, ರಾತ್ರಿಗಳಲ್ಲಿ ತನ್ನ ಭಾರ್ಯಾದಿಗಳನ್ನು ವಿನೋದ ಗೊಳಿಸುತ್ತ, ಅನೇಕ ಸಂವತ್ಸರಗಳನ್ನು ಕಳೆದು, ಕೊನೆಕೊನೆಗೆ ಈ ಪ್ರಪಂಚ ವ್ಯಾಪಾರಗಳಲ್ಲಿ ಅನಾದರವನ್ನು ತೋರಿಸುತ್ತ ಬಂದನು. ವಿದುರಾ! ಯೋಗ ಫಲಪ್ರದವಾದ ಭಗವಂತನಲ್ಲಿ ಭಕ್ತಿಯನ್ನಿಟ್ಟಮಾತ್ರದಿಂದಲೇ ಅಂತವರಿಗೆ ಸಂಸಾರದಲ್ಲಿ ಜಿಹಾಸೆ ಹುಟ್ಟುತ್ತಿರುವಾಗ, ಸಂಸಾರತಾರಕನಾದ ಭಗವಂ ತನು ಅದರಲ್ಲಿ ಜಿಹಾಸೆಯನ್ನು ತೋರಿಸುವುದೇನು ಆಶ್ಚರ್ಯವೇ? ಈ ಸಂಗತಿಯು ಹಾಗಿರಲಿ! ಭಗವಂತನಾದ ಕೃಷ್ಣನು ತನ್ನ ಮನಸ್ಸಿನಲ್ಲಿ ಮೊದಲೇ ಸಂಕಲ್ಪಿಸಿದ್ದ ಯಾದವಕುಲನಾಶಕ್ಕೆ ಮೂಲವಾಗಿ ಒಂದಾ ನೊಂದು ಶಾಪವು ಬಂದೊದಗಿತು. ಆ ವೃತ್ತಾಂತವನ್ನೂ ತಿಳಿಸುವೆನು ಕೇಳು. ಒಮ್ಮೆ ದ್ವಾರಕೆಯಲ್ಲಿ ಯಾದವಕುಮಾರರೆಲ್ಲರೂ, ಆಡುತ್ತಿರುವಾಗ, ದಾರಿ ಯಲ್ಲಿ ಹೋಗುತ್ತಿದ್ದ ಕೆಲವು ಮಹರ್ಷಿಗಳನ್ನು ಪರಿಹಾಸ್ಯಮಾಡಲು, ಆ ಮಹರ್ಷಿಗಳು ಅದನ್ನು ನೋಡಿ ಸಹಿಸಲಾರದೆ ಕೋಪಗೊಂಡು, "ಯದು ವಂಶವೆಲ್ಲವೂ ಶೀಘ್ರದಲ್ಲಿಯೇ ನಾಶಹೊಂದಲಿ" ಎಂದು ಶಪಿಸಿದರು. ಈ ಶಾಪವಾಕ್ಯವು ಹೊರಟ ಕೆಲವು ತಿಂಗಳೊಳಗಾಗಿಯೇ, ಯಾದವರೆಲ್ಲರೂ ಒಂದಾಗಿ ಸೇರಿ, ಅತ್ಯಾನಂದದಿಂದ ಪ್ರಭಾಸತೀರ್ಥಕ್ಕೆ ಹೋಗಿ, ಅಲ್ಲಿ ಸ್ನಾನ ಮಾಡಿ, ದೇವಪಿತೃ ತರ್ಪಣಗಳೆಲ್ಲವನ್ನೂ ನಡೆಸುತ್ತಿದ್ದರು. ಉತ್ತಮರಾದ ಬ್ರಾಹ್ಮಣರನ್ನು ಕರೆಸಿ, ಯಥೇಷ್ಟವಾಗಿ ಕೆಲವರಿಗೆ ಸ್ವರ್ಣದಾನವನ್ನೂ ಕೆಲವರಿಗೆ ಭೂದಾನವನ್ನೂ, ಕೆಲವರಿಗೆ ವತ್ಸಸಹಿತವಾದ ಗೋದಾನವನ್ನೂ, ಕೆಲವರಿಗೆ ಕನ್ಯಾದಾನವನ್ನೂ ಮಾಡಿ, ಈ ವಿಧವಾದ ಷೋಡಶ ಮಹಾ ದಾನಗಳಿಂದಲೂ, ಅವರನ್ನು ತೃಪ್ತಿಪಡಿಸಿದರು. ಅಲ್ಲಿ ಬಂದಿದ್ದ ಬ್ರಾಹ್ಮಣ

ರೆಲ್ಲರಿಗೂ ಷಡ್ರಸೋಪೇತಗಳಾದ ಭೋಜನಗಳನ್ನಿಟ್ಟು, ತಾವು ನಡೆಸಿದ ದಾನ ಭೋಜನಾದಿಗಳೆಲ್ಲವನ್ನೂ ಭಗವತ್ಪ್ರೀತಿಗಾಗಿ ಧಾರೆಯನ್ನೆರೆದು, ಅಲ್ಲಿದ್ದ ವಿಪ್ರೋತ್ತಮರೆಲ್ಲರಿಗೂ ಸಾಷ್ಟಾಂಗಪ್ರಣಾಮವನ್ನು ಮಾಡಿದರು. ಇಲ್ಲಿಗೆ ಮೂರನೆಯ ಅಧ್ಯಾಯವು.

---

ವಿದುರನು ಬಂಧುಮರಣವನ್ನು ಕೇಳಿ ದುಃಖಿಸುತ್ತ ಆತ್ಮಜ್ಞಾನವನ್ನು ಪಡೆಯುವುದಕ್ಕಾಗಿ ಮೈತ್ರೇಯರ ಬಳಿಗೆ ಹೋಗುವಂತೆ ಉದ್ಧವನಿಂದ ಪ್ರೇರಿತನಾಗಿ, ಆ ಮಹರ್ಷಿಯ ಬಳಿಗೆ ಬಂದುದು.

“ವಿದುರಾ! ಕೇಳು. ಆಮೇಲೆ ಯಾದವರು ಆ ಬ್ರಾಹ್ಮಣರಿಂದ ಅನುಮತಿಯನ್ನು ಪಡೆದು, ತಮ್ಮ ಭೋಜನಾದಿಗಳನ್ನು ತೀರಿಸಿಕೊಂಡು, ಕೊನೆಗೆ ಮದ್ಯಪಾನವನ್ನಾರಂಭಿಸಿದರು. ಮೇಲೆ ಮೇಲೆ ಮದ್ಯವನ್ನು ಕುಡಿದು, ಅದರ ಮದದಿಂದ ಮೈತಿಳಿಯದೆ ವಿವೇಕಶೂನ್ಯರಾಗಿ, ಒಬ್ಬರ ನ್ನೊಬ್ಬರು ಅವಾಚ್ಯವಾದ ಮಾತುಗಳಿಂದ ಬೈಯುವುದಕ್ಕೆ ತೊಡಗಿದರು. ಇದೇ ನೆವದಿಂದ ಅವರಿಗೆ ಮೇಲೆ ಮೇಲೆ ಕೋಪವು ಹೆಚ್ಚಿ, ಮೈತಿಳಿಯದೆ ಹೊಡೆದಾಡುವುದಕ್ಕೂ ಆರಂಭಿಸಿದರು. ಮದ್ಯಮದದಿಂದುಂಟಾದ ದೋಷ ದಿಂದ ಪ್ರಜ್ಞೆಯಿಲ್ಲದೆ, ಆ ಸರೋವರತೀರದಲ್ಲಿ ಸಿಕ್ಕಿದ ಹೊಡಿಕೆಗಳನ್ನೂ, ನೊದೆಹುಲ್ಲುಗಳನ್ನೂ ಕಿತ್ತುಕೊಂಡು, ಸೂರ್ಯಾಸ್ತಮಯ ಕಾಲದಲ್ಲಿ ಪ್ರಾಣ ಗಳ ಮೇಲೆಯೂ ದೃಷ್ಟಿಯಿಲ್ಲದೆ ಬಡಿದಾಡುತ್ತಿರಲು, ಬಿದಿರುಗಳ ಸಂಘರ್ಷಣ ದಿಂದುಂಟಾದ ಬೆಂಕಿಯು ವನವನ್ನು ಸುಡುವಂತೆ, ಆ ಹೊಡೆದಾಟದಿಂದ ಯಾದವರೆಲ್ಲರೂ ಮರಣವನ್ನು ಹೊಂದಿದರು. ಅನಂತರದಲ್ಲಿ ಶ್ರೀಕೃಷ್ಣನು, ಮೊದಲೇ ತಾನು ಸಂಕಲ್ಪಿಸಿದ ಪ್ರಕಾರದಲ್ಲಿ ಯಾದವರೆಲ್ಲರೂ ನಾಶಹೊಂದಿ ದುದನ್ನು ನೋಡಿ, ಬಂಧುಮರಣಕ್ಕಾಗಿ ಸರಸ್ವತೀನದಿಯಲ್ಲಿ ಸ್ನಾನಮಾಡಿ, ಆ ನದೀತೀರದಲ್ಲಿದ್ದ ಒಂದಾನೊಂದು ಅರಳಿಯ ಮರದ ನೆರಳನ್ನು ಪ್ರವೇಶಿ ಸಿದನು. ತನ್ನ ಮರೆಹೊಕ್ಕವರನ್ನು ಕಾಪಾಡುವುದರಲ್ಲಿ ಬದ್ಧದೀಕ್ಷನಾ

ಗಿಯೂ, ಲೋಕಕ್ಷೇಮಕ್ಕಾಗಿ ತನ್ನ ಯಾದವಕುಲವನ್ನೇ ಸಂಹರಿಸಬೇಕೆಂದು ಸಂಕಲ್ಪಿಸಿದವನಾಗಿಯೂ ಇದ್ದ ಭಗವಂತನು, ಆಗ ಸಮೀಪದಲ್ಲಿದ್ದ ನನ್ನನ್ನು ನೋಡಿ, "ಉದ್ಧವಾ! ಈಗಲೇ ನೀನು ಬದರಿಕಾಶ್ರಮಕ್ಕೆ ಹೊರಟು ಹೋಗು" ಎಂದು ನಿಯಮಿಸಿದನು. ಆ ಶ್ರೀಕೃಷ್ಣನ ಉದ್ದೇಶವೇನೆಂಬುದನ್ನು ನಾನು ಚೆನ್ನಾಗಿ ತಿಳಿದವನಾಗಿದ್ದರೂ ಕೂಡ, ಸರ್ವವಿಧದಲ್ಲಿಯೂ ಪ್ರಭುವಾದ ಆ ಭಗವಂತನ ಪಾದಾರವಿಂದಗಳನ್ನು ಬಿಟ್ಟು ಹೋಗಲಾರದೆ, ನಾನು ಅವನನ್ನೇ ಹಿಂಬಾಲಿಸಿ ಹೋಗುತ್ತಿದ್ದೆನು. ಹೀಗೆ ನಾನು ಅನವರತವೂ ಆತನ ಪಾದಗಳನ್ನು ಧ್ಯಾನಿಸುತ್ತ, ಆತನನ್ನೇ ಹಿಂಬಾಲಿಸುತ್ತ, ಸರ್ವಲೋಕಪ್ರಿಯನಾಗಿಯೂ, ತನಗೆ ತಾನೇ ಪ್ರಭುವಾಗಿಯೂ ಇರುವ ಆ ಕೃಷ್ಣನ ಚರ್ಯೆಗಳನ್ನು ನೋಡುತ್ತ ಬಂದೆನು. ನಾನು ನೋಡುತ್ತಿದ್ದ ಹಾಗೆಯೇ ಆ ಕೃಷ್ಣನು ಆ ಅಶ್ವತ್ಥವೃಕ್ಷದ ಕೆಳಗೆ ಬಂದು ನಿಂತನು. ನೀಲ ಮೇಘಶ್ಯಾಮಲವಾದ ದೇಹದಿಂದಲೂ, ಪ್ರಸನ್ನ ದೃಷ್ಟಿಯಿಂದಲೂ, ಪೀತಾಂಬರದಿಂದಲೂ, ಚತುರ್ಭುಜಗಳಿಂದಲೂ, ಶೋಭಿತನಾದ ಆ ಶ್ರೀಕೃಷ್ಣನು, ಕೋಮಲವಾದ ತನ್ನ ಬಲದ ಕಾಲನ್ನು ಎಡದ ತೊಡೆಯ ಮೇಲೆ ಇರಿಸಿಕೊಂಡು, ಆ ಅಶ್ವತ್ಥವೃಕ್ಷದ ಮೂಲವನ್ನೊರಗಿ ತನ್ನಲ್ಲಿ ತಾನು ಏನನ್ನೋ ಆಲೋಚಿಸುತ್ತಿರುವವನಂತೆ ಕುಳಿತನು. ಕರ್ಮಫಲ ಸಂಬಂಧವಿಲ್ಲದವನಾದುದರಿಂದ ಕರ್ಮಾಯತ್ತಗಳಾದ ಕೃಶತ್ವ, ಸ್ಥೂಲತ್ವ, ಆಧಿ, ವ್ಯಾಧಿ ಮೊದಲಾದ ದೋಷಗಳೊಂದೂ ಇಲ್ಲದ ಆ ಕೃಷ್ಣನು, ಹೀಗೆ ಚಿಂತಾಪರನಾಗಿ ಕುಳಿತಿರುವ ಸಮಯದಲ್ಲಿಯೇ ನಾನೂ ಮೆಲ್ಲಗೆ ಅವನನ್ನು ಸಮೀಪಿಸಿ, ಆ ಮಹಾತ್ಮನ ಸನ್ನಿಧಿಯಲ್ಲಿ ಕುಳಿತಿದ್ದೆನು. ಈ ಸಮಯಕ್ಕೆ ಸರಿಯಾಗಿ ವ್ಯಾಸಮಹರ್ಷಿಗೆ ಪ್ರಿಯಮಿತ್ರನಾಗಿಯೂ, ಭಾಗವತೋತ್ತಮನಾಗಿಯೂ, ಕೃತಕೃತ್ಯನಾಗಿಯೂ ಇರುವ ಮೈತ್ರೇಯ ಮಹಾಮುನಿಯು, ಲೋಕಸಂಚಾರವನ್ನು ಮಾಡುತ್ತ, ಅಕಸ್ಮಾತ್ತಾಗಿ ಆ ಸ್ಥಳಕ್ಕೆ ಬಂದು ಸೇರಿದನು ಆ ಮಹರ್ಷಿಯು ಅಲ್ಲಿಗೆ ಬಂದು ಶ್ರೀಕೃಷ್ಣನನ್ನು ನೋಡಿ ಪೊಡನೆ ಭಗವದ್ದರ್ಶನದಿಂದುಂಟಾದ ಸಂತೋಷದಿಂದಲೂ, ಭಕ್ತಿಯಿಂದಲೂ ಪರವಶನಾಗಿ, ತಲೆಯನ್ನು ಬಗ್ಗಿಸಿ, ಆ ಭಗವಂತನಲ್ಲಿಯೇ ನಟ್ಟ ಮನಸ್ಸುಳ್ಳವನಾಗಿ, ಆ ಶ್ರೀಕೃಷ್ಣನು ನುಡಿಯುವ ಮಾತುಗಳನ್ನು ಕೇಳುತ್ತ ನಿಂತಿ

ದ್ದನು. ಆಗ ಶ್ರೀಕೃಷ್ಣನು ಪ್ರೇಮಪೂರ್ವಕವಾದ ದೃಷ್ಟಿಯಿಂದ ನನ್ನನ್ನು ನೋಡಿ "ಓ! ಉದ್ಧವಾ! ನಿನ್ನ ಮನಸ್ಸಿನ ಕೋರಿಕೆಯನ್ನು ನಾನು ಬಲ್ಲೆನು! ಪೂರ್ವಜನ್ಮದಲ್ಲಿ ವಸುವಾಗಿದ್ದ ನೀನು, ಆಗ ಇತರ ವಸುಗಳೊಡನೆಯೂ, ಲೋಕಕರ್ತನಾದ ಪ್ರಜಾಧಿಪತಿಗಳೊಡನೆಯೂ ಸೇರಿ, ಸತ್ರಯಾಗವೆಂಬ ಒಂದಾನೊಂದು ಯಾಗವನ್ನಾರಂಭಿಸಿದೆ. ಆಗ ನನ್ನಲ್ಲಿ ವಿಶೇಷಭಕ್ತಿಯುಳ್ಳವನಾದ ನೀನು, ನನ್ನ ನಿವಾಸಸ್ಥಾನವಾದ ಉತ್ತಮಪದವನ್ನು ಹೊಂದಬೇಕೆಂಬ ಪ್ರಯತ್ನದಿಂದ ನನ್ನನ್ನಾರಾಧಿಸಿದೆ! ನನ್ನನ್ನು ಪಡೆಯಬೇಕೆಂಬ ಆ ಕೋರಿಕೆಯು ಬೇರೊಬ್ಬರಿಗೆ ದುರ್ಲಭವಾಗಿದ್ದರೂ, ನಿನ್ನಲ್ಲಿ ನನಗುಂಟಾಗಿರುವ ಪ್ರೇಮವಿಶೇಷದಿಂದ, ನಾನು ಅವಶ್ಯವಾಗಿ ನಿನಗೆ ಅದನ್ನು ಅನುಗ್ರಹಿಸುವೆನು. ಉದ್ಧವಾ! ನೀನು ನನ್ನ ಅನುಗ್ರಹಕ್ಕೆ ಪೂರ್ಣಪಾತ್ರನಾಗಿರುವುದರಿಂದ ಇನ್ನುಮೇಲೆ ನಿನಗೆ ಪುನರ್ಜನ್ಮವಿಲ್ಲವು! ಇದೇ ನಿನಗೆ ಕೊನೆಯ ಜನ್ಮವು! ಇದಲ್ಲದೆ ನಾನು ಈಗ ಮನುಷ್ಯಲೋಕವನ್ನು ಬಿಟ್ಟು ನನ್ನ ನಿಜಲೋಕಕ್ಕೆ ಹೋಗುವುದಕ್ಕಾಗಿ ಈ ಏಕಾಂತಸ್ಥಳಕ್ಕೆ ಬಂದು ಸೇರಿರುವೆನು. ಈಗಲೂ ನೀನು ನನ್ನನ್ನು ಹಿಂಬಾಲಿಸಿ ಬಂದು, ಈ ಸ್ಥಿತಿಯಲ್ಲಿ ನನ್ನ ದರ್ಶನವನ್ನು ಪಡೆದುದು ನಿನ್ನ ಭಾಗ್ಯವಲ್ಲದೆ ಬೇರೆಯಲ್ಲ. ನೀನು ಉತ್ಕೃಷ್ಟವಾದ ಭಕ್ತಿಯಿಂದ ನನ್ನನ್ನು ನೋಡಿದುದರಿಂದ ನಿನ್ನ ಕರ್ಮಜಾಲವೆಲ್ಲವೂ ಇಂದಿಗೆ ನಶಿಸಿತು. ಇದಲ್ಲದೆ ಸೃಷ್ಟ್ಯಾರಂಭದಲ್ಲಿ ಚತುರ್ಮುಖ ಬ್ರಹ್ಮನು ನನ್ನ ನಾಭಿಕಮಲದಲ್ಲಿ ಕುಳಿತಿದ್ದಾಗ, ನಾನು ಆತನಿಗೆ ಜನನಮರಣಗಳನ್ನು ತಪ್ಪಿಸತಕ್ಕುದಾಗಿಯೂ, ಪರಮಾನಂದರೂಪವಾದ ಮೋಕ್ಷಸುಖವನ್ನು ಕೊಡತಕ್ಕುದಾಗಿಯೂ ಇರುವ ನನ್ನ ತತ್ವವನ್ನುಪದೇಶಿಸಿದೆನು. ಅದನ್ನೇ ಪಂಡಿತರು ಭಾಗವತವೆಂದು ಕರೆಯುವರು. ಆ ಭಾಗವತತತ್ವವನ್ನೇ ಈಗ ನಿನಗೂ ಉಪದೇಶಿಸಬೇಕೆಂದಿರುವೆನು" ಎಂದನು. ವಿದುರಾ! ಭಗವಂತನು ಅಮೃತಸಮಾನಗಳಾದ ಈ ಪ್ರಿಯವಾಕ್ಯಗಳನ್ನು ನುಡಿದೊಡನೆ, ನನ್ನ ದೇಹವೆಲ್ಲವೂ ರೋಮಾಂಚಿತವಾಯಿತು! ಅದುವರೆಗಿನ ದುಃಖವೆಲ್ಲವೂ ನೀಗಿತು! ಆ ಪರಮಪುರುಷನ ಅನುಗ್ರಹಕ್ಕೆ ಪಾತ್ರನಾದೆನೆಂಬ ಸಂತೋಷದಿಂದ ಪರವಶನಾಗಿದ್ದೆನು. ಆಮೇಲೆ ಬದ್ಧಾಂಜಲಿಯಾಗಿ ಆ ಭಗವಂತನ ಮುಂದೆ ನಿಂತು, ಹೀಗೆಂದು

ಪ್ರಾರ್ಥಿಸಿದೆನು. “ಎಲೈ ದೇವದೇವನೆ! ನಿನ್ನ ಪಾದಾರವಿಂದಗಳನ್ನು ಸೇವಿಸಿದವರಿಗೆ ಧರ್ಮಾರ್ಥಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಲ್ಲಿ ಯಾವುದು ತಾನೇ ದುರ್ಲಭವು! ಓ! ಮಹಾಪ್ರಭೂ! ಹಾಗಿದ್ದರೂ ನಾನು ಆ ಪುರುಷಾರ್ಥಗಳಲ್ಲಿ ಯಾವುದನ್ನೂ ಸ್ವಲ್ಪಮಾತ್ರವೂ ಕೋರುವವನಲ್ಲ. ನಿನ್ನ ಪಾದಸೇವೆಯಲ್ಲಿಯೇ ಕುತೂಹಲವುಳ್ಳ ನನಗೆ ಬೇರೊಂದೂ ರುಚಿಸುವುದಿಲ್ಲ. ಓ ಮಹಾತ್ಮಾ! ನಿನ್ನ ವಿಚಿತ್ರಚರ್ಯೆಗಳನ್ನು ನಾನೇನೆಂದು ಹೇಳಲಿ! ಜನ್ಮರಹಿತನಾದ ನೀನು ಮನುಷ್ಯನ ಹಾಗೆ ಹುಟ್ಟುವುದೂ, ಕರ್ಮ ಸಂಬಂಧವಿಲ್ಲದ ನೀನು ಹಲವು ಕರ್ಮಗಳನ್ನಾಚರಿಸುವುದೂ, ಕಾಲಸ್ವರೂಪನಾದ ನೀನು ಮರಣಕ್ಕೆ ಹೆದರಿದವನಂತೆ ದ್ವಾರಕಾಪುರದಲ್ಲಿ ಅಡಗಿದ್ದುದೂ, ಭಯರಹಿತನಾದ ನೀನು ಕಾಲಯವನಾದಿಗಳಿಗೆ ಭಯಪಟ್ಟು ಓಡಿಹೋದುದೂ, ಆತ್ಮಾರಾಮನೆನಿಸಿಕೊಂಡು ತನ್ನಲ್ಲಿ ತಾನೇ ಆನಂದಿಸತಕ್ಕ ನೀನು, ಅನೇಕಸ್ತ್ರೀಯರೊಡಗೂಡಿ ಗೃಹಸ್ಥಾಶ್ರಮವನ್ನವಲಂಬಿಸಿ ಸಂಸಾರಸೌಖ್ಯವನ್ನನುಭವಿಸುವುದೂ, ಇವೆಲ್ಲವೂ ಮಹಾಜ್ಞಾನಿಗಳ ಬುದ್ಧಿಯನ್ನಾದರೂ ಮರುಳುಗೊಳಿಸದೆ ಬಿಡಲಾರದು ಕೃಷ್ಣಾ! ಅದು ಹಾಗಿರಲಿ! ಇವೆಲ್ಲಕ್ಕಿಂತಲೂ ಆಶ್ಚರ್ಯವೇನೆಂದರೆ, ನೀನು ಯಾವುದಾದರೂ ಕಾರ್ಯಾಲೋಚನೆಯನ್ನು ಮಾಡುವಂಗ, ಮೊದಲು ನನ್ನನ್ನು ಕರೆಸಿ ನನ್ನೊಡನೆ ಮಂತ್ರಾಲೋಚನೆಯನ್ನು ನಡೆಸುತ್ತಿದ್ದವನಲ್ಲವೇ? ಎಂತಹ ವಿಷಯದಲ್ಲಿಯೂ ಮುಚ್ಚುಮರೆಯಿಲ್ಲದುದಾಗಿಯೂ, ಕೊನೆಮೊದಲಿಲ್ಲದುದಾಗಿಯೂ ಇರುವ ಆತ್ಮಜ್ಞಾನವನ್ನೇ ಸ್ವರೂಪವಾಗಿ ಉಳ್ಳ ನೀನು, ಕಾರ್ಯನಿಶ್ಚಯ ವಿಷಯದಲ್ಲಿ ನನ್ನನ್ನು ಕೇಳಿ ತಿಳಿಯಬೇಕಾದ ಅವಶ್ಯಕತೆಯೇನುಂಟು? ನೀನು ಸರ್ವಜ್ಞನಾಗಿದ್ದರೂ ಏನೂ ತಿಳಿಯದ ಮೂಢನಂತೆ ಆಗಾಗ ಕಾರ್ಯನಿಶ್ಚಯದ ವಿಷಯದಲ್ಲಿ ನನ್ನನ್ನು ಪ್ರಶ್ನೆಮಾಡುತ್ತಿದ್ದ ಆ ಮಾತುಗಳು, ನನ್ನ ಮನಸ್ಸನ್ನು ಭ್ರಮೆಗೊಳಿಸುತ್ತಿರುವುವು. ಓ! ಮಹಾತ್ಮನೆ! ನೀನು ಪೂರ್ವದಲ್ಲಿ ಬ್ರಹ್ಮನಿಗೆ ಯಾವ ಜ್ಞಾನವನ್ನುಪದೇಶಿಸಿದೆಯೋ, ಅದನ್ನು ಗ್ರಹಿಸುವುದಕ್ಕೆ ನಾನೂ ಅರ್ಹನಾಗಿದ್ದರೆ, ನನ್ನಲ್ಲಿ ಅನುಗ್ರಹವಿಟ್ಟು ಅವಶ್ಯವಾಗಿ ತಿಳಿಸಬೇಕು! ಆ ಜ್ಞಾನವೇ ನನ್ನನ್ನು ಸಂಸಾರಸಾಗರದಿಂದ ದಾಟಿಸಿ, ಮುಕ್ತಿಯನ್ನು ಹೊಂದಿಸಬೇಕಾಗಿರುವುದು!” ಎಂದು ಆ ಭಗವಂತನ ಮುಂದೆ ಅಂಜಲಿ

ಹಸ್ತನಾಗಿ ನಿಂತು ಪ್ರಾರ್ಥಿಸಿದೆನು. ಹೀಗೆ ಭಕ್ತಿಯಿಂದ ಪ್ರಾರ್ಥಿಸುತ್ತಿರುವ ನನ್ನಲ್ಲಿ ಶ್ರೀಕೃಷ್ಣನು ಪೂರ್ಣಾನುಗ್ರಹವನ್ನಿಟ್ಟು, ಎಲ್ಲರಿಗೂ ಅತ್ಯವಶ್ಯವಾಗಿ ತಿಳಿಯಬೇಕಾದ ಆ ದಿವ್ಯಜ್ಞಾನವನ್ನೇ ಉಪದೇಶಿಸಿದನು. ಆ ಭಗವಂತ ನಿಂದ ನಾನು ತತ್ವಜ್ಞಾನವನ್ನು ಪಡೆದ ಮೇಲೆ, ಸರ್ವಲೋಕಪಾವನಗಳಾದ ಆತನ ಪಾದಪದ್ಮಗಳಿಗೆ ನಮಸ್ಕರಿಸಿ, ಅವನಿಂದ ಅನುಜ್ಞೆಯನ್ನು ಪಡೆದು, ಬಾರಿಬಾರಿಗೂ ಅವನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಆತನನ್ನ ಗಲುವ ದುಃಖದಿಂದ ಕೊರಗುತ್ತ ಇತ್ತಲಾಗಿ ಹೊರಟುಬಂದೆನು. ಮೊದಲೇ ಭಗವಂತನು ನನ್ನನ್ನು ಕುರಿತು ಬದರಿಕಾಶ್ರಮಕ್ಕೆ ಹೋಗೆಂದು ಹೇಳಿದ್ದ ನಲ್ಲವೆ? ಅದರಂತೆಯೇ ಆ ಸ್ಥಾನವನ್ನುದ್ದೇಶಿಸಿ ಹೊರಟುಬಂದೆನು. ಈಗಲೂ ಆ ಸ್ಥಳವನ್ನೇ ಉದ್ದೇಶಿಸಿ ಹೋಗುತ್ತಿರುವೆನು. ವಿದುರಾ! ಈಗ ನನ್ನ ಮನಸ್ಸು, ಒಂದು ಕಡೆಯಲ್ಲಿ ಆ ಭಗವಂತನನ್ನು ನೋಡಿದ ಮಹಾನಂದ ದಿಂದುಕ್ಕುತ್ತಿರುವುದು! ಮತ್ತೊಂದು ಕಡೆಯಲ್ಲಿ ಆ ಭಗವಂತನನ್ನಗಲಿ ಬಂದ ಸಂಕಟದಿಂದ ತತ್ತಳಿಸುತ್ತಿರುವುದು. ಏನಾದರೇನು? ಇನ್ನು ನಾನು ಆ ಭಗವದಾಜ್ಞೆಯಂತೆ ಬದರಿಕಾಶ್ರಮಕ್ಕೆ ಹೋಗುವೆನು. ಆ ಬದರೀವನ ದಲ್ಲಿಯೇ ಮೊದಲು ನರನಾರಾಯಣರಿಬ್ಬರೂ ತೀವ್ರತಪಸ್ಸನ್ನು ಮಾಡಿ, ಆ ಸ್ಥಳವನ್ನು ತಮ್ಮ ಸಾನ್ನಿಧ್ಯದಿಂದ ಪವಿತ್ರವನ್ನಾಗಿ ಮಾಡಿರುವರು. ಅಂತಹ ತೀರ್ಥವನ್ನು ಸೇವಿಸಿದ ಪಕ್ಷದಲ್ಲಿ ನನ್ನ ಮನಸ್ಸು ತಪ್ಪದೆ ಪರಿಶುದ್ಧಿ ಯನ್ನು ಹೊಂದುವುದು" ಎಂದನು. ಉದ್ಧವನು ಹೇಳಿದ ಈ ವಾಕ್ಯಗಳಲ್ಲಿ ಸೂಚಿತವಾದ ತನ್ನ ಬಂಧುಮಿತ್ರ ಮರಣವನ್ನು ಕೇಳಿ ವಿದುರನ ಮನಸ್ಸಿಗೆ ಬಹಳವಾಗಿ ವ್ಯಥೆಯುಂಟಾಯಿತು. ಬಂಧುಮರಣದಿಂದುಂಟಾದ ದುಃಖವು ಮನುಷ್ಯರಿಗೆ ಸಹಿಸಲಸಾಧ್ಯವಾಗಿದ್ದರೂ ಕೂಡ ಆತ್ಮತತ್ವವನ್ನು ಬಲ್ಲವನಾದ ವಿದುರನು, ಆ ದುಃಖವನ್ನು ಪ್ರಯತ್ನಪೂರ್ವಕವಾಗಿ ಅಡಗಿಸಿಕೊಂಡು, ಬದರಿಕಾಶ್ರಮಕ್ಕೆ ಪ್ರಯಾಣಸನ್ನದ್ಧನಾಗಿ ನಿಂತಿರುವ ಭಾಗವತೋತ್ತಮ ನಾದ ಆ ಉದ್ಧವನನ್ನು ನೋಡಿ, ತನ್ನನ್ನು ಶ್ರೀಕೃಷ್ಣಾನುಗ್ರಹಕ್ಕೆ ಪಾತ್ರ ನನ್ನಾಗಿ ಮಾಡಬೇಕಾಗಿದ್ದರೆ ಅದಕ್ಕೆ ಈತನೇ ಮುಖ್ಯೋಪಾಯನೆಂದು ನಿಶ್ಚಯಿಸಿ ಹೀಗೆಂದು ಪ್ರಾರ್ಥಿಸುವನು. "ಓ! ಮಹಾತ್ಮಾ! ಭಗವಂತ ನಾದ ಶ್ರೀಕೃಷ್ಣನು ನಿನಗೆ ಯಾವ ತತ್ವಜ್ಞಾನವನ್ನು ಉಪದೇಶಿಸಿದನೋ,

ಆ ಜ್ಞಾನವನ್ನು ನನಗೂ ನೀನು ಉಪದೇಶಿಸಬಹುದೆಂದೆಣಿಸುವೆನು! ಆದುದರಿಂದ ದಯವಿಟ್ಟು ನೀನು ನನಗೆ ಆ ಜ್ಞಾನವನ್ನುಪದೇಶಿಸಿ ನನ್ನನ್ನು ಕೃತಕೃತ್ಯನನ್ನಾಗಿ ಮಾಡಬೇಕು. ಲೋಕದಲ್ಲಿ ನಿನ್ನಂತಹ ವಿಷ್ಣು ಭಕ್ತರು ಯಾವಾಗಲೂ ತಮ್ಮ ಆಶ್ರಿತರ ಕೋರಿಕೆಯನ್ನು ಈಡೇರಿಸುವ ವಿಷಯದಲ್ಲಿ ಹಿಂಜರಿಯತಕ್ಕವರಲ್ಲ. ಆದುದರಿಂದ ನಿನ್ನ ಪಾದಾಶ್ರಿತನಾದ ನನ್ನನ್ನು ಜ್ಞಾನೋಪದೇಶದಿಂದ ಉದ್ಧರಿಸಿ ರಕ್ಷಿಸಬೇಕು." ಎಂದನು. ಹೀಗೆ ವಿನಯ ದಿಂದ ಪ್ರಾರ್ಥಿಸುತ್ತಿರುವ ವಿದುರನನ್ನು ನೋಡಿ ಉದ್ಧವನು "ವಿದುರಾ! ನಿನಗೆ ಆ ತತ್ವಜ್ಞಾನವನ್ನುಪದೇಶಿಸತಕ್ಕವನು ನಾನಲ್ಲ. ನೀನು ತತ್ವೋಪ ದೇಶವನ್ನು ಪಡೆಯಬೇಕಾಗಿದ್ದ ಪಕ್ಷದಲ್ಲಿ, ಭಗವಂತನಾಗಿಯೂ, ತತ್ವದರ್ಶಿ ಯಾಗಿಯೂ ಇರುವ ಮೈತ್ರೇಯ ಮಹಾಮುನಿಯನ್ನು ಪ್ರಾರ್ಥಿಸು! ಇದಲ್ಲದೆ ಭಗವಂತನಾದ ಕೃಷ್ಣನು ಮನುಷ್ಯಲೋಕವನ್ನು ಬಿಟ್ಟು ನಿಜ ಲೋಕಕ್ಕೆ ಹೊರಡುವ ಸಮಯದಲ್ಲಿ ಆ ಮೈತ್ರೇಯನನ್ನು ನೋಡಿ, "ನಿನ್ನ ಹಾಗೆಯೇ ತೀರ್ಥಸಂಚಾರವನ್ನು ಮಾಡುತ್ತ ನಿನ್ನ ಬಳಿಗೆ ಬಂದು ನಿನ್ನನ್ನು ಪ್ರಶ್ನೆಮಾಡತಕ್ಕವರಿಗೆ ನೀನು ಈ ಜ್ಞಾನವನ್ನುಪದೇಶಿಸಬೇಕು." ಎಂದು ಆಜ್ಞಾಪಿಸಿರುವನು. ಆದುದರಿಂದ ವಿದುರಾ! ನೀನು ಈಗ ಆ ಮೈತ್ರೇಯನ ಬಳಿಗೆ ಹೋಗಿ, ಆವನಿಂದ ತತ್ವಜ್ಞಾನವನ್ನು ಪಡೆಯುವವನಾಗು!" ಎಂದನು. ಹೀಗೆಂದು ಉದ್ಧವನು ಯಮುನಾತೀರದಲ್ಲಿ ವಿದುರನೊಡಗೂಡಿ, ವಿಶ್ವಾತ್ಮಕನಾದ ಭಗವಂತನ ಗುಣಾನುಭವಗಳನ್ನು ಮಾಡುತ್ತ, ಆ ಭಗವ ತ್ಕಥೆಯೆಂಬ ಸುಧಾರಸದಲ್ಲಿ ಮುಳುಗಿದವನಾಗಿ, ಸಮಸ್ತತಾಪಗಳನ್ನೂ ನೀಗಿ, ಆ ರಾತ್ರಿಯೆಲ್ಲವನ್ನೂ ಒಂದು ಕ್ಷಣದಂತೆ ಕಳೆದನು. ಬೆಳಗಾಗುವಷ್ಟರಲ್ಲಿಯೇ ಎಚ್ಚರಗೊಂಡು ಯಮುನಾನದಿಯಲ್ಲಿ ಸ್ನಾನ ಮಾಡಿ, ಅಲ್ಲಿಂದ ಬದರಿಕಾ ಶ್ರಮವನ್ನು ಕುರಿತು ಹೊರಟುಬಿಟ್ಟನು.

ಶುಕಮಹರ್ಷಿಯು ಪರೀಕ್ಷಿದ್ರಾಜನಿಗೆ ಈ ವೃತ್ತಾಂತವನ್ನು ಹೇಳಿ ದೊಡನೆ ಪರೀಕ್ಷಿದ್ರಾಜನು ಅವನನ್ನು ಕುರಿತು "ಓ ಮುನೀಂದ್ರಾ! ಬ್ರಾಹ್ಮಣ ಶಾಪದಿಂದ ವೃಷ್ಣಿ ಭೋಜರೇ ಮೊದಲಾದ ಯಾದವಕುಲದವರೆಲ್ಲರೂ ನಾಶ ಹೊಂದಿದರಷ್ಟೆ? ಶ್ರೀಕೃಷ್ಣನೂ ಈ ಲೋಕವನ್ನು ಬಿಟ್ಟು ನಿಜನಿವಾಸಕ್ಕೆ ತೆರಳಿದನಷ್ಟೆ? ಹೀಗೆ ಯಾದವಕುಲವೆಲ್ಲವೂ ನಿಶ್ಶೇಷವಾಗಿ ಅಳಿಸಿಹೋಗು

ತ್ತಿರುವಾಗ, ಉದ್ಧವನೊಬ್ಬನು ಮಾತ್ರ ಉಳಿದುದು ಹೇಗೆ? ಅವನಿಗೆ ಮಾತ್ರ ಬ್ರಾಹ್ಮಣಶಾಪವಿಲ್ಲವೇನು ? ಅತಿರಥಮಹಾರಥಾದಿ ವೀರರೆಲ್ಲರನ್ನೂ ಅಪಾಯದಿಂದ ತಪ್ಪಿಸತಕ್ಕ ತನ್ನ ಮಹಾಮಹಿಮೆಯಿಂದ ಯದುವೀರಾ ಗ್ರೇಸರನೆನಿಸಿ, ಲೋಕನಾಥನೆನಿಸಿಕೊಂಡ ಶ್ರೀಕೃಷ್ಣನೂ ಕೂಡ, ಬ್ರಾಹ್ಮಣ ಶಾಪವನ್ನು ಸುಳ್ಳಾಗಿಸಬಾರದೆಂಬುದಕ್ಕಾಗಿಯೇ, ತಾನು ಧರಿಸಿದ್ದ ಮನುಷ್ಯಾ ಕೃತಿಯನ್ನು ಮರೆಸಿಕೊಂಡನಲ್ಲವೆ? ಅದೇ ಯಾದವಕುಲದಲ್ಲಿ ಹುಟ್ಟಿದ ಉದ್ಧವನು ಮಾತ್ರ ಬದುಕಿರುವುದು ನನಗೆ ಅತ್ಯಾಶ್ಚರ್ಯವನ್ನುಂಟುಮಾಡು ತ್ತಿರುವುದು. ಇದರ ಕಾರಣವೇನೆಂಬುದನ್ನು ತಿಳಿಸಬೇಕು" ಎಂದನು. ಅದಕ್ಕಾ ಶುಕನು "ಎಲೈ ರಾಜೇಂದ್ರನೆ! ನೀನು ಕೇಳುವುದು ಯುಕ್ತವಾ ಗಿಯೇ ಇರುವುದು. ಅದರ ರಹಸ್ಯವನ್ನು ತಿಳಿಸುವೆನು ಕೇಳು! ಬ್ರಾಹ್ಮಣ ಶಾಪವೆಂಬುದು ಭಗವತ್ಸಂಕಲ್ಪರೂಪವೇ ಹೊರತು ಬೇರೆಯಲ್ಲ! ಸತ್ಯ ಸಂಕಲ್ಪನಾದ ಶ್ರೀಕೃಷ್ಣನು, ಯಾದವಕುಲವನ್ನು ನಾಶಹೊಂದಿಸಿ, ತನ್ನ ಮನುಷ್ಯಶರೀರವನ್ನೂ ಮರೆಸಿಕೊಳ್ಳಬೇಕೆಂದು ತನ್ನಲ್ಲಿ ತಾನು ಸಂಕಲ್ಪಿಸಿದ್ದ ನಷ್ಟೆ? ಆ ಸಂಕಲ್ಪವು ಹುಟ್ಟಿದೊಡನೆ ಅವನಿಗೆ ಮನಸ್ಸಿನಲ್ಲಿ ಬೇರೊಂದಾ ಲೋಚನೆಯು ಹುಟ್ಟಿತು. ಅದೇನೆಂದರೆ, ಆಹಾ! ನಾನು ಈ ಲೋಕವನ್ನು ಬಿಟ್ಟುಹೋದಮೇಲೆ, ನನ್ನ ವಿಷಯವಾದ ತತ್ವಜ್ಞಾನವನ್ನು ಭಕ್ತಾ ಗ್ರಣಿಯಾದ ಈ ಉದ್ಧವನಿಗಾದರೂ ಉಪದೇಶಿಸಿದ ಪಕ್ಷದಲ್ಲಿ, ಆತನೊಬ್ಬನ ಆಶ್ರಯದಿಂದಾದರೂ ಆ ತತ್ವಜ್ಞಾನವು ಈ ಲೋಕದಲ್ಲಿ ನಿಲ್ಲಬಹುದು. ಈ ಉದ್ಧವನು ಜ್ಞಾನಿಗಳಲ್ಲಿ ಪ್ರಧಾನನಾದುದರಿಂದ, ಅದನ್ನು ಸ್ಥಿರವಾಗಿ ಧಾರಣಮಾಡುವುದಕ್ಕೂ ಈತನೇ ಅರ್ಹನು! ಇದಲ್ಲದೆ ಈತನು ಜಿತೇಂದ್ರಿ ಯನಾಗಿಯೂ ಇರುವನು. ಇವನನ್ನು ನನಗೆ ಸಮಾನನೆಂದೇ ಹೇಳಬಹುದೇ ಹೊರತು ಲೇಶಮಾತ್ರವೂ ನನಗಿಂತಲೂ ಕಡಿಮೆಯಾದವನಲ್ಲ. ಸತ್ವಾದಿ ಗುಣಕಾರ್ಯಗಳಾದ ಶಬ್ದಾದಿ ವಿಷಯಗಳಿಗೂ ಇವನು ಈಡಾಗತಕ್ಕವನಲ್ಲ. ಆದುದರಿಂದ ನನ್ನ ನಿಜಸ್ವರೂಪವನ್ನು ತಿಳಿಸತಕ್ಕ ತತ್ವಜ್ಞಾನವನ್ನು ಚೆನ್ನಾಗಿ ತಿಳಿದುಕೊಳ್ಳುವುದಕ್ಕೂ ಅದರಂತೆಯೇ ಇತರರಿಗೆ ಬೋಧಿಸುವು ದಕ್ಕೂ ಈತನೊಬ್ಬನೇ ಸಮರ್ಥನು. ಆದುದರಿಂದ ಇವನ ಮೂಲಕವಾ ಗಿಯೇ ಸುಜ್ಞಾನವನ್ನು ಲೋಕದಲ್ಲಿ ನೆಲೆಗೊಳಿಸಬೇಕು" ಎಂಬ ಸಂಕಲ್ಪ

ದಿಂದಲೇ ಶ್ರೀಕೃಷ್ಣನು ಉದ್ಧವನನ್ನು ಮರಣದಿಂದ ತಪ್ಪಿಸಿರುವನು. ಹಾಗಿಲ್ಲದ ಪಕ್ಷದಲ್ಲಿ ಉದ್ಧವನೂ ಯಾದವರೊಡನೆ ಮರಣವನ್ನು ಹೊಂದಬೇಕಾಗಿತ್ತೆಂಬುದರಲ್ಲಿ ಸಂದೇಹವಿಲ್ಲ. ಎಲೈ ಪರೀಕ್ಷಿದ್ರಾಜನೆ! ಮುಂದಿನ ವೃತ್ತಾಂತವನ್ನು ಕೇಳು. ಉದ್ಧವನು ಲೋಕನಾಥನಾದ ಭಗವಂತನ ಅನುಜ್ಞೆಯನ್ನು ಪಡೆದು ಬದರಿಕಾಶ್ರಮಕ್ಕೆ ಹೋಗಿ ಸೇರಿದ ಮೇಲೆ, ಅಲ್ಲಿ ಜ್ಞಾನಯೋಗದಿಂದ ಭಗವಂತನನ್ನು ಎಡೆಬಿಡದೆ ಆರಾಧಿಸುತ್ತಿದ್ದನು. ಇತ್ತಲಾಗಿ ವಿದುರನೂ ಕೂಡ, ಲೀಲಾರ್ಥವಾಗಿ ಮನುಷ್ಯರೂಪವನ್ನು ಧರಿಸಿದ್ದ ಪರಮಾತ್ಮರೂಪಿಯಾದ ಶ್ರೀಕೃಷ್ಣನ ಅದ್ಭುತ ಚರಿತ್ರೆಗಳನ್ನೂ, ಆತನು ತನ್ನ ಮನುಷ್ಯ ದೇಹವನ್ನು ಬಿಟ್ಟು ನಿಜಲೋಕಕ್ಕೆ ಹೋದುದನ್ನೂ ಉದ್ಧವನಿಂದ ಕೇಳಿ, ಆ ಶ್ರೀಕೃಷ್ಣನಲ್ಲಿಯೇ ನೆಟ್ಟಮನಸ್ಸುಳ್ಳವನಾಗಿ ಭಕ್ತಿಯಿಂದ ಮೈಮರೆತಿದ್ದನು. ಎಲೈ ರಾಜೇಂದ್ರನೆ! ಶ್ರೀಕೃಷ್ಣನು ತಾನು ಧರಿಸಿದ್ದ ಮನುಷ್ಯ ಶರೀರವನ್ನು ಬಿಟ್ಟ ರೀತಿಯು, ಯೋಗಿಗಳಿಗೆ ಯೋಗಾಭ್ಯಾಸದಲ್ಲಿ ಮತ್ತಷ್ಟು ಧೈರ್ಯವನ್ನು ಹೆಚ್ಚಿಸತಕ್ಕುದಾಗಿಯೂ, ದೇಹವನ್ನೇ ಆತ್ಮವೆಂದೆಣಿಸಿ ಆ ದೇಹ ಸಂಬಂಧವಾದ ಸುಖದುಃಖಗಳಿಗೆ ಕಟ್ಟುಬಿದ್ದ ಮನಸ್ಸುಳ್ಳ ಪಶುಸಮಾನರಾದ ಅವಿವೇಕಿಗಳಿಗೆ, ದುಷ್ಕರಕಾರ್ಯವಾಗಿಯೂ ಇದ್ದಿತು. ಈ ವಿಧವಾಗಿ ಶ್ರೀಕೃಷ್ಣನು ಯೋಗಿಗಳಿಗೆ ಧೈರ್ಯವನ್ನು ಹೆಚ್ಚಿಸತಕ್ಕುದಾಗಿಯೂ, ಅಧೀರಮನಸ್ಸುಳ್ಳ ಅವಿವೇಕಿಗಳಿಗೆ ಭಯಕಾರಣವಾಗಿಯೂ ಇರುವಂತೆ ನಡೆಸಿದ ಈ ದೇಹತ್ಯಾಗದ ರೀತಿಯನ್ನು ವಿದುರನು ಉದ್ಧವನಿಂದ ಕೇಳಿದೊಡನೆ, ಭಕ್ತೋತ್ತಮನಾದ ಆ ಉದ್ಧವನು ತನ್ನನ್ನಗಲಿ ಹೋದುದಕ್ಕಾಗಿ ಸ್ವಲ್ಪಹೊತ್ತು ದುಃಖಿಸಿ ರೋದಿಸುತ್ತ, ಕೊನೆಗೆ ಮನಸ್ಸಿನಲ್ಲಿ ಶಾಂತಿಯನ್ನು ಹೊಂದಿ, ಆ ಉದ್ಧವನು ತನಗೆ ನಿಯಮಿಸಿದಂತೆ ಮೈತ್ರೇಯನ ದರ್ಶನಾರ್ಥವಾಗಿ ಆ ಯಮುನಾತೀರದಿಂದ ಹೊರಟನು. ಕೆಲವು ದಿನಗಳೊಳಗಾಗಿಯೇ ಗಂಗಾನದಿಯನ್ನು ಸೇರಿ, ಅಲ್ಲಿಂದ ಹರಿದ್ವಾರಕ್ಕೆ ಬಂದು, ಅಲ್ಲಿ ಪರಮಭಾಗವತೋತ್ತಮನಾದ ಮೈತ್ರೇಯನನ್ನೂ ಸಂಧಿಸಿದನು. ಇಲ್ಲಿಗೆ ನಾಲ್ಕನೆಯ ಅಧ್ಯಾಯವು.

---

ವಿದುರನ ಪ್ರಾರ್ಥನೆಯಿಂದ ಮೈತ್ರೇಯನು ಆತನಿಗೆ ಮಹತ್ತು ಮೊದಲಾದ ತತ್ವಗಳ ಸೃಷ್ಟಿಕ್ರಮವನ್ನೂ ಆ ತತ್ವಗಳು ಭಗವಂತನನ್ನು ಸ್ತುತಿಸಿದ ರೀತಿಯನ್ನೂ ವಿವರಿಸಿದುದು.

"ಎಲೈ ಪರೀಕ್ಷಿದ್ರಾಜನೆ ಕೇಳು! ಕೌರವಶ್ರೇಷ್ಠನಾದ ವಿದುರನು ಗಂಗಾದ್ವಾರಕ್ಕೆ (ಹರಿದ್ವಾರಕ್ಕೆ) ಬಂದು ಆತ್ಮಜ್ಞಾನಿಯಾಗಿಯೂ, ಮಹಾತ್ಮನಾಗಿಯೂ ಇರುವ ಮೈತ್ರೇಯನು ಧ್ಯಾನಯೋಗನಿಷ್ಠನಾಗಿ ಕುಳಿತಿರುವುದನ್ನು ಕಂಡೊಡನೆ ಆತನಿಗೆ ನಮಸ್ಕರಿಸಿ, ಜ್ಞಾನನಿಧಿಯಾದ ಆ ಮಹರ್ಷಿಯ ಗುಣಸೌಶೀಲ್ಯಾದಿಗಳನ್ನು ನೋಡಿ ಪರಮಸಂತೋಷಗೊಂಡವನಾಗಿ, ಅವನನ್ನು ಪ್ರಾರ್ಥಿಸುವನು. ಓ ಮಹಾತ್ಮನೆ! ಲೋಕದಲ್ಲಿ ಸಮಸ್ತಜನರೂ ತಮ್ಮ ತಮ್ಮ ಸುಖವನ್ನಪೇಕ್ಷಿಸಿಯೇ ಕೃಷಿವಾಣಿಜ್ಯ ಮೊದಲಾದ ಲೌಕಿಕ ವ್ಯಾಪಾರಗಳನ್ನೂ, ಶ್ರುತಿಸ್ಮೃತಿವಿಹಿತಗಳಾದ ದಾನಾದಿವೈದಿಕ ಕರ್ಮಗಳನ್ನೂ ನಡೆಸುವರು. ಈ ವಿಧವಾದ ಕರ್ಮಗಳಿಂದ ಅವರು ಅತ್ಯುತ್ತಮವಾದ ಸುಖವನ್ನಾಗಲಿ, ಸಂಪೂರ್ಣವಾದ ದುಃಖನಿವೃತ್ತಿಯನ್ನಾಗಲಿ ಪಡೆಯಲಾರರು. "ಇದರಿಂದ ಅವರಿಗೆ ಬರುವ ಫಲವೇನು?" ಎಂದು ಯೋಚಿಸಿದರೆ, ಆ ಕರ್ಮಗಳಿಂದ ಅವರು ಅಡಿಗಡಿಗೆ ದುಃಖವನ್ನೇ ಹೊಂದುತ್ತಿರುವರು. ಆದುದರಿಂದ ಉತ್ತಮಸುಖವನ್ನು ಪಡೆಯುವುದಕ್ಕೂ ದುಃಖವೆಂಬುದನ್ನು ಮೂಲಸಹಿತವಾಗಿ ನೀಗಿಸುವುದಕ್ಕೂ ನಡೆಸಬೇಕಾದ ಸಾಧನವಾವುದೋ ಅದನ್ನು ನೀನು ಚೆನ್ನಾಗಿ ಬಲ್ಲೆಯಾದುದರಿಂದ, ಸರ್ವಜ್ಞನಾದ ನೀನು ನನಗೂ ತಿಳಿಸಬೇಕು. "ಆದರೆ ಜಿತೇಂದ್ರಿಯನಾಗಿ ಭಗವಂತನಲ್ಲಿಯೇ ನಟ್ಟ ಮನಸ್ಸುಳ್ಳ ನಾನು ಆ ಭಗವಂತನ ಧ್ಯಾನದಿಂದುಂಟಾದ ಆನಂದಾನುಭವವನ್ನು ಬಿಟ್ಟು, ನಿನ್ನ ಪ್ರಶ್ನೆಗಳಿಗೆ ಪ್ರತ್ಯುತ್ತರವನ್ನು ಹೇಳುವುದರಿಂದ ನನಗೆ ಬಂದ ಲಾಭವೇನು?" ಎಂದು ಕೇಳುವೆಯಾ? ಜನ್ಮಾಂತರ ಕರ್ಮದೋಷದಿಂದ ಅಧರ್ಮಪರರಾಗಿಯೂ, ಭಗವದ್ಭಕ್ತಿಯಲ್ಲಿ ವಿಮುಖರಾಗಿಯೂ, ಯಾವಾಗಲೂ ದುಃಖಸಮುದ್ರದಲ್ಲಿಯೇ ಮುಳುಗಿದವರಾಗಿಯೂ ಇರುವ ಸಂಸಾರಿಗಳನ್ನು ಅನುಗ್ರಹಿಸುವುದಕ್ಕಾಗಿಯೇ ತಮ್ಮಂತಹ ಮಹಾತ್ಮರು ಈ ಲೋಕದಲ್ಲಿ ಜನಿಸುತ್ತಿರುವರು. ಕರ್ಮಸಂಬಂಧಗಳಾದ ಶರೀರ

ಗಳನ್ನು ಧರಿಸಿ, ಸಹಿಸಬಾರದ ಎಷ್ಟೋ ದುಃಖಗಳನ್ನನುಭವಿಸುತ್ತ, ಎಷ್ಟು ಕಾಲವಾದರೂ ಜನನಮರಣಗಳಲ್ಲಿಯೇ ಬಿದ್ದು, ಮುಕ್ತಿಯನ್ನು ಕಾಣದೆ, ಪಶುಪ್ರಾಯರಾಗಿರುವವರನ್ನು ಉದ್ಧರಿಸುವುದಕ್ಕಾಗಿಯೇ ತಮ್ಮಂತವರು ಲೋಕಸಂಚಾರವನ್ನೂ ಮಾಡುತ್ತಿರುವರು! ಎಲೈ ಸಾಧುಶಿರೋಮಣಿಯೇ! ಭಗವಂತನು ಭಕ್ತಿಯಿಂದ ನಿರ್ಮಲವಾದ ಹೃದಯದಲ್ಲಿ ವಾಸಮಾಡುವನು! ಯಾವ ಕಾರ್ಯವನ್ನು ನಡೆಸಿದರೆ ಭಗವಂತನು ತತ್ವಜ್ಞಾನವನ್ನು ಕೊಡುವನೋ ಅಂತಹ ಉಪಾಯವೇನಾದರೂ ಇದ್ದರೆ ಅದನ್ನು ನನ್ನಲ್ಲಿ ದಯೆಯಿಟ್ಟು ತಿಳಿಸಬೇಕು. ಲೋಕನಾಥನಾದ ಭಗವಂತನು ತಾನು ಕರ್ಮಾಧೀನನಾಗದೆ ಬ್ರಹ್ಮಾದಿರೂಪಗಳಿಂದ ಈ ಪ್ರಪಂಚವನ್ನು ಸೃಷ್ಟಿಸಿದುದು ಹೇಗೆ? ಹೇಗೆ ರಕ್ಷಿಸುತ್ತಿರುವನು? ಕೊನೆಗೆ ಈ ಜಗತ್ತೆಲ್ಲವನ್ನೂ ತನ್ನಲ್ಲಿ ಅಡಗಿಸಿಕೊಂಡು, ಜಗದ್ವ್ಯಾಪಾರಗಳೆಲ್ಲವನ್ನೂ ಬಿಟ್ಟು, ನಿಜಲೋಕವಾದ ವೈಕುಂಠದಲ್ಲಿ ಹೇಗೆ ಶಯನಿಸಿದನು? ಯೋಗೀಶ್ವರನಾದ ಭಗವಂತನು ತಾನೊಬ್ಬನಾಗಿಯೇ ಇದ್ದು, ಸಮಸ್ತಜಗತ್ತಿಗೂ ತಾನೇ ಆಧಾರನಾಗಿದ್ದರೂ, ಅನೇಕ ರೂಪಗಳನ್ನು ಧರಿಸಿದುದು ಹೇಗೆ? ಗೋಬ್ರಾಹ್ಮಣಾದಿಗಳನ್ನು ರಕ್ಷಿಸುವುದಕ್ಕಾಗಿ ಮತ್ಸ್ಯ ಕೂರ್ಮಾದ್ಯವತಾರಗಳನ್ನೆತ್ತಿ ವಿನೋದಿಸುತ್ತಿರುವಾಗ, ಯಾವ ಯಾವ ವಿಧದಿಂದ ತನ್ನ ಉದ್ದೇಶಗಳನ್ನು ನೆರವೇರಿಸಿರುವನು? ಓ ಮುನೀಂದ್ರಾ! ಪುಣ್ಯಕೀರ್ತಿಯಾದ ಆ ಭಗವಂತನ ಚರಿತ್ರೆಗಳನ್ನು ಎಷ್ಟೆಷ್ಟು ಕೇಳುತ್ತಿದ್ದರೂ ನನ್ನ ಮನಸ್ಸು ತೃಪ್ತಿಹೊಂದದು. ಆದುದರಿಂದ ನನ್ನಲ್ಲಿ ದಯೆಯಿಟ್ಟು ಆ ಚರಿತ್ರೆಗಳೆಲ್ಲವನ್ನೂ ನೀನು ಚೆನ್ನಾಗಿ ವಿವರಿಸಿ ತಿಳಿಸಬೇಕು. ಲೋಕನಾಯಕನಾದ ಆ ಭಗವಂತನು, ಮಹತ್ತು ಮೊದಲಾದ ತತ್ವಗಳಿಂದ, ಲೋಕಪಾಲಕರೊಡಗೂಡಿದ ಈ ಸಮಸ್ತಲೋಕಗಳನ್ನೂ, ಅದರ ಹೊರಗಿನ ಆವರಣಗಳನ್ನೂ ಕಲ್ಪಿಸಿದುದು ಹೇಗೆ? ಆಯಾ ಲೋಕಗಳಲ್ಲಿರುವ ಜೀವಕೋಟಿಗಳಿಗೆ ಪರಸ್ಪರ ಬೇಧಗಳೇನು? ಲೋಕಕರ್ತನಾಗಿಯೂ, ತನಗೆ ಬೇರೊಂದು ಕಾರಣವಿಲ್ಲದವನಾಗಿಯೂ ಇರುವ ಭಗವಂತನು, ಜ್ಞಾನೇಂದ್ರಿಯಗಳನ್ನೂ, ಕರ್ಮೇಂದ್ರಿಯಗಳನ್ನೂ, ದೇವ ಮನುಷ್ಯಾದಿ ರೂಪಗಳನ್ನೂ, ಅದಕ್ಕೆ ಬೇರೆಬೇರೆ ನಾಮಗಳನ್ನೂ ಹೇಗೆ ಬೇರ್ಪಡಿಸಿಟ್ಟನು? ಅವೆಲ್ಲವನ್ನೂ ವಿವರವಾಗಿ ತಿಳಿಸಬೇಕು. ಆದರೆ "ಅನೇಕ

ರಲ್ಲಿ ಅನೇಕ ಧರ್ಮಗಳನ್ನು ಕೇಳಿ ತಿಳಿದಿರುವ ನಿನಗೆ ನನ್ನ ಬಾಯಿಂದ ಕೇಳ ಬೇಕಾದ ಅವಶ್ಯಕತೆಯೇನು?” ಎಂದು ನನ್ನನ್ನು ನೀನು ಕೇಳಬಹುದು. ಎಲೈ ಮಹರ್ಷಿಯೇ! ಆದಕ್ಕೂ ತಕ್ಕ ಕಾರಣವನ್ನು ವಿಜ್ಞಾಪಿಸಿಕೊಳ್ಳು ವೆನು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಮೂರು ಜಾತಿಯವರಿಗೂ ಅವರಿಗಿಂತಲೂ ಹೀನವಾದ ಸ್ತ್ರೀಶೂದ್ರಾದಿಗಳಿಗೂ ಯಾವ ಯಾವ ಕರ್ಮ ಗಳು ವಿಧಿಸಲ್ಪಟ್ಟಿವೆಯೋ, ಆವೆಲ್ಲವನ್ನೂ ನಾನು ಇದಕ್ಕೆ ಮೊದಲು ವ್ಯಾಸ ಮಹರ್ಷಿಯಿಂದ ರಚಿತವಾದ ಭಾರತದಿಂದಲೇ ತಿಳಿದುಕೊಂಡೆನು. ವಿಷ್ಣು ಕಥಾಮೃತವಿಲ್ಲದೆಯೂ, ಅಲ್ಪಸುಖಸಂಪಾದಕವಾಗಿಯೂ ಇರುವ ಆ ಕರ್ಮವಿಚಾರಗಳನ್ನು ಕೇಳಿ ಕೇಳಿ ನನ್ನ ಮನಸ್ಸು ಬೇಸರಿಸಿತು. ಮತ್ತು ಅವುಗಳನ್ನು ಕೇಳುವುದರಲ್ಲಿ ನನ್ನ ಮನಸ್ಸು ಪೂರ್ಣವಾಗಿ ತೃಪ್ತಿಹೊಂದಿರು ವುದರಿಂದ, ತಿರುಗಿ ಅವುಗಳನ್ನೇ ಕೇಳಬೇಕಾದ ಅವಶ್ಯಕತೆಯಿಲ್ಲವು. ಭಗ ವತ್ಕಥಾಮೃತವನ್ನು ಕೇಳುವುದರಲ್ಲಿ ಮಾತ್ರ ನನ್ನ ಮನಸ್ಸಿಗೆ ಇನ್ನೂ ತೃಪ್ತಿಯುಂಟಾಗಲಿಲ್ಲ. ಇದಲ್ಲದೆ ವಿಷ್ಣುಕಥೆಗಳನ್ನು ಆಗಾಗ ಕೇಳುತ್ತಿದ್ದರೆ, ಭಗವಂತನು ಅಂತವರ ಕರ್ಣದ್ವಾರದಿಂದ ಪ್ರವೇಶಿಸಿ, ಆವರ ಹೃದಯ ಕಮಲದಲ್ಲಿ ಸ್ಥಿರವಾಗಿ ನಿಂತು, ಸಂಸಾರ ಕಾರಣಗಳಾದ ದುರಾಭಿಲಾಷೆ ಗಳನ್ನು ನೀಗಿಸುವನೆಂದೂ ಕೇಳಿರುವೆನು. ಮಹಾತ್ಮರಾದ ನಿಮ್ಮಂತವರು ನಡೆಸುವ ಕಥಾಶ್ರವಣರೂಪವಾದ ಯಾಗಗಳಲ್ಲಿ, ಪಂಡಿತರಿಂದ ವಿಷ್ಣುಕಥೆ ಗಳನ್ನು ಕೇಳಿದವರಿಗೆ ಈ ವಿಧವಾದ ಲಾಭವುಂಟಾಗುತ್ತಿರುವಾಗ ಯಾವ ಮನುಷ್ಯನು ತಾನೇ ಅದನ್ನು ಕೇಳದಿರುವನು? ಎಷ್ಟು ಕೇಳಿದರೆ ತಾನೇ ಅದರಲ್ಲಿ ತೃಪ್ತಿಯುಂಟಾಗುವುದು! ಆದರೆ “ಹರಿಕಥಾಶ್ರವಣದಿಂದಲೇ ತಾಪ ತ್ರಯರೂಪವಾದ ಸಂಸಾರವು ನೀಗಿ ಉತ್ತಮಸುಖವುಂಟಾಗುವಪಕ್ಷದಲ್ಲಿ, ಪೂಜ್ಯನಾದ ವ್ಯಾಸಮುನಿಯು ತನ್ನಿಂದ ರಚಿತವಾದ ಭಾರತದಲ್ಲಿ ಭಗ ವಂತನ ಚರಿತ್ರೆಗಳನ್ನು ಬಿಟ್ಟು ಕೇವಲ ವ್ರತಗಳನ್ನು ಮಾತ್ರವೇ ಹೇಳಿದು ದೇಕೆ? ಇದನ್ನು ಪರ್ಯಾಲೋಚಿಸಿ ನೋಡಿದರೆ, ವ್ರತಗಳಿಂದಲೂ ಅದೇ ವಿಧವಾದ ಫಲವು ಲಭಿಸಬಹುದೆಂದೇ ಊಹಿಸಬೇಕಲ್ಲವೆ” ಎಂದು ನೀನು ಕೇಳಬಹುದು! ಮುನೀಂದ್ರಾ! ಅದಕ್ಕೂ ಸಮಾಧಾನವನ್ನು ಹೇಳುವೆನು ಕೇಳು. ಭಗವದವತಾರರೂಪನಾಗಿಯೂ, ನಿನ್ನ ಮಿತ್ರನಾಗಿಯೂ ಇರುವ

ವ್ಯಾಸಮಹಾಮುನಿಯು, ಭಗವಂತನ ಗುಣಗಳನ್ನು ವರ್ಣಿಸಬೇಕೆಂಬ ಉದ್ದೇಶವನ್ನಿಟ್ಟುಕೊಂಡೇ ಭಾರತವನ್ನು ರಚಿಸಿರುವನು. ಆದರೆ ವರ್ಣಾಶ್ರಮಧರ್ಮಗಳಿಂದಲೂ, ಗ್ರಾಮ್ಯಕಥೆಗಳ ಅನುವಾದಗಳಿಂದಲೂ ಆ ಗ್ರಂಥವನ್ನು ವಿಶೇಷವಾಗಿ ತುಂಬಿರುವುದೇನೋ ನಿಜವು! ಅವುಗಳನ್ನು ವಿಶೇಷವಾಗಿ ನಿರೂಪಿಸಿದ ಮಾತ್ರಕ್ಕೆ ಅಷ್ಟರಲ್ಲಿಯೇ ವ್ಯಾಸಮಹರ್ಷಿಗೆ ತೃಪ್ತಿಯೆಂದು ತಿಳಿಯಕೂಡದು. ಇವೆಲ್ಲವೂ ಮುಕ್ತಿಸಾಧನಗಳಲ್ಲವೆಂಬುದನ್ನು ಆತನು ನಿಸ್ಸಂಶಯವಾಗಿ ತಿಳಿದಿದ್ದರೂ ಸಾಮಾನ್ಯಜನರಿಗೆ ಆ ಮಾರ್ಗದಿಂದಲೇ ಭಕ್ತಿಯನ್ನು ಹುಟ್ಟಿಸಬೇಕೆಂಬುದೇ ಆತನ ಉದ್ದೇಶವು. ಸಾಮಾನ್ಯಜನರ ಮನಸ್ಸು ವೇದಾಂತಾರ್ಥಗಳನ್ನು ಗ್ರಹಿಸಲಾರದು. ಆದುದರಿಂದ ಅಂತವರಿಗೆ ಈ ವಿಧವಾದ ವ್ರತಗಳನ್ನು ಬೋಧಿಸಿ ಅವುಗಪಲ್ಲಿ ಶ್ರದ್ಧೆಯುಂಟಾಗುವಂತೆ ಮಾಡಿದರೆ, ಅವರ ಬುದ್ಧಿಯು ಕರ್ಮಾಚರಣೆಯಲ್ಲಿ ಪ್ರವರ್ತಿಸುವುದು. ಹೀಗೆ ಕರ್ಮಗಳನ್ನಾಚರಿಸುತ್ತ ಬರುವುದರಿಂದ, ಕ್ರಮಕ್ರಮವಾಗಿ ಮನಸ್ಸು ನಿರ್ಮಲವಾಗುವುದು. ಮನಸ್ಸು ಶುದ್ಧವಾದ ಮೇಲೆ ಅವರಿಗೆ ಬೇರೆ ವಿಷಯಗಳಲ್ಲಿ ವಿರಕ್ತಿಯೂ ಹುಟ್ಟುತ್ತ ಬರುವುದು! ಜ್ಞಾನಪ್ರಧಾನವಾದ ವೇದಾಂತಾರ್ಥಗಳನ್ನು ಗ್ರಹಿಸುವುದಕ್ಕೂ ಶಕ್ತಿಯುಂಟಾಗುವುದು. ಈ ಅಭಿಪ್ರಾಯದಿಂದಲೇ ವ್ಯಾಸಮಹರ್ಷಿಯು ಭಾರತದಲ್ಲಿ ವಿಶೇಷವಾಗಿ ಕರ್ಮಗಳಿಗೆ ಪ್ರಾಧಾನ್ಯವನ್ನು ಕೊಟ್ಟು ವರ್ಣಿಸಿರುವನು. ಮೇಲೆ ಹೇಳಿದಂತೆ ಕರ್ಮಾಚರಣೆಯಿಂದ ಶುದ್ಧಮನಸ್ಸುಳ್ಳವರಿಗೆ, ಹರಿಕಥಾಶ್ರವಣದಲ್ಲಿ ಮನಸ್ಸು ಹುಟ್ಟಿ, ಕ್ರಮವಾಗಿ ಸಂಸಾರದಲ್ಲಿಯೂ ವಿರಕ್ತಿಯುಂಟಾಗಿ, ಭಗವಂತನ ಪಾದಾರವಿಂದಗಳನ್ನೇ ಸರ್ವದಾ ಧ್ಯಾನಿಸುತ್ತ, ಉತ್ತಮಸುಖವನ್ನು ಹೊಂದುವರು. ಹರಿಚರಿತ್ರವೆಂಬುದು ತನಗೆ ತಾನೇ ಮನುಷ್ಯನಿಗೆ ಭಗವಂತನಲ್ಲಿ ಭಕ್ತಿಯನ್ನೂ, ಶಬ್ದಾದಿವಿಷಯಗಳಲ್ಲಿ ವಿರಕ್ತಿಯನ್ನೂ ಹುಟ್ಟಿಸಿ ಸಂಸಾರತಾಪತ್ರಯವನ್ನು ನೀಗಿಸುವುದು. ಯಾರು ತಮ್ಮ ಪಾಪಶೇಷದಿಂದ ಇಂತಹ ಮಹಿಮೆಯುಳ್ಳ ಹರಿಕಥಾಶ್ರವಣದಲ್ಲಿ ಶ್ರದ್ಧೆಯನ್ನು ತೋರಿಸದಿರುವರೋ, ಮನಸ್ಸು, ವಾಕ್ಕು, ಕಾಯಗಳೆಂಬ ತ್ರಿಕರಣಗಳನ್ನೂ ಯಾರು ದುರುಪಯೋಗಪಡಿಸುತ್ತಿರುವರೋ, ಅಂತವರ ಆಯುಷ್ಯವೆಲ್ಲವನ್ನೂ ಸೂರ್ಯನು, ತನ್ನ ಉದಯಾಸ್ತಮಯಗಳಿಂದ ವ್ಯರ್ಥವಾಗಿಯೇ ಹಾಳು

ಮಾಡುತ್ತಿರುವನಲ್ಲದೆ ಬೇರೆಯಲ್ಲ. ಅಂತವರ ದುಃಸ್ಥಿತಿಗಾಗಿ ಎಷ್ಟೆಷ್ಟು ದುಃಖಿಸಿದರೂ ಸಾಲದು. ಅವಿವೇಕಿಗಳಾದ ಅಂತವರ ದೌರ್ಭಾಗ್ಯವನ್ನು ಕುರಿತು ನಾನು ಬಹಳವಾಗಿ ಪರಿತಪಿಸುವೆನು. ಮನಸ್ಸು, ವಾಕ್ಕು, ಕಾಯ ಗಳೆಂಬ ತ್ರಿಕರಣಗಳನ್ನೂ ಭಗವಂತನ ವಿಷಯವಾಗಿ ಅರ್ಪಿಸಿದಾಗಲೇ ಅವು ಸಫಲಗಳಾಗುವುವು. ಇಲ್ಲದ ಪಕ್ಷದಲ್ಲಿ ಅವೆಲ್ಲವೂ ವ್ಯರ್ಥವೆನಿಸುವುವು. ಕಳೆದು ಹೋಗತಕ್ಕ ಆಯುಸ್ಸು ಭಗವದ್ಭಕ್ತರಿಗಾಗಲಿ, ಆತನಲ್ಲಿ ವಿಮುಖರಾದ ವಿವೇಕಹೀನರಿಗಾಗಲಿ, ಇಬ್ಬರಿಗೂ ಒಂದೇ ವಿಧವಾಗಿದ್ದರೂ, ತಮ್ಮ ತ್ರಿಕರಣಗಳನ್ನೂ ಆ ಶ್ರೀಹರಿಯಲ್ಲಿ ಅರ್ಪಿಸಿದವರ ಆಯುಸ್ಸು ಮಾತ್ರವೇ ಸಾರ್ಥಕವಾಗಿ ಕಳೆಯುತ್ತಿರುವುದು. ಇತರರ ಆಯುಸ್ಸು ವ್ಯರ್ಥವಾಗಿ ಕ್ಷಯಿಸುತ್ತಿರುವುದು. ಆದುದರಿಂದ ಎಲೈ ಮೈತ್ರೆಯ ಮುನೀಂದ್ರನೇ! ಹೀಗೆ ತಮ್ಮ ಆಯುಸ್ಸನ್ನು ವ್ಯರ್ಥವಾಗಿ ಕಳೆಯುತ್ತಿರುವ ವಿವೇಕಶೂನ್ಯರಿ ಗಾಗಿ ನಾನು ಬಹಳ ಕನಿಕರಪಡುತ್ತಿರುವೆನು. ಓ ಮಹಾತ್ಮಾ! ಭ್ರಮರ ಗಳು ಪುಷ್ಪಗಳಿಂದ ಮಕರಂದವನ್ನು ಸಂಗ್ರಹಿಸುವಂತೆ ಸಮಸ್ತದುಃಖನಿವಾ ರಕವಾಗಿಯೂ ಸುಖದಾಯಕವಾಗಿಯೂ ಇರುವ ವಿಷ್ಣುಚರಿತ್ರೆಗಳನ್ನು ನೀನು ಅಲ್ಲಲ್ಲಿಂದ ಸಂಗ್ರಹಿಸಿ ನನಗೆ ತಿಳಿಸಬೇಕು. ಲೋಕವನ್ನು ಸೃಷ್ಟಿಸು ವುದು, ರಕ್ಷಿಸುವುದು, ನಾಶಮಾಡುವುದು, ಈ ಮೂರು ಬಗೆಯ ಕಾರ್ಯ ಗಳನ್ನು ನಡೆಸುವುದಕ್ಕಾಗಿ, ಬ್ರಹ್ಮ ವಿಷ್ಣು ರುದ್ರರೆಂಬ ಮೂರು ರೂಪ ಗಳನ್ನು ಹೊಂದುವ ಪರಮಪುರುಷನು, ಈ ಲೋಕದಲ್ಲಿ ಬೇರೆ ಬೇರೆ ಅವತಾರಗಳನ್ನೆತ್ತಿ ಅತಿಮಾನುಷಕೃತ್ಯಗಳನ್ನು ನಡೆಸಿರುವನಷ್ಟೆ? ಅವೆಲ್ಲ ವನ್ನೂ ನನಗೆ ವಿವರಿಸಿ ನನ್ನ ಮನಸ್ಸನ್ನು ಸಂತೋಷಪಡಿಸಬೇಕು. ಆ ಅವತಾರಗಳಲ್ಲಿಯೂ ಮುಖ್ಯವಾಗಿ ಶ್ರೀಕೃಷ್ಣಾವತಾರದ ಚರಿತ್ರವನ್ನು ಸವಿಸ್ತರವಾಗಿ ತಿಳಿಸಬೇಕು" ಎಂದನು. ಈ ಪ್ರಕಾರವಾಗಿ ವಿದುರನಿಂದ ಪ್ರಶ್ನೆಮಾಡಲ್ಪಟ್ಟ ಪೂಜ್ಯನಾದ ಮೈತ್ರೇಯಮಹಾಮುನಿಯು, ಮನಸ್ಸಿನಲ್ಲಿ ಬಹಳ ಸಂತೋಷಿಸಿ, ಆ ವಿದುರನನ್ನು ಮನ್ನಿಸುತ್ತ, ಲೋಕಕ್ಷೇಮಾರ್ಥ ವಾಗಿ ಆ ವಿಷಯಗಳನ್ನು ತಿಳಿಯಲಾರಂಭಿಸಿದನು. "ಓ! ವಿದುರಾ! ಎಲೈ ಸಾಧುಶಿರೋಮಣೀ! ಲೋಕಾನುಗ್ರಹಾರ್ಥವಾಗಿ ನೀನು ಕೇಳಿದ ಈ ಪ್ರಶ್ನೆಯು ಸರ್ವೋತ್ತಮವಾದುದು. ನೀನು ಭಗವತ್ಕಥಾಶ್ರವಣದಲ್ಲಿ

ಇಷ್ಟೊಂದು ಶ್ರದ್ಧೆಯಿಟ್ಟು ಕೇಳುವುದರಿಂದ, ನನ್ನ ಮನಸ್ಸಿಗೂ ಅತ್ಯಾನಂದವುಂಟಾಗಿರುವುದು. ಇದೂ ಅಲ್ಲದೆ, ವ್ಯಾಸಮಹರ್ಷಿಯ ವೀರ್ಯದಿಂದ ಜನಿಸಿ, ಭಕ್ತೋತ್ತಮನೆನಿಸಿದ ನೀನು, ಭಗವತ್ಕಥೆಯನ್ನು ಕೇಳಬೇಕೆಂದು ಹೇಳುವುದೇನೋ ಅತಿಶಯವಲ್ಲ. ಓ! ವತ್ಸ ವಿದುರಾ! ಈ ವಿಧವಾದ ಭಗವತ್ಕಥಾ ಪ್ರಶ್ನೆಗಳಿಂದ ಉತ್ತಮವಾದ ಯಶಸ್ಸಿಗೆ ಭಾಗಿಯಾಗಿ, ಬೇರೊಂದರಲ್ಲಿ ಮನಸ್ಸಿಡದೆ, ಶ್ರೀಕೃಷ್ಣನೊಬ್ಬನಲ್ಲಿಯೇ ಅನುರಕ್ತನಾದ ನಿನ್ನನ್ನು ಸಾಮಾನ್ಯಮನುಷ್ಯನೆಂದು ಹೇಳಬಹುದೆ? ವ್ಯಾಸಮಹರ್ಷಿಗೆ ಆತನ ಸಹೋದರನ (ವಿಚಿತ್ರವೀರ್ಯನ) ಪತ್ನಿಯಾದ ಶೂದ್ರಸ್ತ್ರೀಯಲ್ಲಿ ಮಾಂಡವ್ಯನ ಶಾಪದಿಂದ ನೀನು ಜನಿಸಿದವನು. ಹಾಗಿದ್ದರೂ ತತ್ವವನ್ನು ವಿಚಾರಿಸಿದರೆ ನೀನು ಸಾಕ್ಷಾದ್ಯಮದೇವನಲ್ಲದೆ ಬೇರೆಯಲ್ಲ! ಮತ್ತು ನೀನು ಜ್ಞಾನಿಗಳಲ್ಲಿ ಮೇಲೆನಿಸಿದವನು! ಶ್ರೀಕೃಷ್ಣನ ಪರಮಾನುಗ್ರಹಕ್ಕೆ ಪಾತ್ರನಾದವನು! ವಿಷ್ಣುಭಕ್ತರಲ್ಲಿ ಮೇಲೆನಿಸಿಕೊಂಡವನು. ಎಲೈ! ಪುಣ್ಯಾತ್ಮನೆ! ಹಿಂದೆ ನಡೆದ ಒಂದಾನೊಂದು ವಿಚಿತ್ರವೃತ್ತಾಂತವನ್ನು ತಿಳಿಸುವೆನು ಕೇಳು. ಶ್ರೀಕೃಷ್ಣನು ಲೋಕವನ್ನು ಬಿಟ್ಟು ನಿಜಲೋಕಕ್ಕೆ ಹೋಗುವ ಕಾಲಕ್ಕೆ ಸರಿಯಾಗಿ, ದೈವಿಕವಾಗಿ ನಾನು ಆತನ ಸಮೀಪಕ್ಕೆ ಹೋದೆನು. ಆಗ ಆ ಭಗವಂತನು ನನ್ನನ್ನು ಸಮೀಪಕ್ಕೆ ಕರೆದು, ನನಗೆ ಜ್ಞಾನೋಪದೇಶವನ್ನು ಮಾಡಿ, ಆ ತತ್ವಜ್ಞಾನವನ್ನೇ ನಿನಗೂ ಉಪದೇಶಿಸಬೇಕೆಂದು ತಾನಾಗಿಯೇ ಆಜ್ಞೆಮಾಡಿರುವನು. ಇದನ್ನು ಯೋಚಿಸಿ ನೋಡಿದರೆ ಭಗವಂತನಿಗೆ ನಿನ್ನಲ್ಲಿರುವ ದಯಾರಸವನ್ನು ಇಷ್ಟೆಂದು ಹೇಳಿ ತೀರುವುದೇ? ಆದುದರಿಂದ ಆ ಭಗವದಾಜ್ಞಾನುಸಾರವಾಗಿಯೇ ನಿನಗೆ ಜ್ಞಾನೋಪದೇಶವನ್ನು ಮಾಡುವೆನು, ಕೇಳು! ಭಗವಂತನು ತನ್ನ ಯೋಗಮಾಯೆಯ ಬಲದಿಂದ ನಡೆಸುತ್ತಿರುವ ಸೃಷ್ಟಿಸ್ಥಿತಿಲಯಗಳನ್ನೂ, ಆತನ ಮಹತ್ತ್ವವನ್ನೂ ನಿನಗೆ ನಾನು ವಿವರವಾಗಿ ತಿಳಿಸುವೆನು. ಸಾವಧಾನಮನಸ್ಕನಾಗಿ ನೀನು ಕೇಳುತ್ತಿರಬೇಕು. ವಿದುರಾ! ಪೂರ್ವದಲ್ಲಿ ಚೇತನಾಚೇತನರೂಪವಾದ ಈ ಸಮಸ್ತಪ್ರಪಂಚವೂ, ಆ ಭಗವಂತನೊಬ್ಬನಿಗೇ ಶರೀರಭೂತವಾಗಿದ್ದಿತು. ಆ ಚಿದಚಿತ್ತುಗಳೆರಡಕ್ಕೂ ಸ್ಥೂಲಾವಸ್ಥೆಯೆಂದೂ, ಸೂಕ್ಷ್ಮಾವಸ್ಥೆಯೆಂದೂ ಎರಡವಸ್ಥೆಗಳುಂಟು. ಈ ಚಿದಚಿತ್ತುಗಳೆರಡೂ ನಾಮರೂಪವಿಭಾಗಗಳಿಂದ ಬೇರ್ಪಡಿಸಿ

ತಿಳಿಯುವುದಕ್ಕಾಗದ ಸ್ಥಿತಿಯಲ್ಲಿರುವುದೇ ಸೂಕ್ಷ್ಮಾವಸ್ಥೆಯೆಂದೂ, ಅವುಗಳೇ ನಾಮರೂಪಭೇದಗಳಿಂದ ಕೂಡಿದ ಸ್ಥಿತಿಗೆ ಮಾರ್ಪಡುವುದು ಸ್ಥೂಲಾವಸ್ಥೆಯೆಂದೂ ಹೇಳಲ್ಪಡುವುದು. ಆದುದರಿಂದ ಮೊದಲಿದ್ದ ಸೂಕ್ಷ್ಮಾವಸ್ಥೆಯೇ ಕಾರಣಾವಸ್ಥೆಯೆಂದೂ, ಈ ಸ್ಥೂಲಾವಸ್ಥೆಯೇ ಕಾರ್ಯಾವಸ್ಥೆಯೆಂದೂ ಸ್ಪಷ್ಟವಾಗುವುದು. ಭಗವಂತನಿಗೆ ಶರೀರಭೂತವಾಗಿದ್ದ ಚಿದಚಿತ್ತುಗಳೆರಡೂ ಕಾರ್ಯಾವಸ್ಥೆಯನ್ನು ಹೊಂದಿದಾಗಲೇ, ಬೇರೆ ಬೇರೆ ಹೆಸರಿನಿಂದಲೂ, ರೂಪದಿಂದಲೂ ಪ್ರತ್ಯೇಕಿಸಿ ತಿಳಿಯುವುದಕ್ಕೆ ಯೋಗ್ಯವಾದ ಈ ಪ್ರತ್ಯಕ್ಷಪ್ರಪಂಚವೆನಿಸುವುದು. ನಮ್ಮ ಕಣ್ಣಿಗೆ ಗೋಚರಿಸುತ್ತಿರುವ ಈ ಪ್ರಪಂಚವೆಲ್ಲವೂ ಸೃಷ್ಟಿಗೆ ಮೊದಲು, ಸಮಸ್ತ ಜೀವರಾಶಿಗಳಿಗೂ ಅಂತರ್ಯಾಮಿಯಾಗಿ ಅವುಗಳನ್ನು ಧರಿಸತಕ್ಕವನಾಗಿಯೂ, ಅವುಗಳಿಗೆ ನಿಯಾಮಕನಾಗಿಯೂ ನಾಮರೂಪವಿಭಾಗಗಳಿಲ್ಲದ ಆ ಸೂಕ್ಷ್ಮಚಿದಚಿತ್ತುಗಳನ್ನು ತನ್ನ ಶರೀರರೂಪದಿಂದ ಧರಿಸಿದ್ದವನಾಗಿಯೂ ಇರುವ ಆ ಭಗವಂತನ ಸ್ವರೂಪವೇ ಹೊರತು ಬೇರೆಯಲ್ಲ. ಆ ಭಗವಂತನೇ ತನಗೆ ಜಗತ್ಸೃಷ್ಟಿಯನ್ನು ಮಾಡಬೇಕೆಂಬ ಸಂಕಲ್ಪವು ಮನಸ್ಸಿನಲ್ಲಿ ಹುಟ್ಟಿದಾಗ, ಆ ನಾನಾಬಗೆಯ ಸ್ಥೂಲರೂಪಗಳನ್ನು ಉಡುಗಿಸಿ ಸೂಕ್ಷ್ಮಾವಸ್ಥೆಯನ್ನು ಹೊಂದಿದ ಅದೇ ಚಿದಚಿತ್ತುಗಳನ್ನು ತನಗೆ ಶರೀರರೂಪದಿಂದ ಹೊಂದಿ ಮೊದಲಿನಂತೆ ನಿಲ್ಲುವನು. ಆತನು ಜೀವನಂತೆ ಕರ್ಮಾಧೀನವಾಗಿ ಹೆಚ್ಚುಕಡಿಮೆಯಾಗುವ ಜ್ಞಾನವುಳ್ಳವನಲ್ಲ. ಆದುದರಿಂದಲೇ ಆತನು ಜ್ಞಾನಸ್ವರೂಪನೆನಿಸಿ, ಪ್ರಳಯದಶೆಯಲ್ಲಿಯೂ ಸಮಸ್ತಪದಾರ್ಥಗಳನ್ನೂ ಸ್ಪಷ್ಟವಾಗಿ ನೋಡಬಲ್ಲನು. ಆತನು ಸೃಷ್ಟಿಗೆ ಮೊದಲು ಸೂಕ್ಷ್ಮಾವಸ್ಥೆಯನ್ನು ಹೊಂದಿದ್ದ ಚಿದಚಿತ್ತುಗಳನ್ನು ತನಗೆ ಶರೀರವನ್ನಾಗಿ ಹೊಂದಿದ್ದು ತನ್ನನ್ನು ಬಿಟ್ಟು ಬೇರೆ ಕಾರ್ಯವಸ್ತುವೊಂದನ್ನೂ ಕಾಣಿಸದೆ, ವ್ಯವಹಾರಯೋಗ್ಯವಾದ ನಾಮರೂಪಗಳೊಂದೂ ಇಲ್ಲದವನಂತೆಯೇ ತನ್ನನ್ನು ತಿಳಿದಿದ್ದನು. ಆದರೆ ಆಗಲೂ ಅವನು ಸೂಕ್ಷ್ಮಾವಸ್ಥೆಯುಳ್ಳ ಆ ಚಿದಚಿದ್ವಸ್ತುಗಳನ್ನು ಸ್ಪಷ್ಟವಾಗಿ ಅರಿಯಬಲ್ಲವನಾಗಿದ್ದುದರಿಂದ, ತನಗೆ ಶರೀರಭೂತವಾಗಿದ್ದ ಆ ಸೂಕ್ಷ್ಮಚಿದಚಿತ್ತುಗಳ ವಿಷಯವಾದ ವಿಶೇಷ ಜ್ಞಾನವುಳ್ಳವನೆಂಬುದರಲ್ಲಿ ಸಂದೇಹವಿಲ್ಲ. ಆದುದರಿಂದ ಪ್ರಳಯಕಾಲದಲ್ಲಿ ತಾನೊಬ್ಬನೇ ಸರ್ವಜ್ಞತ್ವಾದಿ ಸಕಲಗುಣ ವಿಶಿಷ್ಟನಾಗಿ, ದೇವತೆ

ಗಳು, ಮನುಷ್ಯರು, ಮೃಗಗಳು ಎಂಬ ನಾಮರೂಪಭೇದಗಳೊಂದೂ ಇಲ್ಲ ದವನಾಗಿರುವನು. ಸರ್ವಜ್ಞನಾದ ಆ ಪರಮಾತ್ಮನಿಗೆ ಶಕ್ತಿರೂಪವಾಗಿ, ಅವನನ್ನು ಬಿಟ್ಟಗಲದೆ, ಅವನೊಡನೆ ಸೇರಿ ಏಕಾಕಾರದಿಂದಿದ್ದ ಮಾಯೆ ಯೆಂಬುದೇ ಈ ಪ್ರಕೃತಿಯು. ಅದೇ ಚೇತನಾಚೇತನಸ್ವರೂಪವಾಗಿರು ವುದು. ಹೀಗೆ ಚೇತನವೆಂದೂ, ಅಚೇತನವೆಂದೂ ಎರಡು ವಿಭಾಗವುಳ್ಳ ಪ್ರಕೃತಿರೂಪವಾದ ಈಶ್ವರನ ಶಕ್ತಿಗಳಲ್ಲಿ, ಚೇತನಶಕ್ತಿಯನ್ನು ಸತ್ತೆಂದೂ, ಅಚೇತನಶಕ್ತಿಯನ್ನು ಅಸತ್ತೆಂದೂ ಹೇಳುವರು! ಈ ಎರಡು ಬಗೆಯ ಪ್ರಕೃತಿಯಿಂದಲೇ ಪರಮಪುರುಷನು ಇದೋ! ಈಗ ನಮಗೆ ಗೋಚರಿಸು ತ್ತಿರುವ ಚೇತನಾಚೇತನ ಸ್ವರೂಪವಾದ ಜಗತ್ತೆಲ್ಲವನ್ನೂ ಸೃಷ್ಟಿಸಿರುವನು. ಈಶ್ವರನು ಈ ಪ್ರಪಂಚದಲ್ಲಿ ತಾನೂ ಅಂತರ್ಗತನಾಗಿದ್ದರೂ, ಅವುಗಳಿಗೆ ಸಂಭವಿಸುವ ವಿಕಾರಗಳಿಗಾಗಲಿ, ದೋಷಗಳಿಗಾಗಲಿ ತಾನು ಈಡಾಗದಂತಿ ರುವನು. ಹೀಗೆ ನಾಮರೂಪ ವಿಭಾಗಗಳಿಂದ ಕಾಣುವುದೇ ಜಗತ್ತಿಗೆ ಕಾರ್ಯಾವಸ್ಥೆಯೆನಿಸುವುದು, ಈ ವಿಧವಾದ ವಿಕಾರವೊಂದೂ ತೋರದೆ, ಆ ಪರಮಪುರುಷನಲ್ಲಿಯೇ ಮರೆಸಿಕೊಂಡು ಸೂಕ್ಷ್ಮದಶೆಯಲ್ಲಿರುವುದೇ ಕಾರಣಾವಸ್ಥೆಯೆನಿಸುವುದು. ಆದುದರಿಂದಲೇ ಈ ಕಾರ್ಯಕಾರಣಾವಸ್ಥೆ ಗಳೆರಡೂ ಕ್ರಮವಾಗಿ ಸ್ಥೂಲದಶೆಯೆಂದೂ, ಸೂಕ್ಷ್ಮದಶೆಯೆಂದೂ ಹೇಳಲ್ಪ ಡುವುವು. ಚೇತನಾಚೇತನಸ್ವರೂಪವಾದ ಮಾಯೆಯೆಂಬ ಈ ಪ್ರಕೃತಿಯು, ಮೊದಲು ಸರ್ವಾಂತರ್ಯಾಮಿಯಾದ ಪರಮಾತ್ಮನಿಗೆ ಶರೀರರೂಪವಾಗಿ ಸೂಕ್ಷ್ಮಾ ವಸ್ಥೆಯಲ್ಲಿಯೇ ಇದ್ದಿತು. ಯಾವುದೊಂದು ವಸ್ತುವು ಹುಟ್ಟಬೇಕಾಗಿದ್ದರೂ ಅದಕ್ಕೆ ನಿಮಿತ್ತಕಾರಣವೆಂದೂ, ಉಪಾದಾನಕಾರಣವೆಂದೂ, ಸಹಕಾರಿ ಕಾರಣವೆಂದೂ ಮೂರು ಬಗೆಯ ಕಾರಣಗಳುಂಟು. ಒಂದು ಗಡಿಗೆಯನ್ನು ನಿರ್ಮಿಸಬೇಕಾದರೆ, ಅದಕ್ಕೆ ಕುಂಬಾರನು ನಿಮಿತ್ತಕಾರಣನೆನಿಸುವನು. ಮಣ್ಣು ಉಪಾದಾನಕಾರಣವು. ಕುಂಬಾರ, ಚಕ್ರ, ದೊಣ್ಣೆ, ಮುಂತಾ ದುವು ಅದಕ್ಕೆ ಸಹಕಾರಿಕಾರಣಗಳೆನಿಸುವುವು. ಪ್ರಪಂಚಸೃಷ್ಟಿಗೂ ಹೀಗೆಯೇ ಮೂರು ಕಾರಣಗಳು ಬೇಕಲ್ಲವೇ? ಆದರೆ ಸೃಷ್ಟಿಗೆ ಮೊದಲು ಸೂಕ್ಷ್ಮ ಚಿದಚಿತ್ತುಗಳನ್ನು ಶರೀರವಾಗಿ ಹೊಂದಿದ್ದ ಪರಮಾತ್ಮನೊಬ್ಬನು ಹೊರತು ಬೇರೊಂದೂಲ್ಲ ಇದಿದ್ದುದರಿಂದ, ಈ ಪ್ರಪಂಚಸೃಷ್ಟಿಯಲ್ಲಿ ಮೂರು ಬಗೆಯ

ಕಾರಣಗಳೂ ಈಶ್ವರನೊಬ್ಬನೇ ಆಗಿರುವನು. ಒಬ್ಬನಿಗೇ ತ್ರಿವಿಧಕಾರಣತ್ವವು ಹೇಗೆಂಬುದನ್ನೂ ಹೇಳುವೆನು ಕೇಳು! ಭಗವಂತನು ಸೂಕ್ಷ್ಮದಶೆಯಲ್ಲಿ ಚೇತನಾಚೇತನಗಳನ್ನು ಶರೀರವಾಗಿ ಹೊಂದಿದ್ದ ತನ್ನ ಶರೀರವನ್ನೇ ಉಪಾದಾನಕಾರಣವನ್ನಾಗಿ ಇಟ್ಟುಕೊಳ್ಳುವನು. ತಾನೇ ನಿಮಿತ್ತಕಾರಣವಾಗಿದ್ದು ತನ್ನ ಸಂಕಲ್ಪವನ್ನೇ ಸಹಕಾರಿಕಾರಣವನ್ನಾಗಿ ಮಾಡುವನು. ಪರಮಪುರುಷನು ತಾನು ಯಾವ ಬಗೆಯ ವಿಕಾರವೂ ಇಲ್ಲದವನಾಗಿಯೇ ಇದ್ದು, ಕಾಲಕ್ಕೆ ತಕ್ಕ ಹಾಗೆ ವಿಕಾರಹೊಂದತಕ್ಕುದಾಗಿ, ಆಗಾಗ ಹೆಚ್ಚಿ ತಗ್ಗುತ್ತಿರುವ ಸತ್ವರಜಸ್ತಮೋಗುಣಗಳಿಂದ ಕೂಡಿದುದಾಗಿದ್ದ ಮಾಯೆಯೆಂಬ ಪ್ರಕೃತಿಯಲ್ಲಿ, ತನಗೆ ಶರೀರವಾದ ಜೀವನನ್ನು ಒಳಹುಗಿಸಿ, ಆ ಪ್ರಕೃತಿಗೆ ಸೃಷ್ಟಿಸಾಮರ್ಥ್ಯವನ್ನುಂಟುಮಾಡಿದನು. ಈ ವಿಧವಾಗಿ ಪರಮಪುರುಷನು ಜೀವವಿಶಿಷ್ಟವಾದ ಪ್ರಕೃತಿಗೆ ಸೃಷ್ಟಿಸಾಮರ್ಥ್ಯವನ್ನುಂಟುಮಾಡಿದ ಮೇಲೆಯೇ, ಆ ಪ್ರಕೃತಿಯು, ಮಹತ್ತು ಮೊದಲಾದ ತತ್ವಗಳಾಗಿ ಪರಿಣಮಿಸಬೇಕೇ ಹೊರತು ಅದಕ್ಕೆ ತನಗೆ ತಾನೇ ಸೃಷ್ಟಿಸಾಮರ್ಥ್ಯವಿಲ್ಲ. ಆದುದರಿಂದ ಪರಮಪುರುಷನು ಮೊದಲು ಜೀವದ ಮೂಲಕವಾಗಿ ಪ್ರಕೃತಿಗೆ ಸೃಷ್ಟಿಸಾಮರ್ಥ್ಯವನ್ನುಂಟುಮಾಡಿದನು. ಈ ಸೃಷ್ಟಿಸಾಮರ್ಥ್ಯವನ್ನು ಹೊಂದಿ, ಕಾಲದಿಂದ ವಿಕಾರಹೊಂದತಕ್ಕುದಾಗಿ, ತನಗೆ ಶರೀರವಾಗಿಯೂ ಇದ್ದ ಆ ಸೂಕ್ಷ್ಮಪ್ರಕೃತಿಯಲ್ಲಿ ಭಗವಂತನು ಜೀವಶರೀರಕನಾಗಿ ತಾನೇ ಪ್ರವೇಶಿಸಿ, ತಮಃಪ್ರಧಾನವಾಗಿ ಅವ್ಯಕ್ತವೆನಿಸಿದ ಆ ಸೂಕ್ಷ್ಮಪ್ರಕೃತಿಯನ್ನು ಸೃಷ್ಟಿಕಾರ್ಯಕ್ಕೆ ಪ್ರೇರಿಸುತ್ತ, ಅದರೊಡನೆ ಸೇರಿದ ತಾನೇ ಮಹತ್ತತ್ವರೂಪವಾಗಿ ಕಾಣಿಸಿಕೊಂಡನು. ಎಂದರೆ, ಪ್ರಕೃತಿಪುರುಷನನ್ನು ಶರೀರವಾಗಿ ಉಳ್ಳ ಭಗವಂತನೇ ಸೂಕ್ಷ್ಮಪ್ರಕೃತಿಯಿಂದ ಮಹತ್ತತ್ವವನ್ನುಂಟುಮಾಡಿ, ತಾನೂ ಅದರಲ್ಲಿ ಪ್ರವೇಶಿಸಿ, ಅದನ್ನು ತನಗೆ ಶರೀರವನ್ನಾಗಿ ಹೊಂದಿ ನಿಂತನು. ಹೀಗೆ ಜೀವಾಂಶದಿಂದಲೂ, ಸತ್ವಾದಿಗುಣಗಳಿಂದಲೂ ಕೂಡಿ, ಕಾಲವಶವಾಗಿ, ಭಗವಂತನ ಸಂಕಲ್ಪಕ್ಕೆ ಒಳಪಟ್ಟು, ಭಗವಂತನನ್ನು ಅಂತರಾತ್ಮನನ್ನಾಗಿ ಹೊಂದಿದ ಆ ಮಹತ್ತತ್ವವೇ ಪ್ರಪಂಚಸೃಷ್ಟಿಗೆ ತಕ್ಕಂತೆ ರೂಪಾಂತರವನ್ನು ಹೊಂದಿತು. ಹೀಗೆ ರೂಪಾಂತರವನ್ನು ಹೊಂದಿದ ಮಹತ್ತತ್ವದಿಂದ ಶರೀರೇಂದ್ರಿಯಗಳಿಗೆ ಕರ್ತೃರೂಪವಾಗಿ, ಭೂತೇಂದ್ರಿಯಾದಿ ರೂಪಗ

ಳಿಂದ ಪರಿಣಮಿಸುವ ಸ್ವಭಾವವುಳ್ಳ ಅಹಂಕಾರವೆಂಬ ತತ್ವವು ಹುಟ್ಟಿತು. ಈ ಅಹಂಕಾರವು ಸಾತ್ವಿಕವೆಂದೂ, ರಾಜಸವೆಂದೂ, ತಾಮಸವೆಂದೂ ಮೂರು ವಿಧವಾಯಿತು. (ಇವುಗಳಲ್ಲಿ ಸಾತ್ವಿಕಾಹಂಕಾರವು ವೈಕಾರಿಕವೆಂದೂ, ರಾಜಸಾಹಂಕಾರವು ತೈಜಸವೆಂದೂ, ತಾಮಸಾಹಂಕಾರವು ಭೂತಾದಿಯೆಂದೂ ಕರೆಯಲ್ಪಡುವುದು.) ಮೇಲೆ ಹೇಳಿದ ಸಾತ್ವಿಕಾಹಂಕಾರವೇ ವಿಕಾರವನ್ನು ಹೊಂದುತ್ತ ಬಂದು, ಅದರಿಂದ ಮನಸ್ಸೆಂಬ ತತ್ವವು ಹುಟ್ಟಿತು. ಮತ್ತು ದಿಕ್ಕು ಮೊದಲಾದ ದೇವತೆಗಳಿಂದ ಅಧಿಷ್ಠಿತವಾಗಿ, ಅವರಿಂದ ಅಭಿಮಾನಿಸಲ್ಪಡುವ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆಲ್ಲವೂ, ಈ ಸಾತ್ವಿಕಾಹಂಕಾರದಿಂದಲೇ ಹುಟ್ಟಿರುವುವು. ಆ ಇಂದ್ರಿಯಗಳಿಂದಲೇ ರೂಪ, ರಸ, ಗಂಧ, ಸ್ಪರ್ಶ, ಶಬ್ದಗಳೆಂಬ ವಿಷಯಗಳೆಲ್ಲವೂ ತೋರುವುವು. ಹೀಗೆ ಶಬ್ದಾದಿ ವಿಷಯಗಳನ್ನು ತೋರ್ಪಡಿಸತಕ್ಕ ಇಂದ್ರಿಯಗಳೆಲ್ಲವೂ ವೈಕಾರಿಕವೆಂಬ ಹೆಸರುಳ್ಳ ಸಾತ್ವಿಕಾಹಂಕಾರದಿಂದಲೇ ಹುಟ್ಟಿರುವುದರಿಂದ, ಅವುಗಳೂ ವೈಕಾರಿಕಗಳೆಂದು ಕರೆಯಲ್ಪಡುವುವು. ಈ ಇಂದ್ರಿಯಗಳು ಜ್ಞಾನೇಂದ್ರಿಯಗಳೆಂದೂ, ಕರ್ಮೇಂದ್ರಿಯಗಳೆಂದೂ ಎರಡು ಬಗೆಯಾಗಿರುವುವು. ಈ ಇಂದ್ರಿಯಗಳೆಲ್ಲವೂ ರಾಜಸಾಹಂಕಾರದಿಂದ ಸಹಕರಿಸಲ್ಪಟ್ಟ ಸಾತ್ವಿಕಾಹಂಕಾರದಿಂದ ಹುಟ್ಟಿದವುಗಳಾಗಿರುವುದರಿಂದ ತೈಜಸಗಳೆಂದು ಕರೆಯಲ್ಪಡುವುವು. ರಾಜಸಾಹಂಕಾರವೆಂಬುದು, ಸಾತ್ವಿಕತಾಮಸಾಹಂಕಾರಗಳೆರಡಕ್ಕೂ ಸಹಾಯಮಾಡತಕ್ಕ ಸ್ವಭಾವವುಳ್ಳುವುದೇ ಹೊರತು, ಅದು ಸ್ವತಂತ್ರವಾಗಿ ಯಾವ ಕಾರ್ಯವನ್ನೂ ನಡೆಸತಕ್ಕುದಲ್ಲ. ತಾಮಸಾಹಂಕಾರವೆಂಬುದು, ಪೃಥಿವಿ, ಅಪ್ಪು, ತೇಜಸ್ಸು, ಆಕಾಶ, ವಾಯುವೆಂಬ ಐದು ಭೂತಗಳಿಗೂ, ಗಂಧವೇ ಮೊದಲಾದ ಐದು ಭೂತಸೂಕ್ಷ್ಮಗಳಿಗೂ ಕಾರಣವಾಗಿರುವುದು. ಆದುದರಿಂದ ಭೂತಾದಿಯೆನಿಸಿಕೊಳ್ಳುವ ಆ ತಾಮಸಾಹಂಕಾರದಿಂದ, ಮೊದಲು ಆತ್ಮಸ್ವರೂಪವನ್ನು ತಿಳಿಸತಕ್ಕ ಶಬ್ದವೂ, ಅದರಿಂದ ಆಕಾಶವೂ ಹುಟ್ಟಿತು. ಕಾಲದಿಂದ ಪ್ರೇರಿತನಾಗಿ, ಸತ್ವಾದಿಗುಣದಿಂದ ಕೂಡಿ, ಜೀವಾಂಶಯುಕ್ತವಾಗಿದ್ದ ಆ ಆಕಾಶವು ವಿಕಾರಹೊಂದುತ್ತ ಬಂದು, ಆದರಿಂದ ಸ್ಪರ್ಶತನ್ಮಾತ್ರವು ಹುಟ್ಟಿತು. ಈ ಸ್ಪರ್ಶತನ್ಮಾತ್ರದಿಂದ ವಾಯುವೆಂಬ ಭೂತವು ಹುಟ್ಟಿತು. ಈ ವಾಯುವು ವಿಕಾರವನ್ನು ಹೊಂದುತ್ತ

ಆಕಾಶಗುಣವಾದ ಶಬ್ದದಿಂದಲೂ ಸೇರಿ, ಪ್ರಾಣ, ತೇಜಸ್ಸು, ಸಹಸ್ಸು, ಎಂಬ ಮೂರು ಬಗೆಯ ಸಾಮರ್ಥ್ಯದಿಂದ ಹೆಚ್ಚು ಬಲವುಳ್ಳುದಾಗಿ, ರೂಪ ತನ್ಮಾತ್ರವನ್ನು ಹುಟ್ಟಿಸಿತು. ಆ ರೂಪತನ್ಮಾತ್ರವೇ ಲೋಕಕ್ಕೆ ಪ್ರಕಾಶ ವನ್ನು ಕೊಡುವ ತೇಜಸ್ಸನ್ನು ಹುಟ್ಟಿಸಿತು. ಆ ತೇಜಸ್ಸೆಂಬುದು ಹಿಂದೆ ಹೇಳಿದ ಆಕಾಶವಾಯು ಗುಣಗಳಾದ ಶಬ್ದಸ್ಪರ್ಶಗಳೊಡನೆಯೂ, ತನ್ನ ಗುಣಗಳಾದ ರೂಪದೊಡನೆಯೂ ಸೇರಿ, ಭಗವಂತನ ಸಂಕಲ್ಪದಿಂದ ಪ್ರೇರಿತೆ ನಾಗಿ, ಕಾಲ, ಗುಣ, ಜೀವಾಂಶಗಳೊಡಗೂಡಿ, ರಸವೆಂಬ ತನ್ಮಾತ್ರವನ್ನು ಹುಟ್ಟಿಸಿತು. ಅದರಿಂದ ಜಲವೆಂಬ ಭೂತವು ಹುಟ್ಟಿತು. ಹಾಗೆಯೇ ಶಬ್ದ, ಸ್ಪರ್ಶ, ರಸ, ಗುಣಗಳಿಂದ ಕೂಡಿದ ಜಲವು, ಭಗವಂತನ ಸಂಕಲ್ಪಕ್ಕೆ ವಿಷಯವಾಗಿ, ಕಾಲಗುಣಾದಿಗಳ ಸಂಬಂಧದಿಂದ ವಿಕಾರವನ್ನು ಹೊಂದುತ್ತ, ಗಂಧತನ್ಮಾತ್ರವನ್ನು ಹುಟ್ಟಿಸಿತು. ಗಂಧತನ್ಮಾತ್ರದಿಂದ ಭೂಮಿಯು ಹುಟ್ಟಿತು. ಓ ವಿದುರಾ! ಹೀಗೆ ಹುಟ್ಟಿದ ಆಕಾಶಾದಿ ಭೂತಗಳಲ್ಲಿ ಶಬ್ದ ಮೊದಲಾದ ಗುಣಗಳು ಏಕೋತ್ತರವೃದ್ಧಿಗಿಯಾಯೇ ಸೇರಿರುವುವೆಂದು ತಿಳಿ! ಏಕೆಂದರೆ, ಮೇಲೆ ಮೇಲೆ ಹುಟ್ಟಿದ ಭೂತಗಳೆಲ್ಲವೂ ತನಗೆ ಕಾರಣಭೂತ ಗಳಾದ ಹಿಂದಿನ ಭೂತದ ಗುಣಗಳೊಡನೆ ಕಲೆತೇ ಇರಬೇಕಾದುದರಿಂದ, ಮುಂದೆ ಮುಂದೆ ಹುಟ್ಟತಕ್ಕ ಭೂತಗಳಲ್ಲಿ ಗುಣಗಳು ಹೆಚ್ಚುತ್ತ ಬರುವುವು. (ಎಂದರೆ, ಮೊದಲನೆಯ ಭೂತವಾದ ಆಕಾಶದಲ್ಲಿ ಶಬ್ದವೆಂಬುದೊಂದೇ ಗುಣವು. ಎರಡನೆಯ ಭೂತವಾದ ವಾಯುವಿನಲ್ಲಿ ಶಬ್ದಸ್ಪರ್ಶಗಳೆರಡೂ ಸೇರುವುವು. ಅದರಿಂದ ಹುಟ್ಟುವ ತೇಜಸ್ಸೆಂಬ ಮೂರನೆಯ ಭೂತದಲ್ಲಿ ಹಿಂದಿನ ಎರಡು ಭೂತಗುಣಗಳೊಡನೆ ರೂಪವೆಂಬ ಮೂರನೆಯ ಗುಣ ವೊಂದೂ ಸೇರುವುದು. ಹಾಗೆಯೇ ನಾಲ್ಕನೆಯ ಭೂತವಾದ ಜಲದಲ್ಲಿ ಹಿಂದಿನ ಮೂರು ಭೂತಗುಣಗಳೊಡನೆ ರಸವೆಂಬ ಬೇರೊಂದು ಗುಣವೂ, ಐದನೆಯ ಭೂತವಾದ ಭೂಮಿಯಲ್ಲಿ ಹಿಂದಿನ ನಾಲ್ಕು ಗುಣಗಳೊಡನೆ ಗಂಧ ವೆಂಬ ಮತ್ತೊಂದು ಹೊಸ ಗುಣವೂ ಸೇರುವುದರಿಂದ, ಈ ಪಂಚಭೂತಗ ಳಿಗೂ ಉತ್ಪತ್ತಿಕ್ರಮವನ್ನನುಸರಿಸಿ ಒಂದೊಂದು ಗುಣವು ಹೆಚ್ಚುತ್ತ ಬರು ವುದು.) ಎಲೈ ಮಹಾತ್ಮನೇ! ಹೀಗೆ ಕಾಲ ಪ್ರಕೃತಿ ಜೀವಾಂಶಗಳಿಂದ ಕೂಡಿ, ವಿಷ್ಣುವಿಗೆ ಶರೀರಭೂತಗಳೆನಿಸಿಕೊಂಡ, ಈ ಮಹತ್ತು ಮೊದಲಾದ

ತತ್ವಗಳೆಲ್ಲವೂ ತಮ್ಮೊಳಗೆ ಪರಸ್ಪರ ಸಂಬಂಧವಿಲ್ಲದೆ ಬೇರೆ ಬೇರೆಯಾಗಿದ್ದಾಗ, ಮುಂದೆ ನಡೆಯಬೇಕಾದ ಬ್ರಹ್ಮಾಂಡಸೃಷ್ಟಿಗೆ ಅಶಕ್ತಗಳಾಗಿದ್ದುದರಿಂದ, ತದಭಿಮಾನದೇವತೆಗಳೆಲ್ಲರೂ, ಪರಮಾತ್ಮನ ಮುಂದೆ ಕೈಜೋಡಿಸಿ ಹೀಗೆಂದು ಸ್ತೋತ್ರಮಾಡಲಾರಂಭಿಸಿದರು. "ಎಲೈ ಭಗವಂತನೆ! ನಿನ್ನ ಪಾದಪದ್ಮಗಳಿಗೆ ನಮಸ್ಕರಿಸುವೆವು. ಎಲೈ ದೇವನೇ! ನಿನ್ನ ಪಾದಪದ್ಮಗಳು ಮರೆಹೊಕ್ಕವರಿಗೆ ಸಮಸ್ತತಾಪಗಳನ್ನೂ ನೀಗಿಸಿ, ರಕ್ಷಿಸತಕ್ಕ ಛತ್ರಗಳಂತಿರುವುವು. ನಿನ್ನ ಪಾದಾಶ್ರಯದಿಂದಲ್ಲವೇ ಯೋಗೀಶ್ವರರೆಲ್ಲರೂ ಭಯಂಕರವಾದ ಸಂಸಾರ ದುಃಖವನ್ನು ತೊಲಗಿಸಿಕೊಳ್ಳುವರು. ನಿನ್ನ ಪಾದಸೇವೆಯನ್ನು ಮಾಡದ ಮೇಲೆ ತಾಪತ್ರಯದಿಂದ ಪೀಡಿತಗಳಾದ ಜೀವಗಳಿಗೆ ಎಷ್ಟುಮಾತ್ರವೂ ಸುಖವೆಲ್ಲಿ? ಅಂತವರಿಗೆ ತಾಪತ್ರಯ ನಿವೃತ್ತಿಗಾದರೂ ಅವಕಾಶವೆಲ್ಲಿ? ನಿನ್ನ ಪಾದಾಶ್ರಯದಿಂದಲೇ ನಾವೆಲ್ಲರೂ ಮುಕ್ತಿಯನ್ನು ಹೊಂದಬೇಕು. ಓ ಈಶ್ವರಾ! ಈ ನಿನ್ನ ಪಾದಗಳಲ್ಲವೇ ನದಿಗಳೊಳಗೆಲ್ಲಾ ಉತ್ತಮವೆನಿಸಿದ ಗಂಗಾನದಿಗೂ ಉತ್ಪತ್ತಿಸ್ಥಾನವಾಗಿರುವುದು. ನಿನ್ನ ಪಾದಾನುಗ್ರಹದಿಂದ ಹುಟ್ಟಿದ ಆ ಗಂಗಾನದಿಯೇ ಸಮಸ್ತಪಾಪನಿವಾರಕವೆನಿಸಿಕೊಂಡಿರುವಾಗ, ಆ ಪುಣ್ಯನದಿಗೂ ಉತ್ಪತ್ತಿಸ್ಥಾನವಾದ ನಿನ್ನ ಪಾದಾರವಿಂದಗಳು ಪಾಪನಿವಾರಕವೆಂಬ ವಿಷಯವನ್ನು ಹೇಳಬೇಕೇ? ಓ ಮಹಾತ್ಮನೇ! ಹಕ್ಕಿಗಳು ಗೂಡಿನಲ್ಲಿ ಹುಟ್ಟಿ, ರೆಕ್ಕೆಗಳು ಬಂದಮೇಲೆ ಅಲ್ಲಿಂದ ಹೊರಟು, ನಾನಾಕಡೆಗಳಲ್ಲಿ ಸುತ್ತಿ ಬಂದು, ತಿರುಗಿ ತಮ್ಮ ಗೂಡುಗಳಲ್ಲಿಯೇ ಪ್ರವೇಶಿಸುವಂತೆ, ನಿನ್ನ ಮುಖಕಮಲದಿಂದ ಹುಟ್ಟಿದ ವೇದಗಳು, ಸಮಸ್ತ ಲೋಕವನ್ನೂ ವ್ಯಾಪಿಸಿ, ತಿರುಗಿ ನಿನ್ನಲ್ಲಿಯೇ ಪರ್ಯವಸಾನಹೊಂದುತ್ತಿರುವುವು. ನಿನ್ನ ಮುಖಾರವಿಂದದಿಂದ ಹೊರಟ ಆ ವೇದಗಳನ್ನೇ ಅವಲಂಬನೆಗಾಗಿ ಹಿಡಿದ ಯತೀಶ್ವರರೆಲ್ಲರೂ, ಶುದ್ಧವಾದ ಮನಸ್ಸಿನಿಂದ ಯಾವ ನಿನ್ನ ಪಾದಗಳನ್ನು ಧ್ಯಾನಿಸುತ್ತಿರುವರೋ, ಅಂತಹ ನಿನ್ನ ಮಹಾಮಹಿಮೆಯನ್ನು ವರ್ಣಿಸುವುದಕ್ಕೆ ಯಾರಿಗೆ ತಾನೆ ಸಾಧ್ಯವು? ಓ ದೇವದೇವಾ! ಇದೋ ನಿನ್ನ ಪಾದಗಳಲ್ಲಿ ಮರೆಹೊಕ್ಕಿರುವೆವು. ನಮ್ಮನ್ನು ರಕ್ಷಿಸು! ಆಸ್ತಿಕ್ಯಬುದ್ಧಿಯಿಂದಲೂ, ವೇದಗಳಲ್ಲಿ ವಿಧಿಸಲ್ಪಟ್ಟ ಕರ್ಮಯೋಗದಿಂದ ಸಹಕೃತವಾದ ಭಕ್ತಿಯೋಗದಿಂದಲೂ, ವೈರಾಗ್ಯಬಲದಿಂದ ಕೂಡಿದ ಜ್ಞಾನ



೧೮. ಕ್ಷೀರಸಮುದ್ರಶಾಯಿಯಾದ ಮಹಾವಿಷ್ಣುವನ್ನು ಬ್ರಹ್ಮನು ಸ್ತೋತ್ರಮಾಡಿದುದು

ಯೋಗದಿಂದಲೂ ಪರಿಪಕ್ವವಾದ ಮನಸ್ಸುಳ್ಳ ಪಂಡಿತರು ಯಾವ ನಿನ್ನ ಪಾದಪದ್ಮದಲ್ಲಿ ತಮ್ಮ ಮನಸ್ಸನ್ನು ನೆಲೆಗೊಳಿಸಿ, ಅನವರತವೂ ಧ್ಯಾನಿಸುತ್ತಿರುವರೋ, ಆ ನಿನ್ನ ಪಾದಗಳನ್ನು ನಂಬಿದ ನಮ್ಮನ್ನು ಅನುಗ್ರಹಿಸಬೇಕು. ಓ ಜಗನ್ನಾಯಕಾ! ಈ ನಿನ್ನ ಪಾದಕಮಲಗಳು ತನ್ನನ್ನು ನಂಬಿದ ಭಕ್ತರಿಗೆ ಸಂಸಾರಭಯನಿವಾರಕವಾಗಿಯೂ, ವಿರಕ್ತಿಕಾರಣವಾಗಿಯೂ ಇರುವ ಜ್ಞಾನಯೋಗವನ್ನು ತಾವಾಗಿಯೇ ಹುಟ್ಟಿಸುವುವು. ಅಂತಹ ನಿನ್ನ ಪಾದಗಳನ್ನು ನಂಬಿದ ನಮ್ಮೆಲ್ಲರನ್ನೂ ರಕ್ಷಿಸಬೇಕು! ಹೇ ದೇವಾ! ಲೋಕದ ಸೃಷ್ಟಿಸ್ಥಿತಿಲಯಗಳೆಂಬ ಕಾರ್ಯಗಳನ್ನು ನಡೆಸುವುದಕ್ಕಾಗಿ, ಬ್ರಹ್ಮರುದ್ರಾದಿ ಶರೀರಗಳಲ್ಲಿ ಪ್ರವೇಶಮಾಡಿ, ಆಯಾ ಕಾರ್ಯಗಳಿಗೆ ತಕ್ಕಂತೆ ಅನೇಕಾವತಾರಗಳನ್ನೂ ಧರಿಸಿರುವ ನಿನ್ನ ಪಾದಗಳನ್ನು ನಂಬಿ ಮರೆಹೊಕ್ಕಿರುವ ನಮ್ಮನ್ನು ಕಾಪಾಡಬೇಕು. ಮತ್ತು ಓ ದೇವಾ! ಸಂಸಾರಕೂಪದಲ್ಲಿ ಬಿದ್ದು, ಮನೆಮಂದಿಮಕ್ಕಳೆಂಬ ಬಲೆಯಲ್ಲಿ ಸಿಕ್ಕಿ, "ನಾನು, ನನ್ನದು" ಎಂಬ ಅಹಂಕಾರ, ಮಮಕಾರಗಳಿಂದ ಬೀಗಿ ಬೆರೆಯುತ್ತಿರುವ ಮನುಷ್ಯನ ಹೃದಯದಲ್ಲಿ, ನೀನು ಅಂತರ್ಯಾಮಿಯಾಗಿರುವಾಗಲೂ, ಅವರಿಗೆ ನಿನ್ನ ಪಾದಾರವಿಂದಗಳು ಬಹುದೂರವಾಗಿರುವುವು. ಅಂತವರು ಎಷ್ಟೆಷ್ಟು ಪ್ರಯತ್ನಪಟ್ಟರೂ ಅದನ್ನು ಕಾಣಲಾರರು. ಇಂತಹ ಆಶ್ಚರ್ಯ ಮಹಿಮೆಯುಳ್ಳ ನಿನ್ನಲ್ಲಿ ನಾವೆಲ್ಲರೂ ಶರಣುಹೊಂದುವೆವು. ಎಲೈ ಪುಣ್ಯಶ್ಲೋಕನೇ! ಇಂದ್ರಿಯ ವ್ಯಾಪಾರಗಳಿಗೆ ಪರವಶವಾದ ಮನಸ್ಸುಳ್ಳ ಮೂಢಜನರು ಮಾತ್ರ ನಿನ್ನ ಪಾದಪದ್ಮಗಳನ್ನು ಕಾಣಲಾರರೇ ಹೊರತು, ಅವುಗಳಲ್ಲಿ ಆತ್ಮಸಮರ್ಪಣವನ್ನು ಮಾಡಿ, ಅದರಿಂದ ಶಮದಮಾದಿಗುಣಗಳನ್ನು ಪಡೆದ ಕೆಲವು ಮಹಾತ್ಮರು ಅವುಗಳನ್ನು ಕಾಣುವರೆಂಬುದರಲ್ಲಿ ಸಂದೇಹವಿಲ್ಲ. (ನಿನ್ನ ಪಾದಗಳಲ್ಲಿ ಆತ್ಮಸಮರ್ಪಣವನ್ನು ಮಾಡಿ, ಅದರಿಂದ ಶಮದಮಾದಿಗುಣಗಳನ್ನು ಪಡೆದ ಮಹಾತ್ಮರು, ಇಂದ್ರಿಯವಶರಾಗಿ ನಿನ್ನಲ್ಲಿ ವಿಮುಖರಾದ ಮೂಢಾತ್ಮರನ್ನು ಕಣ್ಣೆತ್ತಿಯೂ ನೋಡಲಾರರು.) ಎಲೈ ಸರ್ವೇಶ್ವರನೇ! ನಿನ್ನ ಕಥಾಮೃತವನ್ನು ಎಡೆಬಿಡದೆ ಪಾನಮಾಡುತ್ತ, ಅದರಿಂದುಂಟಾದ ಸೌಖ್ಯದಿಂದ ತಮ್ಮ ಸಮಸ್ತ ತಾಪವನ್ನೂ ನೀಗಿದ ಕೆಲವು ಪುಣ್ಯಾತ್ಮರು, ಪರಮಪೂಜ್ಯವಾಗಿಯೂ, ಕಾಲದೋಷಗಳಿಗೆ ಈಡಾಗದೆಯೂ

ಇರುವ ವೈಕುಂಠಲೋಕವನ್ನು ಅನಾಯಾಸವಾಗಿಯೇ ಸೇರುವರು! ಧೀರ ರಾದ ಮತ್ತೆ ಕೆಲವರು ವಿಷಯಾಭಿಲಾಷೆಯಲ್ಲಿ ಮನಸ್ಸನ್ನು ಹೋಗಗೊಳಿ ಸದೆ, ಯೋಗಬಲದಿಂದ ಇಂದ್ರಿಯಗಳನ್ನು ತಡೆದು, ಆ ಮನಸ್ಸನ್ನು ನಿನ್ನಲ್ಲಿಯೇ ದೃಢವಾಗಿ ನೆಲೆಗೊಳಿಸಿ, ಆ ಯೋಗದ ಮಹಿಮೆಯಿಂದ ದುಸ್ತರವಾದ ಮಾಯೆಯನ್ನು ದಾಟಿ, ನಿನ್ನ ಪಾದವನ್ನು ಸೇರುವುದುಂಟು. ಆದರೇನು! ಇಂತವರಿಗೂ ಕಷ್ಟವೆಂಬುದು ತಪ್ಪಿದುದಲ್ಲ. ಈ ವಿಧವಾಗಿ ಅಷ್ಟಾಂಗಯೋಗಮಾರ್ಗದಿಂದ ಭಕ್ತಿಯೋಗದಲ್ಲಿಳಿಯುವವರಿಗೆ, ಯಮ, ನಿಯಮ ಮೊದಲಾದ ಒಂದೊಂದು ಯೋಗಾಂಗವನ್ನು ಸಾಧಿಸಿಕೊಂಡು ಬರುವುದರಲ್ಲಿಯೇ ಬಹಳ ಕಷ್ಟವಿರುವುದಲ್ಲದೆ, ಅವುಗಳಲ್ಲಿ ಯಾವುದಾದರೂ ಒಂದು ತಪ್ಪಿಹೋದರೂ, ಅವರು ಸಿದ್ಧಿಯನ್ನು ಪಡೆಯಲಾರರು. ಹೀಗೆ ಪ್ರಯತ್ನಪಟ್ಟು ಭಕ್ತಿಯೋಗವನ್ನು ಸಾಧಿಸುವುದೂ ಬಹಳ ಶ್ರಮಕಾರಣವು. ನಿನ್ನ ಕಥಾಶ್ರವಣ ಪೂರ್ವಕವಾಗಿ ನಿನ್ನಲ್ಲಿ ಭಕ್ತಿಯನ್ನು ಸಂಪಾದಿಸಿದವರಿ ಗಾದರೋ, ಈ ವಿಧವಾದ ದುಃಖವೊಂದೂ ಇರುವುದಿಲ್ಲ. ಯೋಗಾಭ್ಯಾಸದ ಪ್ರಯಾಸವೂ ಇರುವುದಿಲ್ಲ. ನಿನ್ನ ಕಥಾಮೃತವನ್ನು ಪಾನ ಮಾಡಿ ಅದ ರಿಂದ ಭಕ್ತಿಯನ್ನು ಪಡೆದವರಿಗೆ ವಿವೇಕಾದಿ ಸದ್ಗುಣಗಳೆಲ್ಲವೂ ತಾನಾಗಿಯೇ ಬಂದೊದಗುವುವು. ಓ ಪರಮಾತ್ಮಾ! ಪ್ರಕೃತದಲ್ಲಿ ನೀನು ಲೋಕಸೃಷ್ಟಿ ಗಾಗಿಯೇ ಸತ್ವಾದಿ ತ್ರಿಗುಣಗಳಿಂದ ನಮ್ಮನ್ನು ಮೊದಲು ಸೃಷ್ಟಿಸಿರುವೆ ಯಷ್ಟೆ? ಆದರೆ ನಮ್ಮಲ್ಲಿ ಒಬ್ಬರಿಗೊಬ್ಬರಿಗೆ ಪರಸ್ಪರ ಸಮಾಗಮವಿಲ್ಲದೆ, ನಾವೆಲ್ಲರೂ ಮುಂದಿನ ಬ್ರಹ್ಮಾಂಡ ರಚನೆಯ ವಿಷಯದಲ್ಲಿ ಅಶಕ್ತರಾಗಿರು ವೆವು. ನಮ್ಮ ಉತ್ಪತ್ತಿಕಾರಣನಾದ ನಿನಗೆ, ಬ್ರಹ್ಮಾಂಡ ನಿರ್ಮಾಣದ ವಿಷಯದಲ್ಲಿ ನಾವು ಪ್ರತ್ಯುಪಕಾರವನ್ನು ಅತ್ಯವಶ್ಯವಾಗಿ ಮಾಡಬೇಕಾಗಿ ದ್ದರೂ ಆ ವಿಷಯದಲ್ಲಿ ನಮಗೆ ಶಕ್ತಿಯಿಲ್ಲದಿರುವುದು. ಓ! ದೇವದೇವಾ! ನಿನ್ನ ಕ್ರೀಡಾಸಾಮಗ್ರಿಗಳಂತಿರುವ ನಾವು ಆಯಾ ಕಾಲಗಳಲ್ಲಿ ನಿನ್ನನ್ನು ಯಥೋಚಿತವಾಗಿ ಆರಾಧಿಸುವುದಕ್ಕಾಗಲೀ ನಾವಾಗಿ ಶಬ್ದಾದಿಭೋಗ್ಯ ವಸ್ತುಗಳನ್ನನುಭವಿಸುವುದಕ್ಕಾಗಲೀ, ಮುಂದೆ ಸೃಷ್ಟಿಸಲ್ಪಡುವ ದೇವಾದಿ ಲೋಕಗಳಲ್ಲಿರುವ ಇಂದ್ರಿಯಗಳಿಗೆ ವಿಷಯಗಳಾದ ಪದಾರ್ಥಗಳನ್ನು ನಿನಗೆ ತಂದೊಪ್ಪಿಸುವುದಕ್ಕಾಗಲೀ ಹೇಗೆ ಸಾಧ್ಯವೋ ನಾವು ಕಾಣೆವು! ಪರಸ್ಪರ

ಸಂಬಂಧವಿಲ್ಲದೆ ಬೇರೆ ಬೇರೆಯಾಗಿರುವ ನಾವು ಯಾವ ಕಾರ್ಯಕ್ಕೂ, ಶಕ್ತಿಯಿಲ್ಲದವರಾಗಿರುವೆವು. ಹೇ ಪ್ರಭೂ! ನೀನಾದರೋ ಕಾರಣಪುರುಷನು! ವಿಕಾರರಹಿತನಾದವನು! ನಾವೆಲ್ಲರೂ ನಿನ್ನ ಕಾರ್ಯರೂಪವಾಗಿರುವೆವು. ನೀನು ನಮ್ಮೆಲ್ಲರಲ್ಲಿಯೂ ಅಂತರ್ಯಾಮಿಯಾಗಿ ನೆಲೆಗೊಂಡವನು! ಹಾಗಿದ್ದರೂ ಆಯಾ ವಸ್ತುಗಳಲ್ಲಿರುವ ದೋಷಕ್ಕೆ ಭಾಗಿಯಾಗುವವನಲ್ಲ. ಹೀಗೆ ಆದಿಪುರುಷನಾದ ನೀನು ಶಬ್ದಾದಿಗುಣಗಳನ್ನು ಗ್ರಹಿಸತಕ್ಕ ಜ್ಞಾನ ಕರ್ಮೇಂದ್ರಿಯಗಳಿಗೆ ಕಾರಣವಾದ ಮಾಯೆಯಲ್ಲಿ, ಸೃಷ್ಟಿಸಾಮರ್ಥ್ಯವುಳ್ಳ ನಿನ್ನ ವೀರ್ಯವನ್ನಿರಿಸಿರುವೆಯಾದುದರಿಂದಲೇ, ನಾವೆಲ್ಲರೂ ಜನಿಸಿರುವೆವು. ಈಗಲೂ ನಾವೆಲ್ಲರೂ ನಿನಗೆ ಶರೀರಭೂತರಾಗಿರುವೆವು. ಆದುದರಿಂದ, ಓ ಸರ್ವೇಶ್ವರಾ! ನಮ್ಮಲ್ಲಿ ಕೃಪೆಯಿಟ್ಟು ಮುಂದೆ ನಡೆಯಬೇಕಾದಜಗತ್ಸೃಷ್ಟಿಯಲ್ಲಿ ಶಕ್ತಿಯಿಲ್ಲದ ನಮಗೆ ಆ ಶಕ್ತಿಯನ್ನು ಕೊಟ್ಟು, ವಿಜ್ಞಾನವನ್ನೂ ಕರುಣಿಸಿ ರಕ್ಷಿಸಬೇಕು. ನೀನು ಹಾಗೆ ಮಾಡಿದ ಪಕ್ಷದಲ್ಲಿಯೇ ನಾವು ಯಾವ ಕಾರ್ಯಕ್ಕಾಗಿ ನಿನ್ನಿಂದ ಸೃಷ್ಟಿಸಲ್ಪಟ್ಟೆವೋ, ಆ ಕಾರ್ಯವನ್ನು ನೆರವೇರಿಸಬಲ್ಲೆವು" ಎಂದರು. * ಇಲ್ಲಿಗೆ ಐದನೆಯ ಅಧ್ಯಾಯವು.

---



* ಇಲ್ಲಿ ಮುಖ್ಯವಾಗಿ ತಿಳಿಯಬೇಕಾದ ಅಂಶವೇನೆಂದರೆ:— "ಪುರುಷೇಣಾತ್ಮವೀರ್ಯೇಣ ವೀರ್ಯಮಾಧತ್ತ ವೀರ್ಯವಾನ್" "ರೇತಸ್ತ್ವಜಾಯಾಂ ಕವಿಮಾದಧೇ ಯಃ" ಇತ್ಯಾದಿ ವಾಕ್ಯಗಳಿಂದ ಪರಮಾತ್ಮ ರೂಪನಾದ ಸಮಷ್ಟಿಪುರುಷನಿಂದ ಸೃಷ್ಟಿಸಲ್ಪಟ್ಟ ಮಾಯೆಯೇ ಮಹದಾದಿ ತತ್ತ್ವಗಳಿಗೆ ಆರಂಭವೆಂದು ವ್ಯಕ್ತವಾಗುವುದು. ಮಹತ್ತು ಮೊದಲಾಗಿ ಪೃಥಿವಿಯವರೆಗಿರುವ ತತ್ತ್ವಗಳೆಲ್ಲವೂ ಅಚೇತನಗಳ ಅವಸ್ಥಾವಿಶೇಷಗಳೆನಿಸುವುವು. ಮಾಯೆಯೆಂಬುದು ಅಖಂಡವಾಗಿಯೇ ಮಹತ್ತೆಂಬ ತತ್ತ್ವವಾಗುವುದು. ಮಹತ್ತೆಂಬುದೂ ಅಖಂಡವಾಗಿ ಅಹಂಕಾರತತ್ತ್ವರೂಪಕ್ಕೆ ಮಾರ್ಪಡುವುದು. ಹೀಗೆಯೇ ಮುಂದಿನ ತತ್ವಗಳೂ ಪ್ರದೇಶಭೇದದಿಂದ ಮುಂದುಮುಂದಿನ ತತ್ವಗಳಾಗಿ ಬದಲಾಯಿಸುವುವು. ಆದರೆ ಮಹದಾದಿಗಳು ಮೇಲೆ ಮೇಲೆ ಕಾರ್ಯರೂಪವಾಗಿ ಪರಿಣಮಿಸುವಾಗ ಅವುಗಳ ಏಕದೇಶದಲ್ಲಿಯೇ ಆಯಾ ಮುಂದಿನ ವಿಕಾರಗಳು ಹುಟ್ಟುವುವೇ ಹೊರತು, ಹಿಂದಿನ ತತ್ವಗಳೆಲ್ಲವೂ ಪೂರ್ಣವಾಗಿ ಬೇರೆ ರೂಪಕ್ಕೆ ತಿರುಗುವುದಿಲ್ಲ. ಹೀಗಿಲ್ಲದೆ ಮಹದಾದಿಗಳೆಲ್ಲವೂ ಸಾಕಲ್ಯವಾಗಿಯೇ ಎಂದರೆ ಮೊತ್ತಕ್ಕೆ ಉತ್ತರೋತ್ತರ ಕಾರ್ಯ

ಪರಮಾತ್ಮನಿಂದ ಮಹದಾದಿ ತತ್ವಗಳಿಗೆ ಸೃಷ್ಟಿ
ಸಾಮರ್ಥ್ಯವುಂಟಾಗಿ ಅಂಡಸೃಷ್ಟಿಯಾದುದು.
ಆ ಅಂಡದಿಂದ ಚತುರ್ಮುಖೋತ್ಪತ್ತಿ
ಮುಂತಾದುವುಗಳು.

ಹೀಗೆ ಮಹತ್ತು ಮೊದಲಾದ ತತ್ವಗಳೆಲ್ಲವೂ ಬೇರೆ ಬೇರೆಯಾಗಿ, ಮುಂದೆ ನಡೆಯಬೇಕಾದ ಸೃಷ್ಟಿಕಾರ್ಯಕ್ಕೆ ಶಕ್ತಿಯಿಲ್ಲದೆ, ಮೊರೆಯಿಡುವು ದನ್ನು ಕೇಳಿ ಭಗವಂತನು, ತನಗೆ ಶರೀರಭೂತಗಳಾದ ಆ ತತ್ವಗಳಿಗೆ ಸೃಷ್ಟಿ ಸಾಮರ್ಥ್ಯವನ್ನುಂಟುಮಾಡುವುದಕ್ಕಾಗಿ, ಕಾಲವೆಂದು ಕರೆಯಲ್ಪಡುವ

---

ರೂಪಕ್ಕೆ ಮಾರ್ಪಡುವುವೆಂದು ಹೇಳಿದ ಪಕ್ಷದಲ್ಲಿ, ಹಿಂದಿನ ತತ್ವಗಳು ಪ್ರತ್ಯೇಕವಾಗಿ ಉಳಿಯುವುದಕ್ಕೇ ಅವಕಾಶವಿಲ್ಲದಂತಾಗುವುದು. ಹೀಗಾದ ಪಕ್ಷದಲ್ಲಿ "ಪೃಥಿವ್ಯಪ್ಸು ಪ್ರಲೀಯತೇ" ಎಂಬುದು ಮೊದಲು, "ಮಹಾನವ್ಯಕ್ತೇ ಲೀಯತೇ" ಎಂಬ ವಾಕ್ಯದ ವರೆಗೆ ಹೇಳಿರುವ ಪ್ರಳಯಕ್ರಮಕ್ಕೆ ವಿರೋಧವು ಬರುವುದು. ಏಕೆಂದರೆ, ಒಂದು ವಸ್ತುವಿನಲ್ಲಿ ಏಕದೇಶದಿಂದ ಹುಟ್ಟಿ ಅವಸ್ಥಾಂತರವನ್ನು ಹೊಂದಿದ ಮತ್ತೊಂದು ದ್ರವ್ಯವು, ತನ್ನ ಅವಸ್ಥಾಭೇದವನ್ನು ಬಿಟ್ಟು, ಹಿಂದಿನ ದ್ರವ್ಯದಲ್ಲಿ ಲಯಿಸಿ, ಪೂರ್ವಾವಸ್ಥೆ ಯನ್ನು ಹೊಂದುವುದೇ ಲಯವೆನಿಸುವುದು. ಮೊದಲಿದ್ದ ವಸ್ತುವಿಗೆ ಏಕದೇಶವಿಕಾರ ವನ್ನು ಹೇಳದೆ ಪೂರ್ಣವಾಗಿ ಬದಲಾಯಿಸುವುದೆಂದು ಹೇಳಿದ ಪಕ್ಷದಲ್ಲಿ ಹಿಂದಿನ ವಸ್ತುವೇ ಇಲ್ಲದೆ ಹೋಗುವುದರಿಂದ, ಮೇಲೆ ಹೇಳಿದ ಲಯಲಕ್ಷಣವು ಸರಿಬೀಳದು. ಇದರಿಂದ ಪಂಚೀಕರಣ ಕ್ರಮಕ್ಕೂ ವಿರೋಧವುಂಟಾಗುವುದು. ಹೀಗೆ ಮಹತ್ತು ಮೊದಲಾಗಿ ಪೃಥಿವಿಯವರೆಗೆ ವಿಕಾರ ಹೊಂದುವ ಪ್ರಕೃತಿಯ ಒಂದೊಂದು ಅವಸ್ಥಾ ಭೇದದಲ್ಲಿಯೂ, ಪರಮಾತ್ಮ ಸ್ವರೂಪನಾದ ಸಮಷ್ಟಿಪುರುಷನ ಪ್ರವೇಶವಿರುವುದರಿಂದ, ಅವಕ್ಕೆ ಪರಮಾತ್ಮ ಶರೀರತ್ವವು ಸಿದ್ಧವಾಗುವುದು. ಆದರೆ ಅವ್ಯಕ್ತವೆನಿಸುವ ಪ್ರಕೃತಿ ಯೊಂದೇ ಭಗವಂತನಿಗೆ ಶರೀರವೆಂದು ಹೇಳಿದರೆ ಸಾಕಲ್ಲವೇ? ಹಾಗಿರುವಾಗ "ಯಸ್ಯಾ ವ್ಯಕ್ತಂ ಶರೀರಂ" ಎಂದು ಹೇಳಿದ ಮೇಲೆ ತಿರುಗಿ "ಯಸ್ಯ ಪೃಥಿವೀ ಶರೀರಂ" 'ಯಸ್ಯಾಪಶ್ಶರೀರಂ" ಇತ್ಯಾದಿ ವಾಕ್ಯಗಳಿಂದ ಪೃಥಿವಿ ಮೊದಲಾದುವನ್ನು ಬೇರೆ ಬೇರೆ ನಿರ್ದೇಶಿಸಿ ಹೇಳಿರುವುದೇಕೆ? ಇದರಿಂದ ಪೃಥಿವ್ಯಾದಿಗಳು ಪ್ರಕೃತಿಗಿಂತ ಭಿನ್ನ ವಾದುವೆಂದು ತೋರಿಸಿದಂತಾಗುವುದಲ್ಲವೇ?" ಎಂದರೆ, ಆ ಪ್ರಕೃತಿಗೆ ಸಂಭವಿಸುವ ಮಹತ್ತ್ವ, ಅಹಂಕಾರತ್ವ, ಪೃಥಿವೀತ್ವ ಮೊದಲಾದ ಅವಸ್ಥಾಭೇದಗಳಲ್ಲಿಯೂ, ಪರಮಾತ್ಮ ನಿಗೆ ಅವುಗಳಲ್ಲಿ ಅನುಪ್ರವೇಶವುಂಟೆಂಬುದನ್ನು ತೋರಿಸುವುದಕ್ಕಾಗಿಯೇ ಹೊರತು ಬೇರೆಯಲ್ಲವೆಂದು ಗ್ರಾಹ್ಯವು.

ತನ್ನ ಶಕ್ತಿಯೊಡಗೂಡಿ, ಮಹತ್ತು, ಅಹಂಕಾರ, ಪಂಚಭೂತಗಳು, ಪಂಚತನ್ಮಾತ್ರಗಳು, ಮನಸ್ಸಿನೊಡಗೂಡಿದ ಜ್ಞಾನಕರ್ಮೇಂದ್ರಿಯಗಳು ಈ ವಿಧವಾಗಿ ಬೇರ್ಪಟ್ಟಿರುವ ಇಪ್ಪತ್ತಮೂರು ತತ್ವಸಮೂಹಗಳನ್ನೂ ಏಕ ಕಾಲದಲ್ಲಿ ಪ್ರವೇಶಿಸಿದನು. ಹೀಗೆ ಒಂದೊಂದು ತತ್ವದಲ್ಲಿಯೂ ಸೇರಿ ಭಗವಂತನು ಬೇರೆ ಬೇರೆಯಾಗಿದ್ದ ಆ ತತ್ವಸಮೂಹಗಳೆಲ್ಲವನ್ನೂ ಪ್ರೇರಣಾ ರೂಪವಾದ ತನ್ನ ವ್ಯಾಪಾರದಿಂದ ಒಂದಾಗಿ ಸೇರಿಸಿ, ಆಯಾ ತತ್ವಗಳು ನಡೆಸಬೇಕಾದ ವ್ಯಾಪಾರಗಳನ್ನೂ ತಿಳಿಸಿದನು. ಅದರ ಮೇಲೆ ಆ ತತ್ವ ಗಳೆಲ್ಲವೂ ಭಗವತ್ಸಂಕಲ್ಪದಿಂದ ತಮ್ಮ ತಮ್ಮ ವ್ಯಾಪಾರಗಳಲ್ಲಿ ತಿಳುವಳಿಕೆ ಯನ್ನು ಹೊಂದಿ, ಆ ಭಗವಂತನ ಆಜ್ಞೆಯಿಂದ ತಮ್ಮ ತಮ್ಮ ಅಂಶಗಳ ಮೂಲಕವಾಗಿ ಚತುರ್ಮುಖನನ್ನು ಸೃಷ್ಟಿಸಿದುವು. ಆ ಚತುರ್ಮುಖನ ಉತ್ಪತ್ತಿ ಕ್ರಮವನ್ನೂ ಹೇಳುವೆನು ಕೇಳು! ಭಗವಂತನು ತನ್ನ ಸಂಕಲ್ಪ ರೂಪವಾದ ಜ್ಞಾನದಿಂದ ಪ್ರವೇಶಿಸಿದೊಡನೆ ಸ್ಥಾವರಜಂಗಮಗಳೆಲ್ಲವನ್ನೂ ಕಾರ್ಯರೂಪವಾಗಿ ತಮ್ಮಲ್ಲಿ ಹೊಂದಿದ್ದ ಆ ಇಪ್ಪತ್ತಮೂರು ತತ್ವಗಳೂ ಪರಸ್ಪರವಾಗಿ ಸೇರಿ, ಚತುರ್ಮುಖರೂಪಿಯಾದ ಪರಮಪುರುಷನಿಗೆ ಗರ್ಭ ದಂತಿದ್ದ ಬ್ರಹ್ಮಾಂಡಸ್ವರೂಪವನ್ನು ಹೊಂದಿದುವು. ದೇವತೆಗಳೇ ಮೊದ ಲಾದ ಸಮಸ್ತ ಜೀವಾಂಶಗಳಿಂದ ಕೂಡಿದ ಆ ಸಮಷ್ಟಿಪುರುಷನು, ಆ ಅಂಡವು ಪರಿಪಕ್ವವಾಗುವವರೆಗೆ ಎಂದರೆ, ಒಂದು ಸಹಸ್ರವರುಷಗಳವರೆಗೆ ಆವರಣಜಲಮಧ್ಯದಲ್ಲಿ ಸುವರ್ಣಮಯವಾದ ಆ ಅಂಡದಲ್ಲಿಯೇ ಅಡಗಿ ಕೊಂಡಿದ್ದನು. ಮಹತ್ತು ಮೊದಲಾದ ತತ್ವಗಳ ಸಂತಾನರೂಪವಾಗಿ, ಭಗವಂತನ ಸಂಕಲ್ಪಶಕ್ತಿಯನ್ನೂ ಹೊಂದಿದ್ದ ಆ ಸಮಷ್ಟಿಪುರುಷನು, ತಾನೇ ತನ್ನನ್ನು ಮೊದಲು ಭೋಕ್ತೃವೆಂದೂ, ವಿಷಯವೆಂದೂ, ಕರಣ ವೆಂದೂ ಮೂರು ವಿಧವಾಗಿ ವಿಭಾಗಿಸಿಕೊಂಡನು. ಆ ಮೂರರಲ್ಲಿ ಒಂದಾದ ಕರಣವನ್ನು ಐದು ಜ್ಞಾನೇಂದ್ರಿಯಗಳೆಂದೂ, ಐದು ಕರ್ಮೇಂದ್ರಿಯಗ ಳೆಂದೂ ಮನಸ್ಸೆಂದೂ ಹನ್ನೊಂದು ವಿಧವಾಗಿ ವಿಭಾಗಿಸಿದನು. ವಿದುರಾ! ಆ ಸಮಷ್ಟಿಪುರುಷನಿಗೆ ಈ ವಿಧವಾಗಿ ವಿಭಾಗಿಸತಕ್ಕ ಶಕ್ತಿಯುಂಟಾದುದು ಹೇಗೆಂದು ಕೇಳುವೆಯಾ! ಈ ಚತುರ್ಮುಖಬ್ರಹ್ಮನು, ವ್ಯಷ್ಟಿಪದಾರ್ಥ ಗಳೆಲ್ಲಕ್ಕೂ ಕಾರಣಭೂತನಾದ ಪರಮಾತ್ಮಾಂಶದಿಂದಲೇ ಹುಟ್ಟಿದವನು.

ಇದರಿಂದ ಇವನನ್ನು ಪರಮಾತ್ಮನ ಆವೇಶಾವತಾರವೆಂದೇ ಹೇಳಬೇಕು. ಭಗವಂತನ ಅಂಶಾವತಾರವಾದ ಈ ಸಮಷ್ಟಿಪುರುಷನಿಂದಲೇ, ಈ ಪ್ರಪಂಚ ವೆಲ್ಲವೂ ಹುಟ್ಟಿರುವುದು. ಚತುರ್ಮುಖಶರೀರಿಯಾದ ಈ ಭಗವಂತನೇ ಮೊದಲು ಈಗ ನಮಗೆ ಬೇರೆ ಬೇರೆಯಾಗಿ ಕಾಣುವ ಎಲ್ಲಾ ಸೃಷ್ಟಿ ಪದಾರ್ಥಗಳನ್ನೂ ಏಕಾಕಾರವಾಗಿ ತನ್ನಲ್ಲಿ ಅಡಗಿಸಿಕೊಂಡು, ಒಂದೇ ಪುರುಷಾಕೃತಿಯಲ್ಲಿದ್ದುದರಿಂದ ಇವನನ್ನು ಸಮಷ್ಟಿಪುರುಷನೆನ್ನುವರು. ಇವನೂ ಪರಮಾತ್ಮನ ಅಂಶದಿಂದಲೇ ಕೂಡಿದವನು. ಆದರೆ ಹೀಗೆ ಪರಮಾತ್ಮನನ್ನು ತನ್ನಲ್ಲಿ ಒಳಕೊಂಡು, ಅವನಿಗೆ ಶರೀರದಂತಿರುವುದು ಸಮಸ್ತ ಜೀವಗಳಿಗೂ ಸಾಧಾರಣವಾಗಿದ್ದರೂ, ಈ ಚತುರ್ಮುಖಸ್ವರೂಪವೆಂಬುದು ಅವುಗಳಲ್ಲಿ ಮೊದಲನೆಯದಾಗಿ, ಬೇರೆ ಬೇರೆಯಾಗಿ ವ್ಯಷ್ಟಿಜೀವಗಳನ್ನು ಹೊರಡಿಸುವುದಕ್ಕೂ ಮೂಲಕಾರಣವಾಗಿರುವುದು. ಆದುದರಿಂದ ಇದೇ ಭಗವಂತನ ಅವತಾರಗಳಲ್ಲಿ ಮೊದಲನೆಯದು. ಭಗವಂತನು ಈ ಶರೀರ ದೊಳಗೆ ಪ್ರವೇಶಿಸಿರುವುದರಿಂದ ಇದು ಅನುಪ್ರವೇಶಾವತಾರವೆನಿಸುವುದು. ಶರೀರಾಂತರ್ಗತಗಳಾಗಿ ಭೋಕ್ತೃವೆಂದೆನಿಸಲ್ಪಡುವ ಸಮಸ್ತ ಜೀವಗಳೂ ಈ ಬ್ರಹ್ಮನಲ್ಲಿಯೇ ಒಟ್ಟುಗೂಡಿರುವುವು. ಆದುದರಿಂದ ಜ್ಞಾನೇಂದ್ರಿಯ ಗಳೈದು, ಕರ್ಮೇಂದ್ರಿಯಗಳೈದು, ಮನಸ್ಸು, ಈ ಏಕಾದಶೇಂದ್ರಿಯಗಳಿಗೂ ಅವನು ನಿವಾಸಸ್ಥಾನವಾಗಿ ಸಮಷ್ಟಿಪುರುಷನೆನಿಸಿದನು. ವಿದುರಾ! ಇತ್ತ ಲಾಗಿ ಲೋಕನಿಯಾಮಕನಾದ ಭಗವಂತನು ಮಹದಾದಿ ತತ್ತ್ವಗಳ ಪ್ರಾರ್ಥನೆಯನ್ನು ಸ್ಮರಿಸಿಕೊಂಡು, ಆ ಸಮಷ್ಟಿಪುರುಷನಲ್ಲಿ ಒಂದಾಗಿ ಸೇರಿರುವ ಇಂದ್ರಿಯಾದಿಗಳನ್ನು, ವ್ಯಷ್ಟಿರೂಪದಿಂದ ಬೇರೆ ಬೇರೆಯಾಗಿ ಪ್ರತ್ಯೇಕಿಸಬೇಕೆಂದೆಣಿಸಿ ತನ್ನ ದಿವ್ಯಜ್ಞಾನದಿಂದ "ಈ ಸಮಷ್ಟಿಪುರುಷ ನಾದ ಬ್ರಹ್ಮನಿಗೆ ವ್ಯಷ್ಟಿರೂಪದಿಂದ ಬೇರೆ ಬೇರೆಯಾಗಿ ಶರೀರೇಂದ್ರಿಯಾದಿ ಗಳನ್ನು ಸೃಷ್ಟಿಸತಕ್ಕ ಸಾಮರ್ಥ್ಯವುಂಟಾಗಲಿ!" ಎಂದು ಸಂಕಲ್ಪಿಸಿದನು. ಭಗವಂತನು ಆ ಪುರುಷನಲ್ಲಿ ತನ್ನ ನಿಜಾಂಶದಿಂದ ಒಳಹೊಕ್ಕು, ಈ ವಿಧ ವಾಗಿ ಮನಸ್ಸಿನಲ್ಲಿ ಸಂಕಲ್ಪಿಸಿದೊಡನೆ, ಆ ಬ್ರಹ್ಮಶರೀರದಲ್ಲಿ ವ್ಯಷ್ಟೀಂದ್ರಿ ಯಗಳ ಉತ್ಪತ್ತಿಗಾಗಿ ಕೆಲವು ಸ್ಥಾನಗಳೇರ್ಪಟ್ಟುವು. ಅವುಗಳನ್ನು ವಿವರಿಸು ವೆನು ಕೇಳು! ಭಗವದಂಶದಿಂದ ಕೂಡಿದ ಸಮಷ್ಟಿಪುರುಷನಾದ ಆ

ಚತುರ್ಮುಖನಿಂದ, ವ್ಯಷ್ಟಿಜೀವನಕ್ಕೆ ಮುಖರೂಪವಾದ ಒಂದಾನೊಂದು ಸ್ಥಾನವು ಏರ್ಪಟ್ಟಿತು. ಒಡನೆಯೇ ಆ ಸ್ಥಾನದಲ್ಲಿ ತನಗಾಶ್ರಯವಾದ ವಾಕ್ಕೆಂಬ ಇಂದ್ರಿಯದೊಡನೆ ಅಗ್ನಿದೇವನು ಪ್ರವೇಶಿಸಿದನು. ಈ ವಾಗಿಂದ್ರಿಯದಿಂದಲೇ ವ್ಯಷ್ಟಿಜೀವನು ಸಮಸ್ತಶಬ್ದಜಾಲಗಳನ್ನೂ ಉಚ್ಚರಿಸುತ್ತಿರುವನು. ಅದರಿಂದಾಚೆಗೆ ಆ ಚತುರ್ಮುಖನಿಂದ, ತಾಲು (ದವಡೆ) ಸ್ಥಾನವು ಬೇರ್ಪಟ್ಟು ಅದರಲ್ಲಿ ಲೋಕಪಾಲಕನಾದ ವರುಣನು, ತನಗೆ ಅಂಶಭೂತವಾದ ಜಿಹ್ವೇಂದ್ರಿಯದೊಡನೆ ಪ್ರವೇಶಿಸಿದನು. ಆ ಇಂದ್ರಿಯದಿಂದಲೇ ವ್ಯಷ್ಟಿಜೀವನು ಉಪ್ಪು, ಹುಳಿ, ಮೊದಲಾದ ರಸಗಳನ್ನು ತಿಳಿಯುವನು. ಆಮೇಲೆ ಭಗವದಂಶದಿಂದ ಕೂಡಿದ ಆ ಸಮಷ್ಟಿಪುರುಷನಿಂದ ಮೂಗಿನ ರಂಧ್ರಗಳೆಂಬ ಸ್ಥಾನವು ಬೇರ್ಪಟ್ಟು, ಅದರಲ್ಲಿ ಅಶ್ವಿನೀದೇವತೆಗಳಿಬ್ಬರೂ, ತಮಗಾಶ್ರಯವಾದ ಘ್ರಾಣೇಂದ್ರಿಯಗಳೊಡನೆ ಪ್ರವೇಶಿಸಿದರು. ಆ ಇಂದ್ರಿಯದಿಂದಲೇ ವ್ಯಷ್ಟಿಜೀವನು ಸುಗಂಧದುರ್ಗಂಧಗಳನ್ನು ಗ್ರಹಿಸುವನು. ಅದರಿಂದಾಚೆಗೆ ಆ ಸಮಷ್ಟಿಪುರುಷನಿಂದ ಕಣ್ಣುಗಳೆಂಬ ಸ್ಥಾನವು ಬೇರ್ಪಟ್ಟು, ಅದರಲ್ಲಿ ಆದಿತ್ಯದೇವನು ತನಗೆ ಸ್ಥಾನವಾದ ನೇತ್ರೇಂದ್ರಿಯದೊಡನೆ ಪ್ರವೇಶಿಸಿದನು. ಆ ನೇತ್ರೇಂದ್ರಿಯದಿಂದಲೇ ವ್ಯಷ್ಟಿಜೀವನಿಗೆ ರೂಪಜ್ಞಾನವುಂಟಾಗುವುದು. ಅದರಿಂದಾಚೆಗೆ ಆ ಬ್ರಹ್ಮನಿಂದ ಚರ್ಮಸ್ಥಾನವು ಏರ್ಪಟ್ಟು, ಅದರಲ್ಲಿ ವಾಯುದೇವನು ತನಗಧಿಷ್ಠಾನವಾದ ತ್ವಗಿಂದ್ರಿಯದೊಡನೆ ಪ್ರವೇಶಿಸಿದನು. ಆ ತ್ವಗಿಂದ್ರಿಯದಿಂದಲೇ ವ್ಯಷ್ಟಿಜೀವನು ಪದಾರ್ಥಗಳಲ್ಲಿರುವ ಮೃದುತ್ವ ಕಠಿಣತ್ವಗಳನ್ನು ಗ್ರಹಿಸುವನು. ಹಾಗೆಯೇ ಆ ಚತುರ್ಮುಖನಿಂದ ವಿಭಕ್ತವಾದ ಕರ್ಣಸ್ಥಾನಗಳನ್ನು ದಿಗ್ದೇವತೆಗಳು ತಮಗೆ ಅಂಶಭೂತಗಳಾದ ಕರ್ಣೇಂದ್ರಿಯದೊಡನೆ ಪ್ರವೇಶಿಸಿದರು. ಆ ಇಂದ್ರಿಯದಿಂದಲೇ ಜೀವನು ಶಬ್ದಗಳನ್ನು ಕೇಳುವನು. ಆಮೇಲೆ ಆ ಚತುರ್ಮುಖನಿಂದ ವಿಭಕ್ತವಾದ ಚರ್ಮಸ್ಥಾನವನ್ನು ಸಸ್ಯಾಧಿದೇವತೆಗಳು ನಿಜಾಂಶಭೂತಗಳಾದ ರೋಮಗಳೊಡನೆ ಪ್ರವೇಶಿಸಿದರು. ಆ ರೋಮಗಳಿಂದಲೇ ಜೀವನು ನವೆಯನ್ನು ತಿಳಿಯುವನು. ಇದರಿಂದ ಒಂದೇ ತ್ವಗಿಂದ್ರಿಯದ ಸ್ಥಾನಭೇದಗಳಿಂದ ನವೆಯೂ, ಸ್ಪರ್ಶಜ್ಞಾನವೂ ಉಂಟಾಗುತ್ತಿರುವುದು. ಆಮೇಲೆ ಆ ಚತುರ್ಮುಖನಿಂದ ಉಪಸ್ಥೇಂದ್ರಿಯವೆಂಬ ಸ್ಥಾನವು ಹುಟ್ಟಿ, ಅದರಲ್ಲಿ

ಪ್ರಜಾಧಿಪತಿಯು, ನಿಜಾಂಶಭೂತವಾದ ರೇತಸ್ಸೆಂಬ (ವೀರ್ಯವೆಂಬ) ಇಂದ್ರಿಯದೊಡನೆ ಪ್ರವೇಶಿಸಿದನು. ಇದರಿಂದಲೇ ಜೀವನು ರತಿಸುಖವನ್ನು ಕಾಣುತ್ತಿರುವನು. ಆ ಮೇಲೆ ಸಮಷ್ಟಿಪುರುಷನಿಂದ ಚೇರ್ಪಟ್ಟ ಗುದಸ್ಥಾನವನ್ನು ಮಿತ್ರದೇವನು ನಿಜಾಂಶಭೂತವಾದ ವಾಯುವೆಂಬ ಇಂದ್ರಿಯದೊಡನೆ ಪ್ರವೇಶಿಸಿದನು. ಈ ಇಂದ್ರಿಯದಿಂದಲೇ ವ್ಯಷ್ಟಿಜೀವನು ಮಲವಿಸರ್ಜನೆಯನ್ನು ಮಾಡುತ್ತಿರುವನು. ಆದರಿಂದಾಚೆಗೆ ಚತುರ್ಮುಖನಿಂದ ಹಸ್ತಸ್ಥಾನಗಳು ಏರ್ಪಟ್ಟು, ಅದರಲ್ಲಿ ಇಂದ್ರದೇವನು, ನೀಡುವುದು, ಎಳೆಯುವುದು, ಬಗ್ಗಿಸುವುದು, ಇವೇ ಮುಂತಾದ ಕಾರ್ಯಗಳಿಗೆ ಸಾಧನವಾದ ಹಸ್ತೇಂದ್ರಿಯದೊಡನೆ ಪ್ರವೇಶಿಸಿದನು. ಈ ಇಂದ್ರಿಯದಿಂದಲೇ ವ್ಯಷ್ಟಿಜೀವನು ತನ್ನ ಜೀವನವನ್ನು ಸಂಪಾದಿಸಿಕೊಳ್ಳುವನು. ಆ ಮೇಲೆ ಸಮಷ್ಟಿಪುರುಷನಿಂದ ಉತ್ಪನ್ನವಾದ ಪಾದಸ್ಥಾನಗಳನ್ನು, ವಿಷ್ಣುವು ಗಮನಸಾಧನವಾದ ಪಾದೇಂದ್ರಿಯಗಳೊಡನೆ ಪ್ರವೇಶಿಸಿದನು. ಇದರಿಂದಲೇ ಜೀವನು ಗಮನಾದಿಕಾರ್ಯಗಳನ್ನು ನಡೆಸುತ್ತಿರುವನು. ಆ ಮೇಲೆ ಚತುರ್ಮುಖನಿಂದ ವಿಭಕ್ತವಾದ ಹೃದಯಸ್ಥಾನವನ್ನು ಚಂದ್ರನು ತನಗಧಿಷ್ಠಾನವಾದ ಅಂತಃಕರಣದೊಡನೆ ಪ್ರವೇಶಿಸಿದನು. ಇದರಿಂದಲೇ ವ್ಯಷ್ಟಿಜೀವನಿಗೆ ಸಂಕಲ್ಪವಿಕಲ್ಪ ರೂಪಗಳಾದ ಕ್ರಿಯೆಗಳುಂಟಾಗುವುವು. ಮತ್ತು ಈ ಅಂತಃಕರಣವೆಂಬುದೊಂದೇ ಬೇರೆ ಬೇರೆ ವ್ಯಾಪಾರಭೇದದಿಂದ, ಮನಸ್ಸೆಂದೂ, ಬುದ್ಧಿಯೆಂದೂ, ಚಿತ್ತವೆಂದೂ, ಅಹಂಕಾರವೆಂದೂ, ನಾಲ್ಕು ವಿಧಗಳಾದುವು. ಅವುಗಳಲ್ಲಿ ಮನಸ್ಸಿಗೆ ಚಂದ್ರನೂ, ಬುದ್ಧಿಗೆ ಬೃಹಸ್ಪತಿಯೂ, ಅಹಂಕಾರಕ್ಕೆ ರುದ್ರನೂ, ಚಿತ್ತಕ್ಕೆ ಪ್ರಜಾಪತಿಯೂ, ಅಧಿದೇವತೆಗಳೆನಿಸಿರುವರು. ಮತ್ತು ಆ ಚತುರ್ಮುಖನಿಂದ ಚೇರ್ಪಟ್ಟ ಬುದ್ಧಿಸ್ಥಾನವನ್ನು, ಬ್ರಹ್ಮದೇವನು ನಿಶ್ಚಯರೂಪವಾದ ಜ್ಞಾನವನ್ನುಂಟುಮಾಡತಕ್ಕ ಸಾಮರ್ಥ್ಯದೊಡನೆ ಪ್ರವೇಶಿಸಿದನು. ಈ ಬೋಧನಾಂಶದಿಂದಲೇ ಜೀವನು ತಾನು ತಿಳಿದುಕೊಳ್ಳಬೇಕಾದ ಸಮಸ್ತವನ್ನೂ ತಿಳಿದುಕೊಳ್ಳುವನು. ಇದರಂತೆಯೇ ಚತುರ್ಮುಖನಿಂದ ಬೇರ್ಪಟ್ಟ ಅಹಂಕಾರಸ್ಥಾನವನ್ನು, ರುದ್ರನು ದೇಹಾಭಿಮಾನವೆಂಬ ನಿಜಾಂಶದೊಡನೆ ಪ್ರವೇಶಿಸಿದನು. ಈ ಅಭಿಮಾನದಿಂದಲೇ ಜೀವನು ತನ್ನ ಕರ್ತವ್ಯವನ್ನು ನಡೆಸುತ್ತಿರುವನು. ಹಾಗೆಯೇ ಚತುರ್ಮುಖನಿಂದ ಭಿನ್ನವಾದ ಅಂತಃ

ಕರಣವೆಂಬ ಸ್ಥಾನವನ್ನು ಪ್ರಜಾಧಿಪತಿಯೆಂಬ ದೇವತೆಯು, ಯುಕ್ತಾರ್ಥ ವಿವೇಚನಾರೂಪವಾದ ಮನಸ್ಸಿನೊಡನೆ ಪ್ರವೇಶಿಸಿದನು. ಈ ಅಂಶದಿಂದಲೇ ಜೀವನು ಆಲೋಚಿಸಬೇಕಾದ ಅರ್ಥಜಾಲಗಳನ್ನೂ, ಅದರ ವಿಷಯವಾದ ಜ್ಞಾನವನ್ನೂ ಹೊಂದುವನು. ಮತ್ತು ವಿರಾಡ್ರೂಪಿಯಾದ ಆ ಸಮಷ್ಟಿ ಪುರುಷನ ಶಿರಸ್ಸಿನಿಂದ ಸ್ವರ್ಗಲೋಕವೂ, ನಾಭಿಯಿಂದ ಆಕಾಶವೂ, ಪಾದ ದಿಂದ ಭೂಲೋಕವೂ ಹುಟ್ಟಿದುವು. ಈ ಮೂರು ಲೋಕಗಳಲ್ಲಿ ಸ್ವರ್ಗ ಲೋಕವನ್ನು ಸತ್ವಗುಣಪ್ರಧಾನರಾದ ದೇವತೆಗಳು ಆಕ್ರಮಿಸಿ ನಿಂತರು. ರಜೋಗುಣಪ್ರಧಾನರಾದ ಮನುಷ್ಯಾದಿಗಳು, ರಾಜಸಕರ್ಮಗಳಿಗೆ ತಕ್ಕ ಫಲ ಗಳನ್ನನುಭವಿಸುವುದಕ್ಕೆ ಅನುಕೂಲಗಳಾದ ಭೂಲೋಕವನ್ನಾಶ್ರಯಿಸಿದರು. ತಮೋಗುಣಸ್ವಭಾವವುಳ್ಳವುಗಳಾಗಿಯೂ, ರುದ್ರನಿಗೆ ಪಾರಿಷದಗಣಗಳಾ ಗಿಯೂ ಇರುವ ಭೂತಪ್ರೇತಪಿಶಾಚಾದಿಗಳು ಆಕಾಶವನ್ನಾಶ್ರಯಿಸಿದುವು. ಆ ಸಮಷ್ಟಿಪುರುಷನ ಮುಖದಿಂದ ವೇದಗಳೂ, ಬ್ರಾಹ್ಮಣರೂ ಜನಿಸಿದರು. ಶರೀರದಲ್ಲಿ ಉತ್ತಮಭಾಗವಾದ ಮುಖದಿಂದ ಹುಟ್ಟಿದುದರಿಂದಲೇ, ಬ್ರಾಹ್ಮಣ ಜಾತಿಗೆ ಲೋಕದಲ್ಲಿ ಮೇಲ್ಮೆಯೂ, ಪ್ರಾಧಾನ್ಯವೂ, ಗುರುತ್ವವೂ ಏರ್ಪಟ್ಟಿ ರುವುದು. ಅದರಿಂದಾಚೆಗೆ ಬೇರೆ ಕೆಲವರು ಆ ವಿರಾಟ್ಪುರುಷನ ತೋಳು ಗಳಿಂದ ಹುಟ್ಟಿದರು. ಅವರು ಆ ಭಗವಂತನ ಪರಾಕ್ರಮದ ಅಂಶದಿಂದ ಹುಟ್ಟಿದವರಾಗಿ, ಇತರ ವರ್ಣದವರನ್ನು ಚೋರಾದ್ಯುಪದ್ರವಗಳಿಂದ ರಕ್ಷಿಸ ತಕ್ಕವರಾದರು. ಹೀಗೆ ಇವರು ಇತರರನ್ನು ಅಪಾಯಗಳಿಂದ (ಗಾಯಗಳಿಂದ) ರಕ್ಷಿಸತಕ್ಕವರಾದುದರಿಂದಲೇ, ಅವರಿಗೆ ಕ್ಷತ್ರಜಾತಿಯವರೆಂದು ಹೆಸರಾಯಿತು. ಆ ಮೇಲೆ ಆ ವಿರಾಟ್ಪುರುಷನ ತೊಡೆಗಳಿಂದ ಬೇರೆ ಕೆಲವರು ಹುಟ್ಟಿದರು. ಅವರಿಗೆ ವೈಶ್ಯರೆಂದು ಹೆಸರು. ಅವರು ಲೋಕದಲ್ಲಿರುವ ಇತರ ವರ್ಣದವ ರೆಲ್ಲರಿಗೂ, ಕೃಷಿ ವಾಣಿಜ್ಯ, ವ್ಯವಹಾರಾದಿಗಳಿಂದ ಜೀವನೋಪಾಧಿಯನ್ನು ಸಂಪಾದಿಸುತ್ತಿರುವರು. ಆ ಮೇಲೆ ಭಗವಂತನ ಪಾದದಿಂದ ಮತ್ತೆ ಕೆಲವರು ಹುಟ್ಟಿದರು. ಇವರೇ ಶೂದ್ರರು. ಇವರು ತಮ್ಮ ಜಾತಿಯವರಿಗೆ ಉಚಿತ ವಾದ ಬ್ರಾಹ್ಮಣಾದಿ ಮೂರು ವರ್ಣದವರ ಶುಶ್ರೂಷೆಯಲ್ಲಿಯೇ ನಿರತರಾಗಿ, ಅದರಿಂದಲೇ ಭಗವದನುಗ್ರಹಕ್ಕೆ ಪಾತ್ರರಾಗುವರು. ಈ ನಾಲ್ಕು ವರ್ಣ ದವರೂ ತಮ ತಮಗೆ ವಿಹಿತಗಳಾದ ಧರ್ಮಗಳನ್ನವಲಂಬಿಸಿ ಶ್ರದ್ಧೆಯಿಂದ

ತಮ್ಮ ಚಿತ್ತವನ್ನು ಪರಿಶುದ್ಧಿಹೊಂದಿಸುವುದಕ್ಕಾಗಿ ಯಾವ ಭಗವಂತನಿಂದ ತಾವು ಯಾವ ವೃತ್ತಿಗಾಗಿ ಸೃಷ್ಟಿಸಲ್ಪಟ್ಟರೋ, ಆ ವೃತ್ತಿಯಿಂದಲೇ ಆ ಶ್ರೀಹರಿಯನ್ನು ಸರ್ವಕಾಲದಲ್ಲಿಯೂ ಆರಾಧಿಸುತ್ತಿರುವರು. ಓ ವಿದುರಾ! ಕಾಲ, ಕರ್ಮ, ಸ್ವಭಾವರೂಪಗಳಾದ ಶಕ್ತಿಯಿಂದ ಕೂಡಿರುವ ಭಗವಂತನ, ಆ ಮಾಯಾವಿಜೃಂಭಣದ ಮಹಿಮೆಯನ್ನು ವರ್ಣಿಸುವುದಕ್ಕೆ ಯಾರು ತಾನೇ ಸಮರ್ಥರು? ಆದರೆ "ಯಾರಿಗೂ ಸಾಧ್ಯವಿಲ್ಲದುದನ್ನು ನೀನು ಹೇಗೆ ವರ್ಣಿಸಬಲ್ಲೆ" ಯೆಂದು ನೀನು ನನ್ನನ್ನು ಕೇಳಬಹುದು. ನನಗೂ ಆ ಶ್ರೀಹರಿಯ ಮಹಿಮೆಯನ್ನು ವರ್ಣಿಸಲು ಸಾಧ್ಯವಲ್ಲ. ನಾನೂ ಅದನ್ನು ಸಂಪೂರ್ಣವಾಗಿ ವರ್ಣಿಸಲಾರೆನು. ಹಾಗಿದ್ದರೂ ನಾನು ನನ್ನ ಗುರು ಮುಖವಾಗಿ ಎಷ್ಟುಮಟ್ಟಿಗೆ ಕೇಳಿರುವೆನೋ, ಅಷ್ಟನ್ನು ಮಾತ್ರ ನಿನಗೆ ಹೇಳುತ್ತಿರುವೆನು. ಕೊನೆಗೆ ಅಷ್ಟನ್ನೂ ನಿನಗೆ ತಿಳಿಸುವುದಕ್ಕೂ ನನಗೆ ಶಕ್ತಿಯಿರಲಾರದು. ಅವುಗಳಲ್ಲಿಯೂ ನನ್ನ ಬುದ್ಧಿಗೆ ತೋರಿದಷ್ಟನ್ನು ಮಾತ್ರ ಹೇಳಬಲ್ಲೆನು. ಭಗವಂತನ ಮಹಿಮೆಯಲ್ಲಿ ಅಲ್ಪಸ್ವಲ್ಪಮಾತ್ರವನ್ನು ವರ್ಣಿಸುವುದರಿಂದ ಫಲವೇನೆಂದು ಕೇಳುವೆಯಾ? ಅದರಿಂದಲೇ ಎಷ್ಟೋ ಲಾಭವುಂಟು. ಆ ಪರಮಾತ್ಮನನ್ನು ಬಿಟ್ಟು ಇತರರ ಗುಣಗಳನ್ನು ಕೊಂಡಾಡುವುದರಿಂದ, ದೋಷಯುಕ್ತವಾದ ವಾಕ್ಯಗಳನ್ನು ಪವಿತ್ರವಾಗಿ ಮಾಡುವುದೇ ಹರಿನಾಮಸ್ಮರಣೆಗೆ ಒಂದು ಮೊದಲನೆಯ ಫಲವು. ಆ ಭಗವನ್ಮಹಿಮೆಯನ್ನು ತಿಳಿದ ಮಟ್ಟಿಗೆ ವರ್ಣಿಸುವುದರಿಂದ ಅವರವರು ತಮ್ಮ ಇಷ್ಟ ಸಿದ್ಧಿಯನ್ನೂ ಪಡೆಯಬಹುದು. ವಿದುರಾ! ಆ ಭಗವಂತನ ಮಹಿಮೆಯನ್ನು ಪೂರ್ಣವಾಗಿ ವರ್ಣಿಸಿದ ಹೊರತು ಫಲವಿಲ್ಲವೆಂದು ಮಾತ್ರ ತಿಳಿಯಬೇಡ! ಮುಖ್ಯವಾಗಿ ಮನುಷ್ಯನು ವಚನಶಕ್ತಿಯನ್ನು ಹೊಂದಿರುವುದಕ್ಕೆ, ಪುಣ್ಯಶ್ಲೋಕನಾದ ಭಗವಂತನ ಗುಣಕೀರ್ತನವೇ ಒಂದು ಮುಖ್ಯಫಲವು. ಹಾಗೆಯೇ ವಿದ್ವಾಂಸರಾದ ಮಹಾತ್ಮರು ವಿಷ್ಣುಕಥೆಗಳನ್ನು ವರ್ಣಿಸುತ್ತಿರುವಾಗ, ಆ ಕಥಾಮೃತವನ್ನು ಕಿವಿಗೊಟ್ಟು ಕೇಳಿ ತೃಪ್ತಿಪಡುವುದೇ ಕರ್ಣೇಂದ್ರಿಯಗಳಿಗೆ ಫಲವು. ಓ ವಿದುರಾ! ಆ ಭಗವಂತನ ಮಹಿಮೆಯನ್ನು ತಿಳಿಯಲು ನಾವು ಮಾತ್ರವೇ ಅಸಮರ್ಥರೆಂದೆಣಿಸಬೇಡ. ಆ ಮಹಾವಿಷ್ಣುವಿನ ನಾಭಿಕಮಲದಲ್ಲಿಯೇ ಹುಟ್ಟಿ, ಆತನ ಸಾನ್ನಿಧ್ಯದಲ್ಲಿಯೇ ಇದ್ದು, ಅವನ

ಪೂರ್ಣಾನುಗ್ರಹಕ್ಕೆ ಪಾತ್ರನಾಗಿ, ಸಮಸ್ತ ಪ್ರಪಂಚವನ್ನೂ ಸೃಷ್ಟಿಸತಕ್ಕ ಶಕ್ತಿಯುಳ್ಳ ಬ್ರಹ್ಮನೂ ಕೂಡ, ಅನೇಕ ಸಂವತ್ಸರಗಳವರೆಗೆ ಯೋಗ ಬಲದಿಂದ ಪರಪಕ್ವವಾದ ತನ್ನ ಬುದ್ಧಿಯಿಂದಲೂ ಆತನ ಮಹಿಮೆಯನ್ನು ಪೂರ್ಣವಾಗಿ ತಿಳಿಯಲಾರದೆ ಹೋದನು. ಇನ್ನು ನಮ್ಮಂತವರ ಪಾಡೇನು? ಆಹಾ! ಇದೂ ಹಾಗಿರಲಿ! ಮತ್ತೊಂದಾಶ್ಚರ್ಯವನ್ನು ಕೇಳು! ಆ ಭಗ ವಂತನ ಆಶ್ಚರ್ಯಶಕ್ತಿಯೆಂಬುದು ಆಶ್ಚರ್ಯಶಕ್ತಿಯುಳ್ಳವರನ್ನೂ, ಮರುಳು ಮಾಡುತ್ತಿರುವುದು. ಆ ಪರಮಾತ್ಮನು ವೇದಸ್ವರೂಪನಾಗಿ ಬಂದು ತಾನೇ ತನ್ನನ್ನು ಹೀಗೆಂದು ನಿಶ್ಚಯಿಸಲಾರದೆ ಹಿಂತಿರುಗುವುದಾಗಿ ಹೇಳಿರುವನು. ಇನ್ನು ಬ್ರಹ್ಮಾದಿ ದೇವತೆಗಪ ವಿಷಯವನ್ನು ಹೇಳತಕ್ಕುದೇನು? ಓ ವಿದುರಾ! ಮುಖ್ಯವಾಗಿ ಒಂದೇ ಮಾತಿನಲ್ಲಿ ಹೇಳುವೆನು ಕೇಳು! ಮಹತ್ತು ಮೊದಲಾದ ತತ್ವಗಳಾಗಲಿ, ದಿಕ್ಪತಿಗಳಾಗಲಿ, ಚತುರ್ಮುಖನಾಗಲಿ, ವೇದ ಗಳಾಗಲಿ, ಯೋಗಶುದ್ಧವಾದ ಮನಸ್ಸಾಗಲಿ, ಪರೋಕ್ಷಜ್ಞಾನವುಳ್ಳ ನಮ್ಮಂತಹ ಋಷಿಗಳಾಗಲಿ, ಯಾವನ ಮಹಿಮೆಯನ್ನು ತಿಳಿಯುವುದಕ್ಕಾಗಿ ಪ್ರಯತ್ನಿಸಿ, ಆ ಉದ್ದೇಶವನ್ನು ಕೊನೆಮುಟ್ಟಿಸಲಾರದೆ ಹಿಂತಿರುಗುತ್ತಿರು ವುವೋ, ಅಂತಹ ಭಗವಂತನಿಗೆ ಇದೋ ನಮಸ್ಕಾರವು.” ಇಲ್ಲಿಗೆ ಆರನೆಯ ಅಧ್ಯಾಯವು.

---

### { ವಿದುರನು ಮೈತ್ರೇಯನನ್ನು ನಾನಾವಿಧವಾಗಿ ಪ್ರಶ್ನೆಮಾಡುದುದು. }

ಹೀಗೆ ಹೇಳುತ್ತಿರುವ ಮೈತ್ರೇಯನ ಮಾತನ್ನು ಕೇಳಿ, ವ್ಯಾಸಪುತ್ರ ನಾಗಿಯೂ ತತ್ವದರ್ಶಿಯಾಗಿಯೂ ಇದ್ದ ವಿದುರನು, ತನ್ನ ಪ್ರಶ್ನೆಗಳಿಂದ ಆ ಮೈತ್ರೇಯನಿಗೆ ಮತ್ತಷ್ಟು ಪ್ರೋತ್ಸಾಹವುಂಟಾಗುವಂತೆ ತಿರುಗಿ ಪ್ರಶ್ನೆ ಮಾಡುವನು. “ಓ ಮಹರ್ಷೀ! ಜ್ಞಾನಾದಿ ಷಡ್ಗುಣ ಪರಿಪೂರ್ಣನಾ ಗಿಯೂ, ಜ್ಞಾನೈಕಸ್ವರೂಪಕನಾಗಿಯೂ, ಆದುದರಿಂದಲೇ ಯಾವಾಗಲೂ ಯಾವುದೊಂದು ವಿಕಾರವೂ ಇಲ್ಲದವನಾಗಿಯೂ, ಸತ್ವರಜಸ್ತಮಸ್ಸು

ಗಳೆಂಬ ಪ್ರಕೃತಿಗುಣಗಳಲ್ಲಿ ಯಾವುದೊಂದರ ಸಂಬಂಧವೂ ಇಲ್ಲದವನಾಗಿರುವ ಆ ಭಗವಂತನಿಗೆ, ಈ ಗುಣಗಳ ಸಂಬಂಧದಿಂದುಂಟಾಗತಕ್ಕ ದುಃಖ ಮೋಹಾದಿಗಳೂ, ಮನುಷ್ಯಾದಿ ರೂಪವಿಕಾರಗಳೂ, ಲೀಲಾರ್ಥವಾಗಿಯಾದರೂ ಏಕೆ ಸಂಭವಿಸಬೇಕು? ಹೀಗೆ ಸಂಭವಿಸಿದ ಮೇಲೆ ಆದರಿಂದುಂಟಾದ ದೋಷಗಳು ಅವನಿಗೆ ಅಂಟದಿರುವುದು ಹೇಗೆ? ಮೇಲೆ ಹೇಳಿದಂತೆ ಭಗವಂತನಿಗೆ ಪರಿಣಾಮ ರೂಪವಾದ ಕ್ರಿಯೆಗಳಾಗಲೀ ಗುಣಸಂಬಂಧವಾಗಲೀ ಇಲ್ಲದ ಮೇಲೆ, ಅವನು ಲೋಕಕ್ಕೆ ಕಾರಣನಾಗಿಯೂ, ಕರ್ತನಾಗಿಯೂ ನಿಲ್ಲುವುದು ಹೇಗೆ? ಮತ್ತು ಪೂರ್ಣಕಾಮನಾದ ಭಗವಂತನಿಗೆ ಈ ಜಗತ್ಸೃಷ್ಟಿ ಮೊದಲಾದ ಕಾರ್ಯಗಳಲ್ಲಿ ಆಸೆಯೇಕೆ? ಮಕ್ಕಳಿಗೆ ಆಟಪಾಟಗಳಲ್ಲಿ ಆಸೆ ಹುಟ್ಟುವಂತೆ ಅವನಿಗೂ ಇದು ಲೀಲಾಮಾತ್ರವೆಂದು ಕೆಲವರು ಹೇಳಬಹುದು. ಈ ದೃಷ್ಟಾಂತವೂ ಸಮಂಜಸವಾಗಿರುವಂತೆ ತೋರುವುದಿಲ್ಲ. ಏಕೆಂದರೆ, ಆಟಕ್ಕೆ ಬೇಕಾದ ಸಾಮಗ್ರಿಗಳಾಗಲೀ, ತನಗೆ ಸಮವಾಗಿ ಆಟವಾಡತಕ್ಕ ಇತರ ಬಾಲಕರಾಗಲೀ ಒದಗಿದಾಗಲೇ ಬಾಲಕರಿಗೆ, ಆ ಆಟದಲ್ಲಿ ಆಸೆಯೂ, ಅದಕ್ಕೆ ಬೇಕಾದ ಪ್ರಯತ್ನವೂ ಸಂಭವಿಸುವುದು. ಭಗವಂತನಾದರೋ ಆತ್ಮಾರಾಮನಾಗಿ ತನ್ನಲ್ಲಿ ತಾನೇ ಆನಂದವನ್ನನುಭವಿಸತಕ್ಕವನು. ಅವಾಪ್ತ ಸಮಸ್ತಕಾಮನಾದುದರಿಂದ ಅವನಿಗೆ ಯಾವುದೊಂದುದ್ದೇಶವೂ ಹುಟ್ಟುವ ಸಂಭವವಿಲ್ಲ. ಒಂದುವೇಳೆ ಕ್ರೀಡಾರ್ಥವಾಗಿ ಆ ಅಭಿಲಾಷೆಯು ಹುಟ್ಟಿದರೂ, ತನಗಿಂತಲೂ ಬೇರೆಯಾದ, ಕ್ರೀಡಾಸಾಮಗ್ರಿಗಳಾಗಲೀ, ಆ ಕ್ರೀಡೆಯಲ್ಲಿ ಪ್ರವೃತ್ತಿಯನ್ನುಂಟುಮಾಡಿಸತಕ್ಕ ಬೇರೊಬ್ಬ ಪುರುಷನಾಗಲೀ ಇಲ್ಲದ ಹೊರತು ಆ ಕಾರ್ಯವೂ ಸಾಧ್ಯವಲ್ಲ. ಹಾಗಿಲ್ಲದೆ ಪೂರ್ಣಕಾಮನಾಗಿ, ಮೊದಲು ತಾನೊಬ್ಬನೇ ಆಗಿದ್ದ ಪರಮಾತ್ಮನಿಗೆ, ಈ ಕೋರಿಕೆಯು ಹುಟ್ಟಿತೆಂಬುದೂ ಅಸಂಗತವಲ್ಲವೇ? ಮತ್ತು ಪ್ರಕೃತಿಪುರುಷರೊಡಗೂಡಿದ ಆ ಭಗವಂತನಿಗೇ ಜಗತ್ಕರ್ತೃತ್ವಾದಿಗಳನ್ನೂ ಅಂಗೀಕರಿಸಿ, "ಈಶ್ವರನು ಹೀಗೆ ಉಪಾದಾನಕಾರಣನಾಗಿದ್ದರೂ, ಅವನಿಗೆ ಪರಿಣಾಮ, ಕ್ಲೇಶ ಮುಂತಾದ ದೋಷಗಳು ಸಂಭವಿಸಲಾರವು. ಏಕೆಂದರೆ, ಪ್ರಕೃತಿ ಪುರುಷರನ್ನು ಶರೀರವಾಗಿ ಹೊಂದಿರುವ ಭಗವಂತನೇ ಜಗತ್ಕಾರಣನೆಂದು ಹೇಳುವುದರಿಂದ, ಕ್ಲೇಶ, ವಿಕಾರ, ಮುಂತಾದುವುಗಳೆಲ್ಲವೂ ಆ ಪ್ರಕೃತಿ

ಪುರುಷರಿಗೆ ಸಂಬಂಧಿಸುವುವೇ ಹೊರತು, ಈಶ್ವರನಿಗೆ ಸಂಬಂಧಿಸಲಾರವು" ಎಂದೂ ಹೇಳಿದೆ. ಇದರಿಂದ, ಗುಣತ್ರಯಾತ್ಮಕವಾಗಿ, ತನಗೆ ಅಧೀನವಾದ ಪ್ರಕೃತಿಯಿಂದಲೇ ಭಗವಂತನು, ಲೋಕಗಳನ್ನು ಸೃಷ್ಟಿಸಿ, ಅವುಗಳನ್ನು ಕಾಪಾಡುತ್ತಿದ್ದು, ಕೊನೆಗೆ ಅವುಗಳನ್ನು ತನ್ನಲ್ಲಿಯೇ ಅಡಗಿಸಿಕೊಳ್ಳುತ್ತ, ಈ ವಿಧವಾಗಿ ಸೃಷ್ಟಿಸ್ಥಿತಿಸಂಹಾರಗಳೆಂಬ ಮೂರು ಕಾರ್ಯಗಳನ್ನೂ ನಡೆಸುತ್ತಿರುವನು. ತನಗೆ ಶರೀರವಾಗಿದ್ದ ಮಾಯೆಯನ್ನೇ ಮಹತ್ತು ಮೊದಲಾದ ತತ್ವಗಳಂತೆ ಮಾರ್ಪಡಿಸಿ, ತಾನೂ ಒಂದೊಂದು ಗುಣವನ್ನು ಮುಖ್ಯವಾಗಿ ತೋರಿಸುತ್ತ, ಬ್ರಹ್ಮ, ವಿಷ್ಣು, ರುದ್ರರೆಂಬ ಮೂರು ಶರೀರಗಳನ್ನು ಧರಿಸಿ, ಸೃಷ್ಟ್ಯಾದಿ ಕಾರ್ಯಗಳನ್ನು ನಡೆಸುವನು. ಇದರಿಂದ ಆ ಪರಮಾತ್ಮನಿಗೆ ದೋಷಸಂಬಂಧವೇ ಇರಲಾರದು, ಎಂದು ಸಮಾಧಾನವನ್ನು ಹೇಳಬಹುದು. ಈ ಸಮಾಧಾನವೂ ತೃಪ್ತಿಕರವಾಗಿ ತೋರುವುದಿಲ್ಲ. ಏಕೆಂದರೆ, ಪರಮಾತ್ಮನಾದವನು ದೇಶಗುಣದಿಂದಾಗಲೀ, ಕಾಲಗುಣದಿಂದಾಗಲೀ, ಅವಸ್ಥಾವಿಶೇಷದಿಂದಾಗಲೀ, ತನಗೆ ತಾನೇ ಆಗಲೀ, ಮತ್ತೊಬ್ಬರ ದೆಸೆಯಿಂದಾಗಲೀ, ಯಾವ ಕಾರಣದಿಂದಲೂ ವ್ಯತ್ಯಾಸಹೊಂದದ ವಿಜ್ಞಾನವೇ ಸ್ವರೂಪವಾಗಿ ಉಳ್ಳವನು. ಅವನು ಸರ್ವಾಂತರ್ಯಾಮಿಯಾದುದರಿಂದ ಅವನಿಗೆ ದೇಶನಿಯಮವಿಲ್ಲ. ದೀಪಜ್ವಾಲೆಯಂತೆ ತಾನಿದ್ದ ಸ್ಥಳವನ್ನು ಮಾತ್ರ ಬೆಳಗುವನೆಂಬ ದೇಶನಿಯಮವಿಲ್ಲದೆ ಎಲ್ಲೆಲ್ಲಿಯೂ ಬೆಳಗುವನು. ಮಿಂಚಿನಂತೆ ಒಂದೊಂದು ಕಾಲದಲ್ಲಿ ಮಾತ್ರ ಕಾಣಿಸಿಕೊಂಡು ಕಣ್ಮರೆಯಾಗುವನೆಂಬೀ ಕಾಲನಿಯಮವಿಲ್ಲದೆ ಯಾವಾಗಲೂ ಬೆಳಗುತ್ತಿರುವನು. ಮತ್ತು ಈಶ್ವರನು ವಿಕಾರಶೂನ್ಯನಾದುದರಿಂದ ಅವನಿಗೆ ಯಾವ ವಿಧದ ಅವಸ್ಥಾಭೇದದಿಂದಲೂ ಜ್ಞಾನಲೋಪವುಂಟಾಗುವ ಪ್ರಸಕ್ತಿಯಿಲ್ಲ. ಸ್ಮೃತಿರೂಪವಾದ ಜ್ಞಾನವು ಕೆಲವು ಸಂದರ್ಭಗಳಲ್ಲಿ ಮಾರ್ಪಡುವುದುಂಟು. ಈಶ್ವರನ ಜ್ಞಾನವು ಅಂತಹುದಲ್ಲ! ಒಬ್ಬ ಮನುಷ್ಯನು ಸ್ವಪ್ನವನ್ನು ಕಂಡರೆ, ಅದು ಅವನೊಬ್ಬನ ಅನುಭವಕ್ಕೆ ಮಾತ್ರ ಬರುವುದೇ ಹೊರತು, ಬೇರೊಬ್ಬರಿಗೆ ತಿಳಿಯಲಾರದು. ಆ ಸ್ವಪ್ನವೂ ಕೂಡ ಆಯಾ ಕಾಲದಲ್ಲಿಯೇ ತೋರಿ ತನಗೆ ತಾನೇ ಅಗೋಚರವಾಗುವುದು. ಈಶ್ವರನ ಜ್ಞಾನವಾದರೋ ಹಾಗೆ ತನಗೆ ತಾನೇ ಸ್ವಲ್ಪಕಾಲವಿದ್ದು ಹೋಗತಕ್ಕುದಲ್ಲ! ಶಾಶ್ವತವಾಗಿರುವುದು. ಈಶ್ವರನು

ಕರ್ಮಾಧೀನನಲ್ಲ. ಜೀವಾತ್ಮರು ಕರ್ಮಾಧೀನರಾದುದರಿಂದ ಅವರ ಜ್ಞಾನವೂ ಕೂಡ ಅವರವರ ಪುಣ್ಯಪಾಪರೂಪಗಳಾದ ಕರ್ಮಗಳ ತಾರತಮ್ಯವನ್ನನುಸರಿಸಿ ಹೆಚ್ಚು ಕಡಿಮೆಯಾಗುವುದು. ಈಶ್ವರನ ಜ್ಞಾನಕ್ಕಾದರೋ ಈ ವಿಧವಾದ ತಾರತಮ್ಯವಿಲ್ಲದೆ ಯಾವಾಗಲೂ ಒಂದೇ ವಿಕಾಸದಲ್ಲಿರುವುದು. ಹೀಗೆ ಯಾವ ಕಾಲದಲ್ಲಿಯಾಗಲೀ, ಯಾವ ಸ್ಥಳದಲ್ಲಿಯಾಗಲೀ, ಯಾವ ಅವಸ್ಥೆಯಲ್ಲಿಯಾಗಲೀ, ಯಾವ ಕಾರಣದಿಂದಾಗಲೀ, ವ್ಯತ್ಯಾಸವನ್ನು ಹೊಂದದ ಪರಮಾತ್ಮನಿಗೆ, ಮಾಯೆಯೆಂಬ ಪ್ರಕೃತಿಯೊಡನೆ ಸಂಬಂಧವು ಹೇಗೆ? ಮೇಲೆ ಹೇಳಿದ ದೇಶಕಾಲಾದಿಗಳಲ್ಲಿ ಯಾವುದೊಂದರಿಂದಲಾದರೂ, ಆ ಈಶ್ವರನ ಜ್ಞಾನಕ್ಕೆ ವಿಕಾರವುಂಟಾಗುವ ಪಕ್ಷದಲ್ಲಿ, ಆತನಿಗೆ ಪ್ರಕೃತಿ ಸಂಬಂಧವನ್ನೂ ಅಂಗೀಕರಿಸಬಹುದು. ಅದೊಂದೂ ಇಲ್ಲದ ಪರಮಾತ್ಮನಿಗೆ ಪ್ರಕೃತಿಸಂಬಂಧವೆಂಬುದು ಹೇಗೆ? ಈ ಭಗವಂತನು ಜೀವಾತ್ಮಗಳಲ್ಲಿ ಅಂತರಾತ್ಮನಾಗಿ, ಸಮಸ್ತ ಶರೀರಗಳಲ್ಲಿಯೂ ಸೇರಿರುವನಲ್ಲವೇ? ಹೀಗಿದ್ದರೂ ಸತ್ವಾದಿ ಗುಣಕಾರ್ಯಗಳಾದ ಗರ್ಭ, ಜನ್ಮ, ಜರಾ, ಮರಣಾದಿಗಳೂ, ಪರಿಣಾಮಾದಿಗಳೂ ಆಯಾ ಜೀವಗಳಿಗೆ ಮತ್ತು ದೇವಾದಿ ಶರೀರಗಳಿಗೆ ಮಾತ್ರ ಸಂಬಂಧಿಸಲಾರವೆಂದೂ ಹೇಳುವುದು ಸಮಂಜಸವಾಗಿಲ್ಲ. ಏಕೆಂದರೆ, ಜಾಗರ (ಎಚ್ಚರಗೊಂಡಿರುವುದು), ಸ್ವಪ್ನ, ಸುಷುಪ್ತಿ, ಮೂರ್ಛೆ, ಪ್ರಾಣೋತ್ಕ್ರಮಣ, ಇವೇ ಮೊದಲಾದ ಬೇರೆ ಬೇರೆ ಅವಸ್ಥೆಗಳಲ್ಲಿ, ಜೀವನಿಗೆ ಆಯಾ ಸಂದರ್ಭಾನುಸಾರವಾಗಿ ಬರತಕ್ಕ ದೋಷಗಳೆಲ್ಲವೂ, ಅವನಲ್ಲಿ ಅಂತರಾತ್ಮನಾದ ಪರಬ್ರಹ್ಮನಿಗೂ ಸಂಬಂಧಿಸದಿರದು. ಪರಮಾತ್ಮನು ಕರ್ಮಕ್ಕೆ ಅಧೀನನಲ್ಲದ ಮಾತ್ರಕ್ಕೆ, ಆ ದೋಷಗಳು ಸಂಭವಿಸಲಾರವೆಂದು ಹೇಳುವುದಕ್ಕಿಲ್ಲ. ಪರಮಾತ್ಮನಿಗೆ ಕರ್ಮಸಂಬಂಧವಿಲ್ಲದಿದ್ದ ಮಾತ್ರಕ್ಕೇನು? ಕರ್ಮವೆಂಬುದೇ ಜೀವನಿಗೆ ದೇಹಸಂಬಂಧವನ್ನುಂಟುಮಾಡಿಯೇ ಅದರ ಮೂಲಕವಾಗಿ ದುಃಖಮೋಹಾದಿ ದೋಷಗಳನ್ನೂ ಸೇರಿಸುವುದು. ಈಶ್ವರನಿಗೆ ಕರ್ಮಸಂಬಂಧವಿಲ್ಲದಿದ್ದರೂ ಅವನು ದೇವಮನುಷ್ಯಾದಿ ಶರೀರಗಳಲ್ಲಿ ಜೀವನ ಮೂಲಕವಾಗಿ ಒಳಹೊಕ್ಕಿರಬೇಕಲ್ಲವೇ? ಆ ಜೀವನ ಮೂಲಕವಾಗಿಯೇ ಇವನಿಗೂ ದೇಹಸಂಬಂಧವುಂಟೆಂಬುದು ಸಿದ್ಧವಷ್ಟೇ? ಆದುದರಿಂದ ಜೀವನಿಗೆ ಉಂಟಾಗತಕ್ಕ ಗರ್ಭ, ಜನ್ಮ, ಜರಾ, ಮರಣಾದಿ ದೋಷಗಳೆಲ್ಲವೂ

ಈಶ್ವರನಿಗೂ ಉಂಟೆಂದೇ ಹೇಳಬೇಕಾಗುವುದು. ಕರ್ಮವೆಂಬುದು ಜೀವನಿಗೆ ದೇಹಸಂಬಂಧದ ಮೂಲಕವಾಗಿಯೇ ದೋಷಗಳನ್ನುಂಟುಮಾಡುವಾಗ, ಆ ಜೀವನಲ್ಲಿ ಪರಮಾತ್ಮನೂ ಸೇರಿದ್ದ ಮೇಲೆ, ಆ ಪರಮಾತ್ಮನಿಗೆ ಮಾತ್ರ ಆ ದೋಷಗಳಿಲ್ಲವೆಂಬುದು ಹೇಗೆ? ಇದಲ್ಲದೆ ಕರ್ಮವೇ ಸುಖದುಃಖಗಳಿಗೆ ಕಾರಣವಾಗಿದ್ದ ಪಕ್ಷದಲ್ಲಿ, ದೇಹಸಂಬಂಧಕ್ಕೆ ಪ್ರಯೋಜನವೇ ಇಲ್ಲದೆ ಹೋಗುವುದು. ಆದುದರಿಂದ ದೇಹಸಂಬಂಧವೇ ಸುಖದುಃಖಗಳಿಗೆ ಕಾರಣವೆಂದೂ ಹೇಳಬೇಕಾಗಿದೆ. ಆ ದೇಹಸಂಬಂಧವು ಈಶ್ವರನಿಗೆ ಉಂಟೆಂದು ಒಪ್ಪಿಕೊಳ್ಳಬೇಕಾದರೆ, ಅಶುದ್ಧವಾದ ಬಗೆಬಗೆಯ ದೇಹಗಳಲ್ಲಿ ಸೇರುವುದೊಂದೇ ಸಮಸ್ತ ದೋಷಗಳಿಗೂ ನೆಲೆಯೆನಿಸಿದಂತಾಗುವುದು. ಆಯಾ ದೇಹಗಳನ್ನು ನಿಯಮಿಸುವುದಕ್ಕಾಗಿಯೇ ಪರಮಾತ್ಮನು ತಾನೇ ಇಷ್ಟಪಟ್ಟು ಅವುಗಳಲ್ಲಿ ಪ್ರವೇಶಿಸುವುದಾದರೂ, ಆಗಲೂ ಅವನಿಗೆ ಅದರ ದೋಷವು ಬಿಟ್ಟದಲ್ಲ. ಒಬ್ಬ ಮನುಷ್ಯನು ಕೀವುಗಳಿಂದಲೂ, ರಕ್ತಗಳಿಂದಲೂ ತುಂಬಿ ಬಹಳ ದುರ್ಗಂಧ ಯುಕ್ತವಾದ ಒಂದು ಹಳ್ಳದಲ್ಲಿ ಇಷ್ಟಪಟ್ಟು ಹೋಗಿ ಬಿದ್ದರೂ, ಅವನಿಗೆ ಅದನ್ನೇ ಪುರುಷಾರ್ಥವೆಂದು ಹೇಳುವುದಕ್ಕಿಲ್ಲ. ಆದುದರಿಂದ ಜಗತ್ಕಾರಣನಾದ ಪರಮಪುರುಷನು, ಸರ್ವಜ್ಞತ್ವ ಮೊದಲಾದ ಸಮಸ್ತ ಗುಣಗಳಿಗೂ ತಾನು ನೆಲೆಯಾಗಿದ್ದರೂ, ತನಗೆ ಕರ್ಮಸಂಬಂಧವಿಲ್ಲದಿದ್ದರೂ, ಅವನು ಎಲ್ಲಾ ಪ್ರಾಣಿಗಳ ಶರೀರಗಳಲ್ಲಿಯೂ ಒಳಹೊಕ್ಕಿರುವುದಾಗಿ ಅವನಿಗೆ ಶರೀರ ಸಂಬಂಧವನ್ನು ಒಪ್ಪಿಕೊಳ್ಳುವುದರಿಂದ, ಅದರಿಂದುಂಟಾಗತಕ್ಕ ದೋಷಗಳೆಲ್ಲಕ್ಕೂ ಅವನನ್ನೂ ಗುರಿಮಾಡಿದಂತೆಯೇ ಆಗುವುದು. ಶರೀರದಲ್ಲಿ ಪ್ರವೇಶಿಸಿದ ಮೇಲೆ ಅದರ ದೋಷಗಳು ಸಂಭವಿಸದಿರವು. ಓ ಸರ್ವಜ್ಞನಾದ ಮೈತ್ರೇಯನೆ! ಈ ವಿಧವಾದ ಅಜ್ಞಾನದಿಂದ, ನನ್ನ ಮನಸ್ಸು ನಿಜವನ್ನು ತಿಳಿಯದೆ ತತ್ತಳಿಸುತ್ತಿರುವುದು. ಈ ನನ್ನ ಅಜ್ಞಾನವನ್ನು ನೀಗಿಸಿ, ನನ್ನ ಸಂಶಯವನ್ನು ಹೋಗಲಾಡಿಸಿ, ತತ್ವೋಪದೇಶದಿಂದ ನನ್ನನ್ನುದ್ಧರಿಸಬೇಕು" ಎಂದನು.

ಹೀಗೆ ನಿಜವನ್ನು ತಿಳಿಯಬೇಕೆಂಬ ಉದ್ದೇಶದಿಂದ, ವಿದುರನು ವಿನಯಪೂರ್ವಕವಾಗಿ ಪ್ರಾರ್ಥಿಸುವುದನ್ನು ಕೇಳಿ, ಭಗವದ್ಭಕ್ತಶಿರೋಮಣಿಯಾಗಿಯೂ, ತತ್ವಜ್ಞನಾಗಿಯೂ ಇರುವ ಮೈತ್ರೇಯ ಮಹಾಮುನಿಯು,

ಮನಸ್ಸಿನಲ್ಲಿ ಸಂತೋಷಗೊಂಡು, ಮುಗುಳ್ನಗೆಯಿಂದ ಕೂಡಿದವನಾಗಿ, ಆ ವಿದುರನಿಗೆ ಸಂಪೂರ್ಣವಾಗಿ ಸಂದೇಹ ನಿವೃತ್ತಿಯಾಗುವಂತೆ ಸಮಾಧಾನ ಗಳನ್ನು ಹೇಳತೊಡಗಿದನು. "ಓ! ವಿದುರಾ! ಕೇಳು! ಚೇತನಾಚೇತನ ಗಳನ್ನು ನಿಯಮಿಸುವುದಕ್ಕಾಗಿ ಈಶ್ವರನು ಅವುಗಳಲ್ಲಿ ತನ್ನ ಸ್ವೇಚ್ಛೆಯಿಂದ ಅಂತರ್ಯಾಮಿಯಾಗಿ ನೆಲೆಗೊಂಡಿದ್ದರೂ, ಅವುಗಳ ಸಂಬಂಧದಿಂದುಂಟಾಗುವ ದುಃಖ, ವಿಕಾರ, ಮುಂತಾದ ದೋಷಗಳು ಸಂಭವಿಸಲಾರವು. ಆದರೆ ನೀನು ಚಿದಚಿತ್ತುಗಳ ಸಂಬಂಧದಿಂದ ಅವುಗಳಿಗೆ ಸಂಭವಿಸುವ ದೋಷಗಳು ಭಗ ವಂತನಿಗೂ ಸಂಬಂಧಿಸಿಯೇ ತೀರಬೇಕೆಂದು ಹೇಳಿದೆಯಷ್ಟೆ? ಇದು ಯುಕ್ತ ವಲ್ಲ. ಏಕೆಂದರೆ: ಚೇತನನಾದರೂ ಸಹಜವಾದ ಸ್ಥಿತಿಯಲ್ಲಿ ದೋಷ ಸ್ವರೂಪನಲ್ಲ. ಪುಣ್ಯಪಾಪ ರೂಪಗಳಾದ ಕರ್ಮಗಳಲ್ಲಿ ಸಿಕ್ಕಿಬಿದ್ದ ಜೀವಾತ್ಮ ರಿಗೆ, ಅವರವರ ಕರ್ಮಸ್ವಭಾವಗಳಿಗೆ ತಕ್ಕಂತೆ, ಪರಮಪುರುಷನ ಸಂಕಲ್ಪ ವನ್ನನುಸರಿಸಿ, ಒಂದೇ ವಸ್ತುವು ಕಾಲಭೇದದಿಂದಲೂ, ಜೀವಭೇದದಿಂದಲೂ, ಸುಖದುಃಖಗಳೆರಡಕ್ಕೂ ಕಾರಣವಾಗಬಹುದು. ಹಾಗಿದ್ದರೆ ಆ ವಸ್ತುವಿನ ಸ್ವಭಾವವೇ ಆ ಬಗೆಯಾಗಿದ್ದ ಪಕ್ಷದಲ್ಲಿ, ಎಲ್ಲಾ ವಸ್ತುಗಳೂ, ಎಲ್ಲಾ ಕಾಲ ಗಳಲ್ಲಿಯೂ, ಕೇವಲ ಸುಖವನ್ನಾಗಲೀ, ಕೇವಲ ದುಃಖವನ್ನಾಗಲೀ ಉಂಟು ಮಾಡಬೇಕಾಗುವುದು. ಲೋಕಾನುಭವದಲ್ಲಿ ಹೀಗೆ ಕಾಣುವುದಿಲ್ಲ. ಒಂದೇ ವಸ್ತುವು ಒಬ್ಬನಿಗೆ ಬಂದು ಸಮಯದಲ್ಲಿ ಸುಖವನ್ನುಂಟುಮಾಡುತ್ತಿದ್ದರೂ, ಅದೇ ವಸ್ತುವು ಅದೇ ಪುರುಷನಿಗೆ ಮತ್ತೊಂದು ಸಮಯದಲ್ಲಿ ದುಃಖಹೇತು ವಾಗುವುದು. ಇದಕ್ಕೆ ಕಾರಣವೇನೆಂದರೆ, ಆ ವಸ್ತುವನ್ನನುಭವಿಸತಕ್ಕ ಜೀವನ ಪುಣ್ಯಪಾಪರೂಪವಾದ ಕರ್ಮವೇ ಹೊರತು, ಆ ವಸ್ತುವಿನ ಸ್ವಭಾ ವವಲ್ಲ. ಹಾಗೆ ವಸ್ತುವಿನ ಸ್ವಭಾವವೇ ಆ ಸುಖದುಃಖಗಳಿಗೆ ಕಾರಣವಾಗಿದ್ದ ಪಕ್ಷದಲ್ಲಿ, ಆ ವಸ್ತುವು ಅವನಿಗೆ ಯಾವಾಗಲೂ ಸುಖವನ್ನಾಗಲೀ, ಯಾವಾ ಗಲೂ ಕೇವಲ ದುಃಖವನ್ನಾಗಲೀ, ಉಂಟುಮಾಡಬೇಕೇ ಹೊರತು, ಒಂದು ಸಮಯದಲ್ಲಿ ಸುಖವನ್ನೂ ಮತ್ತೊಂದು ಸಮಯದಲ್ಲಿ ದುಃಖವನ್ನೂ ಉಂಟುಮಾಡಲಾರದು. ಅಥವಾ ಒಂದೇ ವಸ್ತುವಿನಲ್ಲಿ ಈ ಎರಡು ಧರ್ಮ ಗಳೂ ಇರುವುವೆಂದೂ ಹೇಳುವುದಕ್ಕಿಲ್ಲ. ಯಾವ ವಸ್ತುವಿಗೆ ಯಾವುದು ನಿಯತವಾದ ಧರ್ಮವೋ, ಅದಕ್ಕೆ ಅದನ್ನೇ ಸ್ವಭಾವವೆಂದು ಹೇಳುವುದು

ಲೋಕಧರ್ಮವಾದುದರಿಂದ, ಒಂದೇ ವಸ್ತುವಿನಲ್ಲಿ ಪರಸ್ಪರ ವಿರುದ್ಧ ಧರ್ಮಗಳನ್ನು ಸ್ವಭಾವವೆಂದು ಹೇಳುವುದಕ್ಕಿಲ್ಲ. ಸುಖವನ್ನುಂಟುಮಾಡುವುದಾಗಲೀ ದುಃಖವನ್ನುಂಟುಮಾಡುವುದಾಗಲೀ, ಒಂದೇ ಕಾಲದಲ್ಲಿ, ಒಂದೇ ವಸ್ತುವಿಗೆ ಸಂಭವಿಸಲಾರದು. ಆದುದರಿಂದ ಅವೆರಡನ್ನೂ ಇವುಗಳ ಸ್ವಭಾವವೆಂದೇ ಹೇಳುವುದು ಯುಕ್ತವಲ್ಲ. ಯಾವ ವಸ್ತುವೂ ಸುಖವನನ್ನಾಗಲೀ, ದುಃಖವನ್ನಾಗಲೀ, ಉಂಟುಮಾಡತಕ್ಕ ಗುಣವುಳ್ಳುದಲ್ಲ. ಈ ಸುಖದುಃಖಗಳೆಲ್ಲವೂ, ಜೀವಾತ್ಮನ ಪುಣ್ಯಪಾಪರೂಪ ಕರ್ಮಗಳನ್ನೇ ಅನುಸರಿಸಿ ಬರುವುವು. ಜೀವನು ಕರ್ಮವಶನಾದುದರಿಂದ ಆಯಾ ಕರ್ಮಗಳಿಗೆ ತಕ್ಕಂತೆ ಆಯಾ ವಸ್ತುಗಳ ಸಂಬಂಧವು ಗುಣದೋಷಗಳನ್ನು ತೋರಿಸುವುವು. ಪರಬ್ರಹ್ಮನಿಗಾದರೋ ಈ ಕರ್ಮದೋಷಗಳೊಂದೂ ಸಂಬಂಧಿಸಲಾರವು. ಅವನು ಸಮಸ್ತ ಕಲ್ಯಾಣಗುಣಗಳಿಗೂ ಆಶ್ರಯನಾಗಿರುವನು. ಸರ್ವವಿಷಯದಲ್ಲಿಯೂ ಸ್ವತಂತ್ರನು. ಸ್ವಾಭಾವಿಕಗಳಾಗಿಯೂ, ಮಹಾದ್ಭುತಗಳಾಗಿಯೂ ಇರುವ ಅನೇಕ ಆಶ್ಚರ್ಯಶಕ್ತಿಗಳುಳ್ಳವನು. ಆದುದರಿಂದ ಆ ಈಶ್ವರನಿಗೆ ದೋಷಾಶ್ರಯಗಳಾದ ಈ ಚೇತನಾಚೇತನಗಳ ಸಂಬಂಧವೆಲ್ಲವೂ, ಅವುಗಳನ್ನು ವಿಚಿತ್ರರೀತಿಯಿಂದ ನಿಯಮಿಸತಕ್ಕ ಲೀಲೆಗೋಸ್ಕರವಾಗಿಯೇ ಹೊರತು, ಬೇರೆಯಲ್ಲ. ಜೀವನಿಗೆ ಪ್ರಕೃತಿ ಸಂಬಂಧದಿಂದ ಅನೇಕ ದೋಷಗಳುಂಟಾಗುವುದೇನೋ ನಿಜವು! ಈಶ್ವರನಾದರೋ ಕರ್ಮಗಳಿಗೆ ಒಳಪಟ್ಟವನಲ್ಲವಾದುದರಿಂದ, ಅವನಿಗೆ ಈ ಪ್ರಕೃತಿ ಸಂಬಂಧವೆಂಬುದು ಸ್ವೇಚ್ಛೆಯಿಂದಲೇ ಅಂಗೀಕರಿಸಲ್ಪಟ್ಟಿರುವುದು. ಆದುದರಿಂದ ಅದಕ್ಕೆ ಸಂಬಂಧಪಟ್ಟ ದೋಷಗಳೊಂದೂ ಅವನನ್ನು ಮುಟ್ಟಲಾರವು. ವಿದುರಾ! ಕರ್ಮವೆಂಬುದೇನು? ಎಂದು ಕೇಳುವೆಯಾ? ಹೇಳುವೆನು ಕೇಳು. ಈಶ್ವರನು ಚೇತನರ ಪುಣ್ಯಪಾಪಗಳನ್ನು ಲೆಕ್ಕವಿಟ್ಟು "ಇವನು ಈ ಕಾರ್ಯವನ್ನು ನಡೆಸಿದುದಕ್ಕಾಗಿ ಇವನಿಗೆ ಈ ಫಲವುಂಟಾಗಬೇಕು" ಎಂದು ಅವರವರ ಕಾರ್ಯಗಳಿಗೆ ತಕ್ಕ ಫಲವನ್ನು ಕೊಡುವುದಾಗಿ ಸಂಕಲ್ಪಿಸಿರುವನು. ಆದುದರಿಂದ ಈ ಕರ್ಮವೆಂಬುದೂ ಭಗವಂತನ ಸಂಕಲ್ಪವೇ ಹೊರತು ಬೇರೆಯಲ್ಲ. ಹೀಗೆ ಆ ಭಗವಂತನ ನಿಗ್ರಹಾನುಗ್ರಹರೂಪವಾದ ಕರ್ಮಸಂಬಂಧವನ್ನು, ಆ ಭಗವಂತನಿಗೇ ಉಂಟೆಂದು ಹೇಳುವುದಕ್ಕೆ ಸ್ವಲ್ಪಮಾತ್ರವೂ ಅವಕಾಶವಿಲ್ಲ. ಹೀಗೆ

ಭಗವಂತನು ಕರ್ಮಕ್ಕೆ ವಶನಲ್ಲದುದರಿಂದ ಕರ್ಮಸಂಬಂಧವನ್ನನುಸರಿ ಸಿಯೇ ಸುಖದುಃಖಗಳನ್ನುಂಟುಮಾಡತಕ್ಕ ಪ್ರಕೃತಿಯಲ್ಲಿ ತಾನು ಸೇರಿದ್ದರೂ ಅದರ ದೋಷಕ್ಕೆ ಭಾಗಿಯಾಗುವವನಲ್ಲ. ಈ ವಿಧವಾಗಿ ಕರ್ಮಸಂಬಂಧ ವಿಲ್ಲದವನಾಗಿಯೂ, ಮತ್ತೊಬ್ಬರಿಗೆ ಅಧೀನನಲ್ಲದೆ ಸ್ವತಂತ್ರನಾಗಿಯೂ ಇರುವ ಈಶ್ವರನಿಗೆ, ಸತ್ವಾದಿಗುಣಗಳಿಂದುಂಟಾಗುವ ವಿಕಾರಗಳಾಗಲೀ ವಿರೋಧಿಸಲಾರವು. ಈಶ್ವರನಿಗೆ ಶರೀರಸಂಬಂಧವಿದ್ದರೂ ಅವುಗಳ ದೋಷವು ಅಂಟದಿರುವುದಕ್ಕೆ ಅವನ ಆಶ್ಚರ್ಯಶಕ್ತಿಯೇ ಕಾರಣವು. ಇದರಂತೆ ಭಗವಂತನು ಜೀವಾತ್ಮಗಳಲ್ಲಿ ಒಳಹೊಕ್ಕು ನಿಂತಿದ್ದರೂ, ಪ್ರಕೃತಿ ಸಂಬಂಧದಿಂದ ಜನನ ಮರಣ ಕ್ಲೇಶಗಳನ್ನು ಹೊಂದುತ್ತಿರುವ ಆ ಜೀವನಿಗೆ ಸಂಬಂಧಿಸಿದ ದೋಷಗಳನ್ನು ತಾನು ಅಂಟಿಸಿಕೊಳ್ಳದಿರುವುದಕ್ಕೂ ಆವನ ಆಶ್ಚರ್ಯ ಶಕ್ತಿಯೇ ಕಾರಣವು. ಆದುದರಿಂದ ಅವನಲ್ಲಿ ಪ್ರಕೃತಿ ದೋಷವಾಗಲೀ, ಜೀವದೋಷವಾಗಲೀ, ಸಂಬಂಧಿಸಲಾರವೆಂಬುದರಲ್ಲಿ ವಿರೋಧವೇನೂ ಇಲ್ಲವು. ವೇದಗಳೂ ಕೂಡ ಆ ಪರಮಪುರುಷನು ಆಶ್ಚರ್ಯಶಕ್ತಿಯುಳ್ಳವನೆಂದೇ ಉದ್ಘೋಷಿಸುತ್ತಿರುವುವು. ಆ ಭಗವಂತನನ್ನು ನಾವು ಕಣ್ಣಿಂದ ನೋಡ ಲಾರೆವು. ಶ್ರುತಿವಾಕ್ಯಗಳಿಂದಲೇ ಅವನ ಸ್ವರೂಪವನ್ನು ತಿಳಿಯಬೇಕು. ಪ್ರಕೃತಿಪುರುಷರಲ್ಲಿ ಒಳಹೊಕ್ಕಿದ್ದರೂ ಭಗವಂತನಿಗೆ ಅವುಗಳ ದೋಷವನ್ನು ಅಂಟಿಸಿಕೊಳ್ಳದ ಆಶ್ಚರ್ಯಶಕ್ತಿಯುಂಟೆಂದು ವೇದಗಳೇ ಹೇಳುತ್ತಿರುವುವಷ್ಟೆ? ಇಂದ್ರಿಯಗಳಿಗೆ ಗೋಚರವಲ್ಲದ ವಸ್ತುವಿನಲ್ಲಿ, ನಾವು ನಮ್ಮ ಯುಕ್ತಿಯಿಂದ ಕಲ್ಪಿಸುವ ಗುಣದೋಷಗಳೊಂದೂ ಸಮಂಜಸವಾಗಲಾರವು. ಶಬ್ದಪ್ರಮಾಣ ದಿಂದ ನಾವು ಗ್ರಹಿಸಿದುದನ್ನೇ ಒಪ್ಪಿಕೊಳ್ಳಬೇಕು. ಈ ವಿಷಯಗಳೆಲ್ಲವೂ ಶ್ರುತಿಪ್ರಮಾಣದಿಂದಲೇ ನಮಗೆ ತಿಳಿಯಬೇಕಾದುದರಿಂದ, ಅದರ ಮೇಲೆ ಸಂದೇಹಿಸುವುದಕ್ಕೆ ಅವಕಾಶವಿಲ್ಲ. ಇದೇ ಸಮಾಧಾನದಿಂದ "ವಿಕಾರಶೂನ್ಯ ನಾಗಿಯೂ, ಗುಣರಹಿತನಾಗಿಯೂ ಇರುವ ಭಗವಂತನಿಗೆ ಜಗತ್ಸೃಷ್ಟಿ ಮೊದಲಾದ ಕಾರ್ಯಗಳಲ್ಲಿ ಪ್ರವೃತ್ತಿಯು ಹೇಗೆ? ಎಂಬ ಆಕ್ಷೇಪಣೆಯೂ ನಿವೃತ್ತವಾಗುವುದು. ಆದರೆ "ಜಗತ್ತಿಗೆ ಈಶ್ವರನೇ ಉಪಾದಾನ ಕಾರಣ ನಾಗಿದ್ದ ಪಕ್ಷದಲ್ಲಿ, ಲೋಕದಲ್ಲಿರುವ ಸಮಸ್ತ ವಸ್ತುಗಳೂ ಅವನೇ ಆಗಿ ಬೇಕಲ್ಲವೇ? ಆಗ ಆ ದೋಷಗಳೆಲ್ಲವೂ, ಅವನಿಗೆ ಸಂಬಂಧಿಸದಿರುವುದು

ಹೇಗೆ? ಎಂದು ನೀನು ಶಂಕಿಸಿದೆಯಷ್ಟೆ? ಪ್ರಕೃತಿಪುರುಷರನ್ನು ಶರೀರವಾಗಿ ಹೊಂದಿದ ಪರಮಪುರುಷನೇ ಜಗತ್ತಿಗೆ ಉಪಾದಾನಕಾರಣವಾದುದರಿಂದ, ಆ ಶರೀರಗತವಾದ ದೋಷವೆಲ್ಲವೂ ಆ ಪ್ರಕೃತಿಪುರುಷರಿಗೇ ಸಂಬಂಧಿಸುವುದೇ ಹೊರತು ಪರಮಪುರುಷನನ್ನು ಸೇರಲಾರದು. ಹೇಗೆಂದು ಕೇಳುವೆಯಾ? ನಾನಾವರ್ಣದ ನೂಲುಗಳಿಂದ ನೇಯಲ್ಪಟ್ಟ ವಸ್ತ್ರದಲ್ಲಿ, ಕಪ್ಪು, ಬಿಳುಪು ಮೊದಲಾದ ಬಣ್ಣಗಳೆಲ್ಲವೂ ಆಯಾ ನೂಲುಗಳಲ್ಲಿಯೇ ಸೇರಿಕೊಂಡಿರುವುವು. ಆಯಾ ನೂಲುಗಳನ್ನು ಕಿತ್ತು ತೆಗೆದಾಗ, ಆಯಾ ಬಣ್ಣವೂ ಅದರೊಡನೆ ಸೇರಿ ಬರಬೇಕಲ್ಲದೆ, ಬಣ್ಣವು ಮಾತ್ರ ಉಳಿಯಲಾರದು. ಅದರಂತೆಯೇ ಪ್ರಕೃತಿಪುರುಷರಲ್ಲಿರುವ ದೋಷಗಳೂ ಈಶ್ವರನಿಗೆ ಸಂಬಂಧಿಸಲಾರವು. ಬಾಲ್ಯ, ಯೌವನ, ಮುಂತಾಗಿ ಶರೀರಕ್ಕೆ ಸಂಭವಿಸುವ ಅವಸ್ಥಾಭೇದಗಳೆಲ್ಲವೂ ಜೀವಾತ್ಮಕ್ಕೆ ಹೇಗೆ ಸಂಬಂಧಿಸುವುದಿಲ್ಲವೋ, ಹಾಗೆಯೇ ಚೇತನಾಚೇತನ ದೋಷಗಳೂ ಈಶ್ವರನಿಗೆ ಸೇರಲಾರವು. ಭಗವಂತನು ತನ್ನ ಇಷ್ಟಾನುಸಾರವಾಗಿಯೇ ಸಮಸ್ತ ಕ್ಷೇತ್ರಗಳಲ್ಲಿಯೂ ಅಂತರ್ಯಾಮಿಯಾಗಿರುವನು. ಆದರೂ ಆ ಕ್ಷೇತ್ರದೋಷಗಳು ಅವನಿಗೆ ಸಂಬಂಧಿಸಲಾರವು. ಆದರೆ "ಕೇವಲ ಕಶ್ಮಲಕ್ಕೆಡೆಯಾದ ಮನುಷ್ಯದೇಹದಲ್ಲಿ ಪ್ರವೇಶಿಸಿರುವುದೇ ಈಶ್ವರನಿಗೆ ಒಂದು ದೋಷವಲ್ಲವೇ? ಒಬ್ಬ ಮನುಷ್ಯನು ತಾನಾಗಿ ಇಷ್ಟಪಟ್ಟು ವಿನೋದಾರ್ಥವಾಗಿ ಹೋಗಿ ಒಂದು ಕಶ್ಮಲದ ಗುಂಡಿಯಲ್ಲಿ ಹೊರಳಿ ಬಂದರೂ ಅವನಿಗೆ ಅದರ ದೋಷಗಳು ತಪ್ಪಲಾರವಷ್ಟೆ? ಅದರಂತೆ ಭಗವಂತನು ಸ್ವೇಚ್ಛೆಯಿಂದ ಜೀವಾಂತರ್ಗತವಾಗಿ ಮನುಷ್ಯದೇಹದಲ್ಲಿ ಪ್ರವೇಶಿಸಿದ ಮಾತ್ರಕ್ಕೆ ಅವನಿಗೆ ದೋಷವು ತಪ್ಪಿದುದೇನು? ಅದರಂತೆಯೇ ಜೀವನಿಗೂ ದೇಹಾದಿ ಸಂಬಂಧವಿದ್ದರೂ ಅವರಿಂದುಂಟಾದ ದೋಷಗಳು ಸಂಬಂಧಿಸಲಾರವೆಂದೇಕೆ ಗ್ರಹಿಸಬಾರದು?" ಎಂದು ನೀನು ಕೇಳಬಹುದು. ಭಗವಂತನಲ್ಲಿರುವ ಗುಣಗಳೆಲ್ಲವೂ ಜೀವನಿಗಿರಲಾರವು. ಆ ಸರ್ವೇಶ್ವರನ ಆಶ್ಚರ್ಯಶಕ್ತಿಯೇ ಬೇರೆ! ಜೀವಾತ್ಮನೂ ಭಗವಂತನಂತೆ ಅಪಹತಪಾಪ್ಮತ್ವವೇ (ಪಾಪಸಂಬಂಧವಿಲ್ಲದಿರುವುದು) ಮೊದಲಾದ ಕೆಲವು ಗುಣಗಳುಳ್ಳವನಾಗಿದ್ದರೂ, ಆ ಜೀವಸ್ವರೂಪವು ಅಜ್ಞಾನಾದಿಗಳಿಂದ ಮೋಹಿತವಾಗಿರುವುದು. ಆದುದರಿಂದಲೇ ಜೀವನು ಸ್ವರೂಪವನ್ನು ಸರಿಯಾಗಿ ತಿಳಿಯಲಾರದೇ, ದೇಹವೇ

ತಾನೆಂದು ತಿಳಿದುಕೊಳ್ಳುತ್ತಿರುವನು. ಕರ್ಮಾಧೀನನಾದ ಈ ಜೀವನಿಗೆ ಶುದ್ಧವಾದ ಆತ್ಮಸ್ವರೂಪಜ್ಞಾನವೊಂದೇ ಪುರುಷಾರ್ಥವೆನಿಸಿಕೊಳ್ಳುವುದೇ ಹೊರತು, ಮೇಲೆ ಕಾಣುವ ದೇವಮನುಷ್ಯತ್ವಾದಿ ರೂಪಗಳ ಭಾವನೆಯಾಗಲೀ ಈ ಶರೀರಗಳಲ್ಲಿ ಶಿರಸ್ಸು, ಮೊದಲಾದ ಯಾವುದಾದರೂ ಅವಯವಗಳಿಗೆ ಭಂಗವುಂಟಾದಾಗ "ತನ್ನ ತಲೆಯು ಮುರಿಯುತು" "ತನ್ನ ಕಾಲು ಛೇದಿಸಿತು" ಎಂಬ ದುಃಖವಾಗಲೀ, ಉಂಟಾಗುವುದೆಲ್ಲವೂ ಆ ದೇಹವನ್ನೇ ತಾನೆಂದು ಭಾವಿಸಿರುವುದೇ ಕಾರಣವಲ್ಲದೆ ಬೇರೆಯಲ್ಲ! ಜೀವನಿಗೆ ಈ ಭ್ರಾಂತಿಯುಂಟಾಗುವುದೂ ಆ ಭಗವಂತನ ಆಶ್ಚರ್ಯಶಕ್ತಿಯಿಂದೇ ತಿಳಿ! ವಿದುರಾ! ಇದಕ್ಕೊಂದು ದೃಷ್ಟಾಂತವನ್ನು ಹೇಳುವೆನು ಕೇಳು. ಆಕಾಶದಲ್ಲಿರುವ ಚಂದ್ರನನ್ನು ಆಗಾಗ ನಾವು ಸರೋವರಗಳಲ್ಲಿ ಕಾಣುತ್ತಿರುವೆವು. ಆದರೆ ಆ ಜಲದಲ್ಲಿ ಚಂದ್ರಬಿಂಬವು ಪ್ರತಿಫಲಿಸಿರುವುದೇ ಹೊರತು ವಾಸ್ತವಕ್ಕೆ ಅಲ್ಲಿ ಚಂದ್ರನಿಲ್ಲ. ಹಾಗಿದ್ದರೂ ಚಂದ್ರಬಿಂಬವು ನೀರಿನಲ್ಲಿ ಪ್ರತಿಫಲಿಸಿರುವಾಗ, ಆ ನೀರಿನ ಅಲೆದಾಟದಿಂದ, ಆ ಪ್ರತಿಬಿಂಬವು ಆಡುತ್ತಿರುವುದನ್ನು ನೋಡಿದರೆ, ಈ ಅಲೆದಾಟವು ನಿಜವಾದ ಚಂದ್ರನಲ್ಲಿಯೇ ಇರುವಂತೆ ನಮಗೆ ತೋರುವುದು. ಹೀಗೆ ಚಂದ್ರನಲ್ಲಿಲ್ಲದ ನಡುಕವು ಜಲಸಂಬಂಧದಿಂದ ಆ ಚಂದ್ರನಲ್ಲಿಯೇ ಇರುವಂತೆ ಹೇಗೆ ಕಾಣುವುದೋ, ಅದೇ ರೀತಿಯಲ್ಲಿ, ಮೇಲಿನ ಶರೀರಕ್ಕೆ ಸಂಭವಿಸುವ ಶಿರಶ್ಛೇದನಾದಿ ವಿಕಾರಗಳಲ್ಲಿ ಆತ್ಮನಿಗೆ ಸಂಬಂಧವಿಲ್ಲದಿದ್ದರೂ, ಈ ದೇಹಸಂಬಂಧದಿಂದ ಆ ಆತ್ಮಕ್ಕಿದ್ದಂತೆಯೇ ತೋರುವುದು. ಇಷ್ಟೇ ಹೊರತು ವಾಸ್ತವದಲ್ಲಿ ಆತ್ಮನಿಗೆ ಅಂತಹ ದೋಷವೇ ಇಲ್ಲವು. ಹೀಗೆ ಶರೀರದೋಷವನ್ನು ಜೀವನಲ್ಲಿರುವಂತೆ ಭ್ರಾಂತಿಪಡುವಹಾಗೆಯೇ, ಪ್ರಕೃತಿ ಪುರುಷರಿಬ್ಬರನ್ನೂ ಶರೀರವಾಗಿ ಉಳ್ಳ ಭಗವಂತನಿಗೆ, ಅವುಗಳ ಧರ್ಮವು ಸಂಭವಿಸಬಹುದೆಂದು ತಿಳಿಯುವುದೂ ಭ್ರಾಂತಿಮೂಲಕವಾದುದೇ ಹೊರತು ಬೇರೆಯಲ್ಲ. ಭಗವಂತನು ಜೀವಾಂತರ್ಯಾಮಿಯಾಗಿದ್ದರೂ, ಅದರ ದೋಷಗಳನ್ನು ಅಂಟಿಸಿಕೊಳ್ಳದ ಆಶ್ಚರ್ಯಶಕ್ತಿಯನ್ನು ಹೊಂದಿರುವುದು ಮಾತ್ರವಲ್ಲ! ಆ ಜೀವಗತವಾದ ದೋಷವನ್ನು ನೀಗಿಸುವುದಕ್ಕೂ ಸಮರ್ಥನಾಗಿರುವನು. ಅದರ ರೀತಿಯನ್ನೂ ತಿಳಿಸುವೆನು ಕೇಳು! ಹೇಯಗುಣವುಳ್ಳ ಜೀವನು, ಕರ್ಮಯೋಗದಿಂದ ಸಹಕರಿಸಲ್ಪಟ್ಟ ಭಕ್ತಿಯಿಂದ ಆ ವಾಸು

ದೇವನ ಕೃಪೆಯನ್ನು ಸಂಪಾದಿಸಿ, ಅದರ ಬಲದಿಂದ ತನ್ನ ಹೇಯಗುಣಗಳನ್ನು ನೀಗಿ ಶುದ್ಧನಾಗುವನು. ಮುಖ್ಯವಾಗಿ ಒಂದು ಸೂಕ್ಷ್ಮಾಂಶವನ್ನು ಹೇಳುವೆನು ಕೇಳು! ಜೀವಾತ್ಮಪರಮಾತ್ಮರಿಬ್ಬರಿಗೂ ಪ್ರಕೃತಿ ಸಂಬಂಧವುಂಟೆಂಬುದೇನೋ ನಿಜವು! ಆದರೆ ಅದರಲ್ಲಿ ಕೆಲವು ವಿಶೇಷಗಳುಂಟು. ಆ ಪ್ರಕೃತಿಯು ಜೀವಾತ್ಮನನ್ನು ತನಗಧೀನವಾಗಿ ಮಾಡಿಕೊಂಡು, ಅವನಿಗೆ ಆ ಶ್ರೇಯಸ್ಸನ್ನುಂಟುಮಾಡಬಲ್ಲದು. ಪರಮಾತ್ಮನ ವಿಷಯದಲ್ಲಿಯಾದರೋ, ಅದು ಅವನಿಗೆ ಅಧೀನವಾಗಿ ಅವನ ಲೀಲಾಸಾಮಗ್ರಿಯಂತೆ ಆತನ ನಿಯಮಕ್ಕೊಳಪಟ್ಟಿರುವುದು. ಆ ಪ್ರಕೃತಿಪುರುಷರನ್ನು ನಿಯಮಿಸುವುದಕ್ಕಾಗಿಯೇ ಪರಮಾತ್ಮನು ಅವುಗಳಲ್ಲಿ ಪ್ರವೇಶಿಸುವನು. ಹೀಗೆ ಭಗವಂತನು ತನ್ನ ಸ್ವೇಚ್ಛೆಯಿಂದ ಸ್ವೀಕರಿಸಿದ ಅವಿದ್ಯೆಯಾಗಲೀ, ಅದರಿಂದುಂಟಾಗುವ ದೇಹಾತ್ಮಭ್ರಮಾದಿ ದೋಷಗಳಾಗಲೀ ಅವನಿಗೆ ಸಂಬಂಧಿಸಲಾರವು. ಜೀವನಿಗೆ ಪ್ರಕೃತಿ ಸಂಬಂಧದಿಂದ ಆತ್ಮಸ್ವರೂಪವು ತೋರದಿರುವಾಗ, ಮೇಲಿನ ದೇಹವೊಂದು ಮಾತ್ರವೇ ಅವನಿಗೆ ಕಾಣುವುದು. ಅದನ್ನೇ ಆತ್ಮವೆಂದು ಭ್ರಮಿಸುತ್ತಿರುವನು. ಅವನಿಗೆ ಆತ್ಮಸ್ವರೂಪವು ತೋರಿದೊಡನೆ, ಆ ಭ್ರಮವೂ ಬಿಟ್ಟುಹೋಗುವುದು. ವಾಸ್ತವದಲ್ಲಿ ಆತ್ಮವು ದೇಹಕ್ಕಿಂತಲೂ ವಿಲಕ್ಷಣವೆಂಬುದು ಇದರಿಂದ ಹೇಗೆ ಸಿದ್ಧವಾಗುವುದೋ, ಹಾಗೆಯೇ ಆ ಜೀವಾತ್ಮನೂ ಪರಮಾತ್ಮನಿಗೆ ಶರೀರಭೂತವಾಗಿರುವುದರಿಂದ, ಜೀವನಿಗೆ ಸಂಬಂಧಿಸುವ ದೋಷಗಳೊಂದೂ ಪರಮಾತ್ಮನಿಗೆ ಸಂಬಂಧಿಸಲಾರವು. ಪರಮಾತ್ಮನು ಪ್ರಕೃತಿಪುರುಷರಲ್ಲಿ ಒಳಹೊಕ್ಕಮಾತ್ರಕ್ಕೆ ಅವುಗಳ ದೋಷಕ್ಕೂ ಅವನು ಭಾಗಿಯಾಗುವನೆಂದೆಣಿಸುವುದು ಕೇವಲ ಭ್ರಮವು. ಯಾವ ಭಗವಂತನಲ್ಲಿ ಭಕ್ತಿಯೋಗವನ್ನು ಹಿಡಿದಮಾತ್ರಕ್ಕೆ ಜೀವಾತ್ಮನಿಗೂ ದೋಷನಿವೃತ್ತಿಯಾಗುವುದೋ, ಅಂತಹ ಪರಮಾತ್ಮನಿಗೆ ದೋಷಗಳು ತಗುಲಲಾರವೆಂಬುದನ್ನು ಹೇಳಬೇಕೇ? ಈ ಜೀವಾತ್ಮನು ತನ್ನ ಇಂದ್ರಿಯಗಳನ್ನು ಶಬ್ದಾದಿ ವಿಷಯಗಳಲ್ಲಿ ಪ್ರವರ್ತಿಸದಂತೆ ತಡೆದು, ಪ್ರಕೃತಿಪುರುಷರಿಗಿಂತ ವಿಲಕ್ಷಣನಾಗಿಯೂ, ಆಶ್ರಿತರಿಗೆ ಸಂಸಾರ ಬಂಧವನ್ನು ಬಿಡಿಸತಕ್ಕವನಾಗಿಯೂ ಇರುವ ಆ ಪರಮಾತ್ಮನನ್ನು ಸಾಕ್ಷಾತ್ಕರಿಸುತ್ತಿದ್ದಾಗಲೆಲ್ಲಾ, ಅವನಿಗೆ ನಿದ್ರಿಸುವವನ ಕ್ಲೇಶಗಳಂತೆ ಹೇಯಗುಣಗಳೆಲ್ಲವೂ ನಶಿಸುವುವು.

ಆದರೆ ನಿದ್ರಿಸಿದವನಿಗೆ ಆ ನಿದ್ರೆಯ ಕಾಲದಲ್ಲಿ ಕಷ್ಟಗಳು ತೋರದಿದ್ದರೂ, ಎಚ್ಚರವಿದ್ದಾಗ ಆ ಕಷ್ಟವು ಬಂದೊದಗುವುದಲ್ಲವೇ?" ಎಂದರೆ, ಇದು ಆ ವಿಧವಾದ ದುಃಖನಿವೃತ್ತಿಯಲ್ಲ. ಭಗವಂತನನ್ನು ಸಾಕ್ಷಾತ್ಕರಿಸುವಷ್ಟು ಭಕ್ತಿಯನ್ನು ಹಿಡಿದು, ಅವನ ದರ್ಶನವನ್ನು ಪಡೆದವನಿಗೆ, ಯಾವ ಕಾಲ ದಲ್ಲಿಯೂ ಯಾವ ಅವಸ್ಥೆಯಲ್ಲಿಯೂ ಕಷ್ಟವೆಂಬುದೇ ಇರದು. ಓ ಮಹಾತ್ಮ ನಾದ ವಿದುರನೇ! ಭಗವಂತನ ಗುಣಗಳನ್ನು ಕೀರ್ತಿಸಿದರೂ, ಅವನ ಸತ್ಕಥೆಗಳನ್ನು ಕಿವಿಯಿಂದ ಕೇಳಿದರೂ ಸಮಸ್ತ ಕಷ್ಟಗಳೂ ನಶಿಸುವುವೆಂಬು ದರಲ್ಲಿ ಏನೇನೂ ಸಂದೇಹವಿಲ್ಲ. ಆತನ ಕಥಾಶ್ರವಣಕೀರ್ತನಗಳಿಂದಲೇ ಸಮಸ್ತ ದುಃಖಗಳೂ ನಶಿಸುವಾಗ ಅನವರತವೂ ಆ ಭಗವಂತನ ಪಾದರೇಣು ವನ್ನು ಭಕ್ತಿಯಿಂದ ಸೇವಿಸುತ್ತಿರುವ ಭಕ್ತನ ಕಷ್ಟಗಳು ನಶಿಸುವುವೆಂಬುದ ರಲ್ಲಿ ಸಂದೇಹವುಂಟೇ?" ಎಂದನು.

ಮೈತ್ರೇಯನು ಹೇಳಿದ ಈ ಮಾತನ್ನು ಕೇಳಿ, ವಿದುರನು ಪರಮ ಸಂತುಷ್ಟಚಿತ್ತನಾಗಿ, ತಿರುಗಿ ಅವನನ್ನು ಕುರಿತು ಪ್ರಾರ್ಥಿಸುವನು. "ಓ ಮಹಾತ್ಮಾ! ಮೈತ್ರೇಯಾ! ಭಗವಂತನು ಹೇಗೆ ಜಗತ್ಕಾರಣನಾಗುವ ನೆಂಬ ಸಂದೇಹವು ಇದುವರೆಗೂ ನನ್ನ ಮನಸ್ಸನ್ನು ಕಳವಳಗೊಳಿಸುತ್ತಿತ್ತು. ನನ್ನ ಮನಸ್ಸಿನಲ್ಲಿ ಚೆನ್ನಾಗಿ ಬೇರೂರಿ ಬೆಳೆದಿದ್ದ ಆ ಸಂದೇಹವೆಂಬ ವೃಕ್ಷವು, ನಿನ್ನ ಬೋಧನಾವಾಕ್ಯವೆಂಬ ಕತ್ತಿಯಿಂದ ಮೂಲಸಹಿತವಾಗಿ ಛೇದಿಸಲ್ಪ ಟ್ಟಿತು. ನಿನ್ನ ದಯೆಯಿಂದ ನನ್ನ ಮನಸ್ಸು ನಿಷ್ಕಲ್ಮಷವಾಯಿತು. ಮೊದಲಿಗಿಂತಲೂ ಈಗ ನನ್ನ ಮನಸ್ಸು ಭಗವತ್ಕಥಾಶ್ರವಣದಲ್ಲಿಯೂ, ಆತನ ಪಾದಸೇವೆಯಲ್ಲಿಯೂ ಮತ್ತಷ್ಟು ಆತುರಗೊಳ್ಳುತ್ತಿರುವುದು. ಓ ಮೈತ್ರೇಯಾ! ನಿನ್ನ ಸಮಾಧಾನವೊಂದೊಂದೂ ಬಹಳ ತೃಪ್ತಿಕರವಾಗಿದೆ. ಜೀವಪ್ರಕೃತಿಗಳೆರಡೂ ಪರಮಾತ್ಮನಿಗೆ ಶರೀರಭೂತವಾಗಿರುವುದೆಂದು ನೀನು ನಿರೂಪಿಸಿದುದರಿಂದ, ಭಗವಂತನಿಗೆ ಚಿದಚಿತ್ತುಗಳೆರಡರಲ್ಲಿಯೂ, ವ್ಯಾಪ್ತಿ ಯುಂಟೆಂಬುದು ಸಿದ್ಧವಾಗುವುದು. ಶರೀರಕ್ಕುಂಟಾಗುವ ಛೇದನಾದಿ ವಿಕಾರಗಳು ಆತ್ಮನಿಗೆ ಸಂಬಂಧಿಸುವುದಿಲ್ಲವೆಂದೂ, ಅದರಂತೆಯೇ ಚೇತನಾ ಚೇತನಗಳನ್ನು ಶರೀರವಾಗಿ ಹೊಂದಿ, ಅವುಗಳಲ್ಲಿ ಅಡಗಿರುವ ಭಗವಂತನಿಗೂ, ಆ ಚೇತನಾಚೇತನಗಳ ದೋಷಗಳು ಅಂಟಲಾರವೆಂದೂ ಹೇಳಿ, ಅದಕ್ಕೆ ಜಲ

ಚಂದ್ರನನ್ನು ದೃಷ್ಟಾಂತವಾಗಿ ಹೇಳಿದುದರಿಂದ, ಭಗವಂತನಿಗೆ ದೋಷ ಸಂಬಂಧವಿಲ್ಲವೆಂಬುದೂ ನಿರ್ಧರಿಸಲ್ಪಟ್ಟಿತು. ಆದರೆ "ಈ ಜಗತ್ತೆಲ್ಲವೂ ಪರಮಾತ್ಮಸ್ವರೂಪವಾಗಿ ತೋರದೆ ಬೇರೆ ರೂಪದಿಂದಿರುವಾಗ, ಇದರೊಳಗೆ ಆತನು ಸೇರಿರುವನೆಂದು ಹೇಗೆ ಹೇಳಬಹುದು? ಎಂದು ಒಂದು ಸಂದೇಹ ವುಂಟಾಗಿತ್ತು. ನೋಡಿದರೆ ಆ ಸಂದೇಹಕ್ಕೂ ಅವಕಾಶವಿಲ್ಲ. ಈ ಜಗತ್ತನ್ನು ಅವನ ಸಂಬಂಧವಿಲ್ಲದುದೆಂದು ತಿಳಿಯುವುದೂ ಕೇವಲ ಭ್ರಮವಾಗಿಯೇ ತೋರುವುದು. ದೇವಮನುಷ್ಯಾದಿ ಶರೀರಗಳಲ್ಲಿ ಜೀವನು ಒಳಹೊಕ್ಕಿರುವ ಸಂಗತಿಯು ನಮ್ಮ ಕಣ್ಣಿಗೆ ಗೋಚರಿಸದಿರುವುದಕ್ಕಾಗಿ, ಆ ಶರೀರಗಳಲ್ಲಿ ಜೀವನೇ ಇಲ್ಲವೆಂದು ಹೇಳುವುದು ಹೇಗೆ ಸಾಧ್ಯವಲ್ಲವೋ, ಹಾಗೆಯೇ ಚೇತನಾ ಚೇತನಗಳಲ್ಲಿ ಈಶ್ವರನು ಅಂತರ್ಗತನಾಗಿರುವುದೂ ನಮ್ಮ ನೇತ್ರಗಳಿಗೆ ಗೋಚರಿಸದಿದ್ದ ಮಾತ್ರಕ್ಕೆ, ಅದರಲ್ಲಿ ಪರಮಾತ್ಮನಿಲ್ಲವೆಂದು ನಿರ್ಧರಿಸುವುದ ಕ್ಕಿಲ್ಲ! ಜಗತ್ತೆಲ್ಲವೂ, ಪರಮಾತ್ಮಸ್ವರೂಪವಲ್ಲದೆ ಸ್ವತಂತ್ರವಾಗಿರುವುದೆಂದು ನೆನೆಸುವುದೂ ಭ್ರಾಂತಿಯೇ ಹೊರತು, ವಾಸ್ತವ ಜ್ಞಾನವಲ್ಲ. ಲೋಕದಲ್ಲಿ ಯಾವನು ಕೇವಲ ಮೂಢಬುದ್ಧಿಯುಳ್ಳವನಾಗಿರುವನೋ, ಮತ್ತು ಯಾವನು ಬುದ್ಧಿಗಿಂತಲೂ ವಿಲಕ್ಷಣವಾದ ಪರಮಾತ್ಮಸ್ವರೂಪವನ್ನು ಚೆನ್ನಾಗಿ ತಿಳಿದಿರುವನೋ, ಅವರಿಬ್ಬರೇ ಸುಖಿಗಳು. ಇದು ಹೊರತು ಯಾವನು ಕೇವಲ ಮೂಢನೂ ಅಲ್ಲದೆ, ಅಥವಾ ವಿಶೇಷ ಜ್ಞಾನಿಯೂ ಅಲ್ಲದೆ, ತಿಳಿದೂ ತಿಳಿಯದವನಾಗಿ, ಸಂದೇಹಾಸ್ಪದವಾದ ಮನಸ್ಸುಳ್ಳವನಾಗಿರು ವನೋ ಅಂತಹ ಮನುಷ್ಯನು ಬಹುಕ್ಲೇಶಗಳಿಗೆ ಗುರಿಯಾಗುವನು. ಏನೂ ತಿಳಿಯದ ಮೂಢನು ಅವನ ಅಜ್ಞಾನತೆಯಿಂದಲೇ ಸುಖಿಯಾಗಿರಬಹುದು! ಸಂದಿಗ್ಧಮನಸ್ಸುಳ್ಳವನಿಗೆ ಎಂದೆಂದಿಗೂ ನೆಮ್ಮದಿಯಿಲ್ಲ. ಓ! ಮುನೀಂದ್ರಾ! ಆತ್ಮದಂತೆ ತೋರುವ ಈ ದೇಹದಲ್ಲಿ, ಆತ್ಮವೆಂಬ ಭ್ರಾಂತಿಯನ್ನು ಬಿಟ್ಟು ನಿಶ್ಚಯಜ್ಞಾನವನ್ನು ಹೊಂದಿದ ನಿಮ್ಮ ಪಾದಸೇವೆಯಿಂದ, ನಾನೂ ಆ ಭ್ರಾಂತಿಯನ್ನು ನೀಗಿಸಿಕೊಂಡೆನು. ಮಹಾತ್ಮರಾದ ನಿಮ್ಮಂತವರ ಪಾದ ಸೇವಾಪ್ರಭಾವವನ್ನು ನಾನೇನೆಂದು ಹೇಳಲಿ! ನಿಮ್ಮಂತಹ ಸಾಧುಗಳ ದರ್ಶನಮಾತ್ರದಿಂದಲೇ ಪತಿತನಾದ ಮನುಷ್ಯನಿಗೆ ಮನಸ್ಸು ಶುದ್ಧವಾಗಿ, ಪರಮಾತ್ಮನ ಪಾದದಲ್ಲಿ ಭಕ್ತಿಯು ಜನಿಸುವುದು. ಅವರ ತಾಪತ್ರಯವೂ

ಬಿಟ್ಟುಹೋಗುವುದು. ಯಾವ ಸ್ಥಳದಲ್ಲಿ ಶ್ರೀಮನ್ನಾರಾಯಣನು ಬ್ರಹ್ಮ ರುದ್ರಾದಿಗಳಿಂದ ಕೀರ್ತಿಸಲ್ಪಡುತ್ತ ನೆಲೆಗೊಂಡಿರುವನೋ, ಅಂತಹ ಪರಮ ವೈಕುಂಠಕ್ಕೆ, ಜ್ಞಾನಹೀನರಾದ ಮಾನವರನ್ನು ಕೂಡ ತಂದು ಸೇರಿಸತಕ್ಕ ನಿಮ್ಮಂತಹ ಸಜ್ಜನಸೇವೆಯು ಸುಲಭವಾಗಿ ಸಿಕ್ಕುವುದಲ್ಲ. ಸಾಧುಸೇವೆಯಿಂದ ಎಂತಹ ಪತಿತನಿಗಾದರೂ ಭಗವದ್ಭಕ್ತಿಯು ಜನಿಸದೆ ಬಿಡದು. ಎಲೈ ಋಷಿ ಶ್ರೇಷ್ಠನೇ! ಭಗವಂತನು ವ್ಯಷ್ಟಿಸೃಷ್ಟಿಯನ್ನುಂಟುಮಾಡುವುದಕ್ಕೆ ಮೊದಲು, ಇಂದ್ರಿಯಾದಿಗಳಿಂದ ಕೂಡಿದ ಮಹತ್ತು ಮೊದಲಾದ ತತ್ವಗಳನ್ನೂ, ಅವುಗಳಿಂದ ಬ್ರಹ್ಮಾಂಡವನ್ನೂ, ಅದರಲ್ಲಿ ಸಮಷ್ಟಿಪುರುಷನೆನಿಸಿದ ಬ್ರಹ್ಮನನ್ನೂ ಉಂಟುಮಾಡಿ, ಆ ಬ್ರಹ್ಮನಲ್ಲಿ ತಾನೂ ಪ್ರವೇಶಿಸಿದನೆಂದು ಹೇಳಿದೆ! ಸರ್ವಜಗತ್ಕಾರಣನಾದ ಆ ವಿರಾಟ್ಪುರುಷನು ಸಹಸ್ರಪಾದಗಳಿಂದಲೂ, ಸಹಸ್ರನೇತ್ರಗಳಿಂದಲೂ, ಸಾವಿರತೋಳುಗಳಿಂದಲೂ, ಸಾವಿರತೊಡೆಗಳಿಂದಲೂ ಕೂಡಿದ್ದನೆಂದೂ, ಅವನಲ್ಲಿಯೇ ಸಮಸ್ತ ಪ್ರಪಂಚವೂ ಜನಿಸಿದುವೆಂದೂ, ತಿಳಿಸಿದೆ! ಮತ್ತು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳೆಂಬಿವೈದೂ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯಗಳೆಂಬ ಇವೈದೂ ಸೇರಿ, ಹತ್ತು ಬಗೆಯಾಗಿಯೂ, ಸತ್ವಾದಿ ಮೂರು ಗುಣಗಳಿಂದ ಕೂಡಿದುದಾಗಿಯೂ ಇರುವ ಪ್ರಾಣವೂ, ಶಬ್ದಾದಿವಿಷಯಗಳೂ, ಜ್ಞಾನಕರ್ಮೇಂದ್ರಿಯಗಳೂ ವೈರಾಟಪುರುಷನೆನಿಸಿದ ಯಾವ ಪರಮಾತ್ಮನಲ್ಲಿ ಒಟ್ಟುಗೂಡಿರುವುವೋ, ಯಾವನಿಂದ ಬ್ರಾಹ್ಮಣಾದಿ ಚತುರ್ವರ್ಣಗಳೂ ಹುಟ್ಟಿದುವೋ, ಆ ವಿರಾಟ್ಪುರುಷನ ವಿಭೂತಿಗಳನ್ನೆಲ್ಲಾ ನನಗೆ ವಿವರಿಸಿ ತಿಳಿಸಬೇಕು. ಬ್ರಹ್ಮಾಂಡದಲ್ಲಿ ಪುತ್ರಪೌತ್ರಾದಿಗಳೊಡನೆಯೂ, ಇತರ ಬಂಧುಗಳೊಡನೆಯೂ ಕೂಡಿದ ಬಗೆಬಗೆಯ ದೇಹಗಳುಳ್ಳ ಪ್ರಜೆಗಳೆಲ್ಲರೂ ವಾಸಿಸುತ್ತಿರುವರಷ್ಟೆ? ಆ ಪ್ರಜೆಗಳಿಂದ ಬ್ರಹ್ಮಾಂಡವು ಯಾವ ರೀತಿಯಲ್ಲಿ ವ್ಯಾಪಿಸಲ್ಪಟ್ಟಿರುವುದು? ಅವೆಲ್ಲವನ್ನೂ ವಿವರಿಸಬೇಕು. ಆ ಪ್ರಜೆಗಳಲ್ಲಿರುವ ಭೇದವೇನು? ಮರೀಚಿ ಮೊದಲಾದ ಪ್ರಜಾಧಿಪತಿಗಳನ್ನು ಸೃಷ್ಟಿಸಿದುದು ಹೇಗೆ? ಸಮಷ್ಟಿ ಪುರುಷನಾದ ಆ ಬ್ರಹ್ಮದೇವನು ನವಬ್ರಹ್ಮರನ್ನು ಸೃಷ್ಟಿಸಿದ ಮೇಲೆ, ಅವರ ಪುತ್ರಪೌತ್ರಾದಿ ಸಂತಾನದಿಂದ ಈ ಪ್ರಪಂಚವು ತುಂಬಿದುದು ಹೇಗೆ? ಒಂಭತ್ತು ವಿಧಗಳಾದ ಸೃಷ್ಟಿಭೇದಗಳಾವುವು?

ಚತುರ್ಮುಖ ಸೃಷ್ಟಿಗೆ ಮೇಲೆ ನಡೆದ ಸೃಷ್ಟಿಯ ವ್ಯಾಪ್ತಿಯನ್ನೂ, ಸ್ವಾಯಂಭುವನೇ ಮೊದಲಾದ ಚತುರ್ದಶಮನುಗಳನ್ನೂ, ಆಯಾ ಮನ್ವಂತರಗಳಲ್ಲಿ ಯಾರುಯಾರು ಅಧಿಪತಿಗಳೆಂಬುದನ್ನೂ, ಆಯಾ ಮನುಗಳ ಮತ್ತು ಮನ್ವಂತರಾಧಿಪತಿಗಳ ವಂಶಕ್ರಮವನ್ನೂ, ಆ ವಂಶಕ್ಕೆ ಸಂಬಂಧಪಟ್ಟ ಚರಿತ್ರಗಳನ್ನೂ, ವಿವರಿಸಬೇಕು. ಮತ್ತು ಎಲೈ ಮಹಾತ್ಮನೇ! ಈ ಭೂಮಿಗೆ ಮೇಲೆಯೂ ಕೆಳಗೂ ಇರುವ ಲೋಕಗಳಾವುವು? ಅವುಗಳ ಸ್ಥಿತಿಯೆಂತಹುದು? ಅವುಗಳ ಪ್ರಮಾಣವೇನು? ಈ ಭೂಲೋಕದ ಪರಿಮಾಣವೆಷ್ಟು? ಮತ್ತು ಪಶುಪಕ್ಷಿಗಳು, ದೇವಮನುಷ್ಯಾದಿಗಳು, ಜರಾಯುಜಗಳು, ಸ್ವೇದಜಗಳು, ಅಂಡಜಗಳು, ಉದ್ಭಿಜ್ಜಗಳು ಇವೇ ಮೊದಲಾದ ಪ್ರಾಣಿಗಳ ಸೃಷ್ಟಿಭೇದವು ಹೇಗೆ? ಮತ್ತು ರಜಸ್ತಮೋಗುಣಪ್ರಧಾನರಾಗಿ, ಭಗವಂತನ ಆವೇಶಾವತಾರವೆಂದು ಹೇಳಲ್ಪಡುವ ಬ್ರಹ್ಮರುದ್ರಾದಿಗಳಿಂದ, ಈ ಲೋಕವ್ಯಾಪಾರಗಳನ್ನು ನಡೆಸುತ್ತ, ಸೃಷ್ಟಿ, ಸ್ಥಿತಿ, ಲಯಗಳು ಈ ಮೂರಕ್ಕೂ ತಾನೊಬ್ಬನೇ ಆಧಾರನಾಗಿರುವ ಆ ವಿಷ್ಣುಮೂರ್ತಿಯ ಉದಾರಚರಿತ್ರಗಳೆಲ್ಲವನ್ನೂ ವರ್ಣಿಸಿ ತಿಳಿಸಬೇಕು. ವರ್ಣಾಶ್ರಮ ವಿಭಾಗಗಳನ್ನೂ ಅವುಗಳ ಚಿಹ್ನಗಳನ್ನೂ ಅವರವರು ನಡೆಸಬೇಕಾದ ಆಚಾರಗಳನ್ನೂ, ಸ್ವಭಾವಗಳನ್ನೂ ತಿಳಿಸಬೇಕು. ಮತ್ತು ಮಹರ್ಷಿಗಳ ಚರಿತ್ರವನ್ನೂ, ಅವರ ಉತ್ಪತ್ತಿಯನ್ನೂ, ವೇದಗಳ ವಿಭಾಗವನ್ನೂ ವಿವರಿಸಬೇಕು. ಮತ್ತು ಯಾಗಕ್ರಮಗಳನ್ನೂ, ಫಲಾಪೇಕ್ಷೆಯಿಲ್ಲದೆ ನಡೆಸುವ ಕರ್ಮಯೋಗಗಳನ್ನೂ, ಅವುಗಳ ಮಹಿಮೆಯನ್ನೂ, ಪ್ರವೃತ್ತಿಧರ್ಮಗಳನ್ನು ವಿರೋಧಿಸಿ ಆ ಭಗವಂತನನ್ನೇ ಉಪಾಯವಾಗಿ ಹೊಂದುವ ಪ್ರವೃತ್ತಿಮಾರ್ಗವನ್ನೂ, ಪ್ರವೃತ್ತಿಧರ್ಮಗಳನ್ನು ನಿಷೇಧಿಸುವ ಸಾಂಖ್ಯಯೋಗಮಾರ್ಗವನ್ನೂ ವಿಸ್ತರಿಸಿ ತಿಳಿಸಬೇಕು. ಮತ್ತು ಜ್ಞಾನಯೋಗವೆಂತಹುದು? ಸಾಕ್ಷಾದ್ಭಗವಂತನಿಂದಲೇ ವಿಧಿಸಲ್ಪಟ್ಟ ಪಾಂಚರಾತ್ರದ ಸಾರವೇನು? ವೇದಬಾಹ್ಯರಾದ ಪಾಷಂಡಿಗಳ ಮಾರ್ಗವನ್ನೂ, ಜೀವಗಳಿಗೆ ಸತ್ವಾದಿಗುಣಗಳ ಹೆಚ್ಚಿಗೆಯಿಂದಾಗುವ ಗತಿಗಳನ್ನೂ, ಫಲಗಳನ್ನೂ ವರ್ಣಿಸಬೇಕು. ಪರಸ್ಪರ ವಿರೋಧವಿಲ್ಲದೆ ಧರ್ಮಾರ್ಥ, ಕಾಮ, ಮೋಕ್ಷಗಳನ್ನು ಸಾಧಿಸತಕ್ಕ ಉಪಾಯವೇನು? ರಾಜನೀತಿಗಳಾವುವು? ದಂಡನೀತಿ ಕ್ರಮವೆಂತಹುದು? ವೇದೋಕ್ತಗಳಾದ ಸಂಧ್ಯಾವಂದನಾದಿ

ನಿತ್ಯಕರ್ಮಗಳ ವಿಧಾನವೆಂತಹುದು? ಶ್ರಾದ್ಧಾದಿ ಕರ್ಮಗಳ ವಿಧಾನವು ಹೇಗೆ? ಸೂರ್ಯಾದಿಗಳು, ಅಶ್ವಿನಿ ಮೊದಲಾದ ತಾರೆಗಳು, ಇತರ ನಕ್ಷತ್ರಗಳು, ಇವುಗಳ ಗತಿಗಳೆಂತಹುದು? ಅವುಗಳ ಕಾಲನಿಯಮವೇನು? ತಪಸ್ಸು, ದಾನ ಮೊದಲಾದುವುಗಳನ್ನು ನಡೆಸುವುದರಿಂದುಂಟಾಗುವ ಫಲಗಳಾವುವು? ಶ್ರೌತಸ್ಮಾರ್ತಕರ್ಮಗಳ ವ್ಯತ್ಯಾಸವೇನು? ದೇಶಾಂತರದಲ್ಲಿರುವವನು ಅನುಸರಿಸಬೇಕಾದ ಧರ್ಮಗಳಾವುವು? ಧರ್ಮಪ್ರವರ್ತಕನಾದ ಭಗವಂತನು ಎಂತಹ ಧರ್ಮದಿಂದ ಸಂತೋಷಿಸುವನು? ಎಂತವರನ್ನು ಆ ಭಗವಂತನು ಅನುಗ್ರಹಿಸುವನು? ಆಶ್ರಿತವತ್ಸಲರಾದ ಗುರುಗಳು, ತಮ್ಮನ್ನು ಸೇವಿಸುವ ಶಿಷ್ಯರಲ್ಲಿ ಪುತ್ರಪ್ರೇಮವನ್ನಿಟ್ಟು, ಅವರು ಕೇಳದೆ ಬಿಟ್ಟ ಧರ್ಮರಹಸ್ಯಗಳೆಲ್ಲವನ್ನೂ ತಾವಾಗಿಯೇ ತಿಳಿಸುವರೆಂದು ಕೇಳಿರುವೆನು. ಆದುದರಿಂದ ನೀನೂ ನನ್ನಲ್ಲಿ ಅದೇ ವಿಧವಾದ ಪ್ರೇಮವನ್ನಿಟ್ಟು, ಈಗ ನಾನು ನಿನ್ನನ್ನು ಪ್ರಶ್ನೆ ಮಾಡದೆ ಬಿಟ್ಟಿರುವ ರಹಸ್ಯಾರ್ಥಗಳೇನಾದರೂ ಇದ್ದರೂ ಅವುಗಳನ್ನೂ ಕೃಪೆಯಿಟ್ಟು ತಿಳಿಸಬೇಕು. ಮತ್ತು ಓ ಮಹಾತ್ಮಾ! ಪೃಥಿವಿ ಮೊದಲಾದ ತತ್ವಗಳಿಗುಂಟಾಗುವ ಪ್ರಳಯವು ಎಷ್ಟು ವಿಧವಾದುದು? ಆ ಪ್ರಳಯಕಾಲದಲ್ಲಿಯೂ ಭಗವಂತನನ್ನು ಉಪಾಸಿಸುವ ಮಹಾತ್ಮರಾರು? ಪೃಥಿವಿ ಮೊದಲಾದ ತತ್ವಗಳೆಲ್ಲವೂ ಪ್ರಳಯಕಾಲದಲ್ಲಿ ಒಂದಾಗಿ ಸೇರಿ, ಆ ಪರಮಾತ್ಮನಲ್ಲಿಯೇ ಅಡಗಿಕೊಳ್ಳುವುವೇ, ಅಥವಾ ಮೇಲೆ ಮೇಲೆ ಹುಟ್ಟಿದ ತತ್ವಗಳು ತಮ್ಮ ತಮ್ಮ ಹಿಂದಿನ ತತ್ವಗಳಲ್ಲಿ ಸೇರುವುವೇ? ಅಥವಾ ಈ ಎರಡು ಕ್ರಮಗಳೂ ನಡೆಯುವುವೇ? ಜೀವಾತ್ಮಪರಮಾತ್ಮರ ಅಸಾಧಾರಣ ಸ್ವರೂಪವೆಂತಹುದು? ಅವುಗಳನ್ನು ತಿಳಿಸತಕ್ಕ ಶಾಸ್ತ್ರಜನ್ಯವಾದ ಜ್ಞಾನವೆಂತಹುದು? ಗುರುಶಿಷ್ಯರಿಗೆ ಪ್ರಯೋಜನಕರವಾಗಿ, ಶಾಸ್ತ್ರಸಿದ್ಧವೆನಿಸಿದ ಅಂತಹ ಜ್ಞಾನವನ್ನೂ, ಆ ಜ್ಞಾನವನ್ನು ಸಂಪಾದಿಸುವುದಕ್ಕೆ ಪಂಡಿತರು ನಿರ್ಣಯಿಸಿದ ಸಾಧನಗಳನ್ನೂ ತಿಳಿಸಬೇಕು. ಮನುಷ್ಯನಿಗೆ ಗುರೂಪದೇಶವಿಲ್ಲದೆ ಶಾಸ್ತ್ರಜ್ಞಾನವೂ, ಅದರಿಂದುಂಟಾಗುವ ಭಕ್ತಿವೈರಾಗ್ಯಗಳೂ ಹೇಗೆ ಲಭಿಸುವುವು? ಓ ಮೈತ್ರೇಯಾ! ಈ ಧರ್ಮಗಳನ್ನೂ, ಭಗವಂತನ ವ್ಯಾಪಾರಗಳನ್ನೂ, ಆತನ ಲೀಲೆಗಳನ್ನೂ, ಆಮೂಲಾಗ್ರವಾಗಿ ತಿಳಿಯಬೇಕೆಂದಿರುವ ಈ ನನ್ನ ಪ್ರಶ್ನೆಗಳೆಲ್ಲಕ್ಕೂ ತಕ್ಕ ಸಮಾಧಾನವನ್ನು ಹೇಳಿ

ನನ್ನನ್ನುದ್ಧರಿಸಬೇಕು. ಓ ಮಹಾತ್ಮಾ! ಈಗ ನಾನೊಬ್ಬ ಕುರುಡನಂತೆ ಏನೂ ತಿಳಿಯದೆ ತತ್ತಳಿಸುತ್ತಿರುವೆನು. ನಿನ್ನ ಉಪದೇಶದಿಂದ ನನ್ನ ಅಜ್ಞಾನಾಂಧತೆಯನ್ನು ನೀಗಿಸಿ, ಮಾಯೆಯಿಂದ ನಷ್ಟವಾದ ನನ್ನ ಕಣ್ಣನ್ನು ತೆರೆಯಿಸಬೇಕು. ಜೀವಾತ್ಮನಿಗೆ ಸಂಸಾರ ನಿವೃತ್ತಿಯನ್ನುಂಟು ಮಾಡಿ ಭಗವಂತನ ಸಾನಿಧ್ಯವನ್ನು ಸೇರಿಸುವ ವಿಷಯದಲ್ಲಿ, ವೇದಾಧ್ಯಯನವೇ ಮೊದಲಾದುವುಗಳಾಗಲೀ, ಯಾಗಗಳಾಗಲೀ, ವ್ರತಗಳಾಗಲೀ, ತಪಸ್ಸಾಗಲೀ, ಇವೊಂದೂ ನಿಮ್ಮಂತವರು ಮಾಡತಕ್ಕ ಅಭಯಪ್ರದಾನಕ್ಕೆ ಕಲಾಮಾತ್ರವೂ ಸಾಟಿಯಾಗಲಾರದು. ಆದುದರಿಂದ ನೀನು ಆ ವಿಧವಾದ ಅಭಯಪ್ರದಾನವನ್ನು ಮಾಡಿ, ಜ್ಞಾನೋಪದೇಶದಿಂದ ನನ್ನನ್ನುದ್ಧರಿಸಬೇಕು" ಎಂದನು. ಹೀಗೆ ವಿದುರನು ಭಗವತ್ಕಥೆಯನ್ನು ಕುರಿತು ಪ್ರಶ್ನೆ ಮಾಡಿದುದಕ್ಕಾಗಿ, ಮೈತ್ರೇಯನು ಬಹಳ ಸಂತೋಷಗೊಂಡು ಉತ್ಸಾಹದಿಂದ ಹೇಳತೊಡಗಿದನು. ಇಲ್ಲಿಗೆ ಏಳನೆಯ ಅಧ್ಯಾಯವು.

---

### { ಮೈತ್ರೇಯಮಹರ್ಷಿಯು ವಿದುರನ ಪ್ರಶ್ನೆಗಳಿಗೆ ಉತ್ತರವನ್ನು ಹೇಳಿದುದು. }

"ಎಲೈ ಮಹಾತ್ಮನಾದ ವಿದುರನೇ! ನಿನ್ನಿಂದಲ್ಲವೇ ನಿಮ್ಮ ಪೂರುವಂಶವೆಂಬುದು ಸಮಸ್ತ ಸತ್ಪುರುಷರಿಗೂ ಸ್ತೋತ್ರಾರ್ಹವಾಯಿತು! ಏಕೆಂದರೆ: ಸರ್ವವಿಧದಿಂದಲೂ ಭಗವಂತನನ್ನೇ ಮುಖ್ಯವಾಗಿ ನಂಬಿ ಸಾಕ್ಷಾದ್ಯಮದೇವನ ಅಂಶಭೂತನಾದ ನೀನು ಆ ವಂಶದಲ್ಲಿ ಹುಟ್ಟಿದುದರಿಂದಲೇ ಅದಕ್ಕೆ ಇಷ್ಟೊಂದತಿಶಯವುಂಟಾಯಿತು! ಓ! ವಿದುರಾ! ನಿನ್ನಂತಹ ಮಹಾಭಕ್ತನು ಲೋಕದಲ್ಲಿ ಬೇರೊಬ್ಬನಿರಲಾರನು. ಆ ಪರಮಪುರುಷನ ಕೀರ್ತಿಯನ್ನು ಮೇಲೆ ಮೇಲೆ ಹೊಸದಾಗುವಂತೆ ಮಾಡುತ್ತಿರುವ ನಿನ್ನ ಪ್ರಶ್ನೆಗಳಿಗಾಗಿ ನಾನು ಬಹಳ ಸಂತೋಷಪಟ್ಟೆನು! ಲೋಕದಲ್ಲಿ ಮನುಷ್ಯರು ಸ್ವಲ್ಪವಾದ ಸಂಸಾರಸುಖವನ್ನನುಭವಿಸಬೇಕೆಂದು ಯತ್ನಿಸಿ, ಸಂಸಾರಕೂಪದಲ್ಲಿ ಬಿದ್ದು, ಮಹತ್ತಾದ ದುಃಖವನ್ನೇ ಸಂಪಾದಿಸಿಕೊಳ್ಳುತ್ತಿರುವರು. ಅಂತಹ

ದುಃಖವನ್ನು ತೊಲಗಿಸುವುದಕ್ಕೆ ಭಾಗವತಕ್ಕಿಂತಲೂ ಉತ್ತಮವಾದ ಬೇರೆ ಸಾಧನವಿಲ್ಲ. ಆ ಭಾಗವತವೆಂಬುದು ಭಗವಂತನ ಗುಣಕೀರ್ತನೆಗಳಿಗೆಲ್ಲಾ ಮುಖ್ಯಸ್ಥಾನವಾಗಿರುವುದು. ಅದರಲ್ಲಿ ಸಮಸ್ತ ವೇದಾರ್ಥಗಳೂ ತುಂಬಿರುವುವು. ಆ ಭಾಗವತದಲ್ಲಿರುವ ವಿಷಯವನ್ನೇ ನಿನಗೆ ತಿಳಿಸುವೆನು ಕೇಳು. *ಪೂರ್ವದಲ್ಲಿ ಸಂಕರ್ಷಣ ಭಗವಂತನು ತಾನಾಗಿಯೇ ಸನಕಾದಿ ಮಹರ್ಷಿಗಳಿಗೆ ಆ ಸದ್ಗ್ರಂಥವನ್ನುಪದೇಶಿಸಿರುವನು. ಈ ಕಾರಣದಿಂದ ಅದಕ್ಕೆ ಸಾಂಕರ್ಷಣ ಭಾಗವತವೆಂದು ಹೆಸರುಂಟಾಯಿತು. ಸನತ್ಕುಮಾರನೇ ಮೊದಲಾದ ನಾಲ್ವರು ಋಷಿಕುಮಾರರು, ಚೇತನಾಚೇತನರೂಪವಾದ ಈ ಪ್ರಪಂಚಕ್ಕಿಂತಲೂ ವಿಲಕ್ಷಣನಾದ ಪರಮಾತ್ಮನ ನಿಜತತ್ವವನ್ನು ತಿಳಿಯಬೇಕೆಂದುದ್ದೇಶಿಸಿ, ಪಾತಾಳದಲ್ಲಿ ಜ್ಞಾನಾದಿ ಷಡ್ಗುಣಪರಿಪೂರ್ಣನಾಗಿಯೂ, ರಜಸ್ತಮೋಗುಣಗಳ ಸಂಬಂಧವಿಲ್ಲದೆ ಕೇವಲ ಶುದ್ಧಸತ್ವಮಯವಾದ ದಿವ್ಯಮಂಗಳಮೂರ್ತಿಯುಳ್ಳವನಾಗಿಯೂ ಇದ್ದ ಆದಿದೇವನಾದ ಸಂಕರ್ಷಣಮೂರ್ತಿಯನ್ನು ಸಮೀಪಿಸಿ, ಸುಖಾಸೀನನಾಗಿ ಕುಳಿತಿದ್ದ ಅವನನ್ನು ಪ್ರಶ್ನೆಮಾಡತೊಡಗಿದರು. ಆಗ ಸಂಕರ್ಷಣನು ತನಗೆ ಕಾರಣನಾಗಿ ವಾಸುದೇವನೆಂದು ಕರೆಯಲ್ಪಡುವ ಭಗವಂತನ ನಿಜಸ್ವರೂಪವನ್ನು ವಿಶೇಷವಾಗಿ ಗೌರವಿಸಿ, ಪೂಜಿಸುತ್ತ ಅಂತರಾತ್ಮಧ್ಯಾನದಿಂದ ತಾವರೆಮೊಗ್ಗಿನಂತೆ ಮುಚ್ಚಿದ ಕಣ್ಣುಗಳುಳ್ಳವನಾಗಿದ್ದರೂ, ಸೇವಾರ್ಥವಾಗಿ ಬರತಕ್ಕ ಜ್ಞಾನಿಗಳನ್ನನುಗ್ರಹಿಸುವುದಕ್ಕಾಗಿ ಆಗಾಗ ಆ ಕಣ್ಣುಗಳನ್ನು ಸ್ವಲ್ಪ ತೆರೆಯುತ್ತಿರುವನು. ಸರ್ಪರಾಜನೆನಿಸಿಕೊಂಡ ಆ ಸಂಕರ್ಷಣನ ಕುಮಾರಿಯರಾದ

---

* ಭಾಗವತವು ಎರಡು ಶಾಖೆಯಾಗಿ ಹೊರಟಿರುವವೆಂದು ಸಂಪ್ರದಾಯಪ್ರವರ್ತಕರು ನಿರ್ಣಯಿಸಿರುವರು. ಅವುಗಳಲ್ಲಿ ಭಗವಂತನಿಂದ ಬ್ರಹ್ಮನಿಗೂ, ಅವನಿಂದ ನಾರದನಿಗೂ, ನಾರದನಿಂದ ವ್ಯಾಸನಿಗೂ, ವ್ಯಾಸನಿಂದ ಶುಕಮುನಿಗೂ, ಉಪದಿಷ್ಟವಾಗಿ ಬಂದುದೊಂದು. ಇದು ಹತ್ತುಸಾವಿರ ಗ್ರಂಥವುಳ್ಳದು. ಸಂಕರ್ಷಣನಿಂದ ಸನಕಾದಿಗಳಿಗೂ, ಸನಕಾದಿಗಳಿಂದ ಸಾಂಖ್ಯಾಯನನಿಗೂ, ಆತನಿಂದ ಪರಾಶರನಿಗೂ, ಪರಾಶರನಿಂದ ಮೈತ್ರೇಯನಿಗೂ, ಮೈತ್ರೇಯನಿಂದ ವಿದುರನಿಗೂ ಉಪದಿಷ್ಟವಾಗಿ ಬಂದುದೆರಡನೆಯದು. ಇದು ಎರಡು ಸ್ಕಂಧವುಳ್ಳದು. ಇವೆರಡನ್ನೂ ಸಂಗ್ರಹಿಸಿ ವ್ಯಾಸಮುನಿಯು ದ್ವಾದಶಸ್ಕಂಧಾತ್ಮಕವಾದ ಈ ಪುರಾಣವನ್ನು ರಚಿಸಿರುವುದಾಗಿ ಗ್ರಾಹ್ಯವು.

ನಾಗಕನ್ಯೆಯರೆಲ್ಲರೂ ಆಗಾಗ ಬಂದು, ತಮತಮಗೆ ಪತಿಗಳನ್ನಪೇಕ್ಷಿಸಿ, ಅವನ ಪಾದಾಶ್ರಯವಾದ ಪದ್ಮಪೀಠವನ್ನು ಬಗೆಬಗೆಯ ಪೂಜಾದ್ರವ್ಯಗಳಿಂದ ಅರ್ಚಿಸುತ್ತಿರುವರು. ಅವನ ಸಹಸ್ರಫಣೆಗಳೂ, ಮೇಲೆ ಧರಿಸಿರುವ ಸಹಸ್ರ ಕಿರೀಟಗಳ ರತ್ನಕಾಂತಿಯಿಂದ ಮತ್ತಷ್ಟು ಬಣ್ಣವೇರಿ, ಜಾಜ್ವಲ್ಯಮಾನವಾಗಿ ಹೊಳೆಯುತ್ತಿರುವುವು. ಸನಕಾದಿ ಮಹರ್ಷಿಗಳೆಲ್ಲರೂ ಇಂತಹ ಸಂಕರ್ಷಣ ಮೂರ್ತಿಯನ್ನು ನೋಡಿ, ಗಂಗಾಜಲದಿಂದ ತೊಯ್ದ ತಮ್ಮ ಜಟಾಭಾರಗ ಳೊಡನೆ ಮುಂದೆ ಬಂದು, ಅವನ ಪಾದಾಶ್ರಯವಾದ ಪದ್ಮಪೀಠಕ್ಕೆ ತಲೆ ಯನ್ನು ಸೋಕಿಸಿ ನಮಸ್ಕರಿಸಿದರು. ಭಗವಂತನ ಆಶ್ಚರ್ಯಚರಿತ್ರೆಗಳೆಲ್ಲ ವನ್ನೂ ಚೆನ್ನಾಗಿ ಬಲ್ಲವರಾದ ಆ ಮಹರ್ಷಿಗಳು ಅವನಲ್ಲಿ ಹುಟ್ಟಿದ ಭಕ್ತ್ಯ ತಿಶಯದಿಂದ ಮೈಮರೆತು, ತಡವರಿಸುವ ನುಡಿಯುಳ್ಳವರಾಗಿ, ಆತನ ಗುಣಕೀರ್ತನವನ್ನು ಮಾಡುತ್ತ ತಮಗೆ ಭಗವತ್ತತ್ವವನ್ನುಪದೇಶಿಸಬೇಕೆಂದು ಪ್ರಾರ್ಥಿಸಿದರು. ಪ್ರಪತ್ತಿಮಾರ್ಗದಲ್ಲಿ ಅತ್ಯಾದರವುಳ್ಳ ಆ ಋಷಿಗಳನ್ನು ನೋಡಿ, ಜ್ಞಾನಾಧಿಕನಾದ ಸಂಕರ್ಷಣನು, ಅವರ ಕೋರಿಕೆಯಂತೆ ತತ್ವ ವನ್ನುಪದೇಶಿಸಿದನು. ಹೀಗೆ ಸಂಕರ್ಷಣನಿಂದ ಉಪದೇಶ ಹೊಂದಿದ ಸನತ್ಕುಮಾರನು, ಅದೇ ತತ್ವವನ್ನು ತನ್ನಲ್ಲಿಗೆ ಬಂದು ಪ್ರಾರ್ಥಿಸಿದ ಸಾಂಖ್ಯಾಯನನಿಗೆ ಉಪದೇಶಿಸಿದನು. ನಿವೃತ್ತಿಧರ್ಮನಿಷ್ಠರಾದ ಪರಮ ಹಂಸರಲ್ಲಿ ಮೇಲೆನಿಸಿಕೊಂಡ ಆ ಸಾಂಖ್ಯಾಯನನೂ ಕೂಡ, ಭಗವಂತನ ದಿವ್ಯವಿಭೂತಿಗಳನ್ನು ಹೇಳುವುದರಲ್ಲಿ ವಿಶೇಷ ಕುತೂಹಲವುಳ್ಳವನಾಗಿ, ತನ್ನಲ್ಲಿ ಶಿಷ್ಯವೃತ್ತಿಯನ್ನವಲಂಬಿಸಿದ ನಮ್ಮ ಗುರುವಾದ ಪರಾಶರ ಮಹರ್ಷಿಗೂ, ಆಮೇಲೆ ಬೃಹಸ್ಪತಿಗೂ ಅದೇ ತತ್ವವನ್ನುಪದೇಶಿಸಿದನು. ಹಿಂದೊಮ್ಮೆ ಪರಾಶರಮುನಿಯು, ತನ್ನ ತಂದೆಯನ್ನು ರಾಕ್ಷಸನೊಬ್ಬನು ಭಕ್ಷಿಸಿದುದಕ್ಕಾಗಿ ರಾಕ್ಷಸಯಾಗವನ್ನಾರಂಭಿಸಿದನು. ಆಗ ತನ್ನ ಸಂತಾನ ವನ್ನುಳಿಸಿದುದಕ್ಕಾಗಿ ಪುಲಸ್ತ್ಯಮುನಿಯು ಅವನಲ್ಲಿ ಪ್ರಸನ್ನನಾಗಿ, ಅವನಿಗೆ ಪುರಾಣಪಠನದಲ್ಲಿಯೂ, ತತ್ವಜ್ಞಾನದಲ್ಲಿಯೂ ವಿಶೇಷ ಸಾಮರ್ಥ್ಯವನ್ನು ಅನುಗ್ರಹಿಸಿದ್ದನು. ಹೀಗೆ ವರಬಲದಿಂದ ಜ್ಞಾನಾಧಿಕನಾದ ಪರಾಶರನು ನನ್ನಲ್ಲಿ ದಯಾಳುವಾಗಿ, ಅದೇ ಭಾಗವತವನ್ನು ನನಗೂ ಉಪದೇಶಿಸಿರು ವನು. ನಾನು ಆ ಮಹರ್ಷಿಯಿಂದ ಉಪದೇಶ ಹೊಂದಿದಂತೆಯೇ ನಿನಗೂ

ಉಪದೇಶಿಸುವೆನು ಕೇಳು! ಎಲೆ ವತ್ಸ ವಿದುರಾ! ನೀನು ಭಗವತ್ಕಥೆಗಳನ್ನು ಕೇಳುವುದರಲ್ಲಿ ಬಹಳ ಶ್ರದ್ಧೆಯುಳ್ಳವನು. ಶಿಷ್ಯಧರ್ಮವನ್ನೂ ಚೆನ್ನಾಗಿ ಅನುಸರಿಸತಕ್ಕವನು. ಆದುದರಿಂದ ಈ ತತ್ತ್ವೋಪದೇಶವನ್ನು ನಿನ್ನಿಂದ ಪಡೆಯುವುದಕ್ಕೆ ನೀನೇ ತಕ್ಕ ಪಾತ್ರವು! ಸಾವಧಾನವಾಗಿ ಕೇಳು.

ಯಾವಾಗ ಭಗವಂತನು ಈ ಲೋಕಸಂಬಂಧವಾದ ವ್ಯಾಪಾರವೆಲ್ಲವನ್ನೂ ಬಿಟ್ಟು, ಆತ್ಮಾನುಭವದಿಂದುಂಟಾದ ಆನಂದದಿಂದ ಪೂರ್ಣನಾಗಿ, ಯೋಗನಿದ್ರೆಯನ್ನವಲಂಬಿಸಿ, ತಾನೊಬ್ಬನೇ ಶೇಷಶಯ್ಯೆಯಲ್ಲಿ ಕಣ್ಣುಗಳನ್ನು ಮುಚ್ಚಿ ಮಲಗಿದ್ದನೋ, ಆಗ ಚೇತನಾಚೇತನರೂಪವಾದ ಈ ಪ್ರಪಂಚವೆಲ್ಲವೂ ಜಲಾವರಣದಿಂದ ಮುಚ್ಚಲ್ಪಟ್ಟಿದ್ದಿತು. (ಎಂದರೆ, ಭಗವಂತನು ಆವರಣಜಲದವರೆಗೆ ಸೃಷ್ಟಿಸಿದ ಮೇಲೆ, ಜಗತ್ಕಾರಣವಾದ ಸಮಸ್ತ ಭೂತಸಮೂಹಗಳೊಡನೆ ಆ ಜಲದ ಮೇಲೆಯೇ ಶಯನಿಸಿದ್ದನು.) ಈ ವಿಧವಾಗಿ ತನ್ನ ಶರೀರದಲ್ಲಿ ಅಡಗಿದ ಭೂತಸೂಕ್ಷ್ಮಗಳೊಡನೆ ಭಗವಂತನು, ತನಗಾಶ್ರಯವಾದ ಜಲದಲ್ಲಿ ಮಲಗಿದ್ದಾಗ, ದಾರುವಿನಲ್ಲಿ ಅಡಗಿರುವ ಅಗ್ನಿಯಂತೆ, ತನ್ನ ವೀರ್ಯವನ್ನು ಅಡಗಿಸಿಕೊಂಡು, ಕಾಲರೂಪವಾದ ತನ್ನ ಶಕ್ತಿಯನ್ನು ಮಾತ್ರ ಪ್ರೇರಿಸುತ್ತ ಸುಮ್ಮನಿದ್ದನು. ಇದೇ ರೀತಿಯಲ್ಲಿ ಅನೇಕ ಚತುರ್ಯುಗಗಳವರೆಗೆ ಲೋಕಸೃಷ್ಟಿವ್ಯಾಪಾರವೇ ಇಲ್ಲದೆ, ಆ ಆವರಣಜಲದಲ್ಲಿಯೇ ಮಲಗಿದ್ದ ಭಗವಂತನು ಒಮ್ಮೆ ತನ್ನ ಸಂಕಲ್ಪರೂಪವಾದ ಕಾಲಶಕ್ತಿಯಿಂದ ಎಚ್ಚರಗೊಳಿಸಲ್ಪಟ್ಟವನಾಗಿ, ಸೃಷ್ಟಿಕಾರಣಗಳಾದ ಭೂತಸೂಕ್ಷ್ಮಗಳೆಲ್ಲವೂ ತನಗೆ ಶರೀರವಾದ ಪ್ರಕೃತಿಯಲ್ಲಿ ಲಯಗೊಂಡಿರುವುದನ್ನು ನೋಡಿದನು. ಹೀಗೆ ತನ್ನ ದೇಹದಲ್ಲಿ ಸೇರಿದ್ದ ಭೂತಸೂಕ್ಷ್ಮಸಮೂಹವನ್ನು ನೋಡಿದೊಡನೆ, ಆತನಿಗೆ ಅವುಗಳನ್ನು ಸೃಷ್ಟಿಕಾರ್ಯಕ್ಕೆ ಉಪಯೋಗಿಸಬೇಕೆಂಬ ಸಂಕಲ್ಪವು ಹುಟ್ಟಿತು. ಭಗವಂತನ ಸಂಕಲ್ಪರೂಪವಾದ ಈ ಜ್ಞಾನದಿಂದ ಪ್ರೇರಿಸಲ್ಪಟ್ಟ ಕೂಡಲೇ, ಅವನ ದೇಹದಲ್ಲಿ ಸೇರಿದ್ದ ಭೂತಸೂಕ್ಷ್ಮಗಳಲ್ಲಿ, ಕಾಲವಶದಿಂದ ರಜೋಗುಣವೆಂಬುದು ತಲೆಯೆತ್ತಿತು. ಈ ರಜೋಗುಣವು ಹೆಚ್ಚಿದ ಮೇಲೆ, ಆ ಭೂತಸೂಕ್ಷ್ಮಗಳಲ್ಲಿ ಜಗತ್ಸೃಷ್ಟಿಕಾರ್ಯಕ್ಕೂ ಆರಂಭವಾಯಿತು. ಒಡನೆಯೇ ಆ ಭಗವಂತನ ನಾಭಿಪ್ರದೇಶದಿಂದ ಆ ಭೂತಸೂಕ್ಷ್ಮಗಳೆಲ್ಲವೂ ಒಂದು ತಾವರೆಹೂವಿನ ಆಕಾರ

ದಿಂದ ಹೊರಡಲಾರಂಭಿಸಿದುವು. ಈ ಕಮಲವೂ ಕೂಡ, ಕಾಲಶಕ್ತಿಯಿಂದ ಪ್ರೇರಿತವಾದ ಹಾಗೆಲ್ಲಾ ಬೆಳೆಯುತ್ತ ಬಂದು, ವಿಶಾಲವಾದ ಆ ಆವರಣ ಜಲವೆಲ್ಲವನ್ನೂ ಸೂರ್ಯನಂತೆ ತನ್ನ ಕಾಂತಿಯಿಂದ ಬೆಳಗುತ್ತ ಮೇಲೆ ಮೇಲೆ ವಿಸ್ತರಿಸಿತು. ಜೀವಾತ್ಮನ ಅನುಭವಕ್ಕೆ ಬೇಕಾದ ಸಮಸ್ತವಸ್ತು ಗಳನ್ನೂ ತೋರ್ಪಡಿಸತಕ್ಕ ಪ್ರಪಂಚರೂಪವಾದ ಆ ನಾಭಿಕಮಲವು ಮೇಲೆದ್ದು ಬಂದೊಡನೆ, ಭಗವಂತನು ಅದರಲ್ಲಿ ತಾನೂ ಅಂತರ್ಯಾಮಿ ಯಾಗಿ ಪ್ರವೇಶಿಸಿದನು. ಅದರಿಂದಾಚೆಗೆ ಆ ಬ್ರಹ್ಮಾಂಡರೂಪವಾದ ನಾಭಿ ಕಮಲದಿಂದ, ವೇದಸ್ವರೂಪನಾಗಿಯೂ, ಸೃಷ್ಟಿಕರ್ತನಾಗಿಯೂ ಇರುವ ಚತುರ್ಮುಖನು ತನಗೆ ತಾನೇ ಉದ್ಭವಿಸಿದನು. ಇದಕ್ಕಾಗಿಯೇ ಅವನನ್ನು ಸ್ವಯಂಭುವೆಂದು ಹೇಳುವರು. ಕಮಲದಿಂದ ಹುಟ್ಟಿದ ಈ ಬ್ರಹ್ಮದೇವನು, ಬ್ರಹ್ಮಾಂಡರೂಪವಾದ ಆ ಕಮಲದ ಕರ್ಣಿಕೆಯ ಮೇಲೆ ಕುಳಿತು ನೋಡಿ ದಾಗ, ಸುತ್ತಲೂ ಕೇವಲ ಜಲವೊಂದನ್ನು ಹೊರತು ಬೇರೆ ಯಾವ ಲೋಕ ವನ್ನೂ ಕಾಣಲಿಲ್ಲ. ಸುತ್ತಲೂ ತಿರುಗಿ ತಿರುಗಿ ಆಕಾಶದ ಕಡೆಗೂ ಕಣ್ಣಿಟ್ಟು ನೋಡುತ್ತಿದ್ದನು. ಆ ಕರ್ಣಿಕೆಯ ಮೇಲೆಯೇ ತಿರುಗಿ ತಿರುಗಿ ನಾಲ್ಕು ದಿಕ್ಕುಗಳನ್ನೂ ನೋಡುತ್ತಿದ್ದಾಗ, ಆ ನಾಲ್ಕು ಕಡೆಗಳನ್ನೂ ಏಕಕಾಲದಲ್ಲಿ ನೋಡುವುದಕ್ಕೆ ಅನುಕೂಲಿಸುವಂತೆ, ಅವನಿಗೆ ನಾಲ್ಕು ಮುಖಗಳುಂಟಾ ದುವು. ಪ್ರಳಯಕಾಲದ ಬಿರುಗಾಳಿಯ ಬಡಿತದಿಂದ ಅಲ್ಲೋಲಕಲ್ಲೋಲ ವಾಗಿ ಉಬ್ಬಿ ಬರುತ್ತಿರುವ ಆ ಸಮುದ್ರ ಮಧ್ಯದಲ್ಲಿ, ಅಕಸ್ಮಾತ್ತಾಗಿ ಹೊರಟ ಆ ಕಮಲವನ್ನು ನೋಡಿ ಬ್ರಹ್ಮನು ನಿಜಸ್ಥಿತಿಯನ್ನು ತಿಳಿಯದೆ ದಿಗ್ಭ್ರಮೆ ಹಿಡಿದಂತಾಗಿ ತನ್ನಲ್ಲಿ ತಾನು, "ಆಹಾ! ಇದೇನಿದು? ನಾನು ಯಾರು? ಈ ಮಹಾಸಮುದ್ರ ಮಧ್ಯದಲ್ಲಿ ಪ್ರತ್ಯೇಕವಾಗಿ ಇದೊಂದು ಕಮಲವು ಎಲ್ಲಿಂದ ಹುಟ್ಟಿತು? ಇದು ಹುಟ್ಟುವುದಕ್ಕೆ ಕಾರಣವೇನು? ಆ ತಾವರೆಬಳ್ಳಿಯು ಯಾವ ಆಶ್ರಯದಿಂದ ಹೊರಟಿರುವುದೋ, ಅಂತಹ ಯಾವುದೋ ಬೇರೊಂದು ವಸ್ತುವು ಈ ಮಹಾಸಮುದ್ರದ ಕೆಳಗೆ ಇದ್ದೇ ಇರಬೇಕು! ಯಾವ ವಸ್ತುವೂ ನಿರಾಧಾರವಾಗಿ ನಿಲ್ಲಲಾರದು! ಕೇವಲ ಜಲಮಯವಾದ ಈ ಪ್ರದೇಶದಲ್ಲಿ ಇದೊಂದು ಕಮಲವು ಮಾತ್ರ ಕಾಣು ವುದರಿಂದ, ಇದಕ್ಕೆ ಬೇರೆ ಯಾವುದೋ ಒಂದು ಆಧಾರವಸ್ತುವೂ ಇದ್ದೇ

ಇರಬೇಕು.” ಎಂದು ನಿಶ್ಚಯಿಸಿಕೊಂಡನು. ಈ ನಿಶ್ಚಯದಿಂದ ಬ್ರಹ್ಮನು, ಅದರ ನಿಜವನ್ನು ಕಂಡು ಹಿಡಿಯಬೇಕೆಂದುದ್ದೇಶಿಸಿ, ಆ ತಾವರೆಯ ದಂಟಿನ ದ್ವಾರದ ಮಾರ್ಗವಾಗಿ ನೀರಿನಲ್ಲಿ ಪ್ರವೇಶಿಸಿದನು. ಅದೇ ದ್ವಾರದಿಂದ ಬಹಳ ದೂರದವರೆಗೆ ಹೋಗಿ ಎಲ್ಲೆಲ್ಲಿ ಹುಡುಕುತ್ತ ಬಂದರೂ, ಆ ಕಮಲಕ್ಕೆ ಆಶ್ರಯವಾದ ವಸ್ತುವಾವುದೆಂದು ಕಾಣಲಾರದೆ ಹೋದನು. ಗಾಢಾಂಧ ಕಾರದಂತೆ ಕೊನೆಮೊದಲಿಲ್ಲದೆ ವ್ಯಾಪಿಸಿರುವ ಆ ಮಹಾಜಲದಲ್ಲಿ, ತನಗೆ ಕಾರಣವಸ್ತುವಾವುದೆಂದು ಗೊತ್ತಾಗಲಿಲ್ಲ. ಹೀಗೆ ಹುಡುಕುವುದರಲ್ಲಿಯೇ ನೂರಾರು ಸಂವತ್ಸರಗಳ ಕಾಲವೂ ಕಳೆದುಹೋಯಿತು. ಓ ವಿದುರಾ! ಕಾಲಚಕ್ರವನ್ನು ಏನೆಂದು ಬಲ್ಲೆ? ಆ ಭಗವಂತನ ಸುದರ್ಶನ ಚಕ್ರವೇ ಕಾಲವೆಂದು ತಿಳಿ! ಕಾಲವೆಂಬುದು ಪ್ರಾಣಿಗಳಿಗೆ ಹೀಗೆ ಭೀತಿಯನ್ನುಂಟು ಮಾಡುತ್ತಲೇ ಅವರ ಆಯುಸ್ಸನ್ನು ಕಳೆಯುತ್ತಿರುವುದು. ಇಂತಹ ಕಾಲ ದಲ್ಲಿ ಚತುರ್ಮುಖನಿಗೆ ನಿಷ್ಪ್ರಯೋಜನವಾಗಿ ನೂರು ವರುಷಗಳು ಕಳೆದು ಹೋದುವು. ಇಷ್ಟಾದರೂ ತನಗೆ ಕಾರಣವಾವುದೆಂದು ತಿಳಿಯದೆ, ಚತು ರ್ಮುಖನು ಆಶಾಭಂಗವನ್ನು ಹೊಂದಿ, ಮುಂದೆ ಹುಡುಕುವುದಕ್ಕೂ ಬುದ್ಧಿ ತೋರದೆ ಹಿಂತಿರುಗಿದನು. ತಾನು ಮೊದಲಿದ್ದ ಸ್ಥಾನಕ್ಕೆ ಬಂದು ಅದೇ ಕರ್ಣಿಕೆಯ ಮೇಲೆ ಕುಳಿತನು. ಅಲ್ಲಿ ತನ್ನ ಶ್ವಾಸಗಳನ್ನು ತಡೆದು, ಇಂದ್ರಿ ಯಗಳೆಲ್ಲವನ್ನೂ ವಿಷಯಾಭಿಲಾಷೆಯಿಂದ ತಪ್ಪಿಸಿ, ಕೇವಲ ಸಮಾಧಿ ಯೋಗವನ್ನು ಹಿಡಿದನು. ಹೀಗೆ ನೂರು ವರುಷಗಳವರೆಗೂ ಸಮಾಧಿಯನ್ನು ನಡೆಸಿದ ಮೇಲೆ ಅವನ ಬುದ್ಧಿಯು ಪರಿಪಕ್ವವಾಯಿತು. ಅವನು ಇದಕ್ಕೆ ಮೊದಲು ನೀರಿನಲ್ಲಿ ಬಹುದೂರದವರೆಗೆ, ಹುಡುಕಿ ಬಂದರೂ ಯಾವ ವಸ್ತು ವನ್ನು ಕಾಣಲಾರದೆ ಹೋದನೋ, ಅಂತಹ ವಸ್ತುವಾದ ಪರಮಪುರುಷನು ಅವನ ಮನಸ್ಸಿನಲ್ಲಿಯೇ ಇದ್ದಂತೆ ಅವನಿಗೆ ಗೋಚರಿಸಿತು. ತಾವರೆದಂಟಿನ ನೂಲಿನಂತೆ ಶುಭ್ರವಾಗಿಯೂ, ಉದ್ದವಾಗಿಯೂ ಇರುವ ಆದಿಶೇಷಶರೀರ ವೆಂಬ ಹಾಸಿಗೆಯ ಮೇಲೆ ಮಲಗಿದ್ದ ಒಂದು ದಿವ್ಯಾಕೃತಿಯು ಅವನ ಮನಸ್ಸಿಗೆ ಗೋಚರಿಸಿತು. ಮಹಾದ್ಭುತವಾದ ಆ ದಿವ್ಯಸ್ವರೂಪವನ್ನು ಕೇಳಬೇಕೇ? ಆ ಮಹಾಪುರುಷನ ತಲೆಯ ಮೇಲೆ, ಛತ್ರಾಕಾರವಾಗಿ ಹರಡಿದ್ದ ಆದಿಶೇಷನ ಫಣಾರತ್ನಕಾಂತಿಯು, ಆಗಿನ ಪ್ರಳಯ ಸಮುದ್ರ

ದಲ್ಲಿದ್ದ ಅಂಧಕಾರವೆಲ್ಲವನ್ನೂ ನೀಗಿಸುವಂತೆ ಪ್ರಕಾಶಿಸುತ್ತಿತ್ತು. ಆ ಭಗವಂತನು ಧರಿಸಿದ್ದ ಪೀತಾಂಬರವು, ಪರ್ವತದ ಮೇಲೆ ಕುಳಿತಿದ್ದ ಸಂಧ್ಯಾಕಾಲದ ಮೇಘದಂತೆಯೂ, ಆತನ ತಲೆಯಲ್ಲಿ ಜ್ವಲಿಸುತ್ತಿದ್ದ ಸುವರ್ಣಕಿರೀಟವು ಸುವರ್ಣಶಿಖರದಂತೆಯೂ, ಆತನು ಧರಿಸಿದ ಮುಕ್ತಾಹಾರಗಳು ಗಿರಿನದಿಗಳಂತೆಯೂ, ತುಲಸೀಮಾಲಿಕೆಗಳು ದಿವ್ಯೌಷಧಿಗಳಂತೆಯೂ, ಆತನ ಭುಜಗಳು ಪರ್ವತದ ಮೇಲಿನ ಬಿದಿರುಮೆಳೆಗಳಂತೆಯೂ, ಆತನ ಪಾದಗಳು ವೃಕ್ಷಗಳಂತೆಯೂ ಪ್ರಕಾಶಿಸುತ್ತ, ಶೇಷಶಾಯಿಯಾಗಿದ್ದ ಆ ಭಗವಂತನ ಸ್ವರೂಪವು ಒಂದು ಮರಕತಪರ್ವತದಂತೆ ಶೋಭಿಸುತ್ತಿತ್ತು. ಮತ್ತು ಆ ಮಹಾತ್ಮನ ದಿವ್ಯದೇಹವು ಅತಿ ದೀರ್ಘವಾಗಿಯೂ, ವಿಸ್ತಾರವಾಗಿಯೂ, ತ್ರೈಲೋಕ್ಯವನ್ನೂ ತನ್ನಲ್ಲಿಯೇ ಅಡಗಿಸಿಕೊಳ್ಳುವಷ್ಟು ಮಹತ್ತಾಗಿಯೂ, ವಿಚಿತ್ರದಿವ್ಯಾಭರಣವಸ್ತ್ರಗಳಿಂದ ಶೋಭಿತವಾಗಿಯೂ ಇದ್ದಿತು. ಮತ್ತು ಆ ಪರಮಪುರುಷನ ಪಾದಪದ್ಮಗಳೆರಡೂ ತಮ್ಮ ತಮ್ಮ ಇಷ್ಟಾರ್ಥಪೂರ್ತಿಗಾಗಿ ವರ್ಣಾಶ್ರಮಧರ್ಮಗಳನ್ನನುಸರಿಸಿ ಭಜಿಸತಕ್ಕ ಭಕ್ತರಿಗೆ ಸರ್ವಾರ್ಥಪ್ರದವಾದ ಕಾಮಧೇನುವಂತಿದ್ದುವು. ಆ ಪಾದಪದ್ಮಗಳು ಚಂದ್ರನಂತೆ ಶೋಭಿಸುವ ನಖಗಳ ಕಾಂತಿಯಿಂದ ಅವನ ಕಾಲ್ಬೆರಳುಗಳಿಗೆ ಮತ್ತಷ್ಟು ಶೋಭಾವಿಶೇಷವನ್ನುಂಟುಮಾಡುತ್ತಿದ್ದುವು. ಅವನ ಮುಖದಲ್ಲಿ ಕಾಣುವ ಮಂದಹಾಸವೊಂದೇ ಸಮಸ್ತಲೋಕದ ದುಃಖವನ್ನೂ ನೀಗಿಸುವಂತಿದ್ದಿತು. ಆ ಮುಖದ ಉಭಯಪಾರ್ಶ್ವಗಳಲ್ಲಿಯೂ, ದಿವ್ಯಕುಂಡಲಗಳು ಜಗಜಗಿಸುತ್ತಿದ್ದುವು. ಮತ್ತು ತುಟಿಯ ಕಾಂತಿಯಿಂದ ಮತ್ತಷ್ಟು ಸುಂದರವಾದ ನಾಸಿಕದಿಂದಲೂ, ಅಂದವಾದ ಹುಬ್ಬುಗಳಿಂದಲೂ, ಮನೋಹರವಾದ ಆತನ ಮುಖವು, ನಿಜಸೌಂದರ್ಯದಿಂದಲೇ ಭಕ್ತಜನರನ್ನು ಆದರಿಸುವಂತೆ ತೋರುತ್ತಿತ್ತು. ಕದಂಬಪುಷ್ಪದ ಕೇಸರದಂತೆ ಹೊಂಬಣ್ಣವುಳ್ಳ ಪಟ್ಟೆಮಡಿಯೂ, ಸುವರ್ಣದ ನಡುವಿನ ಪಟ್ಟಿಯೂ, ಅವನ ನಿತಂಬಬಿಂಬಕ್ಕೆ ಅಪೂರ್ವವಾದ ಒಂದು ಶೋಭೆಯನ್ನು ಬೀರುತ್ತಿತ್ತು. ಆತನ ವಕ್ಷಃಸ್ಥಲವು ಅಮೂಲ್ಯವಾದ ಭೂಷಣಗಳಿಂದಲೂ, ಶ್ರೀವತ್ಸವೆಂಬ ಮಚ್ಚೆಯಿಂದಲೂ ಶೋಭಿಸುತ್ತಿತ್ತು. ಮತ್ತು ಆತನ ಬಾಹುದಂಡಗಳು ನೀಡಿದ ಕೊಂಬೆಗಳಂತೆಯೂ, ಅವುಗಳಲ್ಲಿದ್ದ ಭುಜಕೀರ್ತಿ, ತೋಳ್ಬಳೆ ಮುಂತಾದ ದಿವ್ಯಾಭರಣಗಳು ವೃಕ್ಷದಲ್ಲಿರುವ ಫಲ

ಪುಷ್ಪಾದಿಗಳಂತೆಯೂ, ಆತನು ಮಲಗಿದ್ದ ಸರ್ಪದೇಹವು ಆ ಮರಕ್ಕೆ ಸುತ್ತಿದ ಹಾವುಗಳಂತೆಯೂ ಶೋಭಿಸುತ್ತಿರಲು ತನ್ನ ಮೂಲವನ್ನು ಕಾಣಿಸದೆ, ಸಮಸ್ತ ಲೋಕೋತ್ಪತ್ತಿಗೆ ಕಾರಣವಾಗಿ ಬೆಳೆದಿರುವ ಒಂದು ಮಹಾ ವೃಕ್ಷವೋ ಎಂಬಂತೆ ಕಾಣುತ್ತಿದ್ದನು. ಮತ್ತು ಅನೇಕ ಚರಾಚರವಸ್ತು ಗಳಿಗೆ ನಿವಾಸಸ್ಥಾನವಾಗಿ, ಸರ್ಪಗಳಿಗೆ ಪ್ರಿಯನಾಗಿ, ಸುತ್ತಲೂ ಜಲ ದಿಂದಲೂ ಆವೃತವಾಗಿ, ಸಹಸ್ರಶಿಖರಗಳಿಂದ ಶೋಭಿತವಾಗಿ, ಕೌಸ್ತುಭ ವೆಂಬ ರತ್ನವನ್ನು ತನ್ನ ಗಣಿಯಲ್ಲಿ ಅಡಗಿಸಿಕೊಂಡಿರುವ ಒಂದು ಮಹಾ ಪರ್ವತವೋ ಎಂಬಂತೆ ಕಾಣಿಸುತ್ತಿದ್ದನು. ಆ ಭಗವಂತನ ಕಂಠಭಾಗವು, ಅವನ ಕೀರ್ತಿಯನ್ನು ಗಾನಮಾಡುತ್ತಿರುವ ವೇದಗಳೆಂಬ ಭ್ರಮರಗಳಿಂದ ಶೋಭಿತವಾದ ವನಮಾಲಿಕೆಯಿಂದೊಪ್ಪುತ್ತಿರುವುದು. ಸೂರ್ಯಚಂದ್ರರಾ ಗಲೀ, ಅಗ್ನಿವಾಯುಗಳಾಗಲೀ, ಇವನ ಸಾನ್ನಿಧ್ಯದಲ್ಲಿ ತಮ್ಮ ವ್ಯಾಪಾರ ಗಳನ್ನು ನಡೆಸಲಾರರು. ಮತ್ತು ಆ ಭಗವಂತನ ತೇಜಸ್ಸು, ಲೋಕ ರಕ್ಷಣಾರ್ಥವಾಗಿ ತ್ರೈಲೋಕ್ಯವನ್ನೂ ಸುತ್ತುತ್ತಿರುವ ಸುದರ್ಶನಾದ್ಯಾ ಯುಧಕಾಂತಿಯಿಂದ ನಿರೂಪಿಸಲಸಾಧ್ಯವಾಗಿದ್ದಿತು. ಇಂತಹ ಭಗವಂತನ ಸ್ವರೂಪವು ಧ್ಯಾನಗೋಚರವಾದ ಕ್ಷಣದಲ್ಲಿಯೇ, ಬ್ರಹ್ಮನಿಗೆ ಆ ಭಗವಂತನ ನಾಭಿಕಮಲದಲ್ಲಿಯೇ ತಾನು ಕುಳಿತಿರುವೆನೆಂಬುದೂ, ಆಗಿನ ವಾಯ್ವಾಕಾಶ ಸಮುದ್ರಗಳು ಪ್ರಳಯ ಸಂಬಂಧಿಗಳೆಂದೂ ಮನಸ್ಸಿಗೆ ತೋರಿತು. ಆಗಲೇ ಅವನಿಗೆ ಜಗತ್ಸೃಷ್ಟಿಯನ್ನು ಮಾಡುವ ಉದ್ದೇಶವೂ ಅಂಕುರಿಸಿತು. ಆದರೆ ಆಗ ಬ್ರಹ್ಮದೇವನು, ತನ್ನ ಮುಂದೆ ಕಾಣುತ್ತಿದ್ದ ಈ ಜಲಾದಿಗಳ ಹೊರತು, ಸೃಷ್ಟಿಸಬೇಕಾದ ಬೇರೆ ಉಪಕರಣಗಳೊಂದನ್ನೂ ಕಾಣಲಿಲ್ಲ. ಆ ಚತು ರ್ಮುಖನು ರಜೋಗುಣಪ್ರಧಾನನಾಗಿ ಜನಿಸಿದುದರಿಂದ, ಅವನಿಗೆ ಪ್ರಜೆ ಗಳನ್ನು ಸೃಷ್ಟಿಸಬೇಕೆಂಬ ಆಸೆಯು ಮೇಲೆ ಮೇಲೆ ಹೆಚ್ಚುತ್ತಿತ್ತು. ಆದರೆ ತನ್ನ ಮುಂದೆ ಆ ಭಗವಂತನ ನಾಭಿಕಮಲವೊಂದು, ತನ್ನ ಸ್ವರೂಪ ವೊಂದು, ವಾಯು, ಜಲ, ಆಕಾಶವೆಂಬಿವು ಮೂರು, ಈ ಐದನ್ನು ಹೊರತು ಬೇರೊಂದನ್ನೂ ಕಾಣದುದರಿಂದ, ಮುಂದೆ ಸೃಷ್ಟಿಪ್ರಕಾರವನ್ನು ತಿಳಿಯಲಾ ರದೆ, ಹೇಗಾದರೂ ಅದನ್ನು ನಿರ್ವಹಿಸಬೇಕೆಂಬ ಪ್ರಯತ್ನದಿಂದ, ಅದಕ್ಕಾಗಿ

ಪರಮಪುರುಷನನ್ನು ಸ್ತೋತ್ರ ಮಾಡಲಾರಂಭಿಸಿದನು. ಇಲ್ಲಿಗೆ ಎಂಟನೆಯ ಅಧ್ಯಾಯವು.

---

{ ಬ್ರಹ್ಮನು ಸೃಷ್ಟಿಸಾಮರ್ಥ್ಯವನ್ನು ಪಡೆಯುವುದ ಕ್ಕಾಗಿ ಪರಮಪುರುಷನನ್ನು ಸ್ತುತಿಸಿದುದು. }

---

ಬ್ರಹ್ಮಕೃತಪರಮಪುರುಷಸ್ತುತಿಃ

ಜ್ಞಾತೋಸಿ ಮೇSದ್ಯ ಸುಚಿರಾನ್ನನು ದೇಹಭಾಜಾಂ
ನ ಜ್ಞಾಯತೇ ಭಗವತೋ ಗತಿರಿತ್ಯವದ್ಯಮ್ ।
ನಾನ್ಯತ್ತ್ವದಸ್ತಿ ಭಗವನ್ನಪಿ ತನ್ನ ಶುದ್ಧಂ
ಮಾಯಾಗುಣವ್ಯತಿಕರಾತ್ತ್ವಮುರುರ್ವಿಭಾಸಿ ॥ ೧

ಓ! ಪರಮಪುರುಷಾ! ಬಹುದಿನಗಳ ಮೇಲೆ ಈಗ ನಾನು ನಿನ್ನ ಸ್ವರೂಪವನ್ನು ತಿಳಿದೆನು. ಲೋಕದಲ್ಲಿ ಕಾರ್ಯರೂಪದಿಂದಲೂ, ಕಾರಣ ರೂಪದಿಂದಲೂ ತೋರುವ ಸಮಸ್ತ ಚೇತನಾಚೇತನಗಳಿಗೂ ನೀನೇ ಅಂತ ರ್ಯಾಮಿಯಾಗಿದ್ದು, ಅವುಗಳನ್ನು ಆಯಾ ಕಾರ್ಯದಲ್ಲಿ ನಿಯಮಿಸತಕ್ಕವನೆಂದೂ, ಮತ್ತು ಇಚ್ಛಾರೂಪವಾದ ಸಂಕಲ್ಪದಿಂದಲೇ ಪ್ರಾಕೃತ ದಿವ್ಯಶರೀರಗಳನ್ನು ಧರಿಸತಕ್ಕವನೆಂದೂ, ಆಶ್ರಿತವತ್ಸಲನೆಂದೂ, ಸತ್ಯಜ್ಞಾನಾನಂದಸ್ವರೂಪ ನೆಂದೂ, ಈಗ ನಾನು ಸ್ಪಷ್ಟವಾಗಿ ತಿಳಿದೆನು. ಷಾಡ್ಗುಣ್ಯಪರಿಪೂರ್ಣನಾದ ನಿನ್ನ ಸ್ವರೂಪವನ್ನು ತಿಳಿಯದಿರುವುದೇ ಕರ್ಮಾಧೀನವಾದ ಶರೀರವುಳ್ಳ ಜೀವಾತ್ಮರಲ್ಲಿರುವ ಮುಖ್ಯದೋಷವು. ಅದೇ ಅಜ್ಞಾನವು. ನಿನ್ನ ನಿಜ ಸ್ವರೂಪವನ್ನು ತಿಳಿದರೆ ಎಲ್ಲವನ್ನೂ ತಿಳಿದಂತೆಯೇ ಆಗುವುದು. ಎಲ್ಲಾ ವಸ್ತುಗಳಲ್ಲಿಯೂ ನೀನೇ ಒಳಹೊಕ್ಕು, ಅವುಗಳಿಗೆ ಹೆಸರಿನಲ್ಲಿಯೂ, ರೂಪ ದಲ್ಲಿಯೂ ಪರಸ್ಪರ ಭೇಧಗಳನ್ನುಂಟುಮಾಡುವೆಯೇ ಹೊರತು, ವಾಸ್ತವಕ್ಕೆ

ಎಲ್ಲವೂ ನೀನೇ ಆಗಿರುವೆಯಾದುದರಿಂದ, ಲೋಕದಲ್ಲಿ ತಿಳಿಯಬೇಕಾದ ವಸ್ತುವು ನಿನ್ನನ್ನು ಬಿಟ್ಟು ಬೇರೊಂದಿಲ್ಲವು. ದೇವಮನುಷ್ಯಾದಿ ರೂಪಗಳೆಲ್ಲವೂ ಸ್ವತಂತ್ರವಾಗಿರುವಂತೆ ತೋರುತ್ತಿದ್ದರೂ, ಆ ತೋರಿಕೆಯು ಕೇವಲ ಭ್ರಾಂತಿಯು. ಏಕೆಂದರೆ, ಮಾಯೆಯೆಂಬ ಪ್ರಕೃತಿಯ ಗುಣಗಳಾದ ಸತ್ವರಜಸ್ತಮಸ್ಸುಗಳ ಹೆಚ್ಚುಕಡಿಮೆಯಿಂದ ನೀನೊಬ್ಬನೇ ಬೇರೆ ಬೇರೆ ಸ್ವರೂಪದಿಂದ ತೋರುತ್ತಿರುವೆ. ಕೊನೆಗೆ ಪ್ರಳಯಕಾಲದಲ್ಲಿ ಅವುಗಳನ್ನು ಶರೀರವಾಗಿ ಹೊಂದಿ ನಿನ್ನೊಡನೆ ಏಕಾಕಾರವಾಗಿ ಸೇರಿಸಿಕೊಳ್ಳುವೆ! ತಿರುಗಿ ನೀನೇ ಅವುಗಳನ್ನು ವಿನೋದಾರ್ಥವಾಗಿ, ಮಹತ್ತು, ಅಹಂಕಾರ ಮುಂತಾದ ಕ್ರಮದಿಂದ ಮಹಾಭೂತದವರೆಗೆ ವಿಸ್ತರಿಸಿಡುವೆ! ಆದುದರಿಂದ ಮೊದಲಿದ್ದ ಸೂಕ್ಷ್ಮದಶೆಯಲ್ಲಿಯಾಗಲೀ, ಈ ಸ್ಥೂಲದಶೆಯಲ್ಲಿಯಾಗಲೀ, ನಿನ್ನನ್ನು ಬಿಟ್ಟ ವಸ್ತುವೊಂದಾ... ಇರುವುದಿಲ್ಲ. ಹೀಗೆ ನೀನು ಪ್ರಪಂಚರೂಪದಿಂದ ಮಾರ್ಪಟ್ಟು ನಿಲ್ಲುವಾಗಲೂ, ಆ ಸ್ವರೂಪಕ್ಕೆ ಸಂಭವಿಸತಕ್ಕ ಸಮಸ್ತ ವಿಕಾರಗಳೂ ನಿನಗೆ ಶರೀರವಾದ ಅಚೇತನಾಚೇತನಗಳಿಗೆ ಮಾತ್ರ ಸಂಭವಿಸುವುವೇ ಹೊರತು, ನಿನ್ನವರೆಗೆ ಮುಟ್ಟಲಾರವು. ಹುಟ್ಟು, ಮುಪ್ಪು, ಸಾವು, ಮುಂತಾದ ವಿಕಾರಗಳೆಲ್ಲವೂ ನಿನಗೆ ಶರೀರವಾದ ಚೇತನಗಳಿಗೆ ಸೇರುವುದು. ಅದರಂತೆಯೇ ಸ್ಥಾವರಗಳಿಗೆ ಉಂಟಾಗತಕ್ಕ ವಿಕಾರಗಳೆಲ್ಲವೂ ನಿನಗೆ ಶರೀರವಾದ ಅಚೇತನಗಳಿಗೆ ಸೇರುವುದು. ಕೇವಲ ಜ್ಞಾನಾನಂದಸ್ವರೂಪನಾದ ನಿನಗೆ ಈ ವಿಕಾರವೊಂದೂ ಸಂಭವಿಸದು. ಆ ನಿನ್ನ ನಿಜಸ್ವರೂಪವನ್ನು ತಿಳಿಯುವುದೇ ಮೋಕ್ಷಕ್ಕೆ ಮುಖ್ಯಸಾಧನವು.

ರೂಪಂ ಯದೇತದವಬೋಧರಸೋದಯಸ್ಯ
ಶಶ್ವನ್ನಿವೃತ್ತತಮಸಸ್ಸದನುಗ್ರಹಾಯ।
ಆದೌ ಗೃಹೀತಮವತಾರಶತೈಕಬೀಜಂ
ಯನ್ನಾಭಿಪದ್ಮಭವನಾದಹಮಾವಿರಾಸಮ್॥ ೨

ನಿನ್ನ ಜ್ಞಾನಕ್ಕಾಗಲೀ, ನಿನ್ನ ಆನಂದಕ್ಕಾಗಲೀ, ಯಾವ ವಿಧವಾದ ಲೋಪವೂ, ಚ್ಯುತಿಯೂ, ಮಿತಿಯೂ ಇರುವುದಿಲ್ಲ. ಯಾವ ಕಾಲದಲ್ಲಿಯೂ ಅಜ್ಞಾನವೆಂಬುದು ನಿನ್ನನ್ನು ಸ್ವಲ್ಪಮಾತ್ರವೂ ಆವರಿಸಲಾರದು. ಆದುದರಿಂದ, ನೀನು ಬದ್ಧ, ಮುಕ್ತ, ನಿತ್ಯರೆಂಬ ಮೂರು ಬಗೆಯ ಚೇತನರಿಗಿಂ

ತಲೂ, ಅಚೇತನಗಳಿಗಿಂತಲೂ ವಿಲಕ್ಷಣ ಸ್ವರೂಪವುಳ್ಳವನು. (ನೀನು ಜ್ಞಾನಸ್ವರೂಪನಾದುದರಿಂದ ಜಡವೆನಿಸಿಕೊಂಡ ಅಚೇತನಕ್ಕಿಂತಲೂ ಬೇರ್ಪಟ್ಟವನೆಂಬುದು ಸ್ಪಷ್ಟವು. ಜೀವಾತ್ಮಗಳೂ, ನಿನ್ನಂತೆಯೇ ಜ್ಞಾನಸ್ವರೂಪವಾಗಿ, ಜಡಪ್ರಕೃತಿಗಳಿಗಿಂತಲೂ ವಿಲಕ್ಷಣವೆನಿಸಿಕೊಂಡಿದ್ದರೂ, ಅವರಲ್ಲಿ ಬದ್ಧಜೀವರ ಜ್ಞಾನಕ್ಕೆ ಪ್ರಕೃತಿ ಸಂಬಂಧದಿಂದ ಜ್ಞಾನಸಂಕೋಚವುಂಟು (ತಗ್ಗುವುದುಂಟು). ನಿನ್ನ ಜ್ಞಾನಕ್ಕೆ ಆ ವಿಧವಾದ ಚ್ಯುತಿಯಿಲ್ಲದುದರಿಂದ, ಆ ಬದ್ಧಜೀವರಿಗಿಂತಲೂ ನೀನು ವಿಲಕ್ಷಣನೆನಿಸಿರುವೆ. ಸಂಸಾರನಿವೃತ್ತಿಯನ್ನು ಹೊಂದಿದ ಮುಕ್ತಜೀವರಿಗೆ ಜ್ಞಾನಸಂಕೋಚರೂಪವಾದ ಈ ದೋಷವಿಲ್ಲದಿದ್ದರೂ, ಅವರೂ ಹಿಂದೆ ಕೆಲವು ಕಾಲದವರೆಗೆ ಜ್ಞಾನಸಂಕೋಚವನ್ನು ಹೊಂದಿದ್ದವರಾದುದರಿಂದ, ನಿನ್ನ ಸ್ವರೂಪವು ಆ ಮುಕ್ತಜೀವರಿಗಿಂತಲೂ ವಿಲಕ್ಷಣವೆನಿಸಿರುವುದು. ಆದರೆ ಯಾವಾಗಲೂ ಸಂಸಾರ ಸಂಬಂಧವಾಗಲೀ, ಜ್ಞಾನಸಂಕೋಚವಾಗಲೀ ಇಲ್ಲದ ಅನಂತಗರುಡಾದಿ ನಿತ್ಯಸೂರಿಗಳೋ ಎಂದರೆ, ಅವರಿಗೂ ಆ ವಿಧವಾದ ಮಹಿಮೆಯು ನಿನ್ನ ಸಂಕಲ್ಪದಿಂದಲೇ ಪ್ರಾಪ್ತವಾದುದರಿಂದ, ಅವರೂ ನಿನ್ನ ಕೃಪೆಗೆ ಒಳಪಟ್ಟಿರುವರು. ಅವರ ಜ್ಞಾನಾತಿಶಯಕ್ಕೂ ನಿನ್ನ ಕೃಪೆಯೆಂಬ ಕಾರಣವೊಂದು ಏರ್ಪಟ್ಟಿರುವುದರಿಂದ, ಸೋಪಾಧಿಕವೆನಿಸಿಕೊಂಡಿರುವುದು. ನಿನ್ನ ಜ್ಞಾನಕ್ಕಾದರೋ ಎಂದೆಂದಿಗೂ ಹೆಚ್ಚುಕಡಿಮೆಯಿಲ್ಲ. ನಿನಗೆ ಮೇಲ್ಪಟ್ಟವರು ಮತ್ತೊಬ್ಬರಿಲ್ಲವಾದುದರಿಂದ, ನಿನ್ನ ಜ್ಞಾನವು ಬೇರೊಬ್ಬರ ಸಂಕಲ್ಪದಿಂದ ಹುಟ್ಟಿದುದಲ್ಲ. ಆದುದರಿಂದ ನೀನು ಆ ನಿತ್ಯಸೂರಿಗಳಿಗಿಂತಲೂ ವಿಲಕ್ಷಣನು.) ಈಗ ನೀನು ಪ್ರಥಮದಲ್ಲಿ ಕೈಕೊಂಡ ಈ ರೂಪವೇ ಮುಂದೆ ನಾನಾವತಾರಗಳಿಗೆ ಮೂಲಕಾರಣವಾಗಿರುವುದು. ದೇವಾ! ಈಗ ನಿನ್ನ ನಾಭಿಕಮಲದಿಂದ ಉದ್ಭವಿಸಿದ ಈ ನನ್ನ ಸ್ವರೂಪವೂ ನಿನ್ನ ಆವೇಶಾವತಾರವೇ ಹೊರತು ಬೇರೆಯಲ್ಲ. ನೀನೇ ನನ್ನಲ್ಲಿ ಒಳಹೊಕ್ಕು ಸೃಷ್ಟಿಕಾರ್ಯವನ್ನು ನಡೆಸತಕ್ಕವನಾಗಿರುವೆ. ಈ ನಿನ್ನ ನಾನಾವಿಧ ಜನ್ಮಗಳೆಲ್ಲವೂ ಭಕ್ತಾನುಗ್ರಹಕ್ಕಾಗಿಯೇ ಅಲ್ಲದೆ ಬೇರೆಯಲ್ಲ.

ನಾತಃ ಪರಂ ಪರಮ ಯದ್ಭವತಸ್ಸ್ವರೂಪ
ಮಾನಂದಮಾತ್ರಮವಿಕಲ್ಪಮವಿದ್ಧವರ್ಚಃ।

ಪಶ್ಯಾಮಿ ವಿಶ್ವಸೃಜಮೇಕಮವಿಶ್ವಮಾತ್ಮನ್
ಭೂತೇಂದ್ರಿಯಾತ್ಮಕಮದಸ್ತ ಉಪಾಶ್ರಿತೋಽಸ್ಮಿ || ೩

ದೇವದೇವನೇ! ಆನಂದಮಯವಾಗಿ ಜಾತಿಗುಣಾದಿ ಭೇದಗಳಿಲ್ಲದೆ, ಯಾವ ವಿಷಯದಲ್ಲಿಯೂ ತಡೆಯಿಲ್ಲದ ಸಂಕಲ್ಪರೂಪವಾದ ಜ್ಞಾನದಿಂದ ಕೂಡಿ ಪ್ರಪಂಚಕ್ಕಿಂತಲೂ ವಿಲಕ್ಷಣವಾಗಿ, ವಿಶ್ವಕಾರಣವಾಗಿ, ಅಪ್ರಾಕೃತ ವಾದ ಭೂತೇಂದ್ರಿಯಾತ್ಮಕವಾದ ರೂಪವನ್ನು ಹೊಂದಿದ ನಿನ್ನ ಸ್ವರೂಪ ಕ್ಕಿಂತಲೂ ವಿಲಕ್ಷಣವಾದ ಬೇರೊಂದನ್ನು ನಾನು ಕಾಣೆನು! ಎಲೈ ಪರ ಮಾತ್ಮನೆ! ವಿಶ್ವಾತ್ಮಕವೆನಿಸಿದ ಅಂತಹ ನಿನ್ನ ಸ್ವರೂಪವನ್ನು ನಾನು ಮರೆಹೊಗುವೆನು.

ಯದ್ವಾ ಇದಂ ಭುವನಮಙ್ಗಳ ಮಙ್ಗಳಾಯ
ಧ್ಯಾನೇ ಸ್ಮನೋ ದರ್ಶಿತಂ ತ್ವದುಪಾಸಕಾನಾಮ್ ।
ತಸ್ಮೈನಮೋ ಭಗವತೇಽನುವಿಧೇಮ ತುಭ್ಯಂ
ಯೋಽನಾದೃತೋ ನರಕಭಾಗ್ಭಿರಸತ್ಪ್ರಸಙ್ಗೈಃ || ೪

ಎಲೈ ಮಂಗಳಸ್ವರೂಪನೇ! ನನ್ನ ಹಾಗೆಯೇ ನಿನ್ನನ್ನು ದೃಢಮನ ಸ್ಸಿನಿಂದ ಉಪಾಸನೆಮಾಡತಕ್ಕ ಭಕ್ತರಿಗೆ ಮಾತ್ರವೇ ನೀನು ಧ್ಯಾನಗೋಚ ರನಾಗುವೆಯೇ ಹೊರತು, ಅಸತ್ಕಥೆಗಳಲ್ಲಿ ಬಿದ್ದ ಪಾಪಿಗಳಾದ ಇತರ ಜೀವಿ ಗಳಿಗೆ ನಿನ್ನ ದರ್ಶನವು ಲಭಿಸದು. ಇಂತಹ ಸ್ವರೂಪಸ್ವಭಾವಗಳೊಡ ಗೂಡಿದ ಷಡ್ಗುಣಪರಿಪೂರ್ಣನಾದ ನಿನಗೆ ವಂದಿಸುವೆನು.

ಯೇ ತು ತ್ವದೀಯಚರಣಾಮ್ಬುಜಕೋಶಗನ್ಧಂ
ಜಿಘ್ರನ್ತಿ ಕರ್ಣವಿವರೈಶ್ಶ್ರುತಿವಾತನೀತಮ್ ।
ಭಕ್ತ್ಯಾ ಗೃಹೀತಚರಣಾಃ ಪರಯಾ ಚ ತೇಷಾಂ
ನಾಪೈಷಿ ನಾಥ ಹೃದಯಾಮ್ಬುರುಹಾತ್ಸ್ವಪುಂಸಾಮ್ || ೫

ಮತ್ತು ವೇದಗಳೆಂಬ ವಾಯುವಿನಿಂದ ಲೋಕದಲ್ಲಿ ವಿಸ್ತರಿಸಲ್ಪಟ್ಟ ನಿನ್ನ ಪಾದಕಮಲದ ಗಂಧವನ್ನು ಯಾರು ಅನುಭವಿಸುವರೋ, ಯಾರು ಅತ್ಯಂತ ಭಕ್ತಿಯಿಂದ ನಿನ್ನ ಪಾದಗಳನ್ನಾಶ್ರಯಿಸುವರೋ ಅಂತಹ ಭಕ್ತರ ಹೃದಯವನ್ನು ಬಿಟ್ಟಗಲದೆ, ಅವರ ಭಕ್ತಿಗೆ ವಶನಾಗಿ ಅವರಲ್ಲಿ ನಿತ್ಯಸಾನ್ನಿ ಧ್ಯವನ್ನು ಮಾಡುವ ನಿನಗೆ ನಮಸ್ಕಾರವು.

ತಾವದ್ಭಯಂ ದ್ರವಿಣಗೇಹಸುಹೃನ್ನಿಮಿತ್ತಂ
ಶೋಕಸ್ಸ್ಪೃಹಾ ಪರಿಭವೋ ವಿಪುಲಶ್ಚ ಲೋಭಃ।
ತಾವನ್ಮಮೇತ್ಯಸದವಗ್ರಹ ಆರ್ತಿಮೂಲಂ
ಯಾವನ್ನ ತೇಽಂಘ್ರಿಮಭಯಂ ಪ್ರವೃಣೀತ ಲೋಕಃ ॥ ೬

ಓ ದೇವದೇವಾ! ಲೋಕದ ಪ್ರಜೆಗಳೆಲ್ಲರೂ ಸಂಸಾರವೆಂಬ ಕೂಪ (ಬಾವಿ) ದಲ್ಲಿ ಬಿದ್ದು, ವಿವೇಕಶೂನ್ಯರಾಗಿ, ಈ ಪ್ರಪಂಚವೆಲ್ಲವೂ ಸ್ಥಿರವೆಂದು ತಿಳಿದುಕೊಂಡು, ಧನಗಳನ್ನೂ, ಗೃಹಗಳನ್ನೂ, ಬಂಧುಮಿತ್ರವರ್ಗಗಳನ್ನೂ, ಹೆಂಡತಿಮಕ್ಕಳನ್ನೂ ಇದರಂತೆಯೇ ಇನ್ನೂ ಕೆಲವು ಸುಂದರ ವಸ್ತುಗಳನ್ನೂ ಬಹಳ ಮೋಹದಿಂದ ಬೆಳೆಸುವರು. ಇವುಗಳನ್ನು ಸಂಪಾದಿಸುವುದಕ್ಕಾಗಿ ಎಷ್ಟೋ ಕಷ್ಟಪಡುವರು. ಇವುಗಳಲ್ಲಿ ಯಾವುದಾದರೂ ಒಂದು ಕೈತಪ್ಪಿ ಹೋದಾಗ, ಬಹಳ ದುಃಖದಿಂದ ಕೊರಗುವರು. ತಿರುಗಿ ಅದೇ ವಸ್ತುವನ್ನು ಸಂಪಾದಿಸುವುದಕ್ಕೆ ಆತುರಪಡುವರು. ಈ ಪ್ರಯತ್ನದಲ್ಲಿ ಅನೇಕರಿಂದ ತಿರಸ್ಕಾರವನ್ನೂ ಹೊಂದುವರು. ಪೇರಾಸೆಯೆಂಬ ಪಿಶಾಚಿಯ ಕೈಗೆ ಸಿಕ್ಕಿ ತತ್ತಳಿಸುವರು. ದೇಹಾತ್ಮಾಭಿಮಾನದಿಂದ ತೊಳಲುವರು. ಈ ಕಷ್ಟಗಳೆಲ್ಲವೂ ನಿನ್ನ ಪಾದಸೇವೆಯು ಲಭಿಸುವವರೆಗೆ ಮಾತ್ರವೇ ಹೊರತು ಅದು ಲಭಿಸಿದ ಮೇಲೆ ಯಾವ ಕಷ್ಟವೂ ಇರದು. ಅಲ್ಲಿಂದಾಚೆಗೆ ಸಮಸ್ತ ಭಯವೂ ನಿವೃತ್ತವಾಗುವುದು. ಕೊನೆಗೆ ಮೋಕ್ಷವೂ ಲಭಿಸುವುದು.

ದೈವೇನ ತೇ ಹತಧಿಯೋ ಭವತಃ ಪ್ರಸಂಗಾತ್
ಸರ್ವಾಶುಭೋಪಶಮನಾದ್ವಿಮುಖೇನ್ದ್ರಿಯಾ ಯೇ।
ಕುರ್ವಂತಿ ಕಾಮಸುಖಲೇಶಲವಾಯ ದೀನಾ
ಲೋಭಾಭಿಭೂತಮನಸೋಽಕುಶಲಾನಿ ಶಶ್ವತ್ ॥ ೭

ಓ! ದೇವಾ! ನಿನ್ನ ಭಜನೆಯೇ ಸಕಲಪಾಪ ನಿವರ್ತಕವು. ನಿನ್ನ ಸೇವೆಯೇ ಸಕಲಭಯನಿವಾರಕವು. ನಿನ್ನ ನಾಮಸ್ಮರಣವೇ ಮೋಕ್ಷದಾಯಕವು. ಹೀಗೆ ಸರ್ವವಿಧದಿಂದಲೂ ಫಲದಾಯಕವಾದ ನಿನ್ನ ದರ್ಶನ, ಶ್ರವಣಾದಿಗಳಲ್ಲಿ ವಿಮುಖರಾದ ಕೆಲವು ಭಾಗ್ಯಹೀನರು, ವಿವೇಕವಿಲ್ಲದೆ ಕಾಮ್ಯಕರ್ಮಗಳಲ್ಲಿ ಬಿದ್ದು, ಇಂದ್ರಿಯಗಳಿಗೆ ವಶರಾಗಿ, ಅಶ್ರೇಯಸ್ಸುಗಳಿಗೆಲ್ಲಾ ಈಡಾಗುವರು.

ಕ್ಷುತ್ತೃಟ್ತ್ರಿಧಾತುಭಿರಿಮಾ ಮುಹುರರ್ದ್ಯಮಾನಾಃ
ಶೀತೋಷ್ಣವಾತವರ್ಷೈರಿತರೇತರಾಚ್ಚ
ಕಾಮಾಗ್ನಿನಾಽಚ್ಯುತ ರುಷಾ ಚ ಸುದುರ್ಭರೇಣ
ಸಂಪಶ್ಯತೋ ಮನ ಉರುಕ್ರಮ ಸೀದತೇ ಮೇ || ೮

ಓ ದೇವಾ! ವಾತಪಿತ್ತಶ್ಲೇಷ್ಮಗಳೆಂಬ ಧಾತುಗಳ ಮೂಲಕವಾಗಿ, ಹಸಿವು ಬಾಯಾರಿಕೆಗಳಿಗೆ ಸಿಕ್ಕಿ ತತ್ತಳಿಸುತ್ತ, ಶೀತೋಷ್ಣಬಾಧೆಗಳಿಂದಲೂ, ಮಳೆಗಾಳಿಗಳ ಕಷ್ಟದಿಂದಲೂ, ತೀವ್ರವಾದ ಕಾಮಾಗ್ನಿಯಿಂದಲೂ, ಇದ್ದಕ್ಕಿದ್ದಹಾಗೆ ತಲೆಯೆತ್ತುವ ಕ್ರೋಧದಿಂದಲೂ ಪೀಡಿಸಲ್ಪಡುತ್ತಿರುವ ಅಂತಹ ಬುದ್ಧಿಹೀನರನ್ನು ನೋಡಿ ನನ್ನ ಮನಸ್ಸು ಕನಿಕರಪಡುವುದು.

ಯಾವತ್ಪೃಥಕ್ತ್ವಮಿದಮಾತ್ಮನ ಇಂದ್ರಿಯಾರ್ಥಂ
ಮಾಯಾಬಲಂ ಭಗವತೋ ಜನ ಈಶ ಪಶ್ಯೇತ್ ।
ತಾವನ್ನ ಸಂಸೃತಿರಸೌ ಪ್ರತಿಸಂಕ್ರಮೇತ
ವ್ಯರ್ಥಾಪಿ ದುಃಖನಿವಹಂ ವಹತಿ ಕ್ರಿಯಾರ್ಥಾ || ೯

ಓ ದೇವಾ! ನಿನ್ನ ಮಾಯೆಯಿಂದ ಮೋಹಿತರಾದ ಜೀವಿಗಳು, ಆ ಮಾಯೆಯ ಬಲದಿಂದ, ಬಾಹ್ಯೇಂದ್ರಿಯಗಳಿಗೆ ತೋರುವ ದೇವಮನುಷ್ಯಾದಿ ಭೇದಗಳನ್ನೇ ನಿಜವೆಂದು ನಂಬುತ್ತಿರುವವರೆಗೂ, ದುಸ್ತರವಾದ ಸಂಸಾರ ಸಮುದ್ರವನ್ನು ದಾಟಲಾರರು. ನಿನ್ನ ನಿಜಸ್ವರೂಪವನ್ನು ತಿಳಿದು, ಆ ಭೇದಭ್ರಾಂತಿಯನ್ನು ಬಿಟ್ಟಮೇಲೆ, ಈ ಕಷ್ಟಗಳೆಲ್ಲವನ್ನೂ ನೀಗಿ ಸಂಸಾರ ಸಾಗರವನ್ನೂ ಅನಾಯಾಸವಾಗಿಯೇ ದಾಟಬರುವರು.

ಅಹ್ನ್ಯಾಪೃತಾರ್ತಕರಣಾ ನಿಶಿ ನಿಶ್ಶಯಾನಾ
ನಾನಾಮನೋರಥಧಿಯಾ ಕ್ಷಣಭಗ್ನನಿದ್ರಾಃ ।
ದೈವಾಹತಾರ್ಥರಚನಾ ಋಷಯೋಽಪಿ ದೇವ
ಯುಷ್ಮತ್ಪ್ರಸಙ್ಗವಿಮುಖಾ ಇಹ ಸಂಸರನ್ತಿ || ೧೦

ಓ! ಮಹಾಪ್ರಭೂ! ಯೋಗಸಮರ್ಥರಾದ ಮಹರ್ಷಿಗಳಾದರೂ, ನಿನ್ನ ಪಾದಸೇವಾಸ್ಮರಣಗಳಲ್ಲಿ ವಿಮುಖರಾಗಿ, ಬೇರೆ ವಿಷಯಗಳಲ್ಲಿಯೂ, ಫಲಾಪೇಕ್ಷೆಯುಳ್ಳ ಇತರ ಕರ್ಮಗಳಲ್ಲಿಯೂ ಆಸೆಯನ್ನಿಟ್ಟಪಕ್ಷದಲ್ಲಿ, ಅವ

ರಿಗೂ ಶಾಶ್ವತ ಸುಖವೆಂಬುದು ಲಭಿಸದು. ಹಗಲೆಲ್ಲವೂ ವೃಥಾಪ್ರಯತ್ನ ದಿಂದ ತೊಳಲಿ, ರಾತ್ರಿಯಲ್ಲಿ ನಿದ್ರಾಸಕ್ತರಾಗಿ, ಕನಸಿನಲ್ಲಿ ಕಾಣಬಹುದಾದ ಬಹುವಿಧ ಸಂಪತ್ತುಗಳನ್ನು ನೋಡುವುದರಿಂದಲೇ ಆನಂದವನ್ನನುಭವಿಸುತ್ತ, ನಡುನಡುವೆ ಸಂಭವಿಸುವ ಅನೇಕ ವಿಪತ್ತುಗಳಿಂದ ದುಃಖಿಸುವವರಂತೆ, ಅವರು ವಿಫಲಪ್ರಯತ್ನರಾಗಿ, ತಮ್ಮ ಕಾಲವನ್ನು, ವ್ಯರ್ಥವಾಗಿಯೇ ಕಳೆ ಯುತ್ತಿರುವರು. ಅಂತವರು ಭಯಂಕರವಾದ ಸಂಸಾರಸಾಗರದಲ್ಲಿಯೂ ಸಿಕ್ಕಿ ನರಳುವರು.

ತ್ವಂ ಭಾವಯೋಗಪರಿಭಾವಿತಹೃತ್ಸರೋಜ
ಆಸ್ಸೇ ಶ್ರುತೇಕ್ಷಿತಪಥೋ ನನು ನಾಥ ಪುಂಸಾವರ್ |
ಯದ್ಯದ್ಧಿಯಾ ತ ಉರುಗಾಯ ವಿಭಾವಯನ್ತಿ
ತತ್ತದ್ವಪುಃ ಪ್ರಣಯಸೇ ತದನುಗ್ರಹಾಯ || ೧೧

ಓ ಈಶ್ವರಾ ! ನಿನ್ನನ್ನು ಪಡೆಯುವುದಕ್ಕೆ ಶಾಸ್ತ್ರಜನ್ಯವಾದ ಜ್ಞಾನವೊಂದು ಮತ್ತು ತಮ್ಮತಮ್ಮ ವಿವೇಕದಿಂದಲೇ ಹುಟ್ಟಿದ ಉಪಾಸನಾ ರೂಪವಾದ ಜ್ಞಾನವೊಂದು ಇವೆರಡೂ ಮುಖ್ಯಮಾರ್ಗಗಳು. ನೀನೋ ನಿಷ್ಕಾಮರಾಗಿಯೂ, ಭಕ್ತಿಯೋಗದಿಂದ ಶುದ್ಧವಾದ ಮನಸ್ಸುಳ್ಳವರಾ ಗಿಯೂ ಇರುವ ಭಕ್ತರ ಹೃದಯಕಮಲದಲ್ಲಿ ನೆಲೆಗೊಂಡಿರತಕ್ಕವನು. ಇದಲ್ಲದೆ ಯೋಗೀಶ್ವರರು ಯೋಗಮಾರ್ಗವನ್ನು ಹಿಡಿದು, ತಮ್ಮ ಮನಸ್ಸಿ ನಲ್ಲಿ ನಿನ್ನ ರೂಪವನ್ನು ಯಾವ ವಿಧದಿಂದ ಭಾವಿಸುವರೋ, ಅದೇ ರೂಪ ದಿಂದಲೇ ನೀನು ಅವರಿಗೆ ಗೋಚರನಾಗಿ ಅನುಗ್ರಹಿಸುವೆ.

ನಾತಿಪ್ರಸೀದಸಿ ತಥೋಪಚಿತೋಪಚಾರೈ
ರಾರಾಧಿತಸ್ಸುರಗಣೈರ್ಹೃದಿ ಬದ್ಧಕಾಮೈಃ |
ಯತ್ಸರ್ವಭೂತದಯಯಾಽಸದಲಭ್ಯಯೈಕೋ
ನಾನಾಜನೇಷ್ವವಹಿತಸ್ಸುಹೃದನ್ತರಾತ್ಮಾ || ೧೨

ಓ ದೇವಾ ! ನೀನು ಸಮಸ್ತ ಭೂತಗಳಲ್ಲಿಯೂ ಅಂತರಾತ್ಮನಾಗಿದ್ದು, ಆಯಾ ಭೂತಗಳಿಗೆ ನಿಯಾಮಕನಾಗಿಯೂ, ಧಾರಕನಾಗಿಯೂ ಇರುವುದ ರಿಂದ ಸರ್ವಸುಹೃತ್ತೆನಿಸಿಕೊಳ್ಳುವೆ. ಇದರಿಂದ ಯಾವ ಭೂತಕ್ಕೆ ದ್ರೋಹ

ವನ್ನೆಣಿಸಿದರೂ, ಅದು ತದಂತರ್ಯಾಮಿಯಾದ ನಿನ್ನಲ್ಲಿಯೇ ಬಂದು ಮುಗಿಯುವುದು. ತತ್ವಜ್ಞರಾದ ಸಜ್ಜನರಿಗೆ ಮಾತ್ರವೇ ಈ ಅಭಿಪ್ರಾಯವು ಹುಟ್ಟುವುದರಿಂದ, ಅವರು ಸರ್ವಭೂತದಯಾಪರರೆನಿಸುವರು. ದೇಹವನ್ನೇ ಆತ್ಮವೆಂದು ಭಾವಿಸತಕ್ಕವರಿಗೆ ಈ ವಿಧವಾದ ಭೂತದಯೆಯೂ ದುರ್ಲಭವು. ನಿಷ್ಕಾಮರಾಗಿ ಭೂತದಯಾಪರರಾಗಿ ವರ್ತಿಸತಕ್ಕವರಿಗೆ ನೀನು ಪ್ರಸನ್ನನಾಗುವಂತೆ, ಕಾಮುವಶರಾದವರು ಅನೇಕೋಪಚಾರಗಳಿಂದ ನಿನ್ನನ್ನಾರಾಧಿಸಿದರೂ ಅವರಲ್ಲಿ ನೀನು ಪ್ರಸನ್ನನಾಗಲಾರೆ. ಇತರ ಫಲಾಪೇಕ್ಷೆಯಿಂದ ಮಾಡಿದ ಕರ್ಮವೊಂದೂ, ನಿನ್ನ ಅನುಗ್ರಹವನ್ನು ಸಂಪಾದಿಸುವುದಕ್ಕೆ ಕಾರಣವಾಗಲಾರದು.

ಪುಂಸಾಮತೋ ವಿವಿಧಕರ್ಮಭಿರಧ್ವರಾದ್ಯೈ
ರ್ದಾನೇನ ಚೋಗ್ರತಪಸಾ ವ್ರತಚರ್ಯಯಾ ಚ ।
ಆರಾಧನಂ, ಭಗವತಸ್ತವ ಸತ್ಕ್ರಿಯಾರ್ಥೋ
ಧರ್ಮೋಽರ್ಪಿತಃ ಕರ್ಹಿಚಿನ್ಮ್ರಿಯತೇ ನ ಯತ್ರ ॥ ೧೩

ಆದುದರಿಂದ ಮನುಷ್ಯನು, ಯಾಗವೇ ಮೊದಲಾದ ಕರ್ಮಗಳನ್ನಾಗಲೀ, ದಾನಾದಿ ಸತ್ಕಾರ್ಯಗಳನ್ನಾಗಲೀ, ಚಾಂದ್ರಾಯಣಾದಿ ತಪಸ್ಸುಗಳನ್ನಾಗಲೀ, ವ್ರತಾನುಷ್ಠಾನವನ್ನಾಗಲೀ, ಯಾವುವನ್ನು ನಡೆಸಿದರೂ, ಅವೆಲ್ಲವನ್ನೂ ನಿನ್ನ ಆರಾಧನರೂಪವಾಗಿ ನಡೆಸಿದಾಗ ಮಾತ್ರವೇ ಅವು ಉತ್ತಮಫಲವನ್ನು ಕೈಗೂಡಿಸುವುವು. ನಿನಗೆ ಅರ್ಪಿತವಾಗಿ ಮಾಡಿದ ಆ ಕರ್ಮಫಲಕ್ಕೆ ಎಂದೆಂದಿಗೂ ಚ್ಯುತಿಯಿರದು. ಮುಖ್ಯವಾಗಿ ನೀನು ನಿನ್ನಲ್ಲಿರುವ ಆಶ್ರಿತವಾತ್ಸಲ್ಯದಿಂದಲೇ ಅನುಗ್ರಹಿಸತಕ್ಕವನೇ ಹೊರತು, ಇತರ ಕರ್ಮಗಳಿಂದ ಪ್ರಸನ್ನನಾಗತಕ್ಕವನಲ್ಲ.

ಶಶ್ವತ್ಸ್ವರೂಪಮಹಸೈವ ನಿಪಿದ್ಧಭೇದ
ಮೋಹಾದಿಬೋಧಧಿಷಣಾಯ ನಮಃ ಪರಸ್ಮೈ ।
ವಿಶ್ವೋದ್ಭವಸ್ಥಿತಿಲಯೇಷು ನಿಮಿತ್ತಲೀಲಾ
ರಾಸಾಯ ತೇ ಚಕೃಮಹೇ ನಮ ಈಶ್ವರಾಯ ॥ ೧೪

ಯಾವಾಗಲೂ ಆತ್ಮವೆಂಬುದು ಪ್ರಕೃತಿಗಿಂತಲೂ ವಿಲಕ್ಷಣವೆಂಬ ಈ

ತತ್ವವನ್ನು ತಿಳಿದೊಡನೆ, ಮನುಷ್ಯನಿಗೆ, ದೇವಮನುಷ್ಯಾದಿಗಳಲ್ಲಿ ಭೇದ ಬುದ್ಧಿ, ದೇಹವೇ ಆತ್ಮವೆಂಬ ಭ್ರಾಂತಿ, ಜೀವಾತ್ಮಗಳೆಲ್ಲವೂ ಸ್ವತಂತ್ರಗಳೆಂಬ ಅಜ್ಞಾನ, ಈ ಅಜ್ಞಾನದಿಂದುಂಟಾಗತಕ್ಕ ಶೋಕಮೋಹಾದಿಗಳು, ಇವೆ ಲ್ಲವೂ ನೀಗುವುವು. ಮನುಷ್ಯನು ತನ್ನ ಸ್ವರೂಪವೆಂತಹುದೆಂಬುದನ್ನು ಯಥಾರ್ಥವಾಗಿ ತಿಳಿಯುವುದೊಂದು, ನಿಜವನ್ನು ತಿಳಿದು ನಿನ್ನನ್ನುಪಾಸನೆ ಮಾಡುವುದೊಂದು, ಈ ಎರಡು ವಿಧವಾದ ಜ್ಞಾನಗಳನ್ನು ಪಡೆದಾಗಲೇ ಅವನಿಗೆ ಶಾಶ್ವತಪುರುಷಾರ್ಥವಾದ ಮೋಕ್ಷವು ಲಭಿಸುವುದು. ಇವೆರಡೇ ನಿನ್ನನ್ನು ಪಡೆಯುವುದಕ್ಕೆ ಮುಖ್ಯೋಪಾಯಗಳು. ಈ ಜ್ಞಾನಕ್ಕೆ ಮಾತ್ರ ವಿಷಯನಾಗಿಯೂ, ಪ್ರಕೃತಿವಿಲಕ್ಷಣನಾಗಿಯೂ, ಪ್ರಪಂಚದ ಸೃಷ್ಟಿ ಸ್ಥಿತಿಲಯಗಳೆಂಬ ಲೀಲೆಗಳನ್ನು ನಡೆಸತಕ್ಕವನಾಗಿಯೂ, ಸರ್ವನಿಯಾಮಕ ನಾಗಿಯೂ ಇರುವ ನಿನಗೆ ನಮಸ್ಕಾರವು. ಓ ದೇವಾ! ನೀನು ಅವಾಪ್ತ ಸಮಸ್ತಕಾಮನಾಗಿರುವಾಗ ಲೀಲಾರ್ಥವಾಗಿಯಾದರೂ ಈ ಜಗದ್ವ್ಯಾ ಪಾರಗಳನ್ನು ನಡೆಸಬೇಕಾದ ಅವಶ್ಯವೇನು? ಸಂಸಾರಭಯದಿಂದ ತತ್ತಳಿ ಸುವ ಜೀವಗಳನ್ನು ಅನುಗ್ರಹಿಸಬೇಕೆಂಬ ಉದ್ದೇಶದಿಂದಲ್ಲವೇ ಈ ಜಗದ್ವ್ಯಾ ಪಾರಗಳನ್ನು ನಡೆಸುತ್ತಿರುವೆ! ಪೂರ್ಣಕಾಮರಾಗಿ ನಿಶ್ಚಿಂತರಾಗಿರುವಾಗಲೇ ಮನುಷ್ಯನಿಗೆ ಆಟದಲ್ಲಿ ಮನಸ್ಸು ಪ್ರವರ್ತಿಸುವುದು. ಮನಸ್ಸಿನಲ್ಲಿ ನೆಮ್ಮದಿ ಯಿಲ್ಲದವರಿಗೆ ವಿನೋದಗಳಲ್ಲಿ ಬುದ್ಧಿಯೂ ಹುಟ್ಟದು! ಆದುದರಿಂದ ಪೂರ್ಣ ಕಾಮನಾದ ನಿನಗೆ ಈ ಜಗದ್ವ್ಯಾಪಾರವೆಂಬ ಲೀಲೆಯಲ್ಲಿ ಮನಸ್ಸು ಹುಟ್ಟು ವುದೂ ಯುಕ್ತವಾಗಿಯೇ ಇರುವುದು. ಇದರ ಮೇಲೆ ಮಣ್ಣಿನಲ್ಲಿ ಸುವರ್ಣವು ಸೇರಿರುವಂತೆ ಪ್ರಕೃತಿಯೊಡನೆ ಕಲೆತ ಜೀವಗಳನ್ನು ನಿನ್ನ ಅವತಾರಕಾರ್ಯ ಗಳ ನಾಮಕೀರ್ತನಾದಿಗಳಿಂದ ಉದ್ಧರಿಸಬೇಕೆಂಬುದಕ್ಕಾಗಿಯೇ ನೀನು ಈ ಲೋಕವ್ಯಾಪಾರವೆಂಬ ಲೀಲೆಯನ್ನು ಕೈಗೊಳ್ಳುತ್ತಿರುವೆ. ಓ ಭಗವಂತಾ! ಹೀಗೆ ಲೋಕಾನುಗ್ರಹಕ್ಕಾಗಿ ನೀನು ಆಗಾಗ ಕೈಗೊಳ್ಳುವ ಬಗೆಬಗೆಯ ಅವತಾರಗಳ ಗುಣಚರಿತ್ರೆಗಳೆಲ್ಲವನ್ನೂ ಸೂಚಿಸತಕ್ಕ ನಿನ್ನ ನಾಮಾವಳಿ ಗಳನ್ನು ಕೀರ್ತಿಸುವುದೇ ಚೇತನರಿಗೆ ಸರ್ವಾಭೀಷ್ಟಗಳನ್ನೂ ಕೈಗೂಡಿಸುವುದು.

ಯಸ್ಯಾವತಾರಗುಣಕರ್ಮವಿಡಂಬನಾನಿ
ನಾಮಾನಿ ಯೇಽಸುವಿಗಮೇ ವಿವಶಾ ಗೃಣನ್ತಿ ।

ತೇಽನೇಕಜನ್ಮ ಶಮಲಂ ಸಹಸೈವ ಹಿತ್ವಾ
ಸಂಯಾನ್ತ್ಯಪಾವೃತಮೃತಂ ತಮಜಂ ಪ್ರಪದ್ಯೇಽ ॥ ೧೫

ಓ! ನಾಥಾ! ಲೋಕದಲ್ಲಿ ಯಾವ ಚೇತನರು, ನಿನ್ನ ಅದ್ಭುತ ಚಾರಿತ್ರಗಳನ್ನೂ, ಗುಣಗಳನ್ನೂ, ಮಹಿಮೆಗಳನ್ನೂ ಎತ್ತಿ ತೋರಿಸತಕ್ಕ ಆ ನಾಮಾವಳಿಗಳನ್ನು ಹಿಡಿದು, "ಓ! ದೇವಕೀನಂದನಾ! ಓ ದಾಶರಥೀ! ಓ ಸರ್ವಜ್ಞಾ! ಹೇ ಭಕ್ತವತ್ಸಲಾ! ಹೇ ಗೋವರ್ಧನೋದ್ಧರಾ! ಹೇ ಕಂಸಾರೀ!! ಹೇ ರಾವಣಾಂತಕಾ!" ಎಂಬೀ ಪದಗಳಿಂದ ಪ್ರಾಣೋತ್ಕ್ರಮಣಕಾಲದಲ್ಲಿ ಪರವಶರಾಗಿರುವಾಗಲಾದರೂ, ಒಮ್ಮೊಮ್ಮೆ ಪ್ರಯತ್ನ ಪೂರ್ವಕವಾಗಿ ಬಾಯಿಂದುಚ್ಚರಿಸುವರೋ, ಅಂತವರು ಅನೇಕ ಜನ್ಮಗಳಿಂದ ಸಂಚಿತಗಳಾದ ಕರ್ಮಸಂಬಂಧಗಳೆಲ್ಲವನ್ನೂ ಆ ಕ್ಷಣವೇ ತೊಲಗಿಸಿಕೊಂಡು, ನಿರಾವರಣವಾದ ನಿನ್ನ ಸಾನ್ನಿಧ್ಯವನ್ನು ಹೊಂದುವರು. ಹೀಗೆ ಮಹಾದ್ಭುತ ಗುಣ ನಾಮಗಳಿಂದಲೂ, ಚರಿತ್ರಗಳಿಂದಲೂ ಕೂಡಿದವನಾಗಿ, ಕರ್ಮಸಂಬಂಧಗಳಾದ ಜನ್ಮಾದಿಗಳಿಲ್ಲದೆ, ಸರ್ವಸುಲಭನಾಗಿರುವ ನಿನ್ನನ್ನು ಶರಣಹೊಂದುವೆನು.

ಯೋ ವಾ ಅಹಂ ಚ ಗಿರಿಶಶ್ಚ ವಿಭುಸ್ಸ್ವಯಂ ಚ
ಸ್ಥಿತ್ಯುದ್ಭವಪ್ರಳಯಹೇತವ ಆತ್ಮಮೂಲಮ್ ।
ಭಿತ್ವಾ ತ್ರಿಪಾದ್ವವೃಧ ಏಕ ಉರುಪ್ರರೋಹಃ
ತಸ್ಮೈ ನಮೋ ಭಗವತೇ ಭುವನದ್ರುಮಾಯ ॥ ೧೬

ಓ! ದೇವದೇವಾ! ನೀನೊಬ್ಬನೇ ಸರ್ವಾತ್ಮಕನಾಗಿದ್ದರೂ, ನಿನ್ನ ಅವತಾರ ಭೇದಗಳಿಂದ ಜಗತ್ತನ್ನು ರಕ್ಷಿಸುವುದಲ್ಲದೆ, ನನ್ನಲ್ಲಿಯೂ, ರುದ್ರನಲ್ಲಿಯೂ ಅಂತರ್ಯಾಮಿಯಾಗಿ, ನೀನೇ ಸೃಷ್ಟಿಸಂಹಾರಗಳನ್ನೂ ನಡೆಸುವೆ! ನಿನ್ನ ಸಂಕಲ್ಪವಿಲ್ಲದ ಮೇಲೆ ನಾನಾಗಲೀ, ರುದ್ರನಾಗಲೀ, ಚಿತ್ರದ ಬೊಂಬೆಗಳಂತೆ ನಿಲ್ಲಬೇಕೇ ಹೊರತು ಯಾವ ಕಾರ್ಯವನ್ನೂ ನಡೆಸಲಾರೆವು. ಬೇರೊಂದರಿಂದ ಹುಟ್ಟದೆ ತನಗೆ ತಾನೇ ಕಾರಣವಾಗಿ, ನಿತ್ಯಸಿದ್ಧವಾಗಿ, ತ್ರಿಪಾದ್ವಿಭೂತಿಯೆನಿಸಿಕೊಂಡ ವೈಕುಂಠಲೋಕದಿಂದ ಹೊರಟು, ತ್ರಿಮೂರ್ತಿಗಳೆಂಬ ಮೂರು ಕವಲೊಡೆದು, ದೇವಮನುಷ್ಯಾದಿ ಭೇದಗಳಿಂದಲೂ, ಇತರ

ಸ್ಥಾವರ ಜಂಗಮಾದಿ ರೂಪಗಳಿಂದಲೂ, ಶಾಖೋಪಶಾಖೆಯಾಗಿ ವೃದ್ಧಿ ಹೊಂದಿದ ಪ್ರಪಂಚವೃಕ್ಷರೂಪನಾದ ನಿನಗೆ ನಮಸ್ಕಾರವು.

ಲೋಕೋಽವಿಕರ್ಮನಿರತಃ ಕುಶಲೇಽಪ್ರಮತ್ತಃ
ಕರ್ಮಣ್ಯಯಂ ತ್ವದುದಿತೇ ಭವದರ್ಚನೇ ಸ್ವೇ ।
ಯಸ್ತಾವದಸ್ಯ ಬಲವಾನಿಹ ಜೀವಿತಾಶಾಂ
ಸದ್ಯಶ್ಛಿನತ್ತ್ಯನಿಮಿಷಾಯ ನಮೋಽಸ್ತು ತಸ್ಮೈ ॥ ೧೭

ಓ! ಸ್ವಾಮಿಾ! ಯಾರು ವೇದವಾಕ್ಯಗಳ ಮೂಲಕವಾಗಿ ನಿನ್ನಿಂದ ಉಪದೇಶಿಸಲ್ಪಟ್ಟುದಾಗಿಯೂ, ನಿನ್ನ ಆರಾಧನರೂಪವಾಗಿಯೂ, ಆಯಾ ವರ್ಣಾಶ್ರಮಗಳಿಗೆ ಉಚಿತವಾಗಿಯೂ, ಶ್ರೇಯಸ್ಕರವಾಗಿಯೂ ಇರುವ ಕರ್ಮಗಳಲ್ಲಿ ಶ್ರದ್ಧೆಯನ್ನು ವಹಿಸಿ, ಅಸತ್ಕರ್ಮಗಳನ್ನು ಬಿಟ್ಟು ಅವುಗಳನ್ನು ನಡೆಸುವರೋ ನೀನು ಅಂತವರ ಸಂಸಾರ ತಾಪತ್ರಯಗಳನ್ನು ಕೂಡಲೇ ತೊಲಗಿಸಿ ಅವರಲ್ಲಿ ವಿರಕ್ತಿಯನ್ನೂ ಹುಟ್ಟಿಸುವೆ. ಹೀಗೆ ಅಚೇತನರಿಗೆ ಉತ್ತಮಪುರುಷಾರ್ಥವನ್ನು ಕೈಗೂಡಿಸಬಲ್ಲ ಅಮೋಘ ಸಂಕಲ್ಪನಾದ ನಿನಗೆ ನಮಸ್ಕಾರವು.

ಯಸ್ಮಾದ್ಬಿಭೇಮ್ಯಹಮಪಿ ದ್ವಿಪರಾರ್ಧಧಿಷ್ಣ್ಯ
ಮಧ್ಯಾಸಿತಸ್ಸಕಲಲೋಕನಮಸ್ಕೃತಂ ಯತ್ ।
ತೇಪೇ ತಪೋ ಬಹುಸವೋಽವರುರುತ್ಸಮಾನ
ಸ್ತಸ್ಮೈ ನಮೋ ಭಗವತೇಽಧಿಮಖಾಯ ತುಭ್ಯಮ್ ॥ ೧೮

ಓ ಪರಮಪುರುಷಾ! ನಾನು ಎಲ್ಲಕ್ಕಿಂತಲೂ ಚಿರಸ್ಥಾಯಿಯಾಗಿ, ಸಮಸ್ತ ಲೋಕಗಳಿಂದಲೂ ಸಂಮಾನಿತವಾದ ಸತ್ಯಲೋಕದಲ್ಲಿ ಎರಡು ಪರಾರ್ಧಕಾಲದವರೆಗೆ ಇರುವವನಾದರೂ, ಆ ತನ್ನ ಲೋಕವೂ ಕೂಡ ಆ ಕಾಲಾವಧಿಯು ಕಳೆದೊಡನೆ ನಾಶಹೊಂದತಕ್ಕುದಾಗಿರುವುದು. ಆದುದರಿಂದ ಇಂತಹ ಉತ್ತಮಸ್ಥಾನದಲ್ಲಿರುವ ನಾನೂ ಕೂಡ ಕಾಲಸ್ವರೂಪನಾದ ನಿನಗಾಗಿ ಭಯಪಡುತ್ತಿರುವೆನು. ಈ ಭಯವನ್ನು ನೀಗಿ ನಿನ್ನನ್ನು ಹೊಂದುವುದಕ್ಕಾಗಿಯೇ ನಿನ್ನ ಆರಾಧನರೂಪಗಳಾದ ಅನೇಕ ತಪಸ್ಸುಗಳನ್ನೂ ನಡೆಸುತ್ತಿರುವೆನು. ನನ್ನ ಸ್ಥಿತಿಯೇ ಹೀಗಿರುವಾಗ ಇನ್ನು ನನಗಿಂತಲೂ

ಕೆಳಗಿನ ಇತರ ಲೋಕಗಳ ಪಾಡೇನು? ಇಂತಹ ಸರ್ವನಿಯಾಮಕನಾದ ನಿನಗೆ ನಮಸ್ಕಾರವು.

ತಿರ್ಯಙ್ಮನುಷ್ಯವಿಬುಧಾದಿಷು ಜೀವಯೋನಿ
ಷ್ವಾತ್ಮೇಚ್ಛಯಾಽಽತ್ಮ ಕೃತಸೇತುಪರಿಪ್ಸವಾಯ ।
ರೇಮೇ ನಿರಸ್ತರತಿರಪ್ಯುಪಲಬ್ಧದೇಹ
ಸ್ತಸ್ಮೈ ನಮೋ ಭಗವತೇ ಪುರುಷೋತ್ತಮಾಯ ॥ ೧೯

ಓ ಲೋಕರಕ್ಷಕಾ! ನೀನು ಪೂರ್ಣಕಾಮನಾಗಿ, ಕರ್ಮರಹಿತನಾಗಿದ್ದರೂ, ಲೋಕಬಾಧೆಯನ್ನು ನಿವರ್ತಿಸಿ ಸಮಸ್ತ ಲೋಕಗಳನ್ನೂ ಆಯಾ ನೆಲೆಯಲ್ಲಿ ನಿಲ್ಲಿಸುವುದಕ್ಕಾಗಿಯೇ ಸ್ವೇಚ್ಛೆಯಿಂದ ಅನೇಕ ರೂಪಗಳನ್ನು ಧರಿಸುವೆ! ಮನುಷ್ಯ ಯೋನಿಯಲ್ಲಿ ರಾಮಕೃಷ್ಣಾದ್ಯವತಾರಗಳಿಂದ ಜನಿಸುವೆ! ತಿರ್ಯಗ್ಯೋನಿಯಲ್ಲಿ ಮತ್ಸ್ಯಕೂರ್ಮಾದಿರೂಪಗಳಿಂದವತರಿಸುವೆ! ಹೀಗೆ ಧರ್ಮಸಂಸ್ಥಾಪನೆಗಾಗಿ ಅನೇಕ ರೂಪಗಳನ್ನು ಧರಿಸತಕ್ಕ ನಿನಗೆ, ವಿಷಯಸುಖಗಳಲ್ಲಿ ಅಭಿಲಾಷೆಯಿಲ್ಲದಿದ್ದರೂ, ಆಯಾ ಅವತಾರಗಳಿಗೆ ತಕ್ಕ ಕರ್ಮಗಳಲ್ಲಿಯೂ ಪ್ರವರ್ತಿಸಿ, ಸುಖಾನುಭವವನ್ನೂ ನಟಿಸುತ್ತಿರುವೆ. ಅಂತಹ ಆಶ್ಚರ್ಯ ವ್ಯಾಪಾರವುಳ್ಳ ಪುರುಷೋತ್ತಮನಾದ ನಿನಗೆ ನಮಸ್ಕಾರವು.

ಯೋಽವಿದ್ಯಯಾಽನುಪಹತೋಽಪಿ ದಶಾರ್ಧವೃತ್ತ್ಯಾ
ನಿದ್ರಾಮುವಾಹ ಜಠರೀಕೃತಲೋಕಯಾತ್ರಃ ।
ಅನ್ತರ್ಜಲೇಹಿಕಶಿಪುಸ್ಪರ್ಶಾನುಕೂಲಾಂ
ಭೀಮೋರ್ಮಿಮಾಲಿನಿ ಜನಸ್ಯ ಸುಖಂ ವಿವೃಣ್ವನ್ ॥ ೨೦

ಹೇ ನಾಥಾ! ನಿದ್ರೆಗೆ ಕಾರಣಗಳಾದ ಐದು ಬಗೆಯ ಅವಿದ್ಯೆಯಿಂದ ಸ್ಪರ್ಶಿಸಲ್ಪಡದಿದ್ದರೂ, ಲೋಕವ್ಯಾಪಾರಗಳೆಲ್ಲವನ್ನೂ ನಿನ್ನ ಗರ್ಭದಲ್ಲಿಯೇ ನಡೆಸಿಕೊಂಡು, ಭಯಂಕರಗಳಾದ ಅಲೆಗಳ ಪರಂಪರೆಯಿಂದ ಉಬ್ಬಿ ಬರುತ್ತಿರುವ ಈ ಮಹಾಸಮುದ್ರದಲ್ಲಿ, ಮೈಗೆ ಮೃದುವಾದ ಆದಿಶೇಷಶರೀರವೆಂಬ ಹಾಸಿಗೆಯಲ್ಲಿ ಮಲಗಿರುವೆಯಲ್ಲವೇ? ಇದು, ವಿವೇಕಹೀನರಾಗಿ ಮೋಹದಿಂದ ಮಲಗಿರುವ ಪ್ರಾಕೃತ ಜನಗಳಿಗೆ ನಿದ್ರಾಸಂಬಂಧಸ್ವರೂಪವು ಹೇಗೆಂಬುದನ್ನು ತೋರಿಸುವಂತಿರುವುದು.

ಯನ್ನಾಭಿಪದ್ಮ ಭವನಾದಹಮಾಸಮುದ್ಯ
ಲೋಕತ್ರಯೋಪಕರಣೋ ಯದನುಗ್ರಹೇಣ ।
ತಸ್ಮೈನಮಸ್ತ ಉದರಸ್ಥ ಭವಾಯ ಯೋಗ
ನಿದ್ರಾವಸಾನವಿಕಸನ್ನಳಿನೇಕ್ಷಣಾಯ ॥ ೨೧

ಇಂತಹ ಸುಖಶಯ್ಯೆಯಲ್ಲಿ ನೀನು ಮಲಗಿದ್ದಾಗ, ತ್ರೈಲೋಕ್ಯ ಕುಟುಮ್ಬಿಯಾದ ನಾನು ನಿನ್ನ ನಾಭಿಕಮಲದ್ವಾರದಿಂದ ಜನಿಸಿರುವೆನು. ಓ! ದೇವದೇವಾ! ಯಾವ ನಿನ್ನ ಅನುಗ್ರಹದಿಂದಲೇ ನಾನು ಈ ವಿಧವಾಗಿ ಉತ್ಪನ್ನನಾದೆನೋ, ಯಾವ ನೀನು ಸಮಸ್ತ ಕಾರ್ಯವರ್ಗಗಳನ್ನೂ (ತ್ರೈಲೋಕ್ಯವನ್ನೂ) ಗರ್ಭದಲ್ಲಿ ಧರಿಸಿ ಯೋಗನಿದ್ರೆಯಿಂದ ಮಲಗಿರುವೆಯೋ, ಮುಂದೆ ಈ ಯೋಗನಿದ್ರೆಯು ಮುಗಿದ ಮೇಲೆ ಅರಳಿದ ತಾವರೆಯಂತೆ ವಿಕಸಿತವಾದ ಕಣ್ಣುಗಳಿಂದ ಎಚ್ಚರಗೊಳ್ಳುವೆಯೋ, ಅಂತಹ ಅನಿರುದ್ಧ ರೂಪಿಯಾದ ನಿನಗೆ ನಮಸ್ಕಾರವು.

ಸೋಽಯಂ ಸಮಸ್ತಜಗತಾಂ ಸುಹೃದೇಕ ಆತ್ಮಾ
ಸತ್ವೇನ ಯನ್ಮೃಡಯತೇ ಭಗವಾನ್ ಭಗೇನ ।
ತೇನೈವ ಮೇ ದೃಶಮನುಸ್ಪೃಶತಾದ್ಯಥಾಹಂ
ಸೃಕ್ಷ್ಯಾಮಿ ಪೂರ್ವವದಿದಂ ಪ್ರಣತಪ್ರಿಯೋಽಸೌ ॥ ೨೨

ಚೇತನಾಚೇತನ ಸ್ವರೂಪವಾದ ಸರ್ವಲೋಕಕ್ಕೂ ಅಂತರ್ಯಾಮಿಯಾಗಿ, ಆ ಸಮಸ್ತ ಲೋಕಕ್ಕೂ ಸುಹೃತ್ತಾಗಿ, ಇದೋ ಈಗ ನನ್ನ ಕಣ್ಣುಗಳ ಮುಂದೆ ಗೋಚರಿಸುತ್ತಿರುವ ನೀನು ಯಾವ ಬಗೆಯ ಜ್ಞಾನದಿಂದಲೂ, ಐಶ್ವರ್ಯದಿಂದಲೂ, ಈ ಜಗತ್ತೆಲ್ಲವನ್ನೂ ಸುಖಪಡಿಸುವೆಯೋ, ಅದೇ ಜ್ಞಾನೈಶ್ವರ್ಯಗಳಿಂದ ನನಗೂ ಪ್ರಜ್ಞೆಯನ್ನು ಕರುಣಿಸಬೇಕು. ನಿನ್ನ ಅನುಗ್ರಹ ಬಲದಿಂದಲೇ ನಾನು ಈ ಪ್ರಪಂಚವೆಲ್ಲವನ್ನೂ ಪೂರ್ವಕಲ್ಪದಂತೆ ಸೃಷ್ಟಿಸಬೇಕಾಗಿರುವುದರಿಂದ, ನನಗೆ ಆ ಕಾರ್ಯಕ್ಕೆ ತಕ್ಕ ಬುದ್ಧಿಯನ್ನೂ ಕರುಣಿಸಬೇಕು. ಶರಣಾಗತ ವತ್ಸಲನೆನಿಸಿದ ನೀನು ಈಗ ನಿನ್ನನ್ನು ಮರೆಹೊಕ್ಕಿರುವ ನನ್ನಲ್ಲಿ ವಾತ್ಸಲ್ಯವನ್ನು ತೋರಿಸಬೇಕು.

ಏಷ ಪ್ರಸನ್ನವದನೋ ರಮಯಾಽಽತ್ಮಶಕ್ತ್ಯಾ
ಯದ್ಯತ್ಕರಿಷ್ಯತಿ ಗೃಹೀತಗುಣಾವತಾರಃ ।

ತಸ್ಮಿನ್ ಸ್ವವಿಕ್ರಮಮಿದಂ ಸೃಜತೋಪಿ ಚೇತೋ
ಯುಂಜೀತ ಕರ್ಮಶಮಲಂ ಚ ಯಥಾ ವಿಜಹ್ಯಾಮ್ || ೨೩

ಓ ಪ್ರಭೂ! ಪ್ರಸನ್ನಮುಖನಾದ ನೀನು, ನಿನ್ನ ಶಕ್ತಿಭೂತೆಯಾದ ಲಕ್ಷ್ಮೀದೇವಿಯೊಡಗೂಡಿ, ನಿನಗೆ ಸಹಜವಾದ ಜ್ಞಾನಶಕ್ತ್ಯಾದಿ ಗುಣಗಳನ್ನು ಬಿಡದಹಾಗೆಯೇ ಪ್ರಪಂಚದಲ್ಲಿ ಬೇರೆ ಬೇರೆ ಅವತಾರಗಳನ್ನು ನಡೆಸುವಾಗಲೂ, ನನ್ನ ಮನಸ್ಸು ಆ ನಿನ್ನ ಚರಿತ್ರೆಗಳಲ್ಲಿಯೇ ಆಸಕ್ತವಾಗುವಂತೆ ಅನುಗ್ರಹಿಸಬೇಕು. ಮತ್ತು ಓ ದೇವಾ! ನಿನ್ನ ಮಹಿಮೆಯ ಬಲದಿಂದಲೇ ನಾನು ನಿನಗೆ ಲೀಲಾವಿಭೂತಿಯಾದ ಈ ಪ್ರಪಂಚವನ್ನು ನಿನ್ನ ಆಜ್ಞಾಧೀನನಾಗಿ ಸೃಷ್ಟಿಸತಕ್ಕವನು. ಹಾಗಿದ್ದರೂ ಒಂದುವೇಳೆ ನನ್ನ ಮನಸ್ಸು ದುರಭಿಮಾನದಿಂದ ನಿನ್ನ ಗುಣಸ್ಮರಣೆಯಲ್ಲಿ ವಿಮುಖವಾಗಬಹುದು! ಹಾಗಿಲ್ಲದೆ ಯಾವಾಗಲೂ ನನ್ನ ಮನಸ್ಸು ನಿನ್ನಲ್ಲಿಯೇ ಆಸಕ್ತವಾಗಿರುವಂತೆ ಸಮೃದ್ಧಿಯನ್ನು ಅನುಗ್ರಹಿಸಬೇಕು. ಮತ್ತು ಸಂಸಾರಹೇತುಗಳಾದ ಪುಣ್ಯ ಪಾಪಕರ್ಮಗಳಿಂದ ನಾನು ಮುಕ್ತನಾಗುವ ಮಾರ್ಗವನ್ನೂ ನೀನೇ ಆಲೋಚಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು.

ನಾಭಿಹ್ರದಾದಿಹ ಸತೋಽಮ್ಭಸಿ ಯಸ್ಯ ಪುಂಸೋ
ವಿಜ್ಞಾನಶಕ್ತಿರಹಮಾಸಮನನ್ತಶಕ್ತೇಃ ।
ರೂಪಂ ವಿಚಿತ್ರಮಿದಮಸ್ಯ ವಿವೃಣ್ವತೋ ಮೇ
ಮಾರೀರಿಷೀಷ್ಟ ನಿಗಮಸ್ಯ ಗಿರಾಂ ವಿಸರ್ಗಃ || ೨೪

ಎಲೈ ಪರಮಪುರುಷನೇ! ಜಲಶಾಯಿಯಾದ ನಿನ್ನ ನಾಭಿಕಮಲದಲ್ಲಿ ಜ್ಞಾನಗುಣಕನಾಗಿ ಹುಟ್ಟಿ, ನಿನ್ನ ನಿಯಮದಿಂದ ಚಿದಚಿದಾತ್ಮಕಗಳಾದ ಲೋಕಗಳೆಲ್ಲವನ್ನೂ ಸೃಷ್ಟಿಸುತ್ತಿರಬೇಕಾದ ನನಗೆ, ಈ ಕಾರ್ಯಾತುರದಿಂದ ವೇದಪಠನದಲ್ಲಿ ಶಕ್ತಿ ಲೋಪವಾಗದಂತೆಯೂ ಅನುಗ್ರಹಿಸಬೇಕು.

ಸೋಽಸಾವದಭ್ರಕರುಣೋ ಭಗವಾನ್ವಿವೃದ್ಧ
ಪ್ರೇಮಸ್ಮಿತೇನ ನಯನಾಮ್ಬುರುಹಂ ವಿಜೃಮ್ಭನ್ ।
ಉತ್ಥಾಯ ವಿಶ್ವವಿಜಯಾಯ ಚ ನೋ ವಿಷಾದಂ
ಮಾಧ್ವ್ಯಾ ಗಿರಾಪನಯತಾತ್ಪುರುಷಃ ಪುರಾಣಃ || ೨೫

ನಿರತಿಶಯ ವಾತ್ಸಲ್ಯದಿಂದ ನನಗೆ ದರ್ಶನವನ್ನು ಕೊಟ್ಟ ಪುರಾಣ ಪುರುಷನಾದ ನೀನು, ಮುಂದೆಯೂ ಅದೇ ವಿಧವಾದ ಕೃಪೆಯಿಂದ ಕಟಾಕ್ಷಿಸಿ ಮಧುರವಾಕ್ಯದಿಂದ, ನನ್ನ ಪ್ರಾರ್ಥನೆಯನ್ನೂ ಈಡೇರಿಸಿ, ನನ್ನ ದುಃಖವನ್ನು ನೀಗಿಸಬೇಕು. ಹೀಗೆಂದು ಚತುರ್ಮುಖನು ಶ್ರೀಮನ್ನಾರಾಯಣನಿಗೆ ನಮಸ್ಕರಿಸಿ ಬದ್ಧಾಂಜಲಿಯಾಗಿ ನಿಂತಿದ್ದನು. ಹೀಗೆ ಬ್ರಹ್ಮನು ಕರ್ಮಜ್ಞಾನಭಕ್ತಿಯೋಗಗಳನ್ನು ಹಿಡಿದು, ತನಗೆ ಉತ್ಪತ್ತಿಕಾರಣನಾದ ಭಗವಂತನನ್ನು ಧ್ಯಾನಿಸಿ ಬಳಲಿದವನಂತೆ ಸುಮ್ಮನಿರಲು, ಆ ಚತುರ್ಮುಖನ ಸ್ತುತಿವಾಕ್ಯಗಳನ್ನು ಕೇಳಿ ಭಗವಂತನು ಸಂತೋಷಗೊಂಡು, ಆ ಬ್ರಹ್ಮನ ಮನಸ್ಸಿನಲ್ಲಿರುವ ಕೋರಿಕೆಯನ್ನೂ, ಆತನು ಆಗಿನ ಕಲ್ಪಾಂತದ ಮಹಾಸಮುದ್ರವನ್ನು ನೋಡಿ ಹಿಂದುಮುಂದು ತಿಳಿಯದೆ ತತ್ತಳಿಸುವುದನ್ನೂ ಕಂಡು, ಮುಂದೆ ನಡೆಯಬೇಕಾದ ಪ್ರಪಂಚ ಸೃಷ್ಟಿ ವಿಷಯದಲ್ಲಿ ಹೀಗೆಂದು ಪ್ರತ್ಯುತ್ತರವನ್ನು ಹೇಳುವನು.

ಎಲೆ ವತ್ಸ! ಚತುರ್ಮುಖಾ! ನೀನು ಸೃಷ್ಟಿಕಾರ್ಯಕ್ಕಾಗಿ ಚಿಂತಿಸಬೇಕಾದುದಿಲ್ಲ! ನಿನ್ನ ವಿಷಾದವನ್ನು ಬಿಡು! ಮುಂದಿನ ಕಾರ್ಯದಲ್ಲಿ ಉತ್ಸಾಹಯುಕ್ತನಾಗಿರು! ನಿನಗೆ ಸೃಷ್ಟಿಕ್ರಮವನ್ನು ತಿಳಿಸುವುದಕ್ಕೆ ಬೇಕಾದ ಉಪಾಯಗಳನ್ನು ಇದಕ್ಕೆ ಮೊದಲೇ ನಾನು ಸಿದ್ಧಪಡಿಸಿರುವೆನು. ಆದರೆ "ಇನ್ನೂ ನನಗೇಕೆ ಆ ಕಾರ್ಯದಲ್ಲಿ ತಿಳುವಳಿಕೆಯುಂಟಾಗಿಲ್ಲ" ವೆಂದು ಕೇಳುವೆಯಾ? ಅದಕ್ಕೊಂದುಪಾಯವುಂಟು. ನೀನು ತಿರುಗಿ ಮತ್ತೊಮ್ಮೆ ತಪೋರೂಪವಾದ ಕರ್ಮಯೋಗವನ್ನೂ, ವಿದ್ಯಾರೂಪವಾದ ಜ್ಞಾನಯೋಗವನ್ನೂ ಹಿಡಿದು, ನನ್ನಲ್ಲಿ ಭಕ್ತಿಯೋಗವನ್ನು ಅನುಷ್ಠಿಸುವವನಾಗು! ಇವುಗಳನ್ನು ಅನುಷ್ಠಿಸುವೆಯಾದರೆ, ಇದಕ್ಕೆ ಮೊದಲೇ ನನ್ನಿಂದ ಕಲ್ಪಿತಗಳಾಗಿರುವ ಲೋಕಗಳೆಲ್ಲವೂ ನಿನ್ನ ಮನಸ್ಸಿಗೆ ಚೆನ್ನಾಗಿ ಗೋಚರಿಸುವುವು. ಚರಾಚರಾತ್ಮಕಗಳಾದ ಪ್ರಪಂಚಗಳೆಲ್ಲವೂ ನಿನಗೆ ಗೋಚರಿಸಿದ ಮೇಲೆಯೂ, ನೀನು ನನ್ನಲ್ಲಿ ಅದೇ ವಿಧವಾದ ಭಕ್ತಿಶ್ರದ್ಧೆಗಳನ್ನು ಬಿಡದೆ ಭಾವಿಸುತ್ತಿದ್ದ ಪಕ್ಷದಲ್ಲಿ, ಆ ಸಮಸ್ತ ಚರಾಚರಗಳಲ್ಲಿಯೂ, ನಾನು ಅಂತರ್ಯಾಮಿಯಾಗಿರುವೆನೆಂಬುದೂ, ಅವೆಲ್ಲವೂ ನನ್ನಿಂದ ವ್ಯಾಪ್ತವಾಗಿ, ನನಗೆ ಶರೀರಭೂತವಾಗಿರುವುವೆಂಬುದೂ ನಿನಗೆ ವ್ಯಕ್ತವಾಗುವುದು. ಹೀಗೆ ಸರ್ವಾತ್ಮಕವಾದ ಆ

ಪರಬ್ರಹ್ಮಸ್ವರೂಪವು ನಿನಗೆ ಗೋಚರಿಸಿದೊಡನೆ ನಿನ್ನ ಮನಸ್ಸಿನ ಮೋಹ ವೆಲ್ಲವೂ ನೀಗುವುದು. ನಾನು ಸಮಸ್ತಭೂತಗಳಲ್ಲಿಯೂ ಸೇರಿದ್ದರೂ, ದಾರುವಿ ನಲ್ಲಿರುವ ಅಗ್ನಿಯಂತೆ ಅವುಗಳ ಗುಣದೋಷಗಳಿಗೆ ಈಡಾಗದೆ, ನನ್ನ ವೀರ್ಯ ವನ್ನೂ ತೋರಿಸದೆ ಅಡಗಿರುವೆನು. ನಾನೆ ಅವುಗಳಿಗೆ ಧಾರಕನಾಗಿಯೂ, ನಿಯಾಮಕನಾಗಿಯೂ ಇರುವೆನು. ಈ ವಿಧದಲ್ಲಿ ಸರ್ವಾಂತರಾತ್ಮನಾದ ನನ್ನ ಸ್ವರೂಪವನ್ನು ತಿಳಿದಾಗಲೇ, ಜನರಿಗೆ ದುಃಖ ನಿವೃತ್ತಿಯುಂಟಾಗು ವುದು. ಪೃಥಿವಿ ಮೊದಲಾದ ಪಂಚಭೂತಗಳು, ಕಣ್ಣು, ಕಿವಿ, ಮೊದಲಾದ ಐದು ಜ್ಞಾನೇಂದ್ರಿಯಗಳು, ಕೈ, ಕಾಲು ಮೊದಲಾದ ಐದು ಕರ್ಮೇಂದ್ರಿಯ ಗಳು, ಅಂತಃಕರಣ, ಪೂರ್ವವಾಸನೆ, ಇವುಗಳೊಡನೆ ಜೀವನಿಗೆ ಸಂಬಂಧ ವಿದ್ದರೂ, ಆ ಜೀವಾತ್ಮವು ಅವುಗಳಿಗಿಂತಲೂ ವಿಲಕ್ಷಣವಾಗಿ, ಸತ್ಯಜ್ಞಾನಾ ನಂದ ಸ್ವರೂಪನಾದ ನನ್ನಿಂದ ಧರಿಸಲ್ಪಡುತ್ತಿರುವುದೆಂಬ ತತ್ವವನ್ನು ಯಾವಾಗ ತಿಳಿಯುವರೋ, ಆಗಲೇ ಅವರು ಕರ್ಮಸಂಬಂಧವಿಲ್ಲದೆ, ತನಗೆ ತಾನೇ ಬೆಳಗುವ ಸ್ವಾರಾಜ್ಯವೆಂಬ ಉತ್ತಮ ಪದವಿಯನ್ನು ಹೊಂದುವರು. ಆದರೆ "ಸರ್ವಾತ್ಮಕನಾಗಿಯೂ, ಸರ್ವಾಂತರ್ಯಾಮಿಯಾಗಿಯೂ ಇರುವ ಪರಮಾತ್ಮನನ್ನು ಉಪಾಸನೆಮಾಡುವುದೂ, ಆ ಪರಮಾತ್ಮನಿಗೆ ಶರೀರ ಭೂತವಾದ ಜೀವಾತ್ಮನನ್ನು ಉಪಾಸಿಸುವುದೂ ಮೋಕ್ಷಸಾಧನವಾಗಿದ್ದಲ್ಲಿ, ಸೃಷ್ಟಿವ್ಯಾಪಾರದಲ್ಲಿಯೇ ಯಾವಾಗಲೂ ಇರಬೇಕಾದ ನನಗೆ, ಆ ಉಪಾಸನೆ ಯನ್ನು ನಡೆಸುವುದಕ್ಕೆ ಅವಕಾಶವೆಲ್ಲಿ?" ಎಂದು ನೀನು ಶಂಕಿಸಬಹುದು. ಹಾಗೆಣಿಸಬೇಡ! ಆಯಾ ಜೀವಗಳ ಕರ್ಮಾನುಸಾರವಾಗಿ, ವಿಚಿತ್ರವಾ ಗಿಯೂ, ದೇವತಿರ್ಯಙ್ಮನುಷ್ಯಾದಿ ರೂಪಗಳಾಗಿಯೂ ಇರುವ ಬಗೆಬಗೆಯ ಪ್ರಜೆಗಳನ್ನು ನೀನು ಸೃಷ್ಟಿಸುತ್ತಿದ್ದರೂ, ನಿನ್ನ ಮನಸ್ಸು ಮೋಹಾಕುಲ ವಾಗುವುದಿಲ್ಲ. ನೀನು ಆ ಕಾರ್ಯದಲ್ಲಿದ್ದರೂ, ನನ್ನ ಸ್ವರೂಪ ರೂಪಗುಣ ವಿಭೂತಿಗಳನ್ನು ಅನುಸಂಧಿಸುವುದರಲ್ಲಿಯೇ ನಿನ್ನ ಮನಸ್ಸು ಯಾವಾಗಲೂ ಆಸಕ್ತವಾಗಿರಲಿ! ಈ ವಿಧವಾಗಿ ನಾನು ನಿನಗೆ ಅನುಗ್ರಹಿಸಿರುವೆನು. ಓ ಬ್ರಹ್ಮಾ! ನೀನು ಈ ಸಮಸ್ತ ಪ್ರಪಂಚಕ್ಕಿಂತಲೂ ಮೊದಲು ನನ್ನಿಂದ ಸೃಷ್ಟಿಸಲ್ಪಟ್ಟವನು. ನನ್ನ ಸ್ವರೂಪಾದಿಗಳನ್ನು ಯಥಾಸ್ಥಿತವಾಗಿ ತಿಳಿ ಸುವ ಸಮಸ್ತ ವೇದಗಳನ್ನೂ ಸಾಕ್ಷಾತ್ಕರಿಸಿದವನು. ಸಂಸಾರದಲ್ಲಿ ಬಂಧಿಸ

ತಕ್ಕ ಪಾಪಿಯಾದ ರಜೋಗುಣವೆಂಬುದು ನಿನ್ನನ್ನು ಮಾತ್ರ ಕಟ್ಟಿಡಲಾರದು. ಏಕೆಂದರೆ, ನನ್ನ ಅನುಗ್ರಹಬಲದಿಂದ ನಿನ್ನ ಮನಸ್ಸು ನನ್ನಲ್ಲಿಯೇ ನಿತ್ಯಾಸಕ್ತವಾಗುವುದರಿಂದ, ಸೃಷ್ಟಿಕಾರ್ಯದಲ್ಲಿದ್ದರೂ ನಿನ್ನ ಮನಸ್ಸು ಕೆಡದಂತೆ, ಬಲವತ್ತರವಾದ ಅನುಗ್ರಹವನ್ನು ನಿನ್ನಲ್ಲಿ ತೋರಿಸಿರುವೆನು. ದೇಹವನ್ನೇ ಆತ್ಮವೆಂದು ಭ್ರಮಿಸಿ ಅದರಲ್ಲಿ ಮೋಹವನ್ನಿಡತಕ್ಕ ಭಕ್ತಿಹೀನರು, ಎಷ್ಟೆಷ್ಟೇ ಪ್ರಯತ್ನಪಟ್ಟರೂ ನನ್ನ ಸ್ವರೂಪವು ಅವರಿಗೆ ಗೋಚರಿಸತಕ್ಕುದಲ್ಲ. ನೀನಾದರೋ ಈಗ ನನ್ನ ಸ್ವರೂಪಾದಿಗಳನ್ನು ಯಥಾಸ್ಥಿತವಾಗಿ ತಿಳಿದಿರುವೆ. ಆದರೆ "ನನ್ನ ಸ್ವರೂಪವು ನಿನಗೆ ಚೆನ್ನಾಗಿ ತಿಳಿಯಿತೆಂಬ ವಿಷಯದಲ್ಲಿ ನಿದರ್ಶನವೇನು?" ಎಂದು ನೀನು ಕೇಳಬಹುದು. ಇದಕ್ಕೆ ನಿನ್ನ ಮನಸ್ಸೇ ಸಾಕ್ಷಿಯು. ಈಗ ನೀನು ನನ್ನನ್ನು ಪ್ರಾಕೃತವಾದ ಪಂಚಭೂತಗಳಿಂದಲೂ, ಜ್ಞಾನೇಂದ್ರಿಯಕರ್ಮೇಂದ್ರಿಯಗಳಿಂದಲೂ, ಸತ್ವರಜಸ್ತಮೋಗುಣಗಳಿಂದಲೂ ಸಂಬಂಧವಿಲ್ಲದವನನ್ನಾಗಿ ನಿನ್ನ ಮನಸ್ಸಿನಲ್ಲಿಯೇ ತಿಳಿದಿರುವೆ. ಈ ನಿಶ್ಚಯಜ್ಞಾನವು ಮತ್ತೊಬ್ಬ ಮನುಷ್ಯನಿಗೆ ಹುಟ್ಟಲಾರದು. ಮತ್ತು ಓ ಚತುರ್ಮುಖಾ! ಇದಕ್ಕೆ ಮೊದಲು ನೀನು ಪದ್ಮನಾಳದಲ್ಲಿ ಪ್ರವೇಶಿಸಿ ನನ್ನನ್ನು ನೋಡಬೇಕೆಂದು ಎಷ್ಟೆಷ್ಟೋ ವಿಧದಿಂದ ಪ್ರಯತ್ನಿಸಿದೆ. ಯಾವ ರೂಪವನ್ನು ಕುರಿತು ನೀನು ಹುಡುಕುತ್ತಿದ್ದೆಯೋ, ಆ ರೂಪವು ನಿನ್ನ ಕಣ್ಣೆದಿರಿಗೆ ಬಂದು ನಿಂತಂತೆ ಈಗ ನಿನ್ನ ಮನಸ್ಸಿಗೆ ಗೋಚರಿಸಿತಷ್ಟೇ? ಈ ರೂಪವನ್ನು ನೋಡಲು ಮತ್ತೊಬ್ಬರು ಶಕ್ತರಲ್ಲ. ಓ ಬ್ರಹ್ಮಾ! ನೀನು ನಡೆಸಿದ ತಪಸ್ಸಿಗಾಗಿಯೂ, ಸ್ತೋತ್ರಕ್ಕಾಗಿಯೂ ನಾನು ಬಹಳ ಸಂತೋಷಪಟ್ಟೆನು! ನಿನ್ನಲ್ಲಿ ನನಗೆ ಪೂರ್ಣಾನುಗ್ರಹವುಂಟಾಯಿತು. ನನ್ನ ಗುಣಸ್ವರೂಪಾದಿಗಳನ್ನು ವಿವರಿಸುವಂತೆ ನೀನು ಸ್ತೋತ್ರಮಾಡಿದುದೂ, ನಿನಗೆ ತಪಸ್ಸಿನಲ್ಲಿ ನಿಷ್ಠೆಯುಂಟಾದುದೂ, ನನ್ನ ಅನುಗ್ರಹವೆಂದೇ ತಿಳಿ. ನೀನು ಲೋಕವನ್ನು ಸೃಷ್ಟಿಸಬೇಕೆಂಬ ಉದ್ದೇಶದಿಂದ ನನ್ನನ್ನು ಅನೇಕ ಕಲ್ಯಾಣಗುಣಗಣಪರಿಪೂರ್ಣನನ್ನಾಗಿಯೂ, ಹೇಯಗುಣರಹಿತನನ್ನಾಗಿಯೂ ಸ್ತೋತ್ರಮಾಡಿದುದಕ್ಕಾಗಿ ನಾನು ಸಂತೋಷಿಸಿದೆನು. ನಿನಗೆ ಮಂಗಳವಾಗಲಿ! ಓ ಕಮಲಾಸನಾ! ನೀನು ಈಗ ಮಾಡಿದ ಸ್ತುತಿವಾಕ್ಯದಿಂದಲೇ ನನ್ನನ್ನು ಪ್ರತಿದಿನವೂ ಭಜಿಸತಕ್ಕ ಮನುಷ್ಯರಿಗೆ ನಾನು ತಪ್ಪದೆ

ಪ್ರಸನ್ನನಾಗುವೆನು. ಅವರ ಕೋರಿಕೆಗಳೆಲ್ಲವನ್ನೂ ಈಡೇರಿಸುವೆನು. ಅಂತವರಿಗೆ ಅನೇಕ ಯಾಗಗಳಿಂದಲೂ, ನಾನಾಧರ್ಮಗಳಿಂದಲೂ, ಯೋಗಾದಿಗಳಿಂದಲೂ ಲಭಿಸತಕ್ಕ ಫಲವನ್ನೂ ಅನುಗ್ರಹಿಸುವೆನು. ಆದುದರಿಂದ ಎಲೈ ವಿಧಾತ್ರನೇ! ನೀನು ನನ್ನನ್ನು ಅನವರತವೂ ಸ್ಮರಿಸುತ್ತಿರಬೇಕು. ನಾನೇ ಜೀವಾತ್ಮಗಳೆಲ್ಲಕ್ಕೂ ಅಂತರಾತ್ಮನಾಗಿ, ಅವುಗಳನ್ನು ಧರಿಸತಕ್ಕವನು. ಪ್ರಿಯವಸ್ತುಗಳೆಲ್ಲಕ್ಕಿಂತಲೂ ನಾನು ಪ್ರಿಯತಮನು. ಈ ನನ್ನ ಸ್ವಲ್ಪ ಸಂಬಂಧಮಾತ್ರದಿಂದಲೇ ದೇಹವೇ ಮೊದಲಾದ ಇತರ ವಸ್ತುಗಳೆಲ್ಲವೂ ಪ್ರೀತಿ ವಿಷಯವಾಗುವುವು. ಆದುದರಿಂದ ನಿನಗಾಗಲೀ ಇತರ ಚೇತನರಿಗಾಗಲೀ ನನ್ನಲ್ಲಿರಬೇಕಾದ ಭಕ್ತಿಯೇ ಮುಖ್ಯವು. ಲೋಕದಲ್ಲಿ ಜನ್ಮವನ್ನೆತ್ತಿದುದಕ್ಕೆ ಇದೇ ಫಲವು! ನನ್ನಿಂದುಪದೇಶಿಸಲ್ಪಟ್ಟ ಸರ್ವವೇದಸ್ವರೂಪವಾದ ಜ್ಞಾನದಿಂದ ನೀನು ಈ ಜಗತ್ತನ್ನೂ, ಇದರೊಳಗಿನ ಪ್ರಜೆಗಳನ್ನೂ ಪೂರ್ವಕಲ್ಪದಲ್ಲಿದ್ದಂತೆಯೇ ಸೃಷ್ಟಿಸುವವನಾಗು! ಹಿಂದಿನ ಕಲ್ಪಾಂತರದಲ್ಲಿ ಯಾವ ಪ್ರಜೆಗಳನ್ನು ನಾನು ನನ್ನಲ್ಲಿಯೇ ಅಡಗಿಸಿಕೊಂಡಿರುವೆನೋ, ಆ ಪ್ರಜೆಗಳನ್ನು ಹಾಗೆಯೇ ಸೃಷ್ಟಿಸು!" ಎಂದನು. ಓ ವಿದುರಾ! ಪ್ರಕೃತಿಪುರುಷರಿಬ್ಬರಿಗೂ ನಿಯಾಮಕನಾಗಿ, ತನ್ನ ನಾಭಿಯಲ್ಲಿ ಜಗದ್ರೂಪವಾದ ಕಮಲವನ್ನು ಹೊರಡಿಸಿದ ಅನಿರುದ್ಧರೂಪಿಯಾದ ಆ ಭಗವಂತನು, ಈ ವಿಧವಾಗಿ ಚತುರ್ಮುಖನಿಗೆ ಮುಂದೆ ನಡೆಸಬೇಕಾದ ಸೃಷ್ಟಿಕ್ರಮವನ್ನು ತೋರಿಸಿ, ಆ ಬ್ರಹ್ಮನು ನೋಡುತ್ತಿದ್ದ ಹಾಗೆಯೇ ತನ್ನ ಸ್ವರೂಪವನ್ನು ಮರೆಸಿಕೊಂಡನು. ಇಲ್ಲಿಗೆ ಒಂಭತ್ತನೆಯ ಅಧ್ಯಾಯವು.

---

{ ಮೈತ್ರೇಯ ಮುನಿಯು ಪ್ರಾಕೃತ ವೈಕೃತಗಳೆಂಬ ಸೃಷ್ಟಿಭೇದಗಳನ್ನು ವಿದುರನಿಗೆ ತಿಳಿಸಿದುದು. }

ತಿರುಗಿ ವಿದುರನು ಮೈತ್ರೇಯನನ್ನು ಕುರಿತು "ಎಲೈ ಮಹಾತ್ಮನೇ! ಭಗವಂತನು ಬ್ರಹ್ಮದೇವನನ್ನು ಅನುಗ್ರಹಿಸಿ ಅಂತರ್ಧಾನವನ್ನು ಹೊಂದಿದ ಮೇಲೆ, ಲೋಕಪಿತಾಮಹನಾಗಿಯೂ, ದೇವಮನುಷ್ಯಾದಿಗಳಿಗೆ ಪ್ರಭುವಾ

ಗಿಯೂ ಇರುವ ಆ ಚತುರ್ಮುಖನು, ತನ್ನ ದೇಹದಿಂದಲೂ, ಮನಸ್ಸಿನಿಂದಲೂ, ಪ್ರಜೆಗಳನ್ನು ಎಷ್ಟು ವಿಧವಾಗಿ ಸೃಷ್ಟಿಸಿದನು? ಎಲೈ! ಪೂಜ್ಯನೇ! ಬ್ರಹ್ಮಜ್ಞಾನಿಗಳಲ್ಲಿ ಮೇಲೆನಿಸಿದ ನೀನು ಈ ಪ್ರಶ್ನೆಗಳೊಂದೊಂದಕ್ಕೂ ಉತ್ತರವನ್ನು ಹೇಳಿ ನನ್ನ ಸಂದೇಹಗಳನ್ನು ನೀಗಿಸಬೇಕು! ಎಂದನು. ಹೀಗೆ ವಿದುರನಿಂದ ಪ್ರಾರ್ಥಿತನಾದ ಮೈತ್ರೇಯನು, ಭಗವದ್ಭಕ್ತಿ ಸೂಚಕಗಳಾದ ಆತನ ಪ್ರಶ್ನೆಗಳಿಗಾಗಿ ಬಹಳ ಸಂತೋಷಗೊಂಡು, ತನ್ನ ನೆನಪಿನಲ್ಲಿದ್ದ ಆತನ ಒಂದೊಂದು ಪ್ರಶ್ನೆಗೂ ಉತ್ತರವನ್ನು ಹೇಳತೊಡಗಿದನು. "ವಿದುರಾ! ಕೇಳು! ಉತ್ಪತ್ತಿ ವಿನಾಶರಹಿತನಾಗಿಯೂ, ಷಾಡ್ಗುಣ್ಯ ಪರಿಪೂರ್ಣನಾಗಿಯೂ ಇರುವ ಭಗವಂತನ ಆಜ್ಞೆಯಂತೆ ಚತುರ್ಮುಖನು, ಪರಮಾತ್ಮನಲ್ಲಿ ಮನಸ್ಸನ್ನು ನೆಲೆಗೊಳಿಸಿ, ನೂರುದೇವ ವರ್ಷಗಳವರೆಗೆ ತಪಸ್ಸನ್ನು ನಡೆಸುತ್ತಿದ್ದನು. ಹೀಗೆ ನಡೆಸುತ್ತ ಬಂದ ಪರಮಾತ್ಮನ ಉಪಾಸನದಿಂದಲೂ, ತಪೋರೂಪವಾದ ಕರ್ಮಯೋಗದಿಂದಲೂ, ಅವನಿಗೆ ಸೃಷ್ಟಿ ವಿಷಯವಾದ ತಿಳುವಳಿಕೆಯುಂಟಾಯಿತು. ಈ ಜ್ಞಾನಶಕ್ತಿಯುಂಟಾದ ಮೇಲೆ, ಬ್ರಹ್ಮನು, ಸುತ್ತಲೂ ಕಣ್ಣಿಟ್ಟು ನೋಡುತ್ತ, ಆ ಪ್ರಳಯಕಾಲದಲ್ಲಿ ಮೇಲೆ ಮೇಲೆ ವೇಗಾತಿಶಯದಿಂದ ಗಾಳಿಯು ಬೀಸುತ್ತಿರುವುದನ್ನೂ, ಆ ಬಿರುಗಾಳಿಯ ವೇಗದಿಂದ, ತಾನು ಕುಳಿತಿದ್ದ ತಾವರೆಹೂವಿನೊಡನೆ, ಸುತ್ತಲೂ ಆವರಿಸಿಕೊಂಡಿದ್ದ ಪ್ರಳಯಜಲವು ಅಲ್ಲೋಲಕಲ್ಲೋಲವಾಗಿ ನಡುಗುತ್ತಿರುವುದನ್ನೂ ಕಂಡು, ಆ ನೀರು, ಗಾಳಿ, ಇವೆರಡನ್ನೂ ಪಾನ ಮಾಡಿಬಿಟ್ಟನು. ಮತ್ತು ತಾನು ಕುಳಿತಿದ್ದ ನಾಭಿಕಮಲವು ಆಕಾಶವನ್ನೆಲ್ಲಾ ಮುಚ್ಚುವಂತೆ ಮಹೋನ್ನತವಾಗಿ ಬೆಳೆದಿರುವುದನ್ನು ಕಂಡು, ತನ್ನಲ್ಲಿ ತಾನು "ಹಿಂದಿನ ಕಲ್ಪಾಂತದಲ್ಲಿ ಇದರೊಳಗೆ ಅಡಗಿರುವ ಈ ಲೋಕಗಳೆಲ್ಲವನ್ನೂ ಈ ಕಮಲದಿಂದಲೇ ಸೃಷ್ಟಿಸಬೇಕಾಗಿರುವುದು" ಎಂದು ನಿಶ್ಚಯಿಸಿಕೊಂಡನು. ಹೀಗೆ ಬ್ರಹ್ಮನು ಮುಂದೆ ನಡೆಸಬೇಕಾದ ಸೃಷ್ಟಿಕಾರ್ಯಕ್ಕಾಗಿ ಭಗವಂತನಿಂದ ಪ್ರೇರಿಸಲ್ಪಟ್ಟು, ಆ ನಾಭಿಕಮಲದ ಮೇಲೆ ಕುಳಿತಿದ್ದಂತೆಯೇ, ಆ ಒಂದೇ ಕಮಲವನ್ನು ಅನೇಕ ವಿಧವಾಗಿ ವಿಭಾಗಿಸಿಡುವುದಕ್ಕೆ ತೊಡಗಿದನು. ಹದಿನಾಲ್ಕು ಲೋಕಗಳಾಗಿ ಹರಡಿಕೊಳ್ಳುವಷ್ಟು ವಿಶಾಲವಾದ ಆ ಕಮಲವನ್ನು, ಮೊದಲು, ಭೋಕ್ತೃವೆಂದೂ,

ಭೋಗ್ಯವೆಂದೂ ಕರಣವೆಂದೂ, ಮೂರು ಮುಖ್ಯ ವಿಭಾಗದಿಂದ ಬೇರ್ಪಡಿಸಿಟ್ಟನು. (ದೇವತೆಗಳು, ಮನುಷ್ಯರು, ಪಶು, ಪಕ್ಷಿ, ಮೃಗಾದಿಗಳಾದ ಜೀವರಾಶಿಗಳೆಲ್ಲವೂ ಭೋಕ್ತೃವರ್ಗವೆನಿಸುವುದು. ಶಬ್ದ, ರೂಪ, ರಸ, ಗಂಧಾದಿ ವಿಷಯಗಳೆಲ್ಲವೂ ಭೋಗ್ಯವರ್ಗದಲ್ಲಿ ಸೇರಿದುವು- ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆಂಬಿವು ಭೋಗೋಪಕರಣಗಳೆಂಬ ಮೂರನೆಯ ವರ್ಗಕ್ಕೆ ಸೇರಿದುವು.) ಹೀಗೆ ಭೋಕ್ತೃಗಳೆನಿಸಿಕೊಂಡ ಜೀವರಾಶಿಗಳು, ಭೋಗಾರ್ಹಗಳೆನಿಸಿಕೊಂಡು ಶಬ್ದಾದಿ ವಿಷಯಗಳು, ಅವುಗಳನ್ನು ಅನುಭವಿಸುವುದಕ್ಕೆ ಸಾಧನಗಳೆನಿಸಿಕೊಂಡ ಜ್ಞಾನಕರ್ಮೇಂದ್ರಿಯಗಳು, ಭೂಸ್ವರ್ಗಲೋಕಗಳೇ ಮೊದಲಾದ ಭೋಗಸ್ಥಾನಗಳು, ಎಂಬೀ ಪ್ರಪಂಚವೆಲ್ಲವೂ ಆ ನಾಭಿಕಮಲವೊಂದರಲ್ಲಿಯೇ ಅಡಗಿದ್ದುದರಿಂದ, ಜೀವಲೋಕದ ಸ್ಥಿತಿಯೆಲ್ಲವೂ ಇಷ್ಟು ಮಾತ್ರದಲ್ಲಿಯೇ ಸೇರಿದ್ದಿತು. ಇದರಿಂದ ಆ ನಾಭಿಕಮಲವೊಂದೇ ಪ್ರಪಂಚಸ್ವರೂಪವಾಗಿದ್ದಿತು. ವಿದುರಾ! ಆದರೆ "ಬ್ರಹ್ಮದೇವನೂ, ಅವನ ಸ್ಥಾನವೂ ಕಾರ್ಯವರ್ಗದಲ್ಲಿಯೇ ಸೇರಿರುವಾಗ, ಇತರ ಕಾರ್ಯವರ್ಗಗಳಂತೆ ಅವೆರಡೂ ಪ್ರತಿಕಲ್ಪದ ಸೃಷ್ಟಿಗೆ ಒಳಪಡದಿರುವುದೇಕೆ?" ಎಂದು ನೀನು ಶಂಕಿಸಬಹುದು. ಲೋಕದಲ್ಲಿ ಯಾವ ಫಲಾಪೇಕ್ಷೆಯೂ ಇಲ್ಲದೆ ನಡೆಸತಕ್ಕ ಧರ್ಮಗಳಿಗೆ ಬ್ರಹ್ಮಪಟ್ಟವೂ, ಬ್ರಹ್ಮಲೋಕಪ್ರಾಪ್ತಿಯೂ ಫಲವೆಂದು ವಿಧಿಸಲ್ಪಟ್ಟಿದೆ. ಇತರ ಲೋಕಗಳೆಲ್ಲವೂ ಆಯಾ ಫಲಾಪೇಕ್ಷೆಯಿಂದ ಮಾಡತಕ್ಕ ಕಾಮ್ಯಕರ್ಮಗಳಿಗೆ ಫಲರೂಪವಾಗಿರುವುವು. ಆದುದರಿಂದಲೇ ಅವುಗಳಿಗೆ ಒಂದೊಂದು ಕಲ್ಪದಲ್ಲಿಯೂ ಸೃಷ್ಟಿಪ್ರಳಯಗಳುಂಟು. ನಿಷ್ಕಾಮರಿಗೆ ಲಭಿಸಬಹುದಾದ ಬ್ರಹ್ಮಪಟ್ಟಕ್ಕೂ, ಬ್ರಹ್ಮಲೋಕಕ್ಕೂ, ಆ ವಿಧವಾಗಿ ಪ್ರತಿಕಲ್ಪದಲ್ಲಿಯೂ ಸೃಷ್ಟಿ ಲಯಗಳಿಲ್ಲ. ಆ ಲೋಕವು ಅದರ ಕೆಳಗಿನ ಬೇರೆ ಎಲ್ಲಾ ಲೋಕಗಳಿಗಿಂತಲೂ ಹೆಚ್ಚಾಗಿ ಎರಡು ಪರಾರ್ಧಕಾಲಗಳವರೆಗೆ ನಾಶವಿಲ್ಲದೆ ಸ್ಥಿರವಾಗಿರುವುದು. ಆ ಸತ್ಯಲೋಕಾದಿಯಾಗಿ, ಮೇಲಿನ ಲೋಕಗಳೆಲ್ಲವೂ ಕಾಮ್ಯಕರ್ಮಗಳಿಂದ ಲಭಿಸತಕ್ಕವುಗಳಲ್ಲವಾದುದರಿಂದ, ಅವುಗಳಿಗೆ ಕಲ್ಪಕಲ್ಪಕ್ಕೂ ಸೃಷ್ಟಿಪ್ರಳಯಗಳಿಲ್ಲ. ಆದರೆ "ಫಲಾಪೇಕ್ಷೆಯಿಲ್ಲದೆ ಮಾಡಿದ ಕರ್ಮಗಳಿಗೆ ಮೋಕ್ಷವೊಂದೇ ಫಲವಲ್ಲವೇ?" ಎಂದು ಕೇಳುವೆಯಾ! ಅದೇನೋ ವಾಸ್ತವವು! ಹಾಗಿದ್ದರೂ ಫಲಾಪೇಕ್ಷೆಯಿಲ್ಲದೆ ಧರ್ಮಾನುಷ್ಠಾನ

ವನ್ನು ನಡೆಸತಕ್ಕವರು, ಮೊದಲು ಬ್ರಹ್ಮಲೋಕವನ್ನು ಸೇರಿ, ಅಲ್ಲಿ ಕೆಲವು ಕಾಲವಿದ್ದು, ಆಮೇಲೆ ಆಯಾ ಕಾಲದ ಬ್ರಹ್ಮನೊಡನೆ ಸೇರಿಯೇ ಮೋಹ ವನ್ನು ಹೊಂದುವರು. ಆದುದರಿಂದ ಸೃಷ್ಟಿ ಪ್ರಳಯಗಳ ವಿಷಯದಲ್ಲಿ ಬ್ರಹ್ಮಲೋಕಕ್ಕೂ, ಇತರ ಲೋಕಗಳಿಗೂ ತಾರತಮ್ಯವುಂಟು." ಎಂದನು. ಇದನ್ನು ಕೇಳಿ ವಿದುರನು ತಿರುಗಿ ಮೈತ್ರೇಯನನ್ನು ಕುರಿತು "ಓ ಬ್ರಹ್ಮರ್ಷೀ! ಅದು ಹಾಗಿರಲಿ! ಶ್ರೀಮಹಾವಿಷ್ಣುವಿಗೆ ಕಾಲವನ್ನೂ, ಒಂದು ಶರೀರವನ್ನಾಗಿ ಹೇಳಿದೆಯಷ್ಟೆ? ಇದಲ್ಲದೆ ನೀನು ಹಿಂದೆ ಹೇಳಿದ ವಿಷಯಗಳಿಂದ ಆ ಕಾಲ ವೆಂಬ ವಸ್ತುವು ಪ್ರಳಯಕಾಲದಲ್ಲಿಯೂ ಇದ್ದುದಾಗಿ ಸೂಚಿತವಾಗುವುದು. ಇದರಿಂದ ಕಾಲವೂ ನಿತ್ಯವೆಂದು ಸಿದ್ಧವಾಗುವುದು. ಆದರೆ "ಅದು ಸೃಷ್ಟಿಗೆ ಒಳಪಟ್ಟಿರುವುದೇ, ಇಲ್ಲವೇ" ಎಂಬ ಸಂದೇಹವು ನನ್ನನ್ನು ಬಾಧಿಸುತ್ತಿರು ವುದು. ಅದು ನಿತ್ಯವಾಗಿದ್ದ ಪಕ್ಷದಲ್ಲಿ ಅದರ ಸೂಕ್ಷ್ಮರೂಪವೆಂತಹುದು? ಅದರ ಸ್ಥೂಲರೂಪವು ಯಾವ ವಿಧವಾಗಿರುವುದು? ಆ ಕಾಲಸ್ವರೂಪವನ್ನು ನನಗೆ ಯಥಾಸ್ಥಿತವಾಗಿ ತಿಳಿಸಬೇಕು" ಎಂದನು. ಅದಕ್ಕಾ ಮೈತ್ರೇಯನು "ವತ್ಸ ವಿದುರಾ! ಕೇಳು! ಕಾಲವೆಂಬುದು ಕಣ್ಣಿಗೆ ಕಾಣತಕ್ಕ ವಸ್ತುವಲ್ಲ, ಅದರ ಕಾರ್ಯದಿಂದಲೇ ಅದನ್ನು ಊಹಿಸಿ ತಿಳಿಯಬೇಕಾದುದರಿಂದ. ಮೊದಲು ಆ ಕಾಲದ ಪ್ರೇರಣೆಯಿಂದ ನಡೆಯುವ ಪ್ರಪಂಚ ವ್ಯಾಪಾರವನ್ನು ತಿಳಿಸುವೆನು ಕೇಳು. ಅದಕ್ಕೆ ಮೇಲೆ ನೀನು ಕಾಲಸ್ವರೂಪವನ್ನು ತಿಳಿಯ ಬಹುದು. ಪರಮಪುರುಷನು, ಮೊದಲು ಸತ್ವಾದಿಗುಣಗಳ ಬದಲಾವಣೆಗೆ ಸ್ಥಾನವಾದ ಸೂಕ್ಷ್ಮಪ್ರಕೃತಿಯನ್ನೇ ಶರೀರವಾಗಿ ಹೊಂದಿದ್ದಾಗ, ಆ ಪ್ರಕೃತಿಯ ವಿಕಾರಗಳಾದ ಭೂಮಿ ಮೊದಲಾದ ತತ್ವಗಳೊಂದೂ ಕಾಣದಂ ತಿದ್ದುವು. ಭಗವಂತನು ತನಗೆ ತಾನೇ ಕಾರಣನೇ ಹೊರತು, ಅವನಿಗೆ ಬೇರೊಂದೂ ಕಾರಣವಸ್ತುವಿಲ್ಲ. ಇದಕ್ಕೆ ಪ್ರಮಾಣವೇನೆಂದು ಕೇಳು ವೆಯಾ? ಅವನಿಗಿಂತಲೂ ಈಚೆಗೆ ಹುಟ್ಟಿದ ಭೂಮಿ ಮೊದಲಾದ ತತ್ವಗಳೆ ಲ್ಲವೂ, ಪ್ರಳಯಕಾಲದಲ್ಲಿ ತಮತಮಗೆ ಕಾರಣಗಳಾದ ಹೀನವಸ್ತುಗಳಲ್ಲಿ ಮರೆಸಿಕೊಳ್ಳುತ್ತ ಬರುವುವು. ಇದೇ ಪ್ರಳಯಕ್ರಮವು. ಈಶ್ವರನಿಗೆ ಮೊದಲೂ ಬೇರೊಂದು ಕಾರಣವಸ್ತುವಿದ್ದ ಪಕ್ಷದಲ್ಲಿ, ಅವನಿಗೂ ಅದೇ ವಿಧ ವಾದ ಪ್ರಳಯವುಂಟಾಗಿ, ಅವನೂ ಮರೆಸಿಕೊಳ್ಳಬೇಕಲ್ಲವೇ? ಹೀಗೆ

ಯಾವ ಶ್ರುತಿಗಳೂ ಹೇಳುವುದಿಲ್ಲ. ಆದುದರಿಂದ ಈಶ್ವರನು ತನಗೆ ತಾನೇ ಕಾರಣನು. ಇಂತಹ ಪರಮಪುರುಷನು ಪ್ರಪಂಚವ್ಯಾಪಾರದಿಂದ ತಾನು ವಿನೋದಿಸಬೇಕೆಂದುದ್ದೇಶಿಸಿದಾಗ, ಅದಕ್ಕೆ ಬೇಕಾದ ಕ್ರೀಡಾಸಾಮಗ್ರಿಗಳನ್ನು ಒದಗಿಸಿಕೊಳ್ಳುವುದಕ್ಕಾಗಿ, ತನಗೆ ಶರೀರವಾಗಿದ್ದ ಪ್ರಕೃತಿಯೊಡನೆ ತನ್ನನ್ನೇ ತಾನು ಉಪಾದಾನಕಾರಣ (ನಿರ್ಮಾಣ ಸಾಮಗ್ರಿ) ವಾಗಿಟ್ಟು ಕೊಂಡು, ಪ್ರಪಂಚರೂಪವಾಗಿ ತನ್ನನ್ನೇ ಬದಲಾಯಿಸಿಕೊಳ್ಳುವನು. ಸರ್ವನಿಯಾಮಕನಾದ ಈಶ್ವರನು, ತನ್ನ ನಿಜಸ್ವರೂಪದಿಂದ ತಾನೇ ನಿಮಿತ್ತಕಾರಣವಾಗಿ (ಕರ್ತನಾಗಿ) ನಿಂತು, ಕಾಲ, ಪ್ರಕೃತಿ, ಪುರುಷರೆಂಬ ಈ ಮೂರರೊಡನೆ ಸೇರಿ, ತಾನೇ ಉಪಾದಾನಕಾರಣವಾಗಿಯೂ ಇದ್ದು, ಈ ಪ್ರಪಂಚವನ್ನು ಸೃಷ್ಟಿಸುವನು. ಆದುದರಿಂದ ಈ ಸಮಸ್ತಪ್ರಪಂಚವೂ ಈಶ್ವರನಲ್ಲದೆ ಬೇರೆಯಲ್ಲ. ಈ ಜಗತ್ತಿಗೆ ಅವನೇ ಕಾರಣವಸ್ತುವಾಗಿರುವನು. ಕಾರ್ಯರೂಪದಿಂದಲೂ, ಅವನೇ ಕಾಣುವನು. ಆದರೆ ಆ ಭಗವಂತನೊ ಬ್ಬನೇ ಕಾರ್ಯಕಾರಣಗಳೆರಡಾಗಿಯೂ ನಿಲ್ಲುವುದಕ್ಕೆ ಹೇಗೆ ಸಾಧ್ಯವು?" ಎಂದು ಕೇಳುವೆಯಾ? ಅದಕ್ಕೂ ಸಮಾಧಾನವನ್ನು ಹೇಳುವೆನು ಕೇಳು! ಚೇತನಾಚೇತನಗಳನ್ನು ಶರೀರವಾಗಿ ಉಳ್ಳ ಭಗವಂತನು, ತಾನೊಬ್ಬನೇ ಆಗಿದ್ದರೂ, ಒಂದವಸ್ಥೆಯಲ್ಲಿ ತಾನು ಕಾರಣವಾಗಿಯೂ, ಮತ್ತೊಂದವಸ್ಥೆ ಯಲ್ಲಿ ಕಾರ್ಯವಾಗಿಯೂ ಆಗಬಹುದು. ಮಣ್ಣೆಂಬ ಒಂದೇ ವಸ್ತುವು, ಒಂದು ಸ್ಥಿತಿಯಲ್ಲಿ ಗಡಿಗೆಯಾಗಿ ಮಾರ್ಪಡುವುದನ್ನು ನೋಡುವೆವಲ್ಲವೇ? ಅದರಂತೆಯೇ ಚೇತನಾಚೇತನವಿಶಿಷ್ಟನಾದ ಭಗವಂತನಿಗೆ ಸ್ಥೂಲಾವಸ್ಥೆ ಯೆಂದೂ, ಸೂಕ್ಷ್ಮಾವಸ್ಥೆಯೆಂದೂ, ಅವಸ್ಥಾಭೇದಗಳಿರುವುದರಿಂದ, ಅದನ್ನ ನುಸರಿಸಿ, ಅವನು ಸೂಕ್ಷ್ಮಪ್ರಕೃತಿಯಿಂದ ಕೂಡಿರುವಾಗ ಕಾರಣನಾಗಿಯೂ, ಸ್ಥೂಲಪ್ರಕೃತಿಯೊಡಗೂಡಿ ಕಾರ್ಯವಾಗಿಯೂ ನಿಲ್ಲುವನು. ಇದರಿಂದ ಭಗವಂತನಿಗೆ ಕಾರ್ಯಕಾರಣತ್ವಗಳೆರಡೂ ಉಪಪನ್ನವಾಗುವುವು. ಈಶ್ವರ ನಿಗೆ ಸಾಕ್ಷಾತ್ತಾಗಿ ಸ್ಥೂಲಸೂಕ್ಷ್ಮಾವಸ್ಥೆಗಳೆಂಬ ಭೇದವಿಲ್ಲದಿದ್ದರೂ, ಆ ಸ್ಥೂಲಸೂಕ್ಷ್ಮಪ್ರಕೃತಿಯನ್ನು ಶರೀರವಾಗಿ ಹೊಂದಿದಾಗ, ಅವನಿಗೂ ಅದೇ ಅವಸ್ಥಾಭೇದವನ್ನು ಗ್ರಹಿಸಬಹುದು. ವಿದುರಾ! ಈ ಪ್ರತ್ಯಕ್ಷಪ್ರಪಂಚ ರೂಪವಾಗಿ ಕಾಣುವುದೇ ಪ್ರಕೃತಿಯ ಸ್ಥೂಲಾವಸ್ಥೆಯೆನಿಸುವುದು. ಇದಕ್ಕೆ

ನಾಮರೂಪಗಳಲ್ಲಿ ಭೇದಗಳುಂಟು. ಪ್ರಳಯಕಾಲದಲ್ಲಿ ಈ ನಾಮರೂಪ ಭೇದಗಳೊಂದೂ ಇಲ್ಲದೆ ಈಶ್ವರನಲ್ಲಿ ಮರೆಸಿಕೊಳ್ಳುವುದೇ ಪ್ರಕೃತಿಯ ಸೂಕ್ಷ್ಮಾವಸ್ಥೆಯು. ಈ ಕಾರಣದಿಂದಲೇ ಇದನ್ನು ಅವ್ಯಕ್ತವೆಂಬ ಹೆಸರಿನಿಂದಲೂ ಕರೆಯುವರು. ಇದೇ ಸೃಷ್ಟಿಗೆ ಮೊದಲಿರತಕ್ಕ ಅವಸ್ಥೆಯು. ಈ ಪ್ರಕೃತಿಯು ಸೂಕ್ಷ್ಮದಶೆಯಲ್ಲಿದ್ದರೂ ಸ್ಥೂಲದಶೆಯಲ್ಲಿದ್ದರೂ ಭಗವಂತನಿಗೆ ಶರೀರವಾಗಿಯೇ ಇರುವುದು. ಇದು ಕಾರ್ಯದಶೆಯಲ್ಲಿ ಪ್ರಪಂಚರೂಪವಾಗಿ ಹರಡಿ ಕಣ್ಣಿಗೆ ಗೋಚರಿಸುತ್ತಿದ್ದು ಪ್ರಳಯಕಾಲದಲ್ಲಿ ಅವ್ಯಕ್ತಾವಸ್ಥೆಯನ್ನು ಹೊಂದುವುದು. ಆದುದರಿಂದ ಪ್ರಕೃತಿಗೆ ಈ ಕಾರ್ಯಕಾರಣಾವಸ್ಥೆಗಳೆಂಬ ಭೇದವುಂಟಾಗುವುದಕ್ಕೆ ಕಾಲವೇ ಕಾರಣವು. ಸೃಷ್ಟಿ ಮೊದಲಾದ ಯಾವ ಕಾರ್ಯವೂ ಈ ಕಾಲವ್ಯವಸ್ಥೆಯನ್ನು ಬಿಟ್ಟು ನಡೆಯಲಾರದು. ಆದುದರಿಂದ ಆ ಕಾಲವೆಂಬುದು ಈಶ್ವರನಂತೆ ಮಹಾಮಹಿಮೆಯನ್ನು ಹೊಂದಿರುವುದರಿಂದಲೂ, ಆ ಈಶ್ವರನಿಗೆ ಶರೀರಭೂತವಾಗಿ ಅವನ ನಿಯಮಕ್ಕೊಳಪಟ್ಟಿರುವುದರಿಂದಲೂ, ಆ ಕಾಲವನ್ನು ಈಶ್ವರಸ್ವರೂಪವೆಂದೇ ಹೇಳುವೆವು. ಅಂತಹ ಕಾಲಕ್ಕೆ ಅವ್ಯಕ್ತವೆನಿಸಿದ ಪ್ರಕೃತಿಯೂ ಕೂಡ ಒಳಪಟ್ಟೇ ಇರುವುದು. ಮುಖ್ಯವಾಗಿ ಸೃಷ್ಟಿದಶೆಯಲ್ಲಿಯಾಗಲೀ, ಸೃಷ್ಟಿಗೆ ಮೊದಲು ಸೂಕ್ಷ್ಮಾವಸ್ಥೆಯಲ್ಲಿಯಾಗಲೀ, ಕಾಲವೆಂಬುದು ಪ್ರಕೃತಿಯನ್ನು ಎಡೆಬಿಡದೆ ಅನುಸರಿಸಿ ಬಂದು, ತನ್ನ ನಿಯಮಕ್ಕನುಸಾರವಾಗಿ ಆಯಾ ಅವಸ್ಥಾಭೇದಗಳನ್ನುಂಟುಮಾಡುತ್ತಿರುವುದು. ಆದರೆ "ಕಾಲದಿಂದುಂಟಾಗುವ ಈ ಬಗೆಯ ವಿಕಾರಗಳು, ಯಾವಾಗ ವಿಕಾರವನ್ನು ಹೊಂದುವ ಸ್ವಭಾವವುಳ್ಳ ಪ್ರಕೃತಿಗೆ ಮಾತ್ರ ಬಂದೊದಗಬೇಕೇ ಹೊರತು, ಆ ಸ್ವಭಾವವಿಲ್ಲದೆ ಒಂದೇ ಸ್ಥಿತಿಯಲ್ಲಿರತಕ್ಕ ಜೀವಾತ್ಮನಿಗಾಗಲೀ, ಪರಮಾತ್ಮನಿಗಾಗಲೀ ಸಂಭವಿಸಲಾರದಲ್ಲವೇ? ಹೀಗಿರುವಾಗ ಪ್ರಳಯದಶೆಯಲ್ಲಿ ಚಿದಚಿತ್ತುಗಳೊಡಗೂಡಿದ ಪರಬ್ರಹ್ಮಕ್ಕೂ ಈ ಕಾಲ ಪರಿಚ್ಛೇದವಿದ್ದ ಪಕ್ಷದಲ್ಲಿ ಅವನಿಗೆ ಮಾತ್ರ ನಿತ್ಯತ್ವವೆಲ್ಲಿ?" ಎಂದು ನೀನು ಶಂಕಿಸಬಹುದು. ಅದು ಹಾಗಲ್ಲ ಒಂದೊಂದು ಸೃಷ್ಟಿಪ್ರಳಯಗಳಲ್ಲಿಯೂ, ಸ್ಥೂಲಸೂಕ್ಷ್ಮದಶೆಯಲ್ಲಿರುವ ಚೇತನಾಚೇತನಗಳನ್ನು ಶರೀರವಾಗಿ ಹೊಂದಿದ ಈಶ್ವರನಿಗೆ ಕಾಲಪರಿಚ್ಛೇದವುಂಟೆಂಬುದೇನೋ ನಿಜವು. ಹಾಗಿದ್ದರೂ ಈ ಕಾಲ ನಿಯಮವು ಈಶ್ವರನ ಬೇರೆಬೇರೆ

ಅವಸ್ಥೆಗಳಿಗುಂಟೇ ಹೊರತು ಈಶ್ವರನಿಗಿಲ್ಲ! ಈಶ್ವರಸ್ವರೂಪವೇನೋ ನಿತ್ಯವಾದುದು. ಆ ಈಶ್ವರನಿಗೆ ಪ್ರಕೃತಿಯ ಮೂಲಕವಾಗಿಯೇ ಸ್ಥೂಲಸೂಕ್ಷ್ಮಾವಸ್ಥೆಗಳೆಂಬ ಭೇದಗಳೂ ಏರ್ಪಡುವುವು. ಸ್ವರೂಪದಿಂದಲ್ಲ. ಆದುದರಿಂದ ಪ್ರಕೃತಿಗೆ ಸಂಬಂಧಿಸಿರುವ ಸ್ಥೂಲಸೂಕ್ಷ್ಮಾವಸ್ಥೆಗಳೆರಡೂ, ಭಗವಂತನ ಸಂಕಲ್ಪರೂಪವಾದ ಕಾಲದಿಂದಲೇ ಉಂಟಾಗುವುವು. ಆ ಪ್ರಕೃತಿಸಂಬಂಧದಿಂದಲೇ ಜೀವಾತ್ಮಪರಮಾತ್ಮರಿಬ್ಬರಿಗೂ ಕಾಲಪರಿಚ್ಛೇದವುಂಟಾಗಬೇಕಲ್ಲದೆ ಸ್ವರೂಪದಿಂದಲ್ಲ. ಇದರಿಂದ ಆ ಪರಮಾತ್ಮನ ಮತ್ತು ಚೇತನರ ನಿತ್ಯತ್ವಕ್ಕೆ ಹಾನಿಯೇನೂ ಬಾರದು! ವಿದುರಾ! ಈ ಮೇಲೆ ಹೇಳಿದ ವಿಷಯಗಳಿಂದ ನಿನಗೆ ಸಮಸ್ತ ವಸ್ತುಗಳ ಸ್ಥಿತಿಗತಿಗಳಿಗೂ ಕಾರಣವಾದ ಕಾಲದ ಸ್ವರೂಪವನ್ನೂ, ಆ ಕಾಲಶಕ್ತಿಯಿಂದ ಪ್ರೇರಿಸಲ್ಪಡುವ ವಸ್ತುಗಳ ಸೃಷ್ಟಿಕಾರ್ಯವನ್ನೂ ತಿಳಿಸಿದಂತಾಯಿತು. ಇನ್ನುಮುಂದೆ ಸೃಷ್ಟಿಯಲ್ಲಿಯೂ, ಪ್ರಳಯದಲ್ಲಿಯೂ ಇರುವ ಭೇದಗಳನ್ನು ತಿಳಿಸುವೆನು ಕೇಳು! ಮೇಲೆ ಹೇಳಿದಂತೆ ಕಾಲಾಧೀನವಾಗಿ ನಡೆಯುವ ವಸ್ತುಗಳ ಸೃಷ್ಟಿಯು, ಪ್ರಾಕೃತವೆಂದೂ, ವೈಕೃತವೆಂದೂ ಎರಡು ಬಗೆಯ ಮುಖ್ಯ ಭೇದವುಳ್ಳುದಾಗಿ, ಅದರ ಮೇಲೆ ಒಂಭತ್ತು ಬಗೆಯ ಒಳವಿಭಾಗಗಳನ್ನು ಹೊಂದಿರುವುದು. ಇವುಗಳ ಪ್ರಳಯವೂ ಕೂಡ, ಕಾಲದ್ರವ್ಯಗುಣಗಳೆಂಬ ಮೂರು ಬಗೆಯ ಕಾರಣಗಳಿಂದ ಮೂರು ವಿಧವಾಗಿ ಬೇರ್ಪಡುವುದು. "ಇದಕ್ಕೆ ಈ ಕಾಲದಲ್ಲಿಯೇ ನಾಶ" ವೆಂದು ಕಾಲಪರಿಮಾಣದಿಂದ ಏರ್ಪಟ್ಟುದೊಂದು. ಇದನ್ನೇ ನಿತ್ಯಪ್ರಳಯವೆಂದು ಹೇಳುವರು. ಪ್ರಳಯಕಾಲಾಗ್ನಿ ಮೊದಲಾದುವುಗಳಿಂದಾಗುವ ನಾಶದಂತೆ, ಒಂದರಿಂದ ಮತ್ತೊಂದಕ್ಕೆ ಸಂಭವಿಸುವ ನಾಶವು ದ್ರವ್ಯಪ್ರಳಯವೆನಿಸುವುದು. ಇದಕ್ಕೆ ನೈಮಿತ್ತಿಕವೆಂದೂ ಹೆಸರು. ಸತ್ವರಜಸ್ತಮೋಗುಣಗಳು ಹೆಚ್ಚು ಕಡಿಮೆಯಿಲ್ಲದೆ ಸಮಸ್ಥಿತಿಯಲ್ಲಿರುವಾಗ ಗುಣಪ್ರಳಯವೆನಿಸುವುದು. ಇದಕ್ಕೆ ಪ್ರಾಕೃತಪ್ರಳಯವೆಂದೂ ಹೆಸರು. ಇನ್ನು ನವವಿಧ ಸೃಷ್ಟಿಗಳನ್ನು ತಿಳಿಸುವೆನು ಕೇಳು. ಮೊದಲು ಪರಮಪುರುಷನಿಗೆ ಸೃಷ್ಟಿಸಬೇಕೆಂಬ ಸಂಕಲ್ಪವು ಹುಟ್ಟಿದೊಡನೆ, ಅವನು ತನಗೆ ಶರೀರವಾದ ಪ್ರಕೃತಿಪುರುಷರಿಬ್ಬರನ್ನೂ ಸೃಷ್ಟಿಕಾರ್ಯದಲ್ಲಿ ಪ್ರೇರಿಸುವನು. ಈ ಪ್ರೇರಣೆಯುಂಟಾದ ಕೂಡಲೇ, ಅ

ಪರಮಪುರುಷನಿಂದ ಮಹತ್ತೆಂಬ ತತ್ವವು ಹುಟ್ಟುವುದು. ಇದಕ್ಕೆ ಮೊದಲು ಪ್ರಕೃತಿಯಲ್ಲಿ ಸತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳೂ ಹೆಚ್ಚು ಕಡಿಮೆಯಿಲ್ಲದೆ ಸಮಸ್ಥಿತಿಯಲ್ಲಿದ್ದು, ಭಗವಂತನಿಗೆ ಈ ಸೃಷ್ಟಿಸಂಕಲ್ಪ ವುಂಟಾದೊಡನೆ, ಆ ಹಿಂದಿನ ಸಮಸ್ಥಿತಿಯನ್ನು ಬಿಟ್ಟು ವೈಷಮ್ಯವನ್ನು ಹೊಂದುವುವು. ಈ ಗುಣಗಳ ಹೆಚ್ಚು ಕಡಿಮೆಯಿಂದುಂಟಾಗುವ ಪ್ರಕೃತಿಯ ಬದಲಾವಣೆಯೇ ಮಹತ್ತತ್ವವೆನಿಸುವುದು. ಇದೇ ಸೃಷ್ಟಿಗಳಲ್ಲಿ ಮೊದಲ ನೆಯದು. ಆ ಮಹತ್ತತ್ವವು ಅಹಂಕಾರರೂಪಕ್ಕೆ ಮಾರ್ಪಡುವುದು. ಇದೇ ಸೃಷ್ಟಿಯಲ್ಲಿ ಎರಡನೆಯದು. ಈ ಅಹಂಕಾರದಿಂದ ಭೂಮಿ ಮೊದಲಾದ ಪಂಚಭೂತಗಳೂ, ಶಬ್ದ ಮೊದಲಾದ ಐದು ತನ್ಮಾತ್ರಗಳೂ, ಜ್ಞಾನೇಂ ದ್ರಿಯ ಕರ್ಮೇಂದ್ರಿಯಗಳೂ, ಮನಸ್ಸೂ ಹುಟ್ಟುವುವು. ಇವುಗಳಲ್ಲಿ ಪಂಚ ಭೂತಗಳ ಸೃಷ್ಟಿಯು ಭೂತಸೃಷ್ಟಿಯೆನಿಸುವುದು. ಇದೇ ಮೂರನೆಯ ಸೃಷ್ಟಿಯು. ಈ ಭೂತಸೃಷ್ಟಿಯಲ್ಲಿ ಮೊದಲು ಪಂಚತನ್ಮಾತ್ರಗಳು ಹುಟ್ಟಿ ಆ ಮೇಲೆ ಅವುಗಳಿಂದ ಪಂಚಭೂತಗಳೂ ಹುಟ್ಟಿದುದರಿಂದ, ಇದರಲ್ಲಿ ತನ್ಮಾತ್ರಸೃಷ್ಟಿಯೆಂದೂ, ದ್ರವ್ಯಸೃಷ್ಟಿಯೆಂದೂ ಎರಡು ಒಳಭೇದಗ ಳುಂಟು. ಪೃಥಿವಿ ಮೊದಲಾದ ಪಂಚಭೂತಗಳ ಸೂಕ್ಷ್ಮಾವಸ್ಥೆಯೇ ತನ್ಮಾ ತ್ರವು. ಈ ಎರಡು ತರದ ಭೂತಸೃಷ್ಟಿಯಾದ ಮೇಲೆ, ನಾಲ್ಕನೆಯದು ಇಂದ್ರಿಯ ಸೃಷ್ಟಿಯು. ಈ ಇಂದ್ರಿಯ ಸೃಷ್ಟಿಯಲ್ಲಿ ಐದು ಜ್ಞಾನೇಂದ್ರಿ ಯಗಳೂ, ಐದು ಕರ್ಮೇಂದ್ರಿಯಗಳೂ ಸೇರಿವೆ. ಐದನೆಯದು ಇಂದ್ರಿಯಾ ಭಿಮಾನಿ ದೇವತೆಗಳ ಸೃಷ್ಟಿಯು. ವೈಕಾರಿಕವೆಂದು ಕರೆಯಲ್ಪಡುವ ಯಾವ ಸಾತ್ವಿಕಾಹಂಕಾರದಿಂದ ಮನಸ್ಸೆಂಬ ತತ್ವವು ಹುಟ್ಟಿತೋ, ಆ ವೈಕಾರಿಕಾಹಂಕಾರದಿಂದಲೇ ಈ ಇಂದ್ರಿಯಾಭಿಮಾನಿದೇವತೆಗಳೂ ಹುಟ್ಟು ವರು. ಆರನೆಯದು ಅಂಡಸೃಷ್ಟಿಯು. ಇವಾರೂ ಚತುರ್ಮುಖನ ಸಾಧನೆಯಿಂದುಂಟಾದುವುವಲ್ಲ. ಅವನಿಗೆ ಅಂತರಾತ್ಮನಾಗಿರುವ ಭಗವಂತನ ಸಂಕಲ್ಪದಿಂದಲೇ ಉಂಟಾದವುಗಳು. ಇದರಿಂದ, ಮೇಲೆ ಹೇಳಿರುವ ಆರು ಬಗೆಯ ಸೃಷ್ಟಿಗಳೂ ಪ್ರಾಕೃತ ಸೃಷ್ಟಿಗಳೆನಿಸುವುವು. ಇನ್ನು ವೈಕೃತ ಸೃಷ್ಟಿಗಳನ್ನು ಹೇಳುವೆನು ಕೇಳು. ಇದರಲ್ಲಿ ಸ್ಥಾವರ, ತಿರ್ಯಕ್ಕು, ಮನುಷ್ಯ ಜಾತಿಯೆಂಬ ಮೂರು ವಿಭಾಗವುಂಟು. ವಿದುರಾ! ಮನಸ್ಸಿನಿಂದಲೂ

ಎಣಿಸಲಾಗದಷ್ಟು ನಾನಾರೂಪವಾಗಿಯೂ, ಮಹಾದ್ಭುತವಾಗಿಯೂ ಇರುವ ಈ ವಿಧವಾದ ಪ್ರಪಂಚವನ್ನು ಸೃಷ್ಟಿಸುವ ವಿಷಯದಲ್ಲಿ, ಚತುರ್ಮುಖನು ಎಷ್ಟು ಶ್ರಮಪಟ್ಟಿರಬಹುದೆಂದು ನೀನು ಆಶ್ಚರ್ಯಪಡಬಹುದು. ಅಂತಹ ಆಶ್ಚರ್ಯಕ್ಕೇನೂ ಕಾರಣವಿಲ್ಲ. ಲೋಕ ರಕ್ಷಕನಾದ ಭಗವಂತನು, ರಜೋಗುಣಪ್ರಧಾನನಾದ ಚತುರ್ಮುಖನಲ್ಲಿ ತಾನು ಅಂತರ್ಯಾಮಿಯಾಗಿದ್ದೇ, ಹೀಗೆ ವಿಚಿತ್ರವಾಗಿಯೂ, ನಾನಾರೂಪವಾಗಿಯೂ ಇರುವ ಪ್ರಪಂಚವನ್ನು ಸೃಷ್ಟಿಸುವನು. ಈ ಕಾರ್ಯವೆಲ್ಲವೂ ಅವನಿಗೆ ಕೇವಲ ಲೀಲಾಮಾತ್ರವೇ ಹೊರತು ಬೇರೆಯಲ್ಲ. ಇದರ ಸೃಷ್ಟಿಕ್ರಮವನ್ನು ಕೇಳು. ಸ್ಥಾವರ ವರ್ಗಗಳ ಸೃಷ್ಟಿಯು ಏಳನೆಯದು. ಈ ಸ್ಥಾವರ ವರ್ಗಗಳು ವನಸ್ಪತಿಗಳೆಂದೂ, ಓಷಧಿಗಳೆಂದೂ, ತ್ವಕ್ಸಾರಗಳೆಂದೂ, ವೀರುಧಗಳೆಂದೂ, ದ್ರುಮಗಳೆಂದೂ, ಆರು ವಿಧವಾಗಿ ಬೇರ್ಪಟ್ಟಿರುವುವು. ಇವುಗಳಲ್ಲಿ ಪುಷ್ಪೋತ್ಪತ್ತಿಯಿಲ್ಲದಂತೆಯೇ ಹಣ್ಣು ಬಿಡುವ ಅರಳಿ, ಹಲಸು, ಮುಂತಾದುವು ವನಸ್ಪತಿಗಳು. ಪುಷ್ಪಿಸಿ, ಫಲ ಬಿಡುವವರೆಗೂ ಬದುಕಿದ್ದು, ಫಲವು ಬಿಟ್ಟಮೇಲೆ ಸಾಯುವ ಧಾನ್ಯದ ಸಸಿಗಳು ಓಷಧಿಗಳೆನಿಸುವುವು. ಮತ್ತೊಂದು ಆಧಾರವನ್ನು ಹಿಡಿದು ಮೇಲೆ ಮೇಲೆ ಹಬ್ಬುವ ಅಥವಾ ನೆಲದ ಮೇಲೆ ಹರಡುವ ಸ್ವಭಾವವುಳ್ಳ ಮಾಲತಿ, ಮಲ್ಲಿಗೆ, ಮೊದಲಾದುವು ಲತೆಗಳೆನಿಸುವುವು. ತ್ವಕ್ಕು (ತೋಗಟೆ) ಮಾತ್ರವೇ ಸಾರವಾಗಿ ಉಳ್ಳ ಬಾಳೆ, ಬಿದಿರು, ಮುಂತಾದುವು ತ್ವಕ್ಸಾರಗಳೆನಿಸುವುವು. ಗುಬುರುಗುಬುರಾಗಿ ಹರಡುವ ಸ್ವಭಾವವುಳ್ಳ ಬಳ್ಳಿಗಳು ವೀರುಧಗಳೆನಿಸುವುವು. ಪುಷ್ಪಿಸಿದ ಮೇಲೆ ಕ್ರಮವಾಗಿ ಫಲಿಸುತ್ತ, ಹಾಗೆಯೇ ಬಹುಕಾಲದವರೆಗೆ ಜೀವಿಸತಕ್ಕ ಮಾವು ಮೊದಲಾದ ಮರಗಳು ದ್ರುಮಗಳೆನಿಸುವುವು. ಈ ಆರು ಬಗೆಯ ಸ್ಥಾವರ ವರ್ಗಗಳೂ ಒಳಗೆ ಮಾತ್ರ ಜೀವವುಳ್ಳವುಗಳಾಗಿದ್ದರೂ, ಆ ಚೈತನ್ಯವನ್ನು ಹೊರಗೆ ಕಾಣಿಸಲಾರದೆ, ಗಮನಾದಿವ್ಯಾಪಾರಗಳಿಲ್ಲದೆ, ಇದ್ದಲ್ಲಿಯೇ ಇರುವುದರಿಂದ, ಇವುಗಳಿಗೆ ಸ್ಥಾವರ ವರ್ಗಗಳೆಂದು ಹೆಸರು. ಇವುಗಳಿಗೆ ಅಂತರ್ಭಾಗದಲ್ಲಿ ಮಾತ್ರ ಶೀತೋಷ್ಣಾದಿ ಸ್ಪರ್ಶಜ್ಞಾನವುಂಟೇ ಹೊರತು, ಹೊರಗಿನ ವಿಶೇಷವೇನೂ ತಿಳಿಯಲಾರದು. ಎಂಟನೆಯದು ಪಶು ಮೊದಲಾದ ತಿರ್ಯಗ್ಜಂತುಗಳ ಸೃಷ್ಟಿ. ಈ ಸೃಷ್ಟಿಯಲ್ಲಿ ಇಪ್ಪತ್ತೆಂಟು ಒಳವಿಭಾಗಗಳುಂಟು. ಇನೆ

ಲ್ಲಕ್ಕೂ ಸಾಮಾನ್ಯಲಕ್ಷಣವೇನೆಂದು ಕೇಳುವೆಯಾ? ಈ ತಿರ್ಯಕ್ಕುಗಳಿಗೆ ಹಿಂದಿನದು, ಮುಂದಿನದು ಎಂಬ ಕಾಲಭೇದದ ತಿಳುವಳಿಕೆಗಳೇನೂ ಇರುವುದಿಲ್ಲ. ತಿನ್ನುವುದು, ನಿದ್ರಿಸುವುದು, ಭಯಪಡುವುದು, ಸಂಭೋಗಿಸುವುದು, ಈ ನಾಲ್ಕು ಕೆಲಸಗಳನ್ನು ಮಾತ್ರವೇ ಬಲ್ಲುವು. ಇದಲ್ಲದೆ ಘ್ರಾಣೇಂದ್ರಿಯದ ಬಲದಿಂದ ತಮಗೆ ಇಷ್ಟವಾದ ವಸ್ತುಗಳನ್ನು ತಿಳಿಯತಕ್ಕ ಸ್ವಭಾವವುಳ್ಳುವು. ಈ ಮೇಲೆ ಹೇಳಿದುವುಗಳೆಲ್ಲವೂ ತಿರ್ಯಗ್ಜಾತಿಗಿರತಕ್ಕ ಸಾಮಾನ್ಯಲಕ್ಷಣಗಳು. ಇವುಗಳಲ್ಲಿರುವ ಇಪ್ಪತ್ತೆಂಟು ವರ್ಗಗಳನ್ನು ಹೇಳುವೆನು ಕೇಳು. ಸೀಳಿದ ಗೊರಸಲುಳ್ಳ ಹಸು, ಆಡು, ಎಮ್ಮೆ, ಕರೀಜಿಂಕೆ, ಹಂದಿ, ಕಡವೆ, ಕರೀಚುಕ್ಕಿಗಳುಳ್ಳ ಬೆಟ್ಟದ ಜಿಂಕೆಗಳು, ಕುರಿ, ಒಂಟೆ, ಈ ಒಂಭತ್ತೂ ಒಂದು ಜಾತಿಗೆ ಸೇರುವುವು. ಒಂದೇ ಗೊರಸಲುಳ್ಳ ಕತ್ತೆ, ಕುದುರೆ, ಹೇಸರಗತ್ತೆ, ಗೌರಮೃಗ, ಶರಭ, ಚಮರೀಮೃಗ, ಇವಾರೂ ಬೇರೊಂದು ವರ್ಗಕ್ಕೆ ಸೇರುವುವು. ಐದು ನಖ (ಉಗುರು) ಗಳುಳ್ಳ ಪ್ರಾಣಿಗಳು ಬೇರೆ ಕೆಲವುಂಟು. ನಾಯಿ, ನರಿ, ಕೆನ್ನಾಯಿ (ತೋಳ), ಹುಲಿ, ಬೆಕ್ಕು, ಮೊಲ, ಮುಳ್ಳುಹಂದಿ, ಸಿಂಹ, ಕಪಿ, ಆನೆ, ಆಮೆ, ಉಡು, ಈ ಹನ್ನೆರಡೂ ಪಂಚನಖವರ್ಗಕ್ಕೆ ಸೇರುವುವು. ಅದರಿಂದಾಚೆಗೆ ಮೊಸಳೆ, ಮೀನು ಮುಂತಾದ ಜಲಜಂತುಗಳೆಲ್ಲವೂ ಪ್ರತ್ಯೇಕವಾದ ಬೇರೊಂದು ವರ್ಗಕ್ಕೆ ಸೇರುವುವು. ಹೀಗೆ ತಿರ್ಯಗ್ಜಂತುಗಳ ಸೃಷ್ಟಿಯು ಇಪ್ಪತ್ತೆಂಟು ಬಗೆಯಾಗಿರುವುವು. ರೆಕ್ಕೆಯುಳ್ಳ ಪ್ರಾಣಿಗಳು ಎಂದರೆ, ರಣಹದ್ದು, ಹದ್ದು, ಕೊಕ್ಕರೆ, ಗಿಡುಗ, ಕರಡಿ, ನವಿಲು, ಹಂಸ, ಸಾರಸ, ಚಕ್ರವಾಕ, ಕಾಗೆ, ಗೂಬೆ ಮೊದಲಾದ ಹಕ್ಕಿಗಳೆಲ್ಲವೂ ಇದರಲ್ಲಿ ಸೇರುವುವು. ಒಂಭತ್ತನೆಯದು ಮನುಷ್ಯಸೃಷ್ಟಿ! ಈ ಮನುಷ್ಯಜಾತಿಯು ಒಂದೇ ವರ್ಗವಾಗಿ ಎಣಿಸಲ್ಪಟ್ಟಿರುವುದು. ಈ ಮನುಷ್ಯರು, ತಕ್ಕಷ್ಟು ಪ್ರಯತ್ನಪರರಾಗಿಲ್ಲದ ಪಕ್ಷದಲ್ಲಿ ಪ್ರಾಯಕವಾಗಿ ಅಧೋಗತಿಗೆ ಇಳಿಯತಕ್ಕ ಸ್ವಭಾವವುಳ್ಳವರಾದುದರಿಂದಲೂ, ಇವರ ಆಹಾರ ಸಂಚಾರಗಳೆಲ್ಲವೂ ನೆಲದ ಮೇಲೆಯೇ ನಡೆಯಬೇಕಾದುದರಿಂದಲೂ ಇವರಿಗೆ "ಅರ್ವಾಕ್‌ಸ್ರೋತ" ರೆಂದು ವ್ಯವಹಾರವು. ಈ ಮನುಷ್ಯರು ಕೇವಲ ರಜೋಗುಣಪ್ರಧಾನರಾಗಿ, ಸುಖಾಪೇಕ್ಷೆಯುಳ್ಳವರಾದುದರಿಂದ ಇವರು ಕರ್ಮನಿರತರು. (ಎಂದರೆ ದುಃಖವನ್ನೇ ಸುಖವೆಂ

ಡೆಣಿಸಿ ಕೆಲಸಮಾಡುವ ಸ್ವಭಾವವುಳ್ಳವರು.) ಓ ವಿದುರಾ! ಕೊನೆಗೆ ಹೇಳಿದ ಸ್ಥಾವರತಿರ್ಯಙ್ಮನುಷ್ಯಸೃಷ್ಟಿಗಳೆಂಬಿವು ಮೂರೂ ವೈಕೃತಸೃಷ್ಟಿ ಗಳೆನಿಸುವುವು. ಹಿಂದೆ ಪ್ರಾಕೃತಸೃಷ್ಟಿಯನ್ನು ಹೇಳುವಾಗ ಪ್ರಸ್ತಾವ ವಶದಿಂದ ದೇವಸೃಷ್ಟಿಯನ್ನು ಅದರಲ್ಲಿ ಸೇರಿಸಿದ್ದರೂ, ಆ ದೇವಸೃಷ್ಟಿಯೂ ವೈಕೃತದಲ್ಲಿಯೇ ಸೇರುವುದು. ಮತ್ತು ಸನಕಾದಿಕುಮಾರರ ಸೃಷ್ಟಿಯು ದೇವಸೃಷ್ಟಿಯಲ್ಲಿ ಅಂತರ್ಗತವಾಗಿದ್ದರೂ ಅದರಲ್ಲಿ ಪ್ರಾಕೃತವೈಕೃತಗಳೆ ರಡೂ ಉಂಟು. ಹೇಗೆಂದರೆ, ಸನಕಾದಿಗಳು ಮೊದಲು ಬ್ರಹ್ಮನಿಂದ ಒಮ್ಮೆಯೇ ಸೃಷ್ಟಿಸಲ್ಪಟ್ಟು, ಅವರಿಗೆ ಪ್ರತಿಕಲ್ಪದಲ್ಲಿಯೂ ಸೃಷ್ಟಿಯಿಲ್ಲದು ದರಿಂದ ಪ್ರಾಕೃತಸೃಷ್ಟಿಯಲ್ಲಿ ಸೇರುವರು. ಆ ಮುನಿಕುಮಾರರೊಳಗೆ ಒಬ್ಬನಾದ ನೀಲಲೋಹಿತನೆಂಬವನು ಮಾತ್ರ, ಮೊದಲು ಆ ಸನಕಾದಿ ಗಳೊಡನೆ ಸೃಷ್ಟಿಸಲ್ಪಟ್ಟಿದ್ದರೂ, ಪ್ರತಿಕಲ್ಪದಲ್ಲಿಯೂ ಅವನಿಗೆ ಹೊಸ ಸೃಷ್ಟಿಯುಂಟು. ಆದುದರಿಂದ ಈ ಕುಮಾರಸೃಷ್ಟಿಯಲ್ಲಿ ಎರಡು ವಿಧವೂ ಉಂಟು. ಇನ್ನು ದೇವಸೃಷ್ಟಿಯಲ್ಲಿ ಏರ್ಪಟ್ಟಿರುವ ವಿಭಾಗಗಳನ್ನು ಹೇಳು ವೆನು ಕೇಳು. ಇದರಲ್ಲಿ ಎಂಟು ಭೇದಗಳುಂಟು. ದೇವತೆಗಳೂ, ಪಿತೃ ದೇವತೆಗಳೂ ಒಂದು ಬಗೆಯವರು. ಇವರು ದೈವಿಕಕರ್ಮಗಳಿಂದಲೇ ಆರಾಧಿಸಲ್ಪಡುವುದರಿಂದ ಮೊದಲನೆಯ ವರ್ಗಕ್ಕೆ ಸೇರಿರುವರು. ಅಸುರರು ಎರಡನೆಯ ಬಗೆಯವರು. ಗಂಧರ್ವರೂ, ಅಪ್ಸರಸ್ಸುಗಳೂ ಬೇರೊಂದು ವರ್ಗಕ್ಕೆ ಸೇರಿದವರು. ಸಿದ್ಧರು ಮತ್ತೊಂದು ವರ್ಗದವರು. ಯಕ್ಷರಾಕ್ಷಸ ರಿಬ್ಬರೂ ಇನ್ನೊಂದು ವರ್ಗದವರು. ಚಾರಣರು ಬೇರೆ ವರ್ಗದವರು. ಭೂತಪ್ರೇತಪಿಶಾಚರೆಂಬೀ ಮೂವರೂ ಒಂದು ವರ್ಗಕ್ಕೆ ಸೇರುವರು. ಹೀಗೆ ದೈವಸೃಷ್ಟಿಯು ಎಂಟು ಬಗೆಯಾಗಿರುವುದು. ವಿದುರಾ! ಈಶ್ವರನು ಚತುರ್ಮುಖನಿಗೆ ಅಂತರ್ಯಾಮಿಯಾಗಿದ್ದರೂ, ತಾನೇ ಪ್ರತ್ಯೇಕವಾಗಿಯೂ ನಡೆಸಿದ ಬಗೆಬಗೆಯ ಸೃಷ್ಟಿಗಳನ್ನು ನಿನಗೆ ತಿಳಿಸಿದೆನಷ್ಟೆ? ಈ ಸಮಸ್ತ ವಸ್ತುಗಳನ್ನೂ ತನ್ನ ಆಳ್ವಿಕೆಗೊಳಪಡಿಸಿಕೊಂಡಿರುವ ಕಾಲಸ್ವರೂಪವನ್ನೂ ನಿನಗೆ ತಿಳಿಸಿದುದಾಯಿತು. ಇನ್ನು ಮುಂದೆ, ಮನುಗಳ, ಮತ್ತು ಮನ್ವಂ ತರಗಳ ವಿಷಯವನ್ನು ಹೇಳುವೆನು ಕೇಳು. ಸರ್ವೇಶ್ವರನು ಪ್ರತಿಕಲ್ಪದ ಪ್ರಾರಂಭದಲ್ಲಿ ಚತುರ್ಮುಖನಿಗೆ ಅಂತರ್ಯಾಮಿಯಾಗಿ ಅವನನ್ನು ಶರೀರ

ವಾಗಿ ಹೊಂದಿ, ಆ ಮೂಲಕವಾಗಿ ರಜೋಗುಣವನ್ನು ಹೆಚ್ಚಿಸಿಕೊಂಡು, ಹೀಗೆ ತಾನೇ ತನ್ನಿಂದ ತನ್ನನ್ನು ಅನೇಕ ವಿಧವಾಗಿ ಸೃಷ್ಟಿಸಿಕೊಳ್ಳುವನು. ಮೇಲೆ ಹೇಳಿದ ಒಂಭತ್ತು ಬಗೆಯ ಸೃಷ್ಟಿಗಳಲ್ಲಿ ಅಂಡಗಳ ಸೃಷ್ಟಿಯೆಂಬುದು ಆಕಾಶಾದಿತತ್ವಗಳ ಸೃಷ್ಟಿಯಂತೆ ಕ್ರಮಕ್ರಮವಾಗಿ ಒಂದರಿಂದೊಂದು ಹುಟ್ಟುವುದೆಂದು ತಿಳಿಯಬೇಡ! ಈ ಅಂಡಗಳು ಎಣಿಕೆಯಿಲ್ಲದಷ್ಟಿದ್ದರೂ, ಅವೆಲ್ಲವೂ ಒಂದೇ ಕಾಲದಲ್ಲಿ ಉತ್ಪನ್ನವಾಗುವುವು. ಆಕಾಶ ಮೊದಲಾದ ತತ್ವಗಳ ಸೃಷ್ಟಿಯಲ್ಲಿ ಮಾತ್ರ ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ಹೀಗೆ ಉತ್ಪತ್ತಿಕ್ರಮವುಂಟು. ಅಂಡಸೃಷ್ಟಿಯಲ್ಲಿ ಮಾತ್ರ ಈ ಕ್ರಮವಿಲ್ಲದೆ, ಎಲ್ಲಾ ಅಂಡಗಳೂ ಏಕಕಾಲದಲ್ಲಿ ಉದ್ಭವಿಸುವುವು. ಅಷ್ಟೊಂದು ಅಂಡಗಳೂ ಏಕಕಾಲದಲ್ಲಿ ಹುಟ್ಟುವುದು ಹೇಗೆ ಸಾಧ್ಯವೆಂದು ನೀನು ಶಂಕಿಸಬಹುದು. ಇದಕ್ಕೂ ಈಶ್ವರನ ಆಶ್ಚರ್ಯಶಕ್ತಿಯೇ ಕಾರಣವು. ಪ್ರವಾಹಗಳಲ್ಲಿ ಸುಳಿ, ನೊರೆ, ಗುಳ್ಳೆ, ಮುಂತಾದುವು ಒಂದೇ ಸಮಯದಲ್ಲಿ ಅನೇಕ ವಿಧವಾಗಿ ಹುಟ್ಟಿ, ಅಲ್ಲಲ್ಲಿಯೇ ಅಡಗುವಂತೆ, ಈ ಬ್ರಹ್ಮಾಂಡಗಳ ಉತ್ಪತ್ತಿಕ್ರಮವನ್ನೂ ತಿಳಿಯಬೇಕು. ವಿದುರಾ! ಇಂದ್ರಾದಿದೇವತೆಗಳು ಒಂದೊಂದು ಕಲ್ಪದಲ್ಲಿಯೂ, ಬೇರೆಬೇರೆಯಾಗಿ ಏರ್ಪಡುವರೇ? ಅಥವಾ ಹಿಂದಿನ ಕಲ್ಪದಲ್ಲಿ ಆ ಪದವಿಯಲ್ಲಿದ್ದ ಜೀವಾತ್ಮರೇ ತಿರುಗಿ ಮುಂದಿನ ಕಲ್ಪದಲ್ಲಿಯೂ ಅದೇ ಸ್ಥಾನವನ್ನು ಹೊಂದುವರೇ? ಎಂದು ನೀನು ಶಂಕಿಸಬಹುದು. ಆ ಸಂದೇಹವನ್ನೂ ನೀಗಿಸುವೆನು ಕೇಳು. ಒಂದು ಕಲ್ಪದಲ್ಲಿ ಯಾವ ದೇವತೆಗಳಾಗಲೀ, ಅಸುರರಾಗಲೀ, ಇಂದ್ರಾದಿನಾಮದಿಂದಲೂ, ಸಾವಿರಕಣ್ಣು ಮೊದಲಾದ ಆಕಾರಗಳಿಂದಲೂ ಕೂಡಿದ್ದುದಾಗಿ ಕರೆಯಲ್ಪಡುವರೋ ಅವರೇ ಮುಂದಿನ ಕಲ್ಪದಲ್ಲಿಯೂ ಅದೇ ಅಧಿಕಾರವನ್ನು ವಹಿಸಿ, ಅದೇ ನಾಮರೂಪಗಳಿಂದ ಕೂಡಿರಬೇಕೆಂಬ ನಿಯಮವಿಲ್ಲ. ಆದರೆ ಆ ಇಂದ್ರಾದಿ ಪಟ್ಟಗಳು ಮಾತ್ರ ಪ್ರತಿಕಲ್ಪದಲ್ಲಿಯೂ ಹಿಂದಿನಂತೆಯೇ ಏರ್ಪಡುವುವು. ಈ ಅಧಿಕಾರವಾಗಲೀ, ಹೆಸರಾಗಲೀ, ಆಕಾರವಾಗಲೀ, ಮಾರ್ಪಡುವುದಿಲ್ಲ. ಆದರೆ ಹಿಂದಿನ ಕಲ್ಪದಲ್ಲಿ ಯಾವ ಜೀವಾತ್ಮನು ಯಾವ ನಾಮರೂಪಗಳಿಂದಿದ್ದನೋ, ಆ ಜೀವಾತ್ಮನೇ ಮುಂದಿನ ಕಲ್ಪದಲ್ಲಿ, ಅದೇ ನಾಮರೂಪಗಳೊಡನೆ ಹುಟ್ಟಬೇಕೆಂಬ ನಿಯಮವಿಲ್ಲ.

ಅವನ ನಾಮ, ರೂಪ, ಅಧಿಕಾರ, ಮುಂತಾದುವು, ಅವರವರ ಕರ್ಮಾಧೀನವಾಗಿ ಬೇರ್ಪಡುವುವು. ಇಲ್ಲಿಗೆ ಹತ್ತನೆಯ ಅಧ್ಯಾಯವು.

---

ಮೈತ್ರೇಯನು ವಿದುರನಿಗೆ ಕಾಲಸ್ವರೂಪವನ್ನೂ ಅದರ ಪರಿಮಾಣಭೇದಗಳನ್ನೂ ತಿಳಿಸಿದುದು.

ಓ ವಿದುರಾ! ಇನ್ನು ನಿನಗೆ ಕಾಲದ ಸ್ವರೂಪವನ್ನೂ ಅದರೊಳಗಿನ ಸ್ಥೂಲಸೂಕ್ಷ್ಮಗಳೆಂಬ ವಿಭಾಗಗಳನ್ನೂ, ಅದರ ಉತ್ಕರ್ಷಾಪಕರ್ಷಸ್ಥಿತಿಗಳನ್ನೂ ಹೇಳುವೆನು ಕೇಳು. ಆದರೆ ಈ ಕಾಲದ ಗತಿಪ್ರಮಾಣಗಳನ್ನು ತಿಳಿಸುವುದಕ್ಕೆ ಮೊದಲು, ಮತ್ತೊಂದು ವಿಷಯವನ್ನು ತಿಳಿಸಬೇಕಾಗಿರುವುದು. ಏಕೆಂದರೆ, ಸೂರ್ಯಗತಿಯಿಂದಲೇ ಕಾಲದ ಅಳತೆಯನ್ನು ನಿರ್ಣಯಿಸಬೇಕಾಗಿರುವುದು. ಈ ಸೂರ್ಯಗತಿಯ ಮೇಲೆ ಕಾಲಗತಿಯಲ್ಲಿಯೂ ಸ್ಥೂಲಸೂಕ್ಷ್ಮವಿಭಾಗಗಳು ನಿರ್ಣಯಿಸಲ್ಪಡುವುವು. ಸೂರ್ಯನು ಎಷ್ಟು ಕಾಲದಲ್ಲಿ ಒಂದು ಪರಮಾಣು ಪ್ರದೇಶವನ್ನು ದಾಟುವನೋ, ಅಷ್ಟು ಕಾಲವು ಪರಮಾಣುಕಾಲವೆಂದು ಕರೆಯಲ್ಪಡುವುದು. ಅದೇ ಸೂರ್ಯನು ಎಷ್ಟು ಕಾಲದಲ್ಲಿ ದ್ವಾದಶರಾಶಿಸ್ವರೂಪವಾದ ಈ ಲೋಕವನ್ನು ದಾಟಿ ಹೋಗುವನೋ, ಆ ಕಾಲವು ಎಂದರೆ, ಒಂದು ಸಂವತ್ಸರವು ಮಹಾಕಾಲವೆನಿಸುವುದು. ಆದುದರಿಂದ ಸೂರ್ಯಸಂಚಾರಕ್ಕೊಳಪಟ್ಟ ವಸ್ತುವಿನ ಸ್ವರೂಪದಲ್ಲಿ, ಸಣ್ಣ ದೊಡ್ಡ ವಿಭಾಗಗಳನ್ನು ಮೊದಲು ತಿಳಿದುಕೊಂಡರೆ, ಕಾಲದಲ್ಲಿ ಅದನ್ನನುಸರಿಸಿ ಬರುವ ಸಣ್ಣ ದೊಡ್ಡ ವಿಭಾಗಗಳನ್ನೂ, ಅದರ ಉತ್ಕರ್ಷಾಪಕರ್ಷಸ್ಥಿತಿಗಳನ್ನೂ ಸುಲಭವಾಗಿ ತಿಳಿಯಬಹುದು. ಆದುದರಿಂದ ಮೊದಲು ಕಾಲದಿಂದ ವಿಭಾಗಿಸಲ್ಪಡುವ ವಸ್ತುಗಳ ಸಣ್ಣ ದೊಡ್ಡ ವಿಭಾಗಗಳನ್ನು ತಿಳಿಸುವೆನು ಕೇಳು. ಲೋಕದಲ್ಲಿರುವ ಕಾರ್ಯವಸ್ತುಗಳೆಲ್ಲವೂ, ಅನೇಕ ಪರಮಾಣುಗಳ ಸಮುದಾಯದಿಂದಲೇ ಏರ್ಪಟ್ಟಿರುವುವು. ಒಂದೊಂದು ಕಾರ್ಯವಸ್ತುವನ್ನೂ ಪರಮಾಣುವಿನವರೆಗೆ ಬೇರ್ಪಡಿಸಿದ

ಬಹುದು. ಯಾವುದಕ್ಕಿಂತಲೂ ಸಣ್ಣ ವಿಭಾಗವಿಲ್ಲವೋ ಅದನ್ನೇ ಪರಮಾಣುವೆನ್ನುವರು. ಕಾಲದಲ್ಲಿಯೂ ಇದೇ ವಿಧವಾದ ಪರಮಾಣುಸ್ವರೂಪವುಂಟು. ಲೋಕದಲ್ಲಿ ಜನರು ಈ ಸೂಕ್ಷ್ಮವಿಭಾಗವನ್ನು ತಿಳಿಯಲಾರದೆ, ಆ ಕಾಲದ ಅನೇಕ ಸೂಕ್ಷ್ಮಾಂಶಗಳನ್ನು ಒಂದೇ ಕಾಲವೆಂದು ಭ್ರಮಿಸುವರು. ಒಂದೊಂದು ಕಾರ್ಯವಸ್ತುವಿಗೂ ಪರಮಾಣುರೂಪವೇ ಕೆಳಗಿನ ಎಲ್ಲೆಯಾಗಿರುವುದು. ಯಾವ ವಸ್ತುವು ಮೊದಲು ಯಾವ ಪರಮಾಣುವಿನ ಸಂಯೋಗದಿಂದ ಹುಟ್ಟಿರುವುದೋ, ಪ್ರಳಯದಲ್ಲಿ ಅದೇ ಪರಮಾಣುಸ್ಥಿತಿಗೆ ಮಾರ್ಪಡುವುದು. ಇವು ಯೋಗೀಶ್ವರರಿಗೆ ಮಾತ್ರವೇ ಕಾಣಬಹುದೇ ಹೊರತು, ಸಾಧಾರಣ ಜನಕ್ಕೆ ಕಾಣಲಾರವು. ಈ ಪರಮಾಣುಗಳ ಸಂಯೋಗದಿಂದಲೇ ಕಾರ್ಯರೂಪವನ್ನು ಹೊಂದಿ, ಬೇರೆ ವಿಕಾರವಿಲ್ಲದೆ ತನ್ನ ಸ್ವರೂಪದಿಂದಿರುವ ಪದಾರ್ಥದ ಸ್ಥಿತಿಯೇ ಪರಮ ಮಹತ್ತೆನಿಸುವುದು. ಇದೇ ಎಲ್ಲಕ್ಕಿಂತಲೂ ಉಚ್ಚಸ್ಥಿತಿಯೆನಿಸುವುದು. ಅದಕ್ಕಿಂತಲೂ ಮೇಲಾದ ಸ್ಥಿತಿಯೊಂದೂ ಇರದು. ಇದು ತನ್ನೊಳಗೆ ಸೇರತಕ್ಕ ಅವಯವಭೇದಗಳನ್ನು ಹೊರಕ್ಕೆ ಕಾಣಿಸದೆ ಒಂದೇ ಸ್ವರೂಪದಿಂದ ತೋರುವುದು. ಇದರಿಂದ ಮುಖ್ಯವಾಗಿ ತಿಳಿಯಬೇಕಾದುದೇನೆಂದರೆ, ಯಾವುದಕ್ಕಿಂತಲೂ ಸಣ್ಣ ವಿಭಾಗವಿಲ್ಲವೋ ಅದನ್ನು ಪರಮಾಣುವೆಂದೂ, ಯಾವುದಕ್ಕಿಂತಲೂ ಮೇಲಾದ ಆಕಾರವುಂಟಾಗದೋ ಅದನ್ನು ಪರಮಮಹತ್ತೆಂದೂ ತಿಳಿಯಬೇಕು. ಇದರಿಂದ ಈ ಪ್ರಪಂಚವೇ ಪರಮಮಹತ್ತೆನಿಸುವುದು. ಇದರಲ್ಲಿ ಸ್ವರ್ಗಾದಿಗಳಾದ ಹಲವು ವಿಭಾಗಗಳಿದ್ದರೂ, ಆ ಭೇದಗಳೊಂದನ್ನೂ ಗ್ರಹಿಸದೆ, ಅವೆಲ್ಲವನ್ನೂ ಸೇರಿಸಿ ಪ್ರಪಂಚವೆಂಬ ಒಂದೇ ವಸ್ತುವಾಗಿ ಗ್ರಹಿಸಿದ ಪಕ್ಷದಲ್ಲಿ, ಅದಕ್ಕಿಂತಲೂ ದೊಡ್ಡದಾದ ಮತ್ತೊಂದು ಆಕಾರವು ಕಾಣಿಸಲಾರದು. ಈ ಪ್ರಪಂಚವೆಂಬುದೂ ಪರಮಾತ್ಮನ ಕಾರ್ಯವಸ್ತುಗಳಲ್ಲಿ ಒಂದಾಗಿರುವುದು. ಇದೇ ಭುವನಕೋಶವೆಂದೂ ಕರೆಯಲ್ಪಡುವುದು. ಹೀಗೆ ವಸ್ತುಗಳಲ್ಲಿರುವ ಸ್ಥೂಲಸೂಕ್ಷ್ಮಪ್ರಮಾಣಗಳಂತೆಯೇ ಕಾಲದಲ್ಲಿಯೂ ವಿಭಾಗಗಳುಂಟು. ಭಗವಂತನ ಆಜ್ಞಾರೂಪವಾಗಿಯೂ, ಇಂದ್ರಿಯಗಳಿಗೆ ಅಗೋಚರವಾಗಿಯೂ, ಕಣ್ಣಿಗೆ ಗೋಚರಿಸುವ ವಸ್ತುಗಳ ಸ್ಥಿತಿಗತಿಗಳಿಗೆ ಕಾರಣವಾಗಿಯೂ ಇರುವ ಆ ಕಾಲದ ಅಳತೆಯೂ ಕೂಡ, ಪರಮಾಣುವಿ

ನಿಂದ ಹಿಡಿದು, ಪರಮ ಮಹತ್ತಿನ ವರೆಗಿನ ವಸ್ತುಗಳ ಸಂಬಂಧದಿಂದಲೇ ಊಹಿಸಲ್ಪಡಬೇಕಾಗಿರುವುದು. ಕಾಲದಲ್ಲಿ ಯಾವ ಭಾಗವು ಎಲ್ಲಕ್ಕಿಂತಲೂ ಸೂಕ್ಷ್ಮವಾಗಿರುವುದೋ, ಯಾವುದಕ್ಕಿಂತಲೂ ಕೆಳಗಿನ ವಿಭಾಗವಿಲ್ಲವೋ ಅದನ್ನು ಪರಮಾಣು ಕಾಲವೆಂದು ಗ್ರಹಿಸಬೇಕು. ಯಾವ ಕಾಲವು ಎಲ್ಲಕ್ಕಿಂತಲೂ ಮೇಲಾಗಿ, ತನಗೆ ಮೇಲಿಲ್ಲದಿರುವುದೋ ಅದು ಮಹಾಕಾಲವೆನಿಸುವುದು. ಅದನ್ನೇ ಸಂವತ್ಸರವೆಂದು ಹೇಳುವರು. ಆದರೆ ಸಂವತ್ಸರಕ್ಕಿಂತಲೂ ಮೇಲೆ ಯುಗವೆಂದೂ, ಮನ್ವಂತರಗಳೆಂದೂ ಕರೆಯಲ್ಪಡುವ ದೊಡ್ಡ ವಿಭಾಗಗಳಿರುವಾಗ, ಈ ಸಂವತ್ಸರವನ್ನೇ ಕಾಲದಲ್ಲಿ ಮೇಲಾದ ವಿಭಾಗವೆಂದು ಹೇಳಿದುದೇಕೆ? ಎಂದು ನೀನು ಶಂಕಿಸಬಹುದು. ಆ ಯುಗ ಮನ್ವಂತರಾದಿಗಳೆಲ್ಲವೂ, ಸಂವತ್ಸರಗಳ ಆವೃತ್ತಿಯಿಂದಲೇ ಉಂಟಾಗತಕ್ಕವುಗಳು. ಅದನ್ನು ಬೇರೆ ವಿಧದಿಂದ ನಿರ್ಣಯಿಸಲವಕಾಶವಿಲ್ಲ. ಆದುದರಿಂದ ಕಾಲಪ್ರಮಾಣದಲ್ಲಿ, ಪರಮಾಣುಕಾಲವೆಂಬುದು ಎಲ್ಲಕ್ಕಿಂತಲೂ ಸಣ್ಣದೆಂದೂ, ಸಂವತ್ಸರವೆಂಬುದು ಎಲ್ಲಕ್ಕಿಂತಲೂ ದೊಡ್ಡದಾದ ಮಹಾಕಾಲವೆಂದೂ ತಿಳಿಯಬೇಕು. ಹೀಗೆ ವಸ್ತುಗಳಲ್ಲಿಯೂ, ಅತಿ ಸೂಕ್ಷ್ಮವಾಗಿಯೂ, ಅತಿ ಸ್ಥೂಲವಾಗಿಯೂ ಇರುವ ಭೇದಗಳನ್ನು ತಿಳಿಸಿದೆನಷ್ಟೆ! ಇನ್ನು ಇವುಗಳ ನಡುವೆ ಇರುವ ಬೇರೆ ಬೇರೆ ವಸ್ತುಪ್ರಮಾಣಭೇದಗಳನ್ನೂ, ಅವುಗಳಿಂದೂಹಿಸಬೇಕಾದ ಕಾಲದ ಅಳತೆಯನ್ನೂ ತಿಳಿಸುವೆನು ಕೇಳು. ಹಿಂದೆ ಹೇಳಿದಂತೆ ಎಲ್ಲಕ್ಕಿಂತಲೂ ಸೂಕ್ಷ್ಮವಾದ ಎರಡು ಪರಮಾಣುಗಳು ಸೇರಿ ಒಂದು ಅಣುವೆನಿಸುವುದು. ಅಂತಹ ಮೂರಣುಗಳು ಒಂದಾಗಿ ಸೇರಿದಾಗ ಒಂದು ತ್ರಸರೇಣುವೆನಿಸುವುದು. ಗವಾಕ್ಷ ರಂಧ್ರಗಳಲ್ಲಿ ಸೂರ್ಯಕಿರಣಗಳು ಹೊರಟು ಬರುವಾಗ, ಅದರಲ್ಲಿ ತೂರಿ ಬರುವಂತೆ ಕಾಣುವ ಸಣ್ಣ ಸಣ್ಣ ಪರಾಗಗಳೇ ತ್ರಸರೇಣುಗಳೆನಿಸುವುವು. ಸೂರ್ಯನು ಆ ತ್ರಸರೇಣುವಿರುವಷ್ಟು ಸ್ಥಳವನ್ನು ಎಷ್ಟು ಹೊತ್ತಿನೊಳಗಾಗಿ ದಾಟಿ ಹೋಗುವನೋ, ಇಷ್ಟು ಕಾಲಕ್ಕೆ ತ್ರಸರೇಣುಕಾಲವೆಂದು ಹೆಸರು. ಇಂತಹ ಮೂರು ತ್ರಸರೇಣುಕಾಲಗಳು ಸೇರಿ ಒಂದು ತೃಟಿಯೆನಿಸುವುದು. ನೂರಾರು ತೃಟಿಗಳ ಕಾಲವು ಒಂದು ವೇಧೆಯೆನಿಸುವುದು. ಮೂರು ವೇಧೆಗಳ ಕಾಲವು ಒಂದು ಲವವೆಂದೂ, ಮೂರು ಲವಗಳು ಒಂದು ನಿಮೇಷವೆಂದೂ, ಮೂರು ನಿಮೇಷಗಳು ಒಂದು ಕ್ಷಣ

ವೆಂದೂ ಹೇಳಲ್ಪಡುವುದು. ಐದು ಕ್ಷಣಗಳು ಒಂದು ಕಾಷ್ಠೆಯೆನಿಸುವುದು. ಹದಿನೈದು ಕಾಷ್ಠೆಗಳು ಒಂದು ಲಘುವೆನಿಸುವುದು. ಅಂತಹ ಹದಿನೈದು ಲಘುಗಳು ಒಂದು ಘಳಿಗೆಯೆನಿಸುವುದು. ಎರಡು ಘಳಿಗೆಗೆ ಒಂದು ಮುಹೂರ್ತವೆಂದು ಹೆಸರು. ಆರು ಅಥವಾ ಏಳು ಘಳಿಗೆಗಳು ಒಂದು ಪ್ರಹರವೆನಿಸುವುದು. ಇದಕ್ಕೇ ಯಾಮವೆಂದೂ ಹೆಸರುಂಟು. ವಿದುರಾ! ತಿಥಿಗಳಿಗೆ ವೃದ್ಧಿಯೆಂದೂ, ಕ್ಷಯವೆಂದೂ ಎರಡು ಅವಸ್ಥೆಗಳುಂಟು. ವೃದ್ಧಿಯಲ್ಲಿ ಏಳು ಘಳಿಗೆಗಳು ಒಂದು ಯಾಮವೆನಿಸುವುದು. ಕ್ಷಯದಲ್ಲಿ ಆರು ಘಳಿಗೆಗಳು ಮಾತ್ರವೇ ಒಂದು ಯಾಮವೆನಿಸುವುದು. (ಆದರೆ ಇದರಲ್ಲಿ ಮೂರು ಸಂಧ್ಯಾಕಾಲಗಳಿಗೆ ಸೇರಿದ ಎರಡು ಮುಹೂರ್ತಗಳ ಕಾಲವನ್ನು ಬಿಟ್ಟು ಲೆಕ್ಕವಿಡಬೇಕು.) ಈ ಕಾಲಪರಿಮಾಣವನ್ನು ಕಂಡುಕೊಳ್ಳುವುದಕ್ಕೆ ಒಂದು ಯಂತ್ರಸಾಧನವುಂಟು. ಹನ್ನೆರಡೂವರೆ ಪಲದಷ್ಟು ತೂಕವುಳ್ಳ ತಾಮ್ರದಿಂದ ಒಂದು ಪಡಿ ನೀರು ಹಿಡಿಯುವಂತೆ ಒಂದು ಪಾತ್ರವನ್ನು ಎರಕಹುಯ್ದು, ಆ ಪಾತ್ರದ ಕೆಳಭಾಗದಲ್ಲಿ ಐದು ಉದ್ದಿನ ಕಾಳಿನ ತೂಕವುಳ್ಳ ಬಂಗಾರದಿಂದ, ನಾಲ್ಕುಂಗಲದ ಉದ್ದಕ್ಕೆ ಮಾಡಿದ ಒಂದು ಸೂಜಿಯಿಂದ ಒಂದು ಸಣ್ಣ ರಂಧ್ರವನ್ನು ಮಾಡಿಡಬೇಕು. ಆ ಪಾತ್ರಕ್ಕೆ ಪ್ರಸ್ಥವೆಂದು ಹೆಸರು. ಈ ಪಾತ್ರವನ್ನು ಒಂದು ನೀರು ತುಂಬಿದ ಪಾತ್ರೆಯಲ್ಲಿಟ್ಟರೆ, ಎಷ್ಟು ಹೊತ್ತಿನೊಳಗಾಗಿ ಆ ಪಾತ್ರದ ಕೆಳಗಿನ ರಂಧ್ರದ್ವಾರದಿಂದ ನೀರು ತುಂಬುತ್ತ ಬಂದು, ಆ ಪಾತ್ರವು ಮುಳುಗಿಹೋಗುವುದೋ, ಅಷ್ಟು ಕಾಲವು ಒಂದು ಘಳಿಗೆಯೆನಿಸುವುದು. ಇಂತಹ ಘಳಿಗೆಗಳು ಆರು, ಅಥವಾ ಏಳಾದರೆ, ಯಾಮ (ಜಾವ) ವೆನಿಸುವುದು. ಇಂತಹ ಎಂಟು ಯಾಮಗಳಾದರೆ ಮನುಷ್ಯರಿಗೆ ಹಗಲು ರಾತ್ರಿಗಳೊಡಗೂಡಿದ ಒಂದು ದಿನವೆನಿಸುವುದು. ಹದಿನೈದು ದಿನಗಳಿಗೆ ಒಂದು ಪಕ್ಷವು. ಆ ಪಕ್ಷಗಳು ಶುಕ್ಲವೆಂದೂ, ಕೃಷ್ಣವೆಂದೂ ಎರಡು ಬಗೆಯಾಗಿರುವುವು. ಈ ಶುಕ್ಲ ಕೃಷ್ಣಪಕ್ಷಗಳೆರಡೂ ಸೇರಿದರೆ, ಒಂದು ತಿಂಗಳೆನಿಸುವುದು. ಮನುಷ್ಯರ ಲೆಕ್ಕದಲ್ಲಿ ನಡೆಯುವ ಈ ಒಂದು ತಿಂಗಳು, ಪಿತೃದೇವತೆಗಳಿಗೆ ಒಂದು ಅಹೋರಾತ್ರ (ದಿನ) ವೆನಿಸುವುದು. ಮನುಷ್ಯರ ಲೆಕ್ಕದಲ್ಲಿ ಎರಡು ತಿಂಗಳ ಕಾಲವು ಋತುವೆನಿಸುವುದು. ಮೂರು ಋತುಗಳು ಒಂದು ಅಯನವೆನಿಸುವುದು. ಈ ಅಯನಗಳು ದಕ್ಷಿಣಾಯನ

ವೆಂದೂ, ಉತ್ತರಾಯಣವೆಂದೂ ಎರಡು ಬಗೆಯಾಗಿ, ಆರು ತಿಂಗಳು ದಕ್ಷಿಣಾಯನಕ್ಕೂ, ಮತ್ತಾರು ತಿಂಗಳು ಉತ್ತರಾಯಣಕ್ಕೂ ಸೇರುವುವು. ಈ ದಕ್ಷಿಣೋತ್ತರಾಯಣಗಳೆರಡೂ ಸೇರಿ ಮನುಷ್ಯರಿಗೆ ಒಂದು ವರುಷವೆನಿಸುವುದು. ಮನುಷ್ಯರ ಲೆಕ್ಕದಂತೆ ಈ ಒಂದು ವರುಷ ಕಾಲವು ದೇವತೆಗಳಿಗೆ ಒಂದು ಅಹೋರಾತ್ರವೆನಿಸುವುದು. ನೂರು ಸಂವತ್ಸರಗಳು ಮನುಷ್ಯರಿಗೆ ಪೂರ್ಣಾಯುಸ್ಸೆಂದು ನಿರ್ಣಯಿಸಲ್ಪಟ್ಟಿರುವುದು. ಮೇಲೆ ಹೇಳಿದ ಮನುಷ್ಯರ ಕಾಲನಿಯಮದಂತೆಯೇ ಪಿತೃದೇವತೆಗಳಿಗೂ, ಇತರ ದೇವತೆಗಳಿಗೂ ಅವರವರ ದಿನಪ್ರಮಾಣವನ್ನನುಸರಿಸಿ, ಅವರ ಲೆಕ್ಕದಲ್ಲಿ ಹದಿನೈದು ಅಹೋರಾತ್ರಗಳಿಗೆ ಒಂದು ಪಕ್ಷವೆಂದೂ, ಅಂತಹ ಎರಡು ಪಕ್ಷಗಳಿಗೆ ಮಾಸವೆಂದೂ, ಆರು ಮಾಸಗಳಿಗೆ ಒಂದು ಅಯನವೆಂದೂ, ಎರಡು ಅಯನಗಳಿಗೆ ಒಂದು ಸಂವತ್ಸರವೆಂದೂ, ಕಾಲಪ್ರಮಾಣವು ಏರ್ಪಟ್ಟಿರುವುದು. ಆ ದೇವತೆಗಳಿಗೂ ಅವರವರ ಲೆಕ್ಕದಂತೆ ನೂರು ಸಂವತ್ಸರಗಳೇ ಪೂರ್ಣಾಯುಸ್ಸೆಂದು ನಿರ್ಣಯಿಸಲ್ಪಟ್ಟಿರುವುದು. ಸರ್ವವ್ಯಾಪಿಯಾಗಿ, ನಿರಂಕುಶವಾದ ಗತಿಯುಳ್ಳ ಸೂರ್ಯದೇವನು ಕ್ಷಣಮಾತ್ರವೂ ಎವೆಮುಚ್ಚದೆ ಜಾಗರೂಕನಾಗಿ, ಬುಧ, ಚಂದ್ರರೇ ಮೊದಲಾದ ಗ್ರುಹಗಳಿಂದಲೂ, ಅಶ್ವಿನಿ ಮೊದಲಾದ ತಾರೆಗಳಿಂದಲೂ, ಇತರ ನಕ್ಷತ್ರಗಳಿಂದಲೂ, ಕೂಡಿದ ಕಾಲಚಕ್ರದ ಮಧ್ಯದಲ್ಲಿದ್ದು ಪರಮಾಣು ಮೊದಲಾಗಿ ಸಂವತ್ಸರದವರೆಗಿರುವ ಆ ಕಾಲದಿಂದ, ದ್ವಾದಶ ರಾಶಿ ಸ್ವರೂಪವಾದ ಈ ಜಗತ್ತೆಲ್ಲವನ್ನೂ ಸುತ್ತುತ್ತ ಬರುವನು. ಈ ಕಾಲಪ್ರಮಾಣವೆಂಬುದು ಸೂರ್ಯಗತಿಯನ್ನು ಹಿಡಿದು ನೋಡುವಾಗ ಸಂವತ್ಸರವೆಂದೂ, ಗುರುಗತಿಯನ್ನು ಹಿಡಿದು ನೋಡುವಾಗ ಪರಿವತ್ಸರವೆಂದೂ, ಮೂವತ್ತು ದಿನಗಳ ತಿಂಗಳ ಲೆಕ್ಕದಿಂದ ಸೂರ್ಯಗತಿಯನ್ನು ಬೇರೆ ವಿಧದಲ್ಲಿ ಎಣಿಸುವುದರಿಂದ ಇಲಾವತ್ಸರವೆಂದೂ, ಚಂದ್ರಗತಿಯಿಂದ ಇದ್ವತ್ಸರವೆಂದೂ, ನಕ್ಷತ್ರಗತಿಯಿಂದ ವತ್ಸರವೆಂದೂ ಕರೆಯಲ್ಪಡುವುದು. ಹೀಗೆ ಸೂಕ್ಷ್ಮವಾಗಿಯೂ, ಸ್ಥೂಲವಾಗಿಯೂ ಬೇರ್ಪಟ್ಟು, ಸಮಸ್ತ ವಸ್ತುಗಳನ್ನೂ ವಿಕಾರಹೊಂದಿಸತಕ್ಕ ಕಾಲಸ್ವರೂಪವೂ, ಅದರ ಗತಿಯೂ ನಿನಗೆ ತಿಳಿಯಿತಷ್ಟೇ? ಈ ವಿಧವಾದ ಕಾಲಕ್ಕೆ ಈಡಾಗದೆ ಜೀವಿಸಲಪೇಕ್ಷೆಯುಳ್ಳವರು, ಕಾಲಶರೀರಕನಾಗಿಯೂ, ಆ ಕಾಲಕ್ಕೆ ಒಳಪಡದೆ ಅದನ್ನು ನಿಯಮಿಸತಕ್ಕವ

ನಾಗಿಯೂ, ಆ ಕಾಲಗತಿಯನ್ನು ತೋರಿಸತಕ್ಕ ಸೂರ್ಯನಲ್ಲಿ ಅಂತರಾತ್ಮ ನಾಗಿಯೂ ಇರುವ ಆ ಪರಮಾತ್ಮನೊಬ್ಬನನ್ನೇ ಉಪಾಸಿಸಬೇಕು. ಪರಮ ಪುರುಷನು ಪ್ರಾಣಿಗಳಿಗೆ, ಹುಟ್ಟು, ಮುಪ್ಪು, ಸಾವು ಮುಂತಾದುವನ್ನು ನಿಯಮಿಸುತ್ತ, ಸಮಸ್ತ ವಸ್ತುಗಳ ಕರ್ಮಶಕ್ತಿಯನ್ನೂ, ಕಾಲವೆಂಬ ತನ್ನ ಶಕ್ತಿಯಿಂದಲೇ ಅನೇಕ ವಿಧವಾಗಿ ನಡೆಸುತ್ತಿರುವನು. ಮತ್ತು ಯಾಗ ಗಳಿಂದ ಸಾಧಿಸಲ್ಪಡತಕ್ಕುದಾಗಿಯೂ, ಸ್ವರ್ಗಾದಿ ಸುಖಗಳಿಗೆ ಎಡೆಯಾ ಗಿಯೂ ಇರುವ ಫಲವನ್ನು ಕೊಡುವನು. ಈ ರೀತಿಯಾಗಿ ಜೀವಾತ್ಮನಿಗೆ, ಆಗಾಗ ಕರ್ಮವಿಷಯವಾಗಿ ಉಂಟಾಗತಕ್ಕ ಮೋಹವನ್ನು ನಿವೃತ್ತಿಮಾಡು ವುದಕ್ಕಾಗಿಯೇ ಭಗವಂತನು ಸೂರ್ಯಮಂಡಲ ಮಧ್ಯವರ್ತಿಯಾಗಿ ಜೀವಿ ಗಳ ಆಯುಸ್ಸನ್ನೆಳೆಯುತ್ತ, ಆಕಾಶದಲ್ಲಿ ಸುತ್ತುತ್ತಿರುವನು. ಆದುದರಿಂದ ಓ ವಿದುರಾ! ಸೂರ್ಯಶರೀರಕನಾಗಿಯೂ, ಹಿಂದೆ ಹೇಳಿದ ಐದು ಬಗೆಯ ಸಂವತ್ಸರ ಸ್ವರೂಪನಾಗಿಯೂ ಇರುವ ಭಗವಂತನನ್ನು ನಾವೆಲ್ಲರೂ ಅನವ ರತವೂ ಉಪಾಸಿಸುತ್ತಿರಬೇಕು" ಎಂದನು. ಆಗ ವಿದುರನು ತಿರುಗಿ ಮೈತ್ರೇ ಯನನ್ನು ಕುರಿತು, "ಎಲೈ ಋಷಿಶ್ರೇಷ್ಠನೇ! ಪಿತೃಗಳು, ದೇವತೆಗಳು, ಮನುಷ್ಯರು, ಮುಂತಾದ ಬೇರೆ ಬೇರೆ ವರ್ಗದವರಿಗೆ, ಅವರವರ ದಿನಸಂಖ್ಯೆ ಯನ್ನನುಸರಿಸಿ, ನೂರು ಸಂವತ್ಸರಗಳು ಪೂರ್ಣಾಯುಸ್ಸೆಂದು ಹೇಳಿದೆ ಯಷ್ಟೇ? ಈ ಮೂರು ಲೋಕಗಳನ್ನು ಬಿಟ್ಟು ಹೊರಗಿರುವ ಜ್ಞಾನಿಗಳ ಆಯುಃಪರಿಮಾಣವೆಷ್ಟು? ಎಲೈ ಮಹಾತ್ಮನೇ! ನೀನು ಕಾಲಗತಿಯನ್ನು ಚೆನ್ನಾಗಿ ತಿಳಿದವನು. ನಿಮ್ಮಂತಹ ಜ್ಞಾನಿಗಳು, ತಮಗೆ ಯೋಗಬಲದಿಂದ ಸಿದ್ಧಿಸಿದ ಜ್ಞಾನದೃಷ್ಟಿಯಿಂದ ಸಮಸ್ತ ಲೋಕದ ಸ್ಥಿತಿಗತಿಗಳನ್ನೂ ಕೈ ಕನ್ನಡಿಯಂತೆ ಚೆನ್ನಾಗಿ ತಿಳಿಯಬಲ್ಲವರು. ನಿಮ್ಮಂತಹ ಯೋಗೀಶ್ವರರ ಜ್ಞಾನಕ್ಕೆ ತಿಳಿಯದುದೊಂದೂ ಇರದು. ಆದುದರಿಂದ ನನ್ನ ಸಂದೇಹ ವನ್ನು ನಿವೃತ್ತಿಗೊಳಿಸಬೇಕು" ಎಂದನು. ಅದಕ್ಕಾ ಮೈತ್ರೇಯನು, "ಓ ವಿದುರಾ! ಕೇಳು! ಮೊದಲು ಯುಗಭೇದವನ್ನೂ, ಅವುಗಳ ಪರಿಮಾಣ ವನ್ನೂ ತಿಳಿಸಿ, ಅದರ ಮೇಲೆ ಈ ತ್ರೈಲೋಕಕ್ಕಿಂತಲೂ ಹೊರಗಿರುವ ಚತುರ್ಮುಖಾದಿಗಳ ಆಯುಃಪರಿಮಾಣವನ್ನು ತಿಳಿಸುವೆನು. ಕೃತ, ತ್ರೇತಾ, ದ್ವಾಪರ, ಕಲಿಗಳೆಂದು ಯುಗಗಳು ನಾಲ್ಕು ವಿಧವಾಗಿರುವುವು. ಇವುಗಳಲ್ಲಿ

ಕೃತಯುಗಕ್ಕೆ ದೇವತೆಗಳ ಲೆಕ್ಕದಿಂದ ಹದಿನಾರುಸಾವಿರದ ಎಂಟುನೂರು ವರುಷಗಳಾಗುವುವು. ತ್ರೇತಾಯುಗಕ್ಕೆ ಅದೇ ಲೆಕ್ಕದಿಂದ ಹದಿನೈದುಸಾವಿರದ ಆರುನೂರು ವರುಷಗಳೂ, ದ್ವಾಪರಯುಗಕ್ಕೆ ಹದಿನಾಲ್ಕುಸಾವಿರದ ನಾನ್ನೂರು ವರುಷಗಳೂ, ಕಲಿಯುಗಕ್ಕೆ ಹದಿಮೂರುಸಾವಿರದ ಇನ್ನೂರು ವರುಷಗಳೂ ಹಿಡಿಯುವುವು. ಒಂದೊಂದು ಯುಗದಲ್ಲಿಯೂ, ಸಂಧ್ಯೆಯೆಂದೂ, ಯುಗವೆಂದೂ, ಸಂಧ್ಯಾಂಶವೆಂದೂ ಮೂರು ವಿಭಾಗಗಳುಂಟು. ಸಂಧ್ಯೆಯೆಂಬುದು ಯುಗದ ಮೊದಲನೆಯ ಭಾಗವು. ಸಂಧ್ಯಾಂಶವೆಂಬುದು ಯುಗದ ಅಂತ್ಯಭಾಗವು. ಒಂದೊಂದು ಯುಗಕ್ಕೂ ಮೇಲೆ ಹೇಳಿದ ವರುಷಗಳ ಲೆಕ್ಕದಲ್ಲಿ, ಸಾವಿರದ ಸಂಖ್ಯೆಯನ್ನು ಬಿಟ್ಟು, ಉಳಿದ ನೂರರ ಸಂಖ್ಯೆಯಲ್ಲಿ ಅರ್ಧ ಭಾಗವು, ಆಯಾ ಯುಗಗಳ ಮೊದಲನೆಯ ಭಾಗವಾದ ಯುಗಸಂಖ್ಯೆಗೂ, ಉಳಿದ ಅರ್ಧ ಭಾಗವು ಆದರ ಕೊನೆಯ ಭಾಗವಾದ ಸಂಧ್ಯಾಂಶಕ್ಕೂ ಸೇರುವುದು. (ಎಂದರೆ ಕೃತಯುಗದಲ್ಲಿರುವ ಹದಿನಾರುಸಾವಿರದ ಎಂಟುನೂರು ವರುಷಗಳಲ್ಲಿ, ಹದಿನಾರುಸಾವಿರವನ್ನು ಬಿಟ್ಟು, ಎಂಟುನೂರು ವರುಷಗಳನ್ನು ಎರಡಾಗಿ ವಿಭಾಗಿಸಿಕೊಂಡರೆ, ನಾಲ್ನೂರುವರುಷಗಳು ಕೃತಯುಗಸಂಧ್ಯೆಯೆಂದೂ, ಉಳಿದ ನಾಲ್ನೂರು ವರುಷಗಳು ಕೃತಯುಗಸಂಧ್ಯಾಂಶವೆಂದೂ ಎಣಿಸಲ್ಪಡುವುದು.) ಇದರಂತೆಯೇ ಬೇರೆ ಮೂರು ಯುಗಗಳಿಗೂ ಕಾಲವಿಭಾಗವುಂಟು. ಈ ಯುಗಸಂಧ್ಯೆಗೂ, ಯುಗಸಂಧ್ಯಾಂಶಕ್ಕೂ ನಡುವೆ ಇರುವ ಕಾಲವೇ ಯುಗವೆಂದು ಯುಗಲಕ್ಷಣವನ್ನು ತಿಳಿದ ಹಿರಿಯರು ನಿರ್ಣಯಿಸಿರುವರು. ಅಂತಹ ಯುಗಭಾಗದಲ್ಲಿಯೇ ನಿತ್ಯವೆಂದೂ, ನೈಮಿತ್ತಿಕವೆಂದೂ ಕರೆಯಲ್ಪಡುವ ಮೂರು ಬಗೆಯ ಧರ್ಮಗಳನ್ನೂ ನಡೆಸಬೇಕೆಂಬ ವಿಧಿಯುಂಟು. ವಿದುರಾ! ಇನ್ನು ಯುಗಧರ್ಮವನ್ನು ಹೇಳುವೆನು ಕೇಳು. ಕೃತಯುಗದಲ್ಲಿ ಧರ್ಮವೆಂಬುದು ತನ್ನ ನಾಲ್ಕು ಪಾದಗಳಿಂದ ನಿಂತು ಮನುಷ್ಯರನ್ನನುವರ್ತಿಸುತ್ತಿರುವುದು. ಉಳಿದ ಮೂರು ಯುಗಗಳಲ್ಲಿ, ಅಧರ್ಮವು ತನ್ನ ಒಂದೊಂದು ಪಾದವನ್ನು ಚಾಚುತ್ತ ಬರುವುದರಿಂದ, ಧರ್ಮಕ್ಕೆ ಅವಕಾಶವು ಸಾಲದೆ, ಅದು ತನ್ನ ಒಂದೊಂದು ಪಾದವನ್ನು ಹಿಂದಕ್ಕೆಳೆದು ಕ್ಷೀಣಿಸುತ್ತ ಬರುವುದು. (ಎಂದರೆ ಕೃತಯುಗದಲ್ಲಿ ಧರ್ಮವು ತನ್ನ ನಾಲ್ಕು ಪಾದಗಳಿಂದ ನಿರಾತಂಕವಾಗಿ ವರ್ತಿಸುತ್ತಿ

ದ್ವಾಗ, ತ್ರೇತಾಯುಗದಲ್ಲಿ ಅಧರ್ಮವೆಂಬುದು ಲೋಕದಲ್ಲಿ ತಲೆಯಿಕ್ಕಿ, ತನ್ನ ಒಂದು ಕಾಲನ್ನು ಚಾಚಿ, ನಡೆಯಲಾರಂಭಿಸಿದುದನ್ನು ನೋಡಿ, ಧರ್ಮವು ತನ್ನ ಒಂದು ಕಾಲನ್ನುಡುಗಿಸಿಕೊಳ್ಳುವುದು. ಹೀಗೆಯೇ ನಡೆಯುತ್ತ ಬರುವುದರಿಂದ, ಕಲಿಯುಗದಲ್ಲಿ ಧರ್ಮವು ಒಂದೇ ಕಾಲಿನಿಂದ ನಿಲ್ಲುವುದು. ಅಧರ್ಮವು ತನ್ನ ಮೂರು ಪಾದಗಳಿಂದ ವರ್ತಿಸುವುದು.) ವಿದುರಾ! ಇನ್ನು ತ್ರೈಲೋಕ್ಯಕ್ಕಿಂತಲೂ ಹೊರಗಿರುವವರ ಆಯುಃಪರಿಮಾಣ ಮುಂತಾದುವುಗಳನ್ನು ತಿಳಿಸುವೆನು ಕೇಳು. ಈ ಮೂರು ಲೋಕದಿಂದ ಹೊರಗೆ ಬ್ರಹ್ಮದೇವನವರೆಗಿರುವವರೆಲ್ಲರಿಗೂ, ಮೇಲೆ ಹೇಳಿದ ಒಂದು ಸಾವಿರ ಯುಗಗಳು ಒಂದು ಹಗಲೆನಿಸುವುದು. ಅಷ್ಟೇ ಯುಗಗಳು ಒಂದು ರಾತ್ರಿಯೆನಿಸುವುದು. ಆ ರಾತ್ರಿಯಲ್ಲಿ ಸೃಷ್ಟಿಕರ್ತನಾದ ಬ್ರಹ್ಮನು ಯಾವ ಕಾರ್ಯವನ್ನೂ ನಡೆಸದೆ ಮಲಗಿರುವನು. ಹಗಲಾದ ಮೇಲೆ ಎಚ್ಚರಗೊಂಡು ತನ್ನ ಸೃಷ್ಟಿಕಾರ್ಯವನ್ನಾರಂಭಿಸುವನು. ಆದುದರಿಂದ ಎಂಟುಸಾವಿರ ಚತುರ್ಯುಗಗಳು ಬ್ರಹ್ಮನಿಗೆ ಒಂದು ದಿನವೆನಿಸುವುದು. ಆ ಬ್ರಹ್ಮನು ತನ್ನ ಒಂದು ಹಗಲಿನಲ್ಲಿ ನಡೆಸುವ ಸೃಷ್ಟಿಕಾರ್ಯದಲ್ಲಿಯೇ, ಹದಿನಾಲ್ಕು ಮನುಗಳ ಅಧಿಕಾರಕ್ಕೊಳಪಟ್ಟ ಆಯಾ ಮನ್ವಂತರಗಳ ಕಾಲಪ್ರಮಾಣವೆಲ್ಲವೂ ಸೇರಿಹೋಗುವುದು. (ಎಂದರೆ ಆ ಬ್ರಹ್ಮನ ಒಂದು ಹಗಲಿನಲ್ಲಿಯೇ ಹದಿನಾಲ್ಕು ಮನ್ವಂತರಗಳೂ ನಡೆದುಹೋಗುವುವು.) ಒಬ್ಬೊಬ್ಬ ಮನುವೂ ತನಗೆ ನಿರ್ಣಯಿಸಲ್ಪಟ್ಟಂತೆ ಸ್ವಲ್ಪ ಹೆಚ್ಚಾಗಿ ಎಪ್ಪತ್ತೊಂದು ಯುಗಕಾಲದವರೆಗೆ ಈ ತ್ರೈಲೋಕ್ಯಾಧಿಪತ್ಯವನ್ನು ನಡೆಸುತ್ತ ಬರುವನು. ಒಬ್ಬ ಮನುವಿನ ಆಳ್ವಿಕೆಯಿಂದಾರಂಭಿಸಿ, ಮತ್ತೊಬ್ಬ ಮನುವಿನ ಆಳ್ವಿಕೆಯು ಆರಂಭಿಸುವವರೆಗೆ ನಡೆಯುವ ಈ ಮಧ್ಯಕಾಲಕ್ಕೆ ಆಯಾ ಮನ್ವಂತರವೆಂದು ಹೆಸರು. ಈ ಮನ್ವಂತರಗಳಲ್ಲಿ ಆಯಾ ಮನುಗಳೂ, ಮತ್ತು ಆ ಮನುವಂಶದಲ್ಲಿ ಕ್ರಮವಾಗಿ ಹುಟ್ಟುವ ರಾಜರೂ, ದೇವತೆಗಳೂ, ಮಹರ್ಷಿಗಳೂ, ಇವರೆಲ್ಲರೂ ಭಗವದಂಶದಿಂದಲೇ ಹುಟ್ಟಿ ರಾಜ್ಯವನ್ನು ಪಾಲಿಸುವರು. ಈ ವಿಧವಾದ ಸೃಷ್ಟಿಯು ಚತುರ್ಮುಖನ ಒಂದೊಂದು ಹಗಲಿನಲ್ಲಿಯೂ ನಡೆಯುತ್ತಿರುವುದರಿಂದಲೇ ಇದಕ್ಕೆ ದೈನಂದಿನ ಸೃಷ್ಟಿಯೆಂದು ಹೆಸರು. ಅದರಲ್ಲಿ ತ್ರೈಲೋಕ್ಯವೂ ಅಡಗಿರುವುದು. ಈ ದೈನಂದಿನ ಸೃಷ್ಟಿಯಲ್ಲಿಯೇ

ಜೀವಾತ್ಮರು ತಮ್ಮ ತಮ್ಮ ಕರ್ಮಾನುಸಾರವಾಗಿ ತಿರ್ಯಕ್ಕುಗಳಾಗಿಯೂ, ಪಿತೃದೇವತೆಗಳಾಗಿಯೂ, ದೇವತೆಗಳಾಗಿಯೂ ಜನಿಸಿ, ಆ ಕರ್ಮಫಲವು ಮುಗಿದ ಮೇಲೆ ನಾಶಹೊಂದುವರು. ಈ ಮನ್ವಂತರಗಳಲ್ಲಿಯೇ ಭಗವಂತನು ಮನು ಮೊದಲಾದ ಅನೇಕ ರೂಪಗಳಿಂದವರಿಸಿ ಅದ್ಭುತ ಕಾರ್ಯಗಳನ್ನು ನಡೆಸುತ್ತ ಲೋಕವನ್ನೇ ಪರಿಪಾಲಿಸುತ್ತಿರುವನು. ಆ ಬ್ರಹ್ಮನ ಒಂದೊಂದು ಹಗಲಿನಲ್ಲಿಯೇ ಇಷ್ಟು ಕಾರ್ಯಗಳೂ ನಡೆದುಹೋಗುವುವು. ಹೀಗೆ ಬ್ರಹ್ಮನು ಹಗಲೆಲ್ಲವೂ ಈ ಸೃಷ್ಟಿಕಾರ್ಯದಲ್ಲಿ ನಿರತನಾಗಿದ್ದು, ರಾತ್ರಿಯಲ್ಲಿ ತಮೋಗುಣದ ಹೆಚ್ಚಿಗೆಯಿಂದ ನಿಶ್ಚೇಷ್ಟನಾಗಿ ನಿದ್ರಿಸುವನು. ಬ್ರಹ್ಮನು ಹೀಗೆ ನಿದ್ರಿಸುವುದಕ್ಕೆ ತೊಡಗಿದೊಡನೆಯೇ ಸೂರ್ಯಚಂದ್ರಾದಿಗಳೊಡಗೂಡಿದ ತ್ರೈಲೋಕ್ಯವೂ ನಶಿಸುವುದು. ಅಂಧಕಾರವೊಂದೇ ಸುತ್ತಲೂ ಮರೆಸಿಕೊಳ್ಳುವುದು, ಇದೇ ಪ್ರಳಯವು. ಪ್ರಳಯವೆಂಬ ಈ ಕಲ್ಪಾಂತದಲ್ಲಿ ಎಂದರೆ ಬ್ರಹ್ಮನಿಗೆ ಸಂಜೆಯಾದೊಡನೆ, ಭಗವಂತನ ಶಕ್ತಿರೂಪವಾಗಿಯೂ, ಸಂಕರ್ಷಣನ ಮುಖದಿಂದ ಹೊರಟುದಾಗಿಯೂ ಇರುವ ಒಂದು ದೊಡ್ಡ ಬೆಂಕಿಯುರಿಯಿಂದ, ಮೂರು ಲೋಕವೂ ದಗ್ಧವಾಗುತ್ತ ಬರುವುವು. ಆಗ ಆ ಬೆಂಕಿಯುರಿಯ ತಾಪವನ್ನು ಸಹಿಸಲಾರದೆ, ಮಹರ್ಲೋಕ ನಿವಾಸಿಗಳಾದ ಭೃಗು ಮೊದಲಾದ ಋಷಿಗಳು, ಆ ಸ್ಥಳವನ್ನು ಬಿಟ್ಟು ಜನಲೋಕಕ್ಕೆ ಹೋಗಿ ಸೇರುವರು. ಈ ಕಲ್ಪಾವಸಾನ ಕಾಲದಲ್ಲಿಯೇ ಪ್ರಳಯಮಾರುತವೆಂದು ಕರೆಯಲ್ಪಡುವ ಒಂದು ದೊಡ್ಡ ಬಿರುಗಾಳಿಯೂ ಏಳುವುದು. ಆ ಗಾಳಿಯ ಬಡಿತದಿಂದ ಸಮುದ್ರಗಳೆಲ್ಲವೂ ಎಲ್ಲೆಯನ್ನು ಮೀರಿ ಅಲ್ಲೋಲಕಲ್ಲೋಲವಾಗಿ ಉಕ್ಕಿ ಬಂದು, ಪ್ರಪಂಚವೆಲ್ಲವನ್ನೂ ಮುಳುಗಿಸಿ ಏಕಾರ್ಣವವಾಗಿ ಮಾಡುವುವು. ಹೀಗೆ ಆ ಸಮುದ್ರ ಜಲದಿಂದ ಸಮಸ್ತ ಲೋಕವೂ ಮುಳುಗಿದ ಮೇಲೆ, ಮೊದಲು ತಲೆದೋರಿದ್ದ ಸಂಕರ್ಷಣ ಮುಖಾಗ್ನಿಯ ವೇಗವೂ ಅಡಗಿಹೋಗುವುದು. ಆಗ ಆ ಪ್ರಳಯ ಸಮುದ್ರ ಮಧ್ಯದಲ್ಲಿ ಭಗವಂತನೊಬ್ಬನೇ ಆದಿಶೇಷಶರೀರವೆಂಬ ಹಾಸಿಗೆಯಲ್ಲಿ ಮಲಗಿ, ತನ್ನನ್ನೇ ತಾನು ಅನುಭವಿಸುವುದರಿಂದುಂಟಾದ ಆನಂದದಿಂದ, ಯೋಗ ನಿದ್ರೆಯಲ್ಲಿ ಕಣ್ಣುಗಳನ್ನು ಮುಚ್ಚಿ ಮಲಗಿರುವನು. ಜನಲೋಕದಲ್ಲಿರುವ ಭೃಗು ಮೊದಲಾದ ಮಹರ್ಷಿಗಳೆಲ್ಲರೂ ಆಗಲೂ ಭಗವಂತನನ್ನು ಅನೇಕ

ವಿಧದಿಂದ ಸ್ತೋತ್ರಮಾಡುತ್ತಿರುವರು. ವಿದುರಾ! ಪರಮಾಣುಕಾಲದಿಂದ ಹಿಡಿದು ಸಂವತ್ಸರದವರೆಗಿನ ಈ ಕಾಲವಿಭಾಗದಿಂದ ಏರ್ಪಟ್ಟಿರುವ ಅಹೋರಾತ್ರಗಳನ್ನನುಸರಿಸಿ ಬ್ರಹ್ಮನಿಗೆ ಇತರ ಪ್ರಾಣಿಗಳಿಗಿಂತಲೂ ಆಯುಸ್ಸು ಹೆಚ್ಚೆಂಬುದು ಏರ್ಪಟ್ಟಿತಷ್ಟೇ? ಆ ಬ್ರಹ್ಮನ ಆಯುಸ್ಸೂ ಕೂಡ ಕ್ರಮ ಕ್ರಮವಾಗಿ ಕ್ಷೀಣಿಸುತ್ತಲೇ ಹೋಗುವುದು. ಆದುದರಿಂದ ಬ್ರಹ್ಮನ ಸ್ಥಿತಿಯೂ ಕೂಡ ನಮ್ಮ ಸ್ಥಿತಿಯಂತೆಯೇ ಹೊರತು ನಿತ್ಯವಾದುದಲ್ಲ. ಈ ಬ್ರಹ್ಮನ ಆಯುಷ್ಕಾಲದಲ್ಲಿ ಅರ್ಧ ಭಾಗಕ್ಕೆ ಒಂದು ಪರಾರ್ಧವೆಂದು ಹೆಸರು. ಈಗಾಗಲೇ ಪ್ರಕೃತ ಸೃಷ್ಟಿಕರ್ತನಾದ ಬ್ರಹ್ಮನ ಆಯುಸ್ಸಿನಲ್ಲಿ ಅರ್ಧ ಭಾಗವು, ಎಂದರೆ, ಪೂರ್ವಪರಾರ್ಧವು ಕಳೆದುಹೋಯಿತು. ಎರಡನೆಯದು ನಡೆಯುತ್ತಿರುವುದು. ಈ ಕಳೆದುಹೋದ ಪೂರ್ವಪರಾರ್ಧದಲ್ಲಿ, ವೇದಮಯನಾದ (ಶಬ್ದಬ್ರಹ್ಮನೆಂದು ಕರೆಯಲ್ಪಡುವ) ಬ್ರಹ್ಮನು ಉದ್ಭವಿಸಿದ ಕಾಲಕ್ಕೆ ಬ್ರಹ್ಮಕಲ್ಪವೆಂದು ವ್ಯವಹಾರವು. ಸಮುದ್ರ ಮಧ್ಯದಲ್ಲಿ ಶೇಷಶಾಯಿಯಾಗಿ ಮಲಗಿದ್ದ ಅನಿರುದ್ಧನ ನಾಭಿಕಮಲವು ಹುಟ್ಟಿದ ಕಾಲಕ್ಕೆ ಪದ್ಮಕಲ್ಪವೆಂದು ಹೆಸರು. ಆದುದರಿಂದ ಪೂರ್ವಪರಾರ್ಧದಲ್ಲಿ ಬ್ರಹ್ಮಕಲ್ಪವೆಂದೂ ಪದ್ಮಕಲ್ಪವೆಂದೂ ಹೇಳಲ್ಪಡುವ ಎರಡು ಭಾಗಗಳೂ ಈಗಾಗಲೇ ಗತಿಸಿ ಹೋದುವು. ಈಗ ನಡೆಯುತ್ತಿರುವ ದ್ವಿತೀಯ ಪರಾರ್ಧದ ಆದಿಭಾಗದಲ್ಲಿಯೇ ವಿಷ್ಣುವು ವರಾಹಾವತಾರವನ್ನು ಧರಿಸಿದನು. ಇದಕ್ಕಾಗಿ ಈಗ ನಡೆಯುತ್ತಿರುವ ಕಾಲವನ್ನು ವರಾಹಕಲ್ಪವೆನ್ನುವರು. ಓ ವಿದುರಾ! ಕಾಲಸ್ವರೂಪನಾಗಿಯೂ, ವಿಶ್ವಾತ್ಮಕನಾಗಿಯೂ ಇರುವ ಆ ಪರಮಾತ್ಮನೊಬ್ಬನ ವಿಷಯದಲ್ಲಿ ಮಾತ್ರ, ಪರಮಾಣು ಮೊದಲಾಗಿ ಪರಾರ್ಧದ ಕೊನೆಯವರೆಗೆ ನಡೆಯತಕ್ಕ ಕಾಲವೆಂಬುದು ಸ್ವಲ್ಪ ಮಾತ್ರವೂ ತನ್ನ ಶಕ್ತಿಯನ್ನು ತೋರಿಸಲಾರದೆ, ಆ ಈಶ್ವರನಿಗೇ ಅಧೀನವಾಗಿರುವುದು. ಚತುರ್ಮುಖನವರೆಗಿರುವವರೆಲ್ಲರೂ ಈ ಕಾಲಕ್ಕೆ ವಶರಾಗಿರುವರು. ಆ ಚತುರ್ಮುಖನ ಪೂರ್ಣವಾದ ಆಯುಃ ಪ್ರಮಾಣವೆನಿಸಿಕೊಂಡ ಎರಡು ದ್ವಿಪರಾರ್ಧ ಕಾಲಗಳೂ ಕೂಡ, ಆ ಭಗವಂತನಿಗೆ ನಿಮಿಷಪ್ರಾಯವಾಗಿರುವುದು. ಭಗವಂತನು ಆದಿಮಧ್ಯಾಂತಗಳೊಂದೂ ಇಲ್ಲದವನು. ಮತ್ತು ನಾಮರೂಪ ವಿಕಾರಗಳಿಲ್ಲದವನು. ಆದುದರಿಂದ ಕಾಲವೆಂಬುದು ಅವನ ವಿಷಯದಲ್ಲಿ ಯಾವ ವ್ಯತ್ಯಾಸವನ್ನೂ ಉಂಟು

ಮಾಡಲಾರವು. ಭಗವಂತನು ತನಗೆ ಶರೀರಗಳಾದ ಪ್ರಕೃತಿಪುರುಷರನ್ನು ಪ್ರಪಂಚರೂಪಕ್ಕೆ ಮಾರ್ಪಡಿಸಿ, ತಾನೂ ಅದರೊಳಗೆ ಪ್ರವೇಶಿಸಿ, ಅನೇಕ ನಾಮರೂಪಗಳಿಂದ ಕಾಣಿಸಿಕೊಂಡರೂ, ಆ ಪ್ರಪಂಚದ ವ್ಯಾಪಾರ ವಿಕಾರಗಳನ್ನು ನಿರ್ವಹಿಸುವುದಕ್ಕಾಗಿಯೇ ಹಾಗಿರುವನೇ ಹೊರತು ಬೇರೆಯಲ್ಲ. ಸಾಕ್ಷಾತ್ತಾಗಿ ಅವನು ಈ ವಿಕಾರಗಳನ್ನು ಹೊಂದತಕ್ಕವನಲ್ಲ. ಆದರೆ ಹಿರಣ್ಯಗರ್ಭನೇ ಮೊದಲಾದ ಜೀವಾತ್ಮರಿಗೂ ಸಹಜವಾಗಿ ನಾಮರೂಪಗಳಿಲ್ಲದಿರುವಾಗ, ಅವರಿಗೆ ಮಾತ್ರ ಈ ಕಾಲದಿಂದುಂಟಾಗುವ ವ್ಯತ್ಯಾಸವೆಲ್ಲಿಯದು?" ಎಂದು ನೀನು ಕೇಳಬಹುದು. ಅವರ ವಿಷಯವೇ ಬೇರೆ! ಆ ಪರಮಾತ್ಮನನ್ನು ಬಿಟ್ಟು ಉಳಿದ ಜೀವಗಳೆಲ್ಲವೂ, ಅನಾದಿಯಾದ ಕರ್ಮಸಂಬಂಧದಿಂದಲೇ ನಾಮರೂಪಗಳನ್ನು ಹೊಂದುವುವು. ಆದುದರಿಂದ ಕಾಲವು ಅವರನ್ನು ಬಂಧಿಸಬಲ್ಲುದು. ಈಶ್ವರನಾದರೋ ತನ್ನ ಸಂಕಲ್ಪದಿಂದಲೇ ಪ್ರಪಂಚವನ್ನು ಸೃಷ್ಟಿಸಿ, ಅದನ್ನು ಆಯಾ ವ್ಯಾಪಾರಗಳಲ್ಲಿ ನಿಯಮಿಸುವುದಕ್ಕಾಗಿ ತಾನೂ ಒಳಹೊಕ್ಕಿರುವನು. ಅವನು ಇದನ್ನು ತನ್ನ ಲೀಲಾರ್ಥವಾಗಿ ಹೀಗೆ ನಡೆಸುವನೇ ಹೊರತು, ಕರ್ಮಕ್ಕೆ ಕಟ್ಟುಬಿದ್ದುದರಿಂದಲ್ಲ. ಆದುದರಿಂದ ಪರಮಾಣು ಮೊದಲಾಗಿ ಪರಾರ್ಧದವರೆಗೆ ವಿಭಾಗಹೊಂದಿರುವ ಕಾಲವೂ ಕೂಡ ಈಶ್ವರನ ವಿಷಯದಲ್ಲಿ ಏನನ್ನೂ ಮಾಡಲಾರದು. ಬ್ರಹ್ಮರುದ್ರಾದಿ ದೇವತೆಗಳೆಲ್ಲರನ್ನೂ ಇದು ವಶಪಡಿಸಿಕೊಂಡಿರುವುದು. ಕಾಲದೇಶ ದ್ರವ್ಯಗಳೆಂಬ ಮೂರು ಬಗೆಯ ಪರಿಮಾಣಕ್ಕೂ ಒಳಪಡದೆ, ತನಗೆ ತಾನೇ ಪ್ರಭುವಾದ ಆ ಭಗವಂತನನ್ನು ಕಾಲವೆಂಬುದು ಅಣುಮಾತ್ರವೂ ಕಟ್ಟಿಡಲಾರದು. ವಿದುರಾ! ಆ ಪರಮಾತ್ಮನ ವೈಭವವನ್ನು ಸ್ವಲ್ಪವಾಗಿ ಸಂಗ್ರಹಿಸಿ ತಿಳಿಸುವೆನು ಕೇಳು. ಈ ಬ್ರಹ್ಮಾಂಡವೆಂಬುದು ಶಬ್ದವೇ ಮೊದಲಾದ ಐದು ವಿಷಯಗಳು, ವಾಕ್ಕು ಮೊದಲಾದ ಐದು ವ್ಯಾಪಾರಗಳು, ಪ್ರಾಣವೇ ಮೊದಲಾದ ಐದು ವಾಯುಗಳು, ಮನಸ್ಸು, ಹೀಗೆ ಹದಿನಾರು ಬಗೆಯ ವಿಕಾರಗಳಿಂದ ಕೂಡಿ, ಒಂದಕ್ಕೊಂದು ಮೇಲೆ ಮೇಲೆ ಹತ್ತರಷ್ಟು ಹೆಚ್ಚು ಪ್ರಮಾಣವುಳ್ಳ ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಅಹಂಕಾರ, ಮಹತ್, ಪ್ರಕೃತಿಯೆಂಬ ಈ ಏಳು ಆವರಣಗಳಿಂದ ಆವರಿಸಲ್ಪಟ್ಟು, ಐವತ್ತುಕೋಟಿ ಯೋಜನ ವಿಸ್ತೀರ್ಣವಾಗಿರುವುದು. ಇಷ್ಟು

ವಿಶಾಲವಾದ ಬ್ರಹ್ಮಾಂಡವೂ, ಇನ್ನೂ ಅದರಂತೆಯೇ ಇರುವ ಎಷ್ಟೋ ಅಂಡರಾಶಿಗಳೂ, ಮೂಲಪ್ರಕೃತಿಯಲ್ಲಿ ಒಂದು ಪರಮಾಣುಪ್ರಾಯವಾಗಿ, ಕಾಣುತ್ತಿರುವುವು. ಜಗತ್ತಿಗೆ ಕಾರಣಗಳೆನಿಸಿದ ಮಹತ್ತು ಮೊದಲಾದ ಸಮಸ್ತ ಕಾರಣವಸ್ತುಗಳಿಗೂ ಕಾರಣವಾಗಿ, ಎಂದೆಂದಿಗೂ ನಾಶವಿಲ್ಲದೆ ಶಾಶ್ವತವೆನಿಸಿಕೊಂಡ ಈ ಪ್ರಕೃತಿಯೇ ಪರಾತ್ಪರನಾದ ಆ ಭಗವಂತನಿಗೆ ಶರೀರವೆಂದು ಶ್ರುತಿಗಳು ನಿರೂಪಿಸುತ್ತಿರುವುವು. ಹೀಗೆ ಮನಸ್ಸಿನಿಂದ ಯೋಚಿಸುವುದಕ್ಕೂ ಸಾಧ್ಯವಲ್ಲದ ಮಹಾಮಹಿಮೆಯುಳ್ಳ ಪರಮಾತ್ಮನ ವಿಷಯದಲ್ಲಿ ಕಾಲವು ಏನನ್ನು ತಾನೇ ಮಾಡಬಲ್ಲುದು? ಕಾಲವೆಂಬುದು ಆ ಈಶ್ವರನ ಆಜ್ಞೆಗೊಳಪಟ್ಟುದೇ ಹೊರತು, ಅವನು ಅದಕ್ಕೆ ಕಟ್ಟುಬಿದ್ದವನಲ್ಲ. ಮತ್ತು ಕಾಲವೆಂಬುದನ್ನು ಆ ಪರಮಾತ್ಮ ಸ್ವರೂಪವೆಂದೇ ತಿಳಿ!" ಎಂದನು. ಇಲ್ಲಿಗೆ ಹನ್ನೊಂದನೆಯ ಅಧ್ಯಾಯವು.

---

ಚತುರ್ಮುಖಬ್ರಹ್ಮನಿಂದ ನಡೆದ ಪ್ರಪಂಚಸೃಷ್ಟಿ ಕ್ರಮವು. ಮೊದಲು ಚತುರ್ಮುಖನು ಪ್ರಜಾವೃದ್ಧಿಗಾಗಿ ಶತರೂಪೆ ಮತ್ತು ಮನುವೆಂಬ ಸ್ತ್ರೀಪುರುಷರನ್ನು ಸೃಷ್ಟಿಸಿದುದು.

ವಿದುರಾ! ಪರಮಾತ್ಮನು ಕಾಲಸ್ವರೂಪದಿಂದ ಹೀಗೆ ತನ್ನ ಶಕ್ತಿಯನ್ನು ತೋರಿಸುತ್ತಿರುವನಲ್ಲವೇ? ಇನ್ನು ಬ್ರಹ್ಮನಿಂದ ನಡೆಯುವ ಪ್ರಪಂಚ ಸೃಷ್ಟಿ ಕ್ರಮವನ್ನು ವಿವರಿಸುವೆನು ಕೇಳು. ಆದಿಕರ್ತನಾದ ಬ್ರಹ್ಮದೇವನು ಮೊಟ್ಟಮೊದಲು, ಅಂಧತಾಮಿಸ್ರವೆಂದೂ, ಮಹಾಮೋಹವೆಂದೂ, ಮೋಹವೆಂದೂ, ತಮಸ್ಸೆಂದೂ ಕರೆಯಲ್ಪಡುವ ಐದು ಬಗೆಯ ಸ್ವಭಾವಗಳನ್ನು ಸೃಷ್ಟಿಸಿದನು. ಇವೆಲ್ಲವೂ ಅಜ್ಞಾನದ ಕಾರ್ಯಗಳು. ಇವುಗಳಲ್ಲಿ ಜೀವನಿಗೆ ತನ್ನ ಸ್ವರೂಪವೇ ತಿಳಿಯದಂತೆ ಮರೆಸುವುದೇ ತಮಸ್ಸು. ದೇಹಾದಿಗಳಲ್ಲಿ "ನಾನು, ನನ್ನದು" ಎಂಬ ಭ್ರಾಂತಿಯೇ ಮೋಹವು. ವಿಷಯಸುಖಗಳಲ್ಲಿ ಆಸೆಯನ್ನು ಹುಟ್ಟಿಸುವುದು ಮಹಾಮೋಹವು. ಆ ವಿಷಯಸುಖಕ್ಕೆ

ಏನಾದರೂ ತಡೆಯುಂಟಾದಾಗ ಹುಟ್ಟುವ ಕೋಪವೇ ತಾಮಿಸ್ರವೆನಿಸುವುದು. ಅಂತಹ ಸುಖಕ್ಕೇನಾದರೂ ಭಂಗವುಂಟಾದಾಗ ತನಗೇನೋ ನಷ್ಟವುಂಟಾದಂತೆ ಭ್ರಾಂತಿಪಡುವುದು ಅಂಧತಾಮಿಸ್ರವೆನಿಸುವುದು. ಬ್ರಹ್ಮನು, ಅಜ್ಞಾನ ಹೇತುಗಳಾದ ಅವಿದ್ಯಾಪಂಚಕವನ್ನೇ ಮೊದಲು ಸೃಷ್ಟಿಸಿದನು. ಹೀಗೆ ಸೃಷ್ಟಿಸಿದ ಮೇಲೆ ಚತುರ್ಮುಖನಿಗೆ, ಅಂತಹ ಪಾಪಸೃಷ್ಟಿಯನ್ನು ತಾನು ಮಾಡಿದುದಕ್ಕಾಗಿ ಮನಸ್ಸಿನಲ್ಲಿ ಪಶ್ಚಾತ್ತಾಪವು ಹುಟ್ಟಿತು. ಈ ಪಶ್ಚಾತ್ತಾಪದಿಂದ ಮನಸ್ಸಿನಲ್ಲಿ ಬಹಳವಾಗಿ ಕೊರಗುತ್ತ, ತಿರುಗಿ ಭಗವಂತನನ್ನು ಧ್ಯಾನಿಸುತ್ತಿದ್ದನು. ಈ ಭಗವದ್ಧ್ಯಾನದಿಂದ ಮನಸ್ಸು ಪವಿತ್ರವಾದಮೇಲೆ, ಜಿತೇಂದ್ರಿಯರಾಗಿಯೂ, ಪರಮಪವಿತ್ರರಾಗಿಯೂ ಇರುವ ಸನಕ, ಸನಂದನ, ಸನಾತನ, ಸನತ್ಸುಜಾತರೆಂಬ ನಾಲ್ವರು ಮುನಿಕುಮಾರರನ್ನು ಸೃಷ್ಟಿಸಿದನು. ತನ್ನಿಂದ ಸೃಷ್ಟಿಸಲ್ಪಟ್ಟ ಈ ಕುಮಾರರನ್ನು ನೋಡಿ ಬ್ರಹ್ಮನು "ಎಲೈ ಮಕ್ಕಳಿರಾ! ಇನ್ನುಮೇಲೆ ನೀವು ನಿಮ್ಮ ನಿಮ್ಮ ಅಂಶದಿಂದ ಪ್ರಜೆಗಳನ್ನು ಸೃಷ್ಟಿಸಿ, ಪ್ರಪಂಚವನ್ನು ವೃದ್ಧಿಗೊಳಿಸಬೇಕು!" ಎಂದು ನಿಯಮಿಸಿದನು. ನಿಷ್ಕಾಮರಾಗಿಯೂ ಕೇವಲ ಭಗದ್ಭಕ್ತಿಪರಾಯಣರಾಗಿಯೂ ಇರುವ ಆ ಕುಮಾರರು, ಕೇವಲ ಮೋಕ್ಷವೊಂದರಲ್ಲಿಯೇ ಆಸೆಯುಳ್ಳವರಾಗಿದ್ದುದರಿಂದ, ಬ್ರಹ್ಮನ ಮಾತಿಗೆ ಕೋಪಗೊಂಡು, ಅವನನ್ನು ಹಾಸ್ಯಮಾಡುತ್ತ "ತಾತಾ! ಬಹಳ ಚೆನ್ನಾಯಿತು! ಕೇವಲ ನಿಷ್ಕಾಮರಾದ ನಮಗೆ ಈ ಪಾಪಕಾರ್ಯವನ್ನು ನಿಯಮಿಸುವೆಯಾ?" ಎಂದು ಹೇಳಿ ಅವನ ಆಜ್ಞೆಯನ್ನು ನಿರಾಕರಿಸಿಬಿಟ್ಟರು. ಆಗ ಚತುರ್ಮುಖನಿಗೆ ತನ್ನ ಮಕ್ಕಳೇ ತನ್ನನ್ನು ಅವಮಾನ ಪಡಿಸಿ ನಿರಾಕರಿಸಿದುದಕ್ಕಾಗಿ ಸಹಿಸಲಾರದ ಕೋಪವುಂಟಾಯಿತು. ದುಸ್ಸಹವಾದ ಆ ಕೋಪವನ್ನು ಹೊರಕ್ಕೆ ಬಿಡದೆ ತನ್ನಲ್ಲಿಯೇ ಅಡಗಿಸಿಕೊಳ್ಳುವುದಕ್ಕೆ ಯತ್ನಿಸಿದನು. ಚತುರ್ಮುಖನು ಆ ಕೋಪೋದ್ರೇಕವನ್ನು ಪ್ರಯತ್ನಪೂರ್ವಕವಾಗಿ ತಡೆದಿಟ್ಟುಕೊಳ್ಳುತ್ತಿದ್ದರೂ, ಅದು ಒಳಗೆ ನಿಲ್ಲಲಾರದೆ, ಅವನ ಹುಬ್ಬುಗಳ ನಡುವೆ, ಕಪ್ಪುಬಿಳುಪು ಬಣ್ಣದಿಂದ ಕೂಡಿದ ಒಂದು ಕುಮಾರಾಕೃತಿಯಾಗಿ ಹೊರಕ್ಕೆ ಹೊರಟಿತು. ವಿದುರಾ! ಇವನೇ ರುದ್ರದೇವನೆಂದು ತಿಳಿ! ಹೀಗೆ ಕುಮಾರಾಕೃತಿಯಿಂದ ಹುಟ್ಟಿದ ಆ ವ್ಯಕ್ತಿಯು, ತನಗೆ, ಹೆಸರು, ವಾಸಸ್ಥಳ, ಸಂಗಡಿಗರೊಬ್ಬರೂ

ಇಲ್ಲದುದಕ್ಕಾಗಿ, ಬ್ರಹ್ಮನ ಮುಂದೆ ಅಳುವುದಕ್ಕೆ ತೊಡಗಲು, ಬ್ರಹ್ಮನು ಆ ಕುಮಾರನ ದುಃಖಕಾರಣವನ್ನು ತನ್ನ ಜ್ಞಾನದೃಷ್ಟಿಯಿಂದ ತಿಳಿದು, ಸಮಾಧಾನಪಡಿಸುವನು. "ಕುಮಾರಾ! ದುಃಖಿಸಬೇಡ! ನೀನು ಹುಟ್ಟಿದಾಗಲೇ ಹೀಗೆ ಭಯಪಟ್ಟು ಬಾಲಕನಂತೆ ರೋದಿಸುವುದಕ್ಕೆ ತೊಡಗಿದೆ! ಆದುದರಿಂದ, ನಿನಗೆ ರುದ್ರನೆಂಬ ಹೆಸರೇ ಲೋಕದಲ್ಲಿ ಪ್ರಸಿದ್ಧವಾಗಲಿ! ಚಂದ್ರ, ಸೂರ್ಯ, ವಹ್ನಿ (ಅಗ್ನಿ), ವಾಯು, ಜಲ, ಆಕಾಶ, ಭೂಮಿ, ಪ್ರಾಣ, ತಪಸ್ಸು, ಹೃದಯ, ಇಂದ್ರಿಯಗಳೆಂಬ ಈ ಹನ್ನೊಂದು ಸ್ಥಾನಗಳೂ ನಿನಗೆ ವಾಸಯೋಗ್ಯಗಳಾಗಲಿ! ಈ ಸ್ಥಾನಗಳಲ್ಲಿ ನೀನು ನೆಲೆಗೊಂಡು, ಮನ್ಯು, ಮನು, ಮಹಾಕಾಲ, ಮಹಾನ್, ಶಿವ, ಋತಧ್ವಜ, ಉರುರೇತಸ್ಸು, ಭವ, ಕಾಲ, ವಾಮದೇವ, ಧೃತವ್ರತರೆಂಬ ಈ ಹನ್ನೊಂದು ನಾಮಗಳಿಂದ ಪ್ರಸಿದ್ಧನಾಗು! ನಿನಗೆ, ಧೀ, ವೃತ್ತಿ ಅಶನೆ, ಉಮೆ ನಿಯುತ್ತು, ಸರ್ಪಿ, ಇಲೆ, ಅಂಬಿಕೆ, ಇರಾವತಿ, ಸುಧೆ, ದಕ್ಷೆ, ಎಂದು ಹನ್ನೊಂದು ಮಂದಿ ಪತ್ನಿಯರನ್ನು ಕೊಡುವೆನು. ವತ್ಸಾ! ನೀನು ಮೇಲೆ ಹೇಳಿದಂತೆ, ಹನ್ನೊಂದು ಸ್ಥಳಗಳಲ್ಲಿ, ಹನ್ನೊಂದು ನಾಮಗಳಿಂದ, ಹನ್ನೊಂದು ಮಂದಿ ಪತ್ನಿಯರೊಡಗೂಡಿ ವಿಹರಿಸುತ್ತ ಪ್ರಜೆಗಳನ್ನು ಹೆಚ್ಚಿಸುತ್ತಿರು! ಇದರಿಂದ ನೀನು ಪ್ರಜಾಧಿಪತಿಯೆಂದು ಕರೆಯಲ್ಪಡುವೆ!" ಎಂದನು. ಈ ಬ್ರಹ್ಮಾಜ್ಞೆಯಂತೆ ನೀಲಲೋಹಿತನು, ಪ್ರಜಾವೃದ್ಧಿ ಕಾರ್ಯದಲ್ಲಿ ನಿರತನಾಗಿ, ಬಲದಲ್ಲಿಯೂ, ಸ್ವಭಾವದಲ್ಲಿಯೂ, ಆಕಾರದಲ್ಲಿಯೂ, ತನ್ನನ್ನೇ ಹೋಲತಕ್ಕ ಪ್ರಜೆಗಳನ್ನು ಸೃಷ್ಟಿಸುತ್ತ ಬಂದನು! ಈ ಪ್ರಜೆಗಳೆಲ್ಲರೂ ಅವನಂತೆಯೇ ಕೇವಲ ರೌದ್ರಸ್ವಭಾವವುಳ್ಳವರಾಗಿ, ಮೇಲೆ ಮೇಲೆ ಸಂಖ್ಯೆಯಲ್ಲಿ ಹೆಚ್ಚುತ್ತ ಬಂದರು. ಇದರಿಂದ ಅವರೆಲ್ಲರೂ ರುದ್ರಗಣಗಳೆಂದು ಕರೆಯಲ್ಪಡುತ್ತಿದ್ದರು. ಪ್ರಪಂಚದಲ್ಲಿ ಎಲ್ಲಿ ನೋಡಿದರೂ ಈ ರುದ್ರಗಣಗಳೇ ಗುಂಪುಗುಂಪಾಗಿ ಲೆಕ್ಕವಿಲ್ಲದಷ್ಟು ತುಂಬಿಹೋದುವು. ಇವು ತಮ್ಮ ರೌದ್ರಸ್ವಭಾವದಿಂದ ಲೋಕವೆಲ್ಲವನ್ನೂ ನುಂಗುವುದಕ್ಕೆ ತೊಡಗಿದುವು. ಈ ಲೋಕೋಪದ್ರವವನ್ನು ಕಂಡು ಬ್ರಹ್ಮನು ಚಿಂತಾಕುಲನಾಗಿ, ಆ ನೀಲಲೋಹಿತನೆಂಬ ಕುಮಾರನನ್ನು ನೋಡಿ, "ಓ ಕುಮಾರಾ! ಇನ್ನು ನೀನು ಪ್ರಜಾವೃದ್ಧಿ ಕಾರ್ಯವನ್ನು ನಿಲ್ಲಿಸು! ನಿನ್ನಿಂದ ಸೃಷ್ಟಿಸಲ್ಪಟ್ಟ ಪ್ರಜೆಗಳ

ಲ್ಲರೂ ಕೇವಲ ರೌದ್ರಸ್ವಭಾವವುಳ್ಳವರಾಗಿ, ತಮ್ಮ ನೋಟದಿಂದಲೇ ಸಮಸ್ತ ದಿಕ್ಕುಗಳನ್ನು ದಹಿಸುತ್ತಿರುವರು ಇವರ ಶೌರ್ಯದಿಂದ ಸಮಸ್ತ ಲೋಕದೊಡನೆ ನಾನೂ ನಾಶಹೊಂದುವ ಸ್ಥಿತಿಯಲ್ಲಿರುವೆನು. ಇವರಿಂದ ಲೋಕಕ್ಕೂ ನಷ್ಟವೇ ಹೊರತು, ನನ್ನ ಕೋರಿಕೆಯು ನೆರವೇರುವ ಹಾಗಿಲ್ಲ. ಆದುದರಿಂದ ಇನ್ನುಮೇಲೆ ನೀನು ಪ್ರಜಾವೃದ್ಧಿ ಕಾರ್ಯವನ್ನು ನಿಲ್ಲಿಸಿ, ಈ ಲೋಕಕ್ಕೂ, ನಿನಗೂ ಕ್ಷೇಮವುಂಟಾಗುವಂತೆ ತಪಸ್ಸನ್ನು ಮಾಡುತ್ತಿರು! ನಿನಗೆ ಮಂಗಳವಾಗಲಿ! ಕುಮಾರಾ! ನೀನು ಆ ವಿಧವಾದ ತಪಸ್ಸನ್ನು ನಡೆಸುತ್ತ ಬಂದ ಪಕ್ಷದಲ್ಲಿ, ಆ ತಪೋಮಹಿಮೆಯಿಂದ ಈ ಪ್ರಪಂಚವನ್ನು ಪೂರ್ವದಂತೆಯೇ ಸೃಷ್ಟಿಸಬಹುದು. ಪರಮಾತ್ಮನನ್ನು ಪಡೆಯುವುದಕ್ಕೂ ಆ ತಪಸ್ಸೇ ಮುಖ್ಯಮಾರ್ಗವು. ಆ ಪರಮಪುರುಷನು ಪ್ರಾಕೃತವಾದ ಚರ್ಮೇಂದ್ರಿಯಗಳಿಗೆ ಗೋಚರಿಸತಕ್ಕವನಲ್ಲ. ಆ ಪರಮಾತ್ಮನೊಬ್ಬನೇ ಸಮಸ್ತ ಕಲ್ಯಾಣಗುಣಾಕರನಾಗಿ, ಸರ್ವಾಂತರ್ಯಾಮಿಯಾಗಿ ವರ್ತಿಸತಕ್ಕವನು. ತಪಸ್ಸಿನಿಂದಲ್ಲದೆ ಅವನನ್ನು ಸಾಕ್ಷಾತ್ಕರಿಸುವುದಕ್ಕೆ ಬೇರೆ ದಾರಿಯಿಲ್ಲ. ಆ ಪರಮಪುರುಷನು ಹೃದಯವೆಂಬ ಅಂತರ್ದೃಷ್ಟಿಗೆ ಮಾತ್ರ ಗೋಚರಿಸತಕ್ಕವನೇ ಹೊರತು, ಚರ್ಮಮಯವಾದ ಬಾಹ್ಯದೃಷ್ಟಿಗೆ ಕಾಣಿಸಲಾರನು. ಆದುದರಿಂದ ನೀನು ತಪೋನಿರತನಾಗಿದ್ದು, ಆ ಪರಮಾತ್ಮನನ್ನಾರಾಧಿಸಿ, ಅವನ ಕೃಪೆಗೆ ಪಾತ್ರನಾಗು!" ಎಂದನು. ಇದನ್ನು ಕೇಳಿ ನೀಲಲೋಹಿತನು, ತಂದೆಯಾದ ಚತುರ್ಮುಖನೊಡನೆ, 'ಜನಕಾ! ಆಜ್ಞೆಯಂತೆಯೇ ನಡೆಯುವೆನು' ಎಂದು ಹೇಳಿ, ಅವನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಅವನ ಅನುಮತಿಯನ್ನು ಪಡೆದು, ತಪೋವನಕ್ಕೆ ಹೊರಟು ಹೋದನು. ಆ ಮೇಲೆ ಇತ್ತಲಾಗಿ ಬ್ರಹ್ಮನು, ಮುಂದೆ ನಡೆಸಬೇಕಾದ ಸೃಷ್ಟಿಕಾರ್ಯವನ್ನು ಕುರಿತು ಆಲೋಚಿಸುತ್ತಿರಲು, ಭಗವಂತನ ಪ್ರೇರಣೆಯಿಂದ, ಒಡನೆಯೇ ಆ ಚತುರ್ಮುಖನ ಅವಯವಗಳಲ್ಲಿ, ಮುಂದೆ ಪ್ರಜಾವೃದ್ಧಿಗೆ ಕಾರಣರಾಗಿಯೂ, ಬುದ್ಧಿವಂತರಾಗಿಯೂ, ಅವನಿಗೆ ಸಮಾನಗುಣವುಳ್ಳವರಾಗಿಯೂ ಇರುವ ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು, ಭೃಗು, ವಸಿಷ್ಠ, ದಕ್ಷ, ನಾರದರೆಂಬ ಹತ್ತು ಮಂದಿ ಕುಮಾರರು ಜನಿಸಿದರು. ಇವರಲ್ಲಿ ಬ್ರಹ್ಮನ ತೊಡೆ (ಸೋಗೆ) ಯಿಂದ ನಾರದನೂ, ಆತನ ಹೆಬ್ಬೆರಳಿನಿಂದ

ದಕ್ಷನೂ, ಹೊಕ್ಕುಳಿನಿಂದ ಪುಲಹನೂ, ಕಿವಿಯಿಂದ ಪುಲಸ್ತ್ಯನೂ, ಚರ್ಮದಿಂದ ಭೃಗುವೂ, ಹಸ್ತದಿಂದ ಕ್ರತುವೂ, ಮುಖದಿಂದ ಅಂಗಿರಸ್ಸೂ, ಪ್ರಾಣಗಳಿಂದ ವಸಿಷ್ಠನೂ, ಹೃದಯದಿಂದ ಮರೀಚಿಯೂ, ಕಣ್ಣುಗಳಿಂದ ಅತ್ರಿಮುನಿಯೂ ಜನಿಸಿದರು. ಮತ್ತು ಆ ಪದ್ಮಗರ್ಭನ ಬಲಭಾಗದ ಸ್ತನದಿಂದ ಧರ್ಮವೆಂಬುದು ಹುಟ್ಟಿತು. ಈ ಧರ್ಮವೆಂಬುದಕ್ಕೆ ಶ್ರೀಮನ್ನಾರಾಯಣನೇ ಅಧಿದೇವತೆಯಾಗಿ ಅದರಲ್ಲಿ ಸಾಕ್ಷಾತ್ತಾಗಿ ನೆಲೆಗೊಂಡನು. ವಿದುರಾ! ಆದುದರಿಂದ ಈ ಧರ್ಮವು ಎಲ್ಲಿ ನಡೆಯುವುದೋ, ಅಲ್ಲಿ ಸಾಕ್ಷಾತ್ ನಾರಾಯಣನ ಸಾನ್ನಿಧ್ಯವೆಂದು ತಿಳಿ! ಆ ಚತುರ್ಮುಖನ ಬೆನ್ನಿನಿಂದ ಅಧರ್ಮವು ಜನಿಸಿತು. ಇದಕ್ಕೆ ಲೋಕಭಯಂಕರನಾದ ಮೃತ್ಯುವೇ ಅಧಿದೇವತೆಯಾಗಿ ಅದರಲ್ಲಿ ನಿತ್ಯಸಾನ್ನಿಧ್ಯವನ್ನು ಮಾಡುತ್ತಿರುವನು. ಅದರಿಂದಾಚೆಗೆ ಆ ಚತುರ್ಮುಖನ ಹೃದಯದಿಂದ ಕಾಮವೂ, ಹುಬ್ಬುಗಳ ನಡುವೆ ಕ್ರೋಧವೂ, ಅವನ ಕೆಳತುಟಿಯಿಂದ ಲೋಭವೂ, ಬಾಯಿಂದ ವಾಗ್ದೇವತೆಯಾದ ಸರಸ್ವತಿಯೂ, ಆ ಬ್ರಹ್ಮನ ಗುಹ್ಯಸ್ಥಾನದಿಂದ ಸಮುದ್ರಗಳೂ, ಪಾಯುವೆಂಬ ಇಂದ್ರಿಯಸ್ಥಾನದಿಂದ ಪಾಪಾಧಿದೇವತೆಯಾದ ನಿಋತಿಯೂ, ಅವನ ನೆರಳಿನಿಂದ ಕರ್ದಮನೂ ಜನಿಸಿದರು. ಈ ಕರ್ದಮನೆಂಬವನೇ ಸ್ವಾಯಂಭುವಮನುವಿನ ಮಗಳಾದ ದೇವಹೂತಿಗೆ ಪತಿಯಾದನು. ಹೀಗೆ ಬ್ರಹ್ಮನ ದೇಹದಿಂದ ಕೆಲವರೂ, ಮನಸ್ಸಿನಿಂದ ಕೆಲವರೂ ಜನಿಸಿದರು. ವಿದುರಾ! ಚತುರ್ಮುಖನ ಬಾಯಿಂದ ಸರಸ್ವತಿಯು ಹುಟ್ಟಿದುದಾಗಿ ಹೇಳಿದೆನಷ್ಟೆ? ಆ ಸರಸ್ವತಿಯ ವಿಷಯವಾಗಿ ಒಂದು ಸಣ್ಣ ವೃತ್ತಾಂತವನ್ನು ತಿಳಿಸುವೆನು ಕೇಳು! ಮೇಲೆ ಹೇಳಿದಂತೆ ಚತುರ್ಮುಖನು ತನ್ನ ಅಂಗಾಂಗಗಳಿಂದ ಅನೇಕ ವ್ಯಕ್ತಿಗಳನ್ನು ಸೃಷ್ಟಿಸಿದ ಮೇಲೆ, ಅವರೊಬ್ಬೊಬ್ಬರನ್ನೂ ನೋಡುತ್ತ ಬಂದಾಗ, ಅವರಲ್ಲಿ ಸ್ತ್ರೀರೂಪದಿಂದಿದ್ದ ಸರಸ್ವತಿಯ ದೇಹ ಸೌಂದರ್ಯವು, ನೋಡುವವರ ಮನಸ್ಸನ್ನು ಮೋಹಗೊಳಿಸುವಂತಿತ್ತು. ಅವಳ ರೂಪವನ್ನು ನೋಡಿದೊಡನೆ ಚತುರ್ಮುಖನು, ತನ್ನ ಕುಮಾರಿಯಾದ ಆಕೆಯಲ್ಲಿಯೇ ಮೋಹಪರವಶನಾಗಿ, ಯುಕ್ತಾಯುಕ್ತಗಳನ್ನೂ ಯೋಚಿಸದೆ, ಅವಳನ್ನು ಕೈಹಿಡಿಯಬೇಕೆಂದು ಪ್ರಯತ್ನಿಸಿದುದಾಗಿ ಕೇಳಿರುವೆವು. ಹೀಗೆ ಕಾಮಾತುರನಾದ ಬ್ರಹ್ಮನು, ಸ್ವಲ್ಪವಾದರೂ ಕಾಮವಿಕಾರ

ವಿಲ್ಲದ ತನ್ನ ಮಗಳಲ್ಲಿ ಅತಿಕ್ರಮಪ್ರವೇಶಮಾಡುತ್ತಿರುವುದನ್ನು ನೋಡಿ, ಅಲ್ಲಿದ್ದ ಮರೀಚಿ ಮೊದಲಾದ ಕುಮಾರರೆಲ್ಲರೂ, ವಿನಯಪೂರ್ವಕವಾಗಿ ತಂದೆಯನ್ನು ನೋಡಿ, "ಜನಕಾ! ಇದೇನು? ಮಹಾತ್ಮನಾದ ನೀನೇ ಹೀಗೆ ಅಕ್ರಮದಲ್ಲಿ ಪ್ರವರ್ತಿಸುವುದುಂಟೇ? ಈ ವಿಧವಾದ ಪಾಪಕಾರ್ಯವನ್ನು ಹಿಂದೆ ನಡೆಸಿದವರೂ ಅಲ್ಲ! ಮುಂದೆ ನಡೆಸತಕ್ಕವರೂ ಇರಲಾರರು! ಸಮಸ್ತ ಲೋಕಕ್ಕೂ ನ್ಯಾಯವನ್ನು ವಿಧಿಸತಕ್ಕ ನೀನೇ ಹೀಗೆ, ನಿನ್ನ ಕಾಮವನ್ನು ನಿಗ್ರಹಿಸಲಾರದೆ, ಮಗಳಲ್ಲಿ ಮೋಹಗೊಳ್ಳುವೆಯಾ! ಲೋಕದಲ್ಲಿ ಇದಕ್ಕಿಂತಲೂ ಇನ್ನು ಹೀನಕೃತ್ಯವೇನುಂಟು? ತೇಜಸ್ವಿಗಳಾದವರು, ಅದರಲ್ಲಿಯೂ ಮುಖ್ಯವಾಗಿ ನಿನ್ನಂತವರು, ತಮ್ಮ ನಡತೆಯನ್ನು ಕಾಪಾಡಿಕೊಳ್ಳುವ ವಿಷಯದಲ್ಲಿ ಬಹಳ ಎಚ್ಚರಿಕೆಯಿಂದಿರಬೇಕು. ಹಾಗಿಲ್ಲದ ಪಕ್ಷದಲ್ಲಿ ನಿನ್ನಿಂದ ಮುಂದೆ ಸೃಷ್ಟಿಸಲ್ಪಡುವ ಪ್ರಜೆಗಳೆಲ್ಲರೂ, ತಾವು ದಾರಿತಪ್ಪಿ ನಡೆಯುವುದಕ್ಕೆ ಲೋಕಪಿತಾಮಹನಾದ ನಿನ್ನನ್ನೇ ನಿದರ್ಶನವಾಗಿಟ್ಟುಕೊಂಡು, ಅದನ್ನೇ ತಮಗೆ ಶ್ರೇಯಸ್ಕರವೆಂದು ನಂಬಿ, ದುರ್ನೀತಿಗಳಲ್ಲಿ ಧೈರ್ಯದಿಂದ ಪ್ರವರ್ತಿಸುವರು. ಆದುದರಿಂದ ಜನಕಾ! ನೀನು ಈ ದುಷ್ಕಾರ್ಯವನ್ನು ಬಿಟ್ಟುಬಿಡು!" ಎಂದು ಅನೇಕ ವಿಧದಿಂದ ಪ್ರಾರ್ಥಿಸುತ್ತಿದ್ದು, ಕೊನೆಗೆ ತಮ್ಮ ಜನಕನಾದ ಚತುರ್ಮುಖನನ್ನು ಆ ಅಧರ್ಮದಿಂದ ತಪ್ಪಿಸಬೇಕಾದರೆ, ಅವನಿಗೂ ಜನಕನಾದ ಭಗವಂತನನ್ನೇ ಪ್ರಾರ್ಥಿಸಬೇಕೆಂದು ನಿಶ್ಚಯಿಸಿ, ಆ ಪರಮಪುರುಷನನ್ನು ಸ್ತುತಿಸುವರು. "ಓ ದೇವಾ! ಮೊದಲು ನಾಮರೂಪ ವಿಭಾಗಗಳೊಂದೂ ಇಲ್ಲದೆ, ನಿನ್ನಲ್ಲಿ ಸೂಕ್ಷ್ಮದಶೆಯಿಂದಿದ್ದ ಚೇತನಾಚೇತನಾತ್ಮಕವಾದ ಜಗತ್ತನ್ನು, ನಿನ್ನ ಸಂಕಲ್ಪದಿಂದಲೇ ನೀನು ನಾಮರೂಪಭೇದಗಳಿಂದ ವಿಸ್ತರಿಸಿಡತಕ್ಕವನು. ಆದುದರಿಂದ ನೀನೇ ಸರ್ವಜಗತ್ಕಾರಣನು, ಧರ್ಮಪರಿಪಾಲಕನು. ಈ ನಮ್ಮ ಜನಕನನ್ನು ಅಧರ್ಮದಿಂದ ರಕ್ಷಿಸಬೇಕು. ದೇವಾ! ನಿನಗೆ ವಂದನವು!" ಎಂದು ಪ್ರಾರ್ಥಿಸತೊಡಗಿದರು. ಇದನ್ನು ಕೇಳಿದ ಮೇಲೆ ಬ್ರಹ್ಮನಿಗೆ ಒಳಗೊಳಗೆ ನಾಚಿಕೆಯು ಹುಟ್ಟಿತು. ಒಡನೆಯೇ ಅವನು ಆ ಕಾಮುಕಸ್ವಭಾವವನ್ನು ತ್ಯಜಿಸಿಬಿಟ್ಟನು. ಹೀಗೆ ಬ್ರಹ್ಮದೇವನಿಂದ ನಿರಾಕರಿಸಲ್ಪಟ್ಟ ಭಯಂಕರವಾದ ಆ ಕಾಮುಕಸ್ವಭಾವವನ್ನು ದಿಕ್ಕುಗಳು ತಮ್ಮಲ್ಲಿ ಸೇರಿಸಿಟ್ಟುಕೊಂಡುವು.

ವಿದುರಾ! ದಿಕ್ಕುಗಳ ಕೊನೆಯಲ್ಲಿ ಕಾಣುವ ಹಿಮಸಂಬಂಧವಾದ ಕತ್ತಲೆ ಯಾವುದುಂಟೋ ಅದೇ ಕಾಮಸ್ವರೂಪವೆಂದು ತಿಳಿ! ಇದರ ವಿಚಾರವು ಹೀಗಿರಲಿ! ಅನಂತರದಲ್ಲಿ ಚತುರ್ಮುಖನಿಗೆ ಮುಂದೆ ನಡೆಯಬೇಕಾದ ಸೃಷ್ಟಿಕಾರ್ಯದಲ್ಲಿ ತಿರುಗಿ ಚಿಂತೆಯು ಹುಟ್ಟಿತು. ಈ ಚಿಂತೆಯಿಂದ ಆ ಬ್ರಹ್ಮನು ತನ್ನಲ್ಲಿ ತಾನು "ಹಿಂದಿನ ಕಲ್ಪದಲ್ಲಿದ್ದಂತೆ ಪ್ರಜಾವೃದ್ಧಿಯನ್ನು ಮಾಡುವುದಕ್ಕೆ ಉಪಾಯವೇನು?" ಎಂದು ಚಿಂತಿಸುತ್ತಿರುವಾಗ, ಒಮ್ಮೆ ಅವನ ನಾಲ್ಕು ಮುಖಗಳಿಂದ ಋಕ್ಕು ಮೊದಲಾದ ನಾಲ್ಕು ವೇದಗಳೂ, ಹೋತೃ ಮೊದಲಾದ ನಾಲ್ವರು ಋತ್ವಿಕ್ಕುಗಳಿಗೆ ಸಂಬಂಧಪಟ್ಟ ಯಜ್ಞ ವಿವರಣಗಳೂ, ಆಯುರ್ವೇದ ಮೊದಲಾದ ಉಪವೇದಗಳೂ, ನ್ಯಾಯಗಳೂ, ತಪಸ್ಸು, ಸತ್ಯ, ದಯೆ, ಶೌಚವೆಂಬ ನಾಲ್ಕು ಬಗೆಯ ಧರ್ಮವಿಭಾಗ ಗಳೂ, ನಾಲ್ಕು ಬಗೆಯ ವರ್ಣಾಶ್ರಮಗಳೂ, ಅವುಗಳ ಧರ್ಮಗಳೂ ಹುಟ್ಟಿ ದುವು" ಎಂದನು. ಇದನ್ನು ಕೇಳಿ ವಿದುರನು "ಎಲೈ ಮಹಾತ್ಮನೇ! ಸೃಷ್ಟಿ ಕರ್ತನಾದ ಆ ಬ್ರಹ್ಮನು ಈ ವೇದಾದಿಗಳನ್ನು ಸೃಷ್ಟಿಸುವಾಗ, ಯಾವ ಯಾವ ಮುಖದಿಂದ ಯಾವ ಯಾವ ವೇದವನ್ನು ಸೃಷ್ಟಿಸಿದನು? ಆ ಕ್ರಮ ವೆಲ್ಲವನ್ನೂ ನನಗೆ ವಿವರಿಸಿ ತಿಳಿಸಬೇಕು" ಎಂದು ಪ್ರಾರ್ಥಿಸಿದನು. ಅದಕ್ಕಾ ಮೈತ್ರೇಯನು "ವಿದುರಾ! ಕೇಳು. ಋಕ್ಕು, ಯಜುಸ್ಸು, ಸಾಮ, ಅಥರ್ವಣವೆಂಬ ನಾಲ್ಕು ವೇದಗಳನ್ನೂ ಬ್ರಹ್ಮನು ಕ್ರಮವಾಗಿ ತನ್ನ ಪೂರ್ವದಕ್ಷಿಣಪಶ್ಚಿಮೋತ್ತರಗಳೆಂಬ ನಾಲ್ಕು ಮುಖಗಳಿಂದ ಹೊರಕ್ಕೆ ಬಿಟ್ಟನು. ಅದರಂತೆಯೇ ಹೋತೃಗಳ ಕರ್ಮರೂಪವಾದ ಶಸ್ತ್ರವೆಂಬ ಗೀತಮಂತ್ರ ಸ್ತೋತ್ರಗಳೂ, ಅಧ್ವರ್ಯುಕರ್ಮವಾದ ಸ್ತೋತ್ರಗಳೂ, ಉದ್ಗಾತೃಗಳಿಂದ ಹೇಳಲ್ಪಡುವ ಸಂಗೀತ ರೂಪವಾದ ಸ್ತುತಿಯೂ, ಬ್ರಾಹ್ಮಣಕರ್ಮವೆನಿಸಿದ ಪ್ರಾಯಶ್ಚಿತ್ತವೂ, ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಶಿಲ್ಪಶಾಸ್ತ್ರಗಳೆಂಬೀ ನಾಲ್ಕು ಉಪವೇದಗಳೂ, ಕ್ರಮ ವಾಗಿ ಆತನ ಪೂರ್ವಮುಖಗಳಿಂದ ಹುಟ್ಟಿದುವು. ಪಂಚಮವೇದವೆನಿಸಿ ಕೊಳ್ಳುವ ಇತಿಹಾಸ ಪುರಾಣಗಳೆಲ್ಲವೂ ಆತನ ಎಲ್ಲಾ ಮುಖಗಳಿಂದಲೂ ಹೊರಟುವು. ಮತ್ತು ಷೋಡಶಿ, ಉಕ್ಥ್ಯವೆಂಬ ಎರಡು ಕರ್ಮಗಳು ಆ ಬ್ರಹ್ಮನ ಪೂರ್ವಮುಖದಿಂದಲೂ, ಚಯನ, ಅಗ್ನಿಷ್ಟೋಮವೆಂಬ ಕರ್ಮ

ಗಳೆರಡೂ ದಕ್ಷಿಣಮುಖದಿಂದಲೂ, ಅಪ್ತೋರ್ಯಾಮ, ಅತಿರಾತ್ರಗಳೆಂಬ ಕರ್ಮಗಳೆರಡು ಪಶ್ಚಿಮಮುಖದಿಂದಲೂ, ಗೋಸವ, ವಾಜಪೇಯಗಳೆಂಬ ಕರ್ಮಗಳೆರಡೂ ಉತ್ತರಮುಖದಿಂದಲೂ ಹುಟ್ಟಿದುವು. ವಿದ್ಯೆ, ದಾನ, ತಪಸ್ಸು, ಸತ್ಯವೆಂಬಿವು ನಾಲ್ಕೂ ಧರ್ಮಕ್ಕೆ ನಾಲ್ಕು ಪಾದಗಳೆನಿಸುವುವು. ಇವು ನಾಲ್ಕನ್ನೂ, ಬ್ರಹ್ಮಚರ್ಯವೇ ಮೊದಲಾದ ನಾಲ್ಕು ಆಶ್ರಮ ಗಳನ್ನೂ, ಆ ನಾಲ್ಕು ಆಶ್ರಮಗಳ ಧರ್ಮಗಳನ್ನೂ, ಬ್ರಹ್ಮನು ಕ್ರಮವಾಗಿ ತನ್ನ ಪೂರ್ವಾದಿ ನಾಲ್ಕು ಮುಖಗಳಿಂದ ಸೃಷ್ಟಿಸಿದನು. ವಿದುರಾ! ಬ್ರಹ್ಮಚರ್ಯವೇ ಮೊದಲಾದ ಆ ನಾಲ್ಕು ಬಗೆಯ ಆಶ್ರಮಧರ್ಮವನ್ನೂ ತಿಳಿಸುವೆನು ಕೇಳು! ಸಾವಿತ್ರ, ಪ್ರಾಜಾಪತ್ಯ, ಬ್ರಾಹ್ಮ, ಬೃಹತ್ತು ಎಂಬಿವು ನಾಲ್ಕು ಬ್ರಹ್ಮಚರ್ಯಾಶ್ರಮದ ಧರ್ಮಗಳು. ಸಾವಿತ್ರವೆಂದರೆ ಸ್ತ್ರೀ ಸಂಪರ್ಕವಿಲ್ಲದಿರುವುದು. ಪ್ರಾಜಾಪತ್ಯವೆಂದರೆ ಉಪನಯನವಾದುದು ಮೊದಲು ಮೂರು ರಾತ್ರಿಗಳವರೆಗೆ ಗಾಯತ್ರಿಯನ್ನು ಅಧ್ಯಯನ ಮಾಡುತ್ತ, ನಡೆಸ ತಕ್ಕ ವ್ರತವು. ಬ್ರಾಹ್ಮವೆಂದರೆ ಒಂದು ಸಂವತ್ಸರದವರೆಗೆ ಮಾಡುವ ವ್ರತಾನುಷ್ಠಾನವು. ಬೃಹತ್ತೆಂದರೆ ವೇದಗಳೆಲ್ಲವನ್ನೂ ಅಧ್ಯಯನ ಮಾಡಿ ಮುಗಿಸುವವರೆಗೆ ನಡೆಸತಕ್ಕ ಬ್ರಹ್ಮಚರ್ಯವು. ಇವು ನಾಲ್ಕು ಬ್ರಹ್ಮಚಾರಿ ಗಳ ಕರ್ಮಗಳು. ಇದರಂತೆಯೇ ಗೃಹಸ್ಥಾಶ್ರಮದಲ್ಲಿಯೂ, ವಾರ್ತೆ, ಸಂಚಯ, ಶಾಲೀನ, ಶೀಲ, ಉಂಭವೆಂಬ ಐದು ಧರ್ಮಗಳುಂಟು. ಇವು ಗಳಲ್ಲಿ ವಾರ್ತೆಯೆಂದರೆ, ತಮತಮಗೆ ನಿಷಿದ್ಧವಲ್ಲದ ಕೃಷಿವಾಣಿಜ್ಯಾದಿ ವೃತ್ತಿಗಳನ್ನನುಸರಿಸುವುದು. ಸಂಚಯವೆಂದರೆ ಅಧ್ಯಾಪನ (ಓದಿಸುವುದು) ಮೊದಲಾದ ಕಾರ್ಯಗಳಿಂದ ಸಂಪಾದಿಸಿದ ಧನವನ್ನು, ತನ್ನ ಆಯುಸ್ಸಿರುವ ವರೆಗೂ ಜೀವನಕ್ಕಾಗಿ ಸೇರಿಸಿಡುವುದು. ಶಾಲೀನವೆಂದರೆ ಯಾಚಿಸದ ಹಾಗೆಯೇ ಲಭಿಸುವ ದ್ರವ್ಯವನ್ನು ಪಡೆದು, ಅದರಿಂದ ಜೀವಿಸುವುದು. ಶಿಲೋಂಛಗಳೆಂದರೆ ಹೊಲಗದ್ದೆಗಳಲ್ಲಿ ಚೆಲ್ಲಿಹೋದ ಧಾನ್ಯದ ಕಾಳನ್ನು ಆಯ್ದು ತಂದು ಜೀವಿಸುವುದು. ಈ ನಾಲ್ಕೂ ಗ್ರಹಸ್ಥಾಶ್ರಮದ ಧರ್ಮಗಳು. ವಾನ ಪ್ರಸ್ಥಾಶ್ರಮದಲ್ಲಿ ವೈಖಾನಸರೆಂದೂ, ವಾಲಖಿಲ್ಯರೆಂದೂ. ಔದುಂಬರ ರೆಂದೂ, ಫೇನಪರೆಂದೂ ನಾಲ್ಕು ಭೇದಗಳುಂಟು. ಇವರಲ್ಲಿ, ನೆಲವನ್ನುತ್ತು ಪೈರಿಡದೆ ತಾನಾಗಿಯೇ ಲಭಿಸುವ ಧಾನ್ಯಗಳಿಂದ ಜೀವಿಸುವವರು ವೈಖಾನಸ

ರೆನಿಸುವರು. ಹೊಸಹೊಸದಾಗಿ ಅನ್ನಾದಿಗಳು ಲಭಿಸಿದೊಡನೆ, ಹಿಂದಿದ್ದುದ ರಲ್ಲಿ ಆಸೆಯನ್ನಿಡದೆ, ಅದನ್ನು ಪರಿತ್ಯಜಿಸುವವರು ವಾಲಖಿಲ್ಯರೆನಿಸುವರು. ಬೆಳಿಗ್ಗೆ ನಿದ್ರೆಯಿಂದೆದ್ದ ಕೂಡಲೆ, ಯಾವ ದಿಕ್ಕನ್ನು ನೋಡುವರೋ, ಅದೇ ದಿಕ್ಕಿನಿಂದ ಸಂಗ್ರಹಿಸಿ ತಂದ ಹಣ್ಣು ಮುಂತಾದುವುಗಳಿಂದ ಜೀವಿಸುವವರು ಔದುಂಬರರೆನಿಸುವರು. ಕಾಡಿನಲ್ಲಿರುವ ಗಿಡಗಳಿಂದ ತಾನಾಗಿಯೇ ಪಕ್ವ ವಾಗಿ ಬಿದ್ದ ಫಲಗಳನ್ನು ತಿಂದು ಜೀವಿಸುವವರು ಫೇನಪರೆನಿಸುವರು. (ಕರು ಗಳ ಕಡೆಬಾಯಿಯಲ್ಲಿರುವ ನೊರೆಗಳನ್ನು ತಿಂದು ಜೀವಿಸುವವರನ್ನು ಫೇನಪ ರೆಂದೂ ಕೆಲವರು ಹೇಳುವರು.) ಹೀಗೆ ವಾನಪ್ರಸ್ಥಾಶ್ರಮದಲ್ಲಿ ನಾಲ್ಕು ಬಗೆಯುಂಟು. ಸನ್ಯಾಸಾಶ್ರಮದಲ್ಲಿ ಕುಟೀಚಕರೆಂದೂ, ಬಹೂದಕರೆಂದೂ, ಹಂಸರೆಂದೂ, ನಿಷ್ಕ್ರಿಯರೆಂದೂ ನಾಲ್ಕು ಭೇದಗಳುಂಟು. ಇವರಲ್ಲಿ ತಮ್ಮ ಆಶ್ರಮಕ್ಕೆ ವಿಹಿತವಾದ ಕರ್ಮವನ್ನೇ ಮುಖ್ಯವಾಗಿ ಅನುಸರಿಸತಕ್ಕವರಿಗೆ ಕುಟೀಚಕರೆಂದು ಹೆಸರು. ಕರ್ಮವನ್ನು ಉಪಸರ್ಜನವಾಗಿಟ್ಟುಕೊಂಡು ಜ್ಞಾನವನ್ನೇ ಮುಖ್ಯವಾಗಿ ಅನುಸರಿಸತಕ್ಕವರು ಬಹೂದಕರು. ಕೇವಲ ಜ್ಞಾನಾಭ್ಯಾಸದಲ್ಲಿಯೇ ನಿಷ್ಠರಾದವರಿಗೆ ಹಂಸರೆಂದು ಹೆಸರು. ತತ್ವ ಜ್ಞಾನವು ಕೈಸೇರಿದುದರಿಂದ, ಪ್ರವೃತ್ತಿಧರ್ಮಗಳಲ್ಲಿ ಆಸಕ್ತಿಯನ್ನೇ ಬಿಟ್ಟ ವರು ನಿಷ್ಕ್ರಿಯರೆನಿಸುವರು. ಇವರನ್ನೇ ಪರಮಹಂಸರೆಂದೂ ಹೇಳುವರು. ವಿದುರಾ! ಇವಿಷ್ಟೂ ಆಶ್ರಮಧರ್ಮಗಳು. ಆದರಿಂದಾಚೆಗೆ ಬ್ರಹ್ಮನ ಪೂರ್ವಾದಿ ನಾಲ್ಕು ಮುಖಗಳಿಂದ ಕ್ರಮವಾಗಿ ಆನ್ವೀಕ್ಷಿಕಿ, ತ್ರಯಿ, ವಾರ್ತೆ, ದಂಡನೀತಿ ಎಂಬಿವು ನಾಲ್ಕೂ ಹುಟ್ಟಿದುವು. ಇವುಗಳಲ್ಲಿ ಆನ್ವೀಕ್ಷಿಕಿಯೆಂದರೆ ಪ್ರಕೃತಿ, ಜೀವ, ಪರಮಾತ್ಮರಿಗಿರುವ ಭೇದವನ್ನು ತಿಳಿಸತಕ್ಕ ಶಾಸ್ತ್ರವು. ಈ ಜ್ಞಾನವಿಲ್ಲದೆ ಮೋಕ್ಷವು ಲಭಿಸದು. (ಚಿತ್ತು, ಅಚಿತ್ತು, ಈಶ್ವರನೆಂ ಬಿವು ಮೂರೂ, ತತ್ವತ್ರಯವೆನಿಸುವುದು. ಜೀವನು ಜ್ಞಾನಸ್ವರೂಪನಾ ದುದರಿಂದ ಚಿತ್ತೆನಿಸುವನು. ಅಚೇತನವಾದ ಜಡವಸ್ತುಗಳೆಲ್ಲವೂ ಅಚಿತ್ತೆನಿ ಸುವುವು. ಈ ಚೇತನಾಚೇತನಗಳನ್ನೆಲ್ಲಾ ಶರೀರವಾಗಿ ಉಳ್ಳ ಭಗವಂತನೇ ಈಶ್ವರನು. ಈ ಮೂರು ತತ್ವಗಳ ನಿಜಸ್ವರೂಪವನ್ನೂ, ಅವುಗಳಲ್ಲಿ ಒಂದ ಕ್ಕೊಂದಕ್ಕೆ ಇರುವ ಭೇದವನ್ನೂ ಯಥಾಸ್ಥಿತವಾಗಿ ತಿಳಿದ ಹೊರತು ಮೋಕ್ಷವು ಲಭಿಸದು. ಇದನ್ನು ತಿಳಿಸತಕ್ಕ ಶಾಸ್ತ್ರವೇ ಆನ್ವೀಕ್ಷಿಕಿಯೆನಿಸು

ವುದು. ಇದೊಂದೇ ಮೋಕ್ಷಕ್ಕೆ ದಾರಿಯು.) ಕರ್ಮಸ್ವರೂಪವನ್ನು ತಿಳಿಸ ತಕ್ಕ ವಿದ್ಯೆಯು ವೇದಗಳಲ್ಲದೆ ಬೇರೆಯಲ್ಲ. ಈ ವೇದಗಳಲ್ಲಿ ಋಕ್ಕು, ಯಜುಸ್ಸು, ಸಾಮ, ಅಥರ್ವಣವೇದು ನಾಲ್ಕು ವಿಭಾಗಗಳಿದ್ದರೂ, ಅಥರ್ವ ವೇದವನ್ನು ಬಿಟ್ಟು ಮೂರು ವೇದಗಳನ್ನು ಮಾತ್ರ ಇಲ್ಲಿ ಹೇಳುವುದರಿಂದ ತ್ರಯವೆನಿಸುವುದು. ಈ ಮೂರು ವೇದಗಳಲ್ಲಿ ವಿಧಿಸಲ್ಪಟ್ಟ ಕರ್ಮಗಳೆಲ್ಲವೂ ಸ್ವರ್ಗಾದಿ ಫಲಗಳಿಗೆ ದಾರಿಯಾಗಿರುವುದು. ವಾರ್ತೆಯೆಂದರೆ ಕೃಷಿ, ಗೋ ರಕ್ಷಣ, ವಾಣಿಜ್ಯ, ಕುಸೀದವೆಂಬು ನಾಲ್ಕು ಬಗೆಯ ವ್ಯಾಪಾರಗಳು. ಇವು ಗಳಲ್ಲಿ ಕುಸೀದವೆಂದರೆ ಬಡ್ಡಿಯಿಂದ ಜೀವಿಸುವುದು. ದಂಡನೀತಿಯೆಂದರೆ ಇತರರನ್ನು ದಂಡಿಸತಕ್ಕ ಮಾರ್ಗವನ್ನು ತಿಳಿಸುವ ಶಾಸ್ತ್ರವು. ಈ ಮೇಲೆ ಹೇಳಿದ ಆನ್ವೀಕ್ಷಿಕಿ ಮೊದಲಾದ ಶಾಸ್ತ್ರಗಳಲ್ಲಿ, ಆನ್ವೀಕ್ಷಿಕಿ ಎಂಬುದು ಬ್ರಾಹ್ಮಣರಿಗೆ ಮುಖ್ಯವಾದುದು. ತ್ರಯಿಯೆಂಬುದು ಕ್ಷತ್ರಿಯರಿಗೆ ಸೇರಿದುದು. ಏಕೆಂದರೆ, ಪ್ರಾಯಕವಾಗಿ ಯಾಗಾದಿ ಕರ್ಮಗಳನ್ನು ನಡೆಸುವುದಕ್ಕೆ ರಾಜರೇ ಸಮರ್ಥರು. ಬ್ರಾಹ್ಮಣ, ಕ್ಷತ್ರಿಯ. ವೈಶ್ಯರೆಂಬ ಮೂರು ವರ್ಣ ದವರಿಗೂ ಯಾಗಾದಿ ಕರ್ಮದಲ್ಲಿ ಅಧಿಕಾರವಿದ್ದರೂ, ರಾಜರಿಗಿರುವಷ್ಟು ದ್ರವ್ಯಬಲವು ಇತರ ವರ್ಣದವರಿಗೆ ದುರ್ಲಭವಾದುದರಿಂದ, ಇದು ಮುಖ್ಯ ವಾಗಿ ರಾಜರಿಗೇ ವಿಧಿಸಲ್ಪಟ್ಟಿರುವುದು. ಇದಲ್ಲದೆ ಪ್ರಜೆಗಳ ಪಾಪಕ್ಕೆ ರಾಜನೇ ಭಾಗಿಯಾದುದರಿಂದ, ಆ ಪಾಪ ನಿವೃತ್ತಿಗಾಗಿಯೂ, ಪ್ರಜಾಕ್ಷೇಮ ಕ್ಕಾಗಿಯೂ, ರಾಜರು ಆಗಾಗ ಯಾಗಗಳನ್ನು ನಡೆಸುತ್ತಿರಬೇಕಾದುದು ಅತ್ಯವಶ್ಯವು. ವಾರ್ತೆಯೆಂಬುದು ವೈಶ್ಯರಿಗೆ ಮುಖ್ಯವಾದುದು. ದಂಡ ನೀತಿಯು ಶೂದ್ರರಿಗೆ ಸೇರಿದುದು. ಇತರರನ್ನು ದಂಡಿಸತಕ್ಕ ಕಾರ್ಯವು ರಾಜರಿಗೆ ಸೇರಿದುದಾಗಿದ್ದರೂ, ಪ್ರಾಯಕವಾಗಿ ಕೀಳುಜಾತಿಯವರೇ ದಂಡ ನೆಗೆ ಪಾತ್ರರಾಗುವುದರಿಂದ, ಈ ದಂಡನೀತಿಯು ಶೂದ್ರರಿಗೆ ಸೇರಿದುದೆಂದೇ ಹೇಳುವರು. ಹೀಗೆಯೇ ಬ್ರಹ್ಮನ ಪೂರ್ವಾದಿ ನಾಲ್ಕುಮುಖಗಳಿಂದ, ಓಂ, ಭೂಃ, ಭುವಃ, ಸುವಃ ಎಂಬ ನಾಲ್ಕು ವ್ಯಾಹೃತಿ ಮಂತ್ರಗಳು ಹುಟ್ಟಿದುವು. ಮತ್ತು ಆ ಬ್ರಹ್ಮನ ರೋಮಗಳಿಂದ ಉಷ್ಣಿಕ್ ಎಂಬ ಛಂದಸ್ಸೂ, ಚರ್ಮ ದಿಂದ ಗಾಯತ್ರೀ ಛಂದಸ್ಸೂ, ಮಾಂಸದಿಂದ ತ್ರಿಷ್ಟುಪ್ ಎಂಬ ಛಂದಸ್ಸೂ, ಸ್ನಾಯುಗಳಿಂದ ಅನುಷ್ಟುಪ್ ಎಂಬ ಛಂದಸ್ಸೂ, ಅಸ್ಥಿಯಿಂದ ಜಗತಿಯೆಂಬ

ಛಂದಸ್ಸೂ, ಮಜ್ಜೆಯಿಂದ ಪಙ್ಕ್ತಿಯೆಂಬ ಛಂದಸ್ಸೂ, ಪ್ರಾಣಗಳಿಂದ ಬೃಹತಿಯೆಂಬ ಛಂದಸ್ಸೂ ಹುಟ್ಟಿದುವು. ಮತ್ತು ಆತನ ಜೀವದಿಂದ ಕಕಾರ ಮೊದಲಾಗಿ ಮಕಾರದವರೆಗಿರುವ ಇಪ್ಪತ್ತೈದು ಸ್ಪರ್ಶಾಕ್ಷರಗಳು ಹುಟ್ಟಿದುವು. ದೇಹದಿಂದ ಅಕಾರಾದಿ ಸ್ವರಗಳೂ, ಅವನ ಇಂದ್ರಿಯಗಳಿಂದ ಶ, ಷ, ಸ, ಹ ಎಂಬ ಊಷ್ಮವರ್ಣಗಳೂ, ಆತನ ಬಲದಿಂದ ಯ, ರ, ಲ, ವ ಎಂಬ ಅಂತಸ್ಥವರ್ಣಗಳೂ ಹುಟ್ಟಿದುವು. ಆತನ ಲೀಲೆಯಿಂದ ಸ, ರಿ, ಗ, ಮ, ಪ, ಧ, ನಿ ಎಂಬ ಸಪ್ತಸ್ವರಗಳು ಜನಿಸಿದುವು. ವತ್ಸ ವಿದುರಾ! ಶಬ್ದವನ್ನೇ ಶರೀರವಾಗಿಯೂ, ವ್ಯಕ್ತಾವ್ಯಕ್ತಗಳಾದ ಇಪ್ಪತ್ತನಾಲ್ಕು ತತ್ವಗಳನ್ನೇ ಸ್ವರೂಪವಾಗಿಯೂ ಉಳ್ಳ ಆ ಚತುರ್ಮುಖನಿಂದ ಶ್ರುತಿಸ್ಮೃತೀತಿಹಾಸಾದಿ ರೂಪಗಳಿಂದಲೂ, ಪ್ರಕೃತಿ, ಪ್ರತ್ಯಯ, ಪದ, ವಾಕ್ಯಾದಿ ರೂಪಗಳಿಂದಲೂ ಬಗೆಬಗೆಯ ಭಾಷಾರೂಪದಿಂದಲೂ ಹರಡಿಕೊಂಡಿರುವ ಶಬ್ದಬ್ರಹ್ಮವು ಈ ವಿಧವಾಗಿ ಉತ್ಪನ್ನವಾಯಿತು. ಮೊದಲು ಆ ಚತುರ್ಮುಖನ ಶರೀರದಿಂದ ನಾನಾಬಗೆಯ ದ್ರವ್ಯರೂಪದಿಂದ ಪ್ರಪಂಚವು ಹುಟ್ಟಿ, ಆ ಮೇಲೆ, ಈ ಶಬ್ದಪ್ರಪಂಚವೆಂಬುದು, ಅಭಿಧೆ, ಲಕ್ಷಣೆ, ಮೊದಲಾದ ವೃತ್ತಿಭೇದಗಳಿಂದ ನಾನಾವಿಧವಾಗಿ ವಿಸ್ತರಿಸಿರುವುದು. ಈ ಶಬ್ದಪ್ರಪಂಚವನ್ನು ಹುಟ್ಟಿಸಿದ ಮೇಲೆ, ಬ್ರಹ್ಮನು, ಅದಕ್ಕಿಂತಲೂ ಬೇರೆಯಾದ ಮತ್ತೊಂದು ದೇಹವನ್ನು ಸ್ವೀಕರಿಸಿ, ಮುಂದೆ ಪ್ರಜಾಸೃಷ್ಟಿಯನ್ನು ಹೆಚ್ಚಿಸಬೇಕೆಂದು ಮನಸ್ಸಿನಲ್ಲಿ ಉದ್ದೇಶಿಸಿದನು. ಇದಕ್ಕಾಗಿ ಮೊದಲು ಸೃಷ್ಟಿಸಾಮರ್ಥ್ಯವುಳ್ಳ ಅನೇಕ ಋಷೀಶ್ವರರ ಮೂಲಕವಾಗಿಯೂ, ತಾನು ಸಾಕ್ಷಾತ್ತಾಗಿಯೂ, ನಡೆಸಿದ ಸೃಷ್ಟಿಯು, ವಿಶೇಷವಾಗಿ ವೃದ್ಧಿಹೊಂದದಿದ್ದುದನ್ನು ನೋಡಿ, ತನ್ನಲ್ಲಿ ತಾನು "ಆಹಾ! ಇದೇನಿದು? ನಾನು ಯಾವಾಗಲೂ ಎಡೆಬಿಡದೆ ಎಷ್ಟೋ ಪ್ರಯತ್ನದಿಂದ ಸೃಷ್ಟಿವ್ಯಾಪಾರವನ್ನು ನಡೆಸುತ್ತಿದ್ದರೂ, ಪ್ರಜಾವೃದ್ಧಿಯಾಗದಿರುವುದಕ್ಕೆ ಕಾರಣವೇನು? ಇದೇನೋ ಆಶ್ಚರ್ಯವಾಗಿರುವುದು. ಈ ವಿಷಯದಲ್ಲಿ ದೈವವೇ ಪ್ರತಿಕೂಲವಾಗಿರಬೇಕೆಂದು ತೋರುವುದು. ಇದು ನಿಶ್ಚಯವು" ಎಂದು ಚಿಂತಾಕುಲನಾಗಿರುವಾಗಲೇ, ಅವನ ಶರೀರದಿಂದ ಪ್ರತ್ಯೇಕವಾದ ಬೇರೊಂದಾಕಾರವು ಹುಟ್ಟಿತು. ಎಂದರೆ ಮೊದಲಿನ ಆಕೃತಿಯು ಇದ್ದಹಾಗೆಯೇ, ಮತ್ತೊಂದು ರೂಪವು ಹೊರಟು,

ಆ ಎರಡನೆಯ ರೂಪದಿಂದ ಸ್ತ್ರೀಪುರುಷ ರೂಪವಾದ ಒಂದು ಮಿಥುನವು ಏರ್ಪಟ್ಟಿತು. ಇವುಗಳಲ್ಲಿ ಪುರುಷಸ್ವರೂಪವೇ ಸ್ವಾಯುಂಭುವನೆಂಬ ಮನುವಾದನು. ಸ್ತ್ರೀವ್ಯಕ್ತಿಯು ಅವನಿಗೆ ಪತ್ನಿಯಾದ ಶತರೂಪೆಯೆನಿಸಿದಳು. ಆ ದಂಪತಿಗಳಿಬ್ಬರೂ ಹುಟ್ಟಿದ ಮೇಲೆ, ಅವರು ಮಿಥುನಧರ್ಮದಿಂದ ಪ್ರಜಾವೃದ್ಧಿಯನ್ನುಂಟುಮಾಡಿದರು. ಮೊದಲು ಆ ದಂಪತಿಗಳಿಗೆ ಪ್ರಿಯವ್ರತನೆಂದೂ ಉತ್ತಾನಪಾದನೆಂದೂ ಇಬ್ಬರು ಗಂಡುಮಕ್ಕಳೂ, ಆಕೂತಿ, ದೇವಹೂತಿ, ಪ್ರಸೂತಿ ಎಂಬ ಮೂವರು ಕನ್ಯೆಯರೂ ಹುಟ್ಟಿದರು. ಆ ಮೇಲೆ ಸ್ವಾಯಂಭುವ ಮನುವು, ತನ್ನ ಮೂವರು ಕನ್ಯೆಯರಲ್ಲಿ ಆಕೂತಿಯೆಂಬವಳನ್ನು ರುಚಕನಿಗೂ, ದೇವಹೂತಿಯನ್ನು ಕರ್ದಮನಿಗೂ, ಪ್ರಸೂತಿಯನ್ನು ದಕ್ಷನಿಗೂ ಕೊಟ್ಟು ವಿವಾಹ ಮಾಡಿದನು. ಇದರಿಂದ, ಕ್ರಮಕ್ರಮವಾಗಿ ಸಂತಾನವು ಹೆಚ್ಚಿ, ಲೋಕವೆಲ್ಲವೂ ಪ್ರಜೆಗಳಿಂದ ತುಂಬಿಕೊಂಡಿತು. ಇಲ್ಲಿಗೆ ಹನ್ನೆರಡನೆಯ ಅಧ್ಯಾಯವು.

---

ಭೂಮಿಯು ಸಮುದ್ರಮಧ್ಯದಲ್ಲಿ ಮುಳುಗಿದುದನ್ನು ನೋಡಿ, ಸ್ವಾಯುಂಭುವಮನುವು ತನ್ನ ವಾಸಕ್ಕಾಗಿ ಸ್ಥಳವನ್ನು ಕೇಳಿದುದು, ಇದಕ್ಕಾಗಿ ಬ್ರಹ್ಮನು ಚಿಂತಿಸುತ್ತಿರುವಾಗ ವಿಷ್ಣುವು ವರಾಹರೂಪಿಯಾಗಿ ಬಂದು ಭೂಮಿಯನ್ನು ಮೇಲಕ್ಕೆತ್ತಿದುದು.

ಮೈತ್ರೇಯನು ಹೇಳಿದ ಪರಮಪವಿತ್ರವಾದ ಈ ವೃತ್ತಾಂತವನ್ನು ಕೇಳಿ ವಿದುರನು, ಭಗವಂತನ ಚರಿತ್ರೆಯನ್ನು ಕೇಳುವುದರಲ್ಲಿ ಮತ್ತಷ್ಟು ಕುತೂಹಲವುಳ್ಳವನಾಗಿ, ತಿರುಗಿ ಆ ಮಹರ್ಷಿಯನ್ನು ಪ್ರಶ್ನೆಮಾಡುವನು. "ಎಲೈ ಮಹಾತ್ಮನೇ! ಈಗ ನೀನು ಹೇಳಿದ ವೃತ್ತಾಂತದಿಂದ ಆ ಸ್ವಾಯಂಭುವಮನುವೇ ಚಕ್ರವರ್ತಿಗಳಲ್ಲಿ ಮೊದಲನೆಯವನೆಂದು ವ್ಯಕ್ತವಾಗುವುದು. ಸಾಕ್ಷಾದ್ ಬ್ರಹ್ಮನ ಪ್ರಿಯಪುತ್ರನಾದ ಆತನು, ಶತರೂಪೆಯೆಂಬ ತನ್ನ ಪ್ರಿಯಪತ್ನಿಯನ್ನು ಪಡೆದ ಮೇಲೆ ನಡೆಸಿದ ಕಾರ್ಯವೇನು? ಆತನೋ ಆ ಮಹಾವಿಷ್ಣುವನ್ನೇ ದೃಢವಾಗಿ ನಂಬಿದವನು. ಅಂತಹ ಮಹಾನುಭಾವನ

ಚರಿತ್ರಗಳನ್ನು ಕೇಳಿದಾಗಲೇ ಜನ್ಮವು ಸಫಲವಾಗುವುದು. ಲೋಕದಲ್ಲಿ ಬಹುಕಾಲದವರೆಗೆ ಶ್ರಮಪಟ್ಟು ವೇದಶಾಸ್ತ್ರಾಧ್ಯಯನಗಳನ್ನು ಮಾಡಿದವರಿಗೂ ಕೂಡ, ಇಂತಹ ಮಹಾತ್ಮರ ಚರಿತ್ರವನ್ನು ಕೇಳುವುದೇ ಆ ಅಧ್ಯಯನಕ್ಕೆ ಫಲವೆಂದು ಕೇಳಿರುವೆನು. ಆ ಶ್ರೀಹರಿಯ ಪಾದಾರವಿಂದವು ಯಾರಿಂದ ಮನಸ್ಸಿನಲ್ಲಿ ನಿಯತವಾಗಿ ಉಪಾಸನೆ ಮಾಡಲ್ಪಡುವುದೋ, ಅಂತಹ ಭಗವದ್ಭಕ್ತರ ಗುಣಶ್ರವಣವನ್ನು ಮಾಡುವುದೇ ನಮ್ಮಂತವರೆಲ್ಲರಿಗೂ ಶ್ರೇಯಸ್ಕರವು" ಎಂದನು. ಹೀಗೆ ವಿನಯಾದಿ ಗುಣಸಂಪನ್ನನಾಗಿಯೂ, ಭಗವಂತನ ಪಾದಾರವಿಂದಗಳನ್ನು ತಲೆಯಲ್ಲಿ ಧರಿಸತಕ್ಕವನಾಗಿಯೂ ಇರುವ ವಿದುರನ ಪ್ರಶ್ನೆಯನ್ನು ಕೇಳಿ, ಮೈತ್ರೇಯಮುನಿಯು ಸಂತೋಷದಿಂದ, ಪುಳಕಿತವಾದ ಮೈಯುಳ್ಳವನಾಗಿ, ಆ ಭಗವತ್ಕಥೆಯನ್ನು ಹೇಳುವುದರಲ್ಲಿ ಮತ್ತಷ್ಟು ಉತ್ಸಾಹಗೊಂಡು ಹೇಳತೊಡಗಿದನು. "ವಿದುರಾ! ಸ್ವಾಯಂಭುವಮನುವು ಶತರೂಪೆಯೆಂಬ ತನ್ನ ಭಾರ್ಯೆಯೊಡನೆ ಜನಿಸಿದ ಕೂಡಲೆ, ವೇದಗರ್ಭನಾದ ಚತುರ್ಮುಖನ ಮುಂದೆ ಕೈಜೋಡಿಸಿ ನಿಂತು, "ಓ ಜನಕಾ! ನೀನು ಸಮಸ್ತ ಭೂತಗಳಿಗೂ ಜನಕನು. ಆಯಾ ಭೂತಗಳಿಗೆ ಆಯಾ ವೃತ್ತಿಗಳನ್ನು ಕಲ್ಪಿಸಿ ಪೋಷಿಸತಕ್ಕವನೂ ನೀನೇ! ಈಗ ನಮ್ಮಿಬ್ಬರನ್ನು ಸೃಷ್ಟಿಸಿರುವೆಯಲ್ಲವೇ? ಸಮಸ್ತ ಲೋಕಗಳಿಗೂ, ನೀನೇ ಅಭೀಷ್ಟಗಳನ್ನು ಕೊಡತಕ್ಕವನಾದುದರಿಂದ, ಮತ್ತೊಬ್ಬರಿಂದ ನಿನಗೆ ಆಗಬೇಕಾದ ಕಾರ್ಯವೊಂದೂ ಇರುವುದಿಲ್ಲ. ಹೀಗಿರುವಾಗ ನಮ್ಮನ್ನು ನೀನು ಸೃಷ್ಟಿಸಿದ ಉದ್ದೇಶವೇನು? ನಾವು ನಿನ್ನನ್ನು ಯಾವ ವಿಧದಿಂದ ಸಂತೋಷಪಡಿಸಬಲ್ಲೆವು? ಈಗ ನಾವು ನಡೆಸಬೇಕಾದ ಕಾರ್ಯವೇನೆಂಬುದನ್ನು ನೀನೇ ತಿಳಿಸಬೇಕು. ನಮ್ಮಿಂದ ಸಾಧ್ಯವಾದ ಕಾರ್ಯಗಳಲ್ಲಿ ಯಾವ ಕಾರ್ಯವನ್ನು ಮಾಡಿದರೆ, ನಮಗೆ ಈ ಲೋಕದಲ್ಲಿ ಕೀರ್ತಿಯೂ, ಪರಲೋಕದಲ್ಲಿ ಸದ್ಗತಿಯೂ ಉಂಟಾಗುವುದೋ, ಆ ಕಾರ್ಯವನ್ನು ನಿಯಮಿಸು!" ಎಂದು ಪ್ರಾರ್ಥಿಸಿದನು. ಅದಕ್ಕಾ ಬ್ರಹ್ಮನು, "ವತ್ಸಾ! ಹೀಗೆ ನಿಷ್ಕಪಟವಾದ ಹೃದಯದಿಂದ ನೀನಾಗಿಯೇ ಸತ್ಕಾರ್ಯದಲ್ಲಿ ನಿಯೋಗಿಸಬೇಕೆಂದು ಕೇಳಿದುದಕ್ಕಾಗಿ ನಾನು ಬಹಳ ಸಂತೋಷಪಟ್ಟೆನು. ನಿನಗೂ, ಈ ನಿನ್ನ ಪತ್ನಿಗೂ ಶುಭವಾಗಲಿ! ನೀವು ನನ್ನನ್ನು ಯಾವ ವಿಧದಿಂದ ಸಂತೋಷಪಡಿಸಬೇ

ಕೆಂದು ಕೇಳಿದಿರಲ್ಲವೇ? ತಂದೆಯು ಹೇಳಿದ ಕಾರ್ಯವನ್ನು ತಿರಸ್ಕರಿಸದೆ, ತನ್ನಿಂದ ಸಾಧ್ಯವಾದ ಮಟ್ಟಿಗೆ ನಿರ್ವಂಚನೆಯಾಗಿ ನಡೆಸುತ್ತಿರುವುದೇ ಮಕ್ಕಳು ತಂದೆಗೆ ಮಾಡತಕ್ಕ ಉಪಕಾರವು. ಇದಕ್ಕಿಂತಲೂ ಮಕ್ಕಳು ತಂದೆಗೆ ಮಾಡಬೇಕಾದ ಸಹಾಯವು ಬೇರೊಂದಿಲ್ಲ. ಈಗ ನಿನಗೆ ನಾನು ನಿಯಮಿಸುವ ಕಾರ್ಯವೇನೆಂದು ಕೇಳುವೆಯಾ? ಇಲ್ಲಿಂದ ಮುಂದೆ ನೀನು, ಈ ನಿನ್ನ ಭಾರ್ಯೆಯಲ್ಲಿ ನಿನಗೆ ಸಮಾನಗುಣವುಳ್ಳ ಪುತ್ರರನ್ನು ಪಡೆದು, ಧರ್ಮಯುಕ್ತವಾಗಿ ಭೂಮಂಡಲವನ್ನು ಪರಿಪಾಲಿಸುತ್ತಿರು. ಆಗಾಗ ಯಾಗಗಳನ್ನು ನಡೆಸಿ, ಯಜ್ಞಪುರುಷನಾದ ಭಗವಂತನನ್ನಾರಾಧಿಸು! ಇದೇ ನೀನು ನನಗೆ ಮಾಡಬೇಕಾದ ಶುಶ್ರೂಷೆಯೆಂದು ತಿಳಿ! ಇದರಿಂದಲೇ ಪರಮಾತ್ಮನು ಪ್ರೀತನಾಗುವನು! ಆ ಪರಮಾತ್ಮನು ಪ್ರೀತನಾದರೆ, ಸರ್ವಾಭೀಷ್ಟಗಳೂ ಲಭಿಸುವುವು. ಹಾಗಿಲ್ಲದ ಪಕ್ಷದಲ್ಲಿ ಶ್ರಮವೆಲ್ಲವೂ ನಿರರ್ಥಕಗಳಾಗುವುವು. ಯಜ್ಞಸ್ವರೂಪನಾಗಿಯೂ, ಕಾರಣರಹಿತನಾಗಿಯೂ ಇರುವ ಭಗವಂತನು ಯಾರ ವಿಷಯದಲ್ಲಿ ಪ್ರೀತನಾಗುವುದಿಲ್ಲವೋ, ಅವರ ಕಾರ್ಯಗಳೆಲ್ಲವೂ ವ್ಯರ್ಥವು. ಅಂತವರು ಸರ್ವಾಂತರ್ಯಾಮಿಯಾದ ಭಗವಂತನನ್ನೇ ಉಪೇಕ್ಷಿಸಿದಂತವರಾಗುವರು. ಆದುದರಿಂದ ನೀನು ಆ ಭಗವಂತನನ್ನು ಯಾಗಗಳಿಂದಲೂ ನಿನ್ನ ಕುಲವೃತ್ತಿಯಾದ ಪ್ರಜಾಪಾಲನದಿಂದಲೂ ಸಂತೋಷಪಡಿಸು! ಇದೊಂದೇ ನಿನಗೆ ನಾನು ಹೇಳಬೇಕಾದ ಕಾರ್ಯವು" ಎಂದನು. ಆದಕ್ಕಾ ಮನುವು, "ಜನಕಾ! ನೀನು ಹೇಳಿದಂತೆಯೇ ನಡೆಸುವೆನು. ಭಗವದಾರಾಧನ ರೂಪವಾದ ಯಾಗಗಳನ್ನು ನಡೆಸುವುದಕ್ಕೂ ಸಿದ್ಧನಾಗಿರುವೆನು. ಆದರೆ ನನಗೂ, ನನ್ನ ಮಕ್ಕಳಿಗೂ ವಾಸಯೋಗ್ಯವಾದ ಸ್ಥಳವೆಲ್ಲಿ? ಸಮಸ್ತ ಜಂತುಗಳಿಗೂ ವಾಸಯೋಗ್ಯವಾದ ಭೂಮಿಯೇ ಮಹಾಜಲದಲ್ಲಿ ಮುಳುಗಿ ಹೋಗಿರುವುದಲ್ಲವೇ? ಇದನ್ನು ಉದ್ಧರಿಸುವುದಕ್ಕೆ ತಕ್ಕ ಉಪಾಯವನ್ನು ಮೊದಲು ನೀನು ಯೋಚಿಸಬೇಕು" ಎಂದನು. ಆಗ ಬ್ರಹ್ಮನು ಸುತ್ತಲೂ ನೋಡಿ, ತಾನು ಮೊದಲು ಸೃಷ್ಟಿಸಿದ ಭೂಮಿಯು ಸಮುದ್ರಜಲದಲ್ಲಿ ಮುಳುಗಿ ಹೋಗಿರುವುದನ್ನು ಕಂಡು ತನ್ನಲ್ಲಿ ತಾನು, "ಆಹಾ! ಈ ಭೂಮಿಯನ್ನೆತ್ತುವುದಕ್ಕೆ ಉಪಾಯವೇನು? ಮೊದಲು ನಾನು ಹುಟ್ಟಿದೊಡನೆ ಇದೇ ರೀತಿಯಲ್ಲಿ ಲೋಕವೆಲ್ಲವೂ ಕೇವಲ ಜಲಮಯ

ವಾಗಿದ್ದಾಗ, ಆ ಪ್ರಳಯ ಜಲವನ್ನು ನಾನೇ ಕುಡಿದುಬಿಟ್ಟೆನು. ಆಮೇಲೆ ಭೂಮಿಯನ್ನೂ ಸ್ಥಾಪಿಸಿದೆನು. ಅದಕ್ಕೆ ಮೇಲೆ ನಾನು ಕ್ರಮವಾಗಿ ದೇವತೆಗಳನ್ನೂ, ಅಸುರರನ್ನೂ, ಪಿತೃಗಳನ್ನೂ, ಮನುಷ್ಯರನ್ನೂ ಇತರ ಜೀವವರ್ಗಗಳನ್ನೂ ಸೃಷ್ಟಿಸುವಷ್ಟರಲ್ಲಿ ಈ ಭೂಮಿಯು ಜಲದಲ್ಲಿ ಮುಳುಗಿ, ರಸಾತಲದವರೆಗೆ ಕುಗ್ಗಿಹೋಯಿತು. ಇದಕ್ಕೆ ನಾನೇನು ಮಾಡಬಲ್ಲೆನು? ಈಶ್ವರನು ಸೃಷ್ಟಿಕಾರ್ಯಕ್ಕಾಗಿ ಮಾತ್ರ ನನ್ನನ್ನು ನಿಯಮಿಸಿರುವನು. ಅದಕ್ಕೆ ಮೇಲೆ ನಾನೊಂದನ್ನೂ ನಡೆಸಲಾರೆನು. ಮುಂದೇನು ಮಾಡಬೇಕೆಂದು ನನಗೇನೂ ತೋರಲಿಲ್ಲ. ನನ್ನನ್ನು ಸೃಷ್ಟಿಸಿದ ಪರಮಪುರುಷನೇ ಮುಂದೆ ನಾನು ಮಾಡಬೇಕಾದ ಕಾರ್ಯಕ್ಕೂ ಪ್ರೇರಕನಾಗಿ, ಅದನ್ನು ನೆರವೇರಿಸಬೇಕಲ್ಲದೆ ನನ್ನಿಂದೇನೂ ಸಾಧ್ಯವಲ್ಲ" ಎಂದು ಕಳವಳಿಸುತ್ತಿದ್ದನು. ಹೀಗೆ ಬ್ರಹ್ಮನು ಚಿಂತಿಸುತ್ತಿರುವಾಗಲೇ ಆತನ ಮೂಗಿನ ರಂಧ್ರಗಳಿಂದ ಅಂಗುಷ್ಠ ಪ್ರಮಾಣಕ್ಕಿರುವ ಒಂದು ಸಣ್ಣ ವರಾಹವು ಹೊರಕ್ಕೆ ಬಂದಿತು. ವಿದುರಾ! ಇದನ್ನು ಬ್ರಹ್ಮಸೃಷ್ಟಿಯೆಂದೆಣಿಸಬೇಡ. ಪರಮಪುರುಷನೇ ತನ್ನ ಸಂಕಲ್ಪದಿಂದ ಈ ಆಕಾರವನ್ನು ತಾಳಿ ಬಂದಿರುವನೆಂದು ತಿಳಿ! ಆಹಾ! ಅದರ ಆಶ್ಚರ್ಯಶಕ್ತಿಯನ್ನೇನೆಂದು ಹೇಳಲಿ! ಚತುರ್ಮುಖನು ಕಣ್ಣಿಟ್ಟು ನೋಡುತ್ತಿರುವಾಗಲೇ ಅಷ್ಟು ಸೂಕ್ಷ್ಮಾಕೃತಿಯಿಂದಿದ್ದ ಆ ಹಂದಿಯು ಮರಿಯು, ಅಂತರಿಕ್ಷದಲ್ಲಿಯೇ ಹಾರಾಡುತ್ತಿದ್ದು, ಒಂದು ಕ್ಷಣ ಮಾತ್ರದಲ್ಲಿ ಆನೆಯ ಪ್ರಮಾಣಕ್ಕೆ ಬೆಳೆಯಿತು. ಈ ವರಾಹವು ಇದ್ದಕ್ಕಿದ್ದ ಹಾಗೆ ಬ್ರಹ್ಮನ ನಾಸಿಕಾರಂಧ್ರದಿಂದ ಹೊರಟುದೂ, ಅದು ಹುಟ್ಟಿದ ಕೂಡಲೇ ಆಕಾಶಕ್ಕೆ ಹಾರಿದುದೂ, ಆಕಾಶಕ್ಕೆ ಹಾರಿದೊಡನೆ ಆನೆಯ ಹಾಗೆ ಬೆಳೆದುದೂ, ನೋಡುವವರಿಗೆ ಅತ್ಯಾಶ್ಚರ್ಯಕರವಾಯಿತು. ಆಗ ಬ್ರಹ್ಮನು ಮರೀಚಿ ಮೊದಲಾದ ತನ್ನ ಪುತ್ರರೊಡನೆಯೂ, ಸನಕಾದಿ ಕುಮಾರರೊಡನೆಯೂ, ತನ್ನ ಮಗನಾದ ಸ್ವಾಯಂಭುವ ಮನುವಿನೊಡನೆಯೂ ಕೂಡಿ, ವಿಸ್ಮಯಪಡುತ್ತ, ಮನಸ್ಸಿನಲ್ಲಿ ನಾನಾವಿಧವಾಗಿ ಚಿಂತಿಸತೊಡಗಿದನು. "ಇದೇನಿದು! ಈ ವರಾಹವೆಲ್ಲಿಯದು? ಒಂದುವೇಳೆ ಪರಮವೈಕುಂಠದಲ್ಲಿ ಶುದ್ಧ ಸತ್ವಮಯಮೂರ್ತಿಯಾಗಿದ್ದ ಆ ಪರಬ್ರಹ್ಮವೇ ಹೀಗೆ ಈ ವರಾಹರೂಪವನ್ನು ತಾಳಿ ಬಂದಿರಬಹುದೇ? ನನ್ನ ಮೂಗಿನ ದ್ವಾರ

ವಿಂದ ಈ ವರಾಹವು ಹೊರಟುಬಂದುದು, ನನಗೆ ಬಹಳ ಆಶ್ಚರ್ಯಕಾರಣ ವಾಗಿರುವುದು. ಆಹಾ! ಏನಾಶ್ಚರ್ಯ! ಮೊದಲು ಈ ವರಾಹವು ಹೆಬ್ಬೆರಳಿನ ಗಿಣ್ಣಿನಷ್ಟು ಸೂಕ್ಷ್ಮರೂಪದಿಂದ ಕಾಣಿಸಿತು. ಉತ್ತರಕ್ಷಣದಲ್ಲಿಯೇ ಪರ್ವತದ ದೊಡ್ಡ ಬಂಡೆಯಂತೆ ಉಬ್ಬಿ ಬೆಳೆಯಿತು. ಹೀಗೆ ವರಾಹಾಕೃತಿಯಿಂದಿದ್ದು, ಅದ್ಭುತ ವ್ಯಾಪಾರಗಳಿಂದ ನನ್ನ ಮನಸ್ಸನ್ನು ಕಳವಳಗೊಳಿಸುತ್ತಿರುವ ಈ ವಸ್ತುವು, ಯಜ್ಞರೂಪಿಯಾದ ಆ ಭಗವಂತನೇ ಆಗಿರಬಹುದೇ? ನಿಜಸ್ಥಿತಿಯೇನೋ ತಿಳಿಯಲಿಲ್ಲವಲ್ಲಾ" ಎಂದು ದುಃಖಿಸುತ್ತ, ಇದೇ ವಿಷಯವನ್ನು ಕುರಿತು ತನ್ನ ಮಕ್ಕಳಾದ ಮರೀಚಿ ಮೊದಲಾದವರೊಡನೆಯೂ ತರ್ಕಿಸುತ್ತಿದ್ದನು. ಹೀಗೆ ಬ್ರಹ್ಮನು ಚಿಂತಿಸುತ್ತಿರುವಾಗಲೇ, ವರಾಹ ರೂಪವನ್ನು ತಾಳಿ ಪರ್ವತದಂತೆ ಅದ್ಭುತಾಕೃತಿಯಿಂದ ತೋರುತ್ತಿದ್ದ ಆ ಪರಮಪುರುಷನು, ನಾನಾ ದಿಕ್ಕುಗಳಲ್ಲಿಯೂ ಪ್ರತಿಧ್ವನಿ ಹೊರಡುವಂತೆ ಒಂದು ಗಂಭೀರ ಗರ್ಜನವನ್ನು ಮಾಡಿದನು. ಈ ಅದ್ಭುತವಾದ ಗರ್ಜನ ಧ್ವನಿಯನ್ನು ಕೇಳಿದೊಡನೆ, ಬ್ರಹ್ಮನಿಗೂ, ಅವನ ಮಕ್ಕಳಾದ ಮರೀಚಿ ಮೊದಲಾದ ಬ್ರಾಹ್ಮಣೋತ್ತಮರಿಗೂ ಮನಸ್ಸಿನಲ್ಲಿ ಒಂದು ವಿಧವಾದ ಸಂತೋಷವು ಹುಟ್ಟಿತೇ ಹೊರತು, ಭಯವುಂಟಾಗಲಿಲ್ಲ. ಕಪಟ ವರಾಹ ರೂಪದಿಂದಿದ್ದ ಭಗವಂತನು ಈ ಧ್ವನಿ ಮಾಡಿದುದನ್ನು ಕೇಳಿ, ಜನಲೋಕ, ತಪೋಲೋಕ, ಸತ್ಯಲೋಕವೆಂಬ ಈ ಮೂರು ಲೋಕಗಳಲ್ಲಿರತಕ್ಕ ಮಹರ್ಷಿಗಳೆಲ್ಲರೂ, ಋಕ್ಕು, ಯಜುಸ್ಸು, ಸಾಮವೆಂಬ ಮೂರು ವೇದ ಸೂಕ್ತಗಳಿಂದ ಆ ಭಗವಂತನನ್ನು ಸ್ತೋತ್ರಮಾಡತೊಡಗಿದರು. ಯಜ್ಞಸ್ವರೂಪನಾದ ಆ ಭಗವಂತನು, ಮಹರ್ಷಿಗಳ ಬಾಯಿಂದ ಹೊರಟ ಈ ಸ್ತುತಿವಾಕ್ಯಗಳನ್ನು ಕೇಳಿ, ತಾನು ಅವರಲ್ಲಿ ಪ್ರಸನ್ನನಾದುದನ್ನು ಸೂಚಿಸುವಂತೆ, ಮೇಲೆ ಮೇಲೆ ಘರ್ಘರಧ್ವನಿಯನ್ನು ಮಾಡುತ್ತ, ಕೊನೆಗೆ ಅವರೆಲ್ಲರ ಕ್ಷೇಮಕ್ಕಾಗಿ ಮದದಾನೆಯಂತೆ ಗಂಭೀರವಾದ ನಡೆಯಿಂದ ಆ ಮಹಾ ಸಮುದ್ರದೊಳಗೆ ಪ್ರವೇಶಿಸಿಬಿಟ್ಟನು. ಭೂಮ್ಯುದ್ಧರಣಾರ್ಥವಾಗಿ ಹೊರಟ ಆ ಮಾಯಾವರಾಹದ ಲೀಲೆಗಳನ್ನು ಕೇಳಬೇಕೇ? ಬಾಲವನ್ನು ಮೇಲಕ್ಕೆ ತೂಗಿ, ಪಕ್ಷಿಯಂತೆ ಆಕಾಶದಲ್ಲಿಯೇ ಹಾರಾಡುತ್ತಿರುವುದು! ಆಗಾಗ ತನ್ನ ಕಠಿನವಾದ ಸಟೆಗಳನ್ನು ವೇಗದಿಂದೊದರುತ್ತಿರುವುದು! ತನ್ನ ತೀಕ್ಷ್ಣವಾದ

ಗೊರಸಲುಗಳಿಂದ ಆಗಾಗ ಮೇಘಗಳನ್ನು ಅಪ್ಪಳಿಸುತ್ತಿರುವುದು! ಮತ್ತು ಕಠಿನ ರೋಮಗಳಿಂದ ತುಂಬಿದ ತೊಗಲು! ಬಾಯಿಯ ಉಭಯ ಪಾರ್ಶ್ವಗಳಲ್ಲಿಯೂ ಚಂದ್ರನಂತೆ ಬಿಳುಪಾದ ಕೋರೆದಾಡೆಗಳು! ಲೋಕವೆಲ್ಲವನ್ನೂ ಬೆಳಗುವಂತೆ ಜ್ವಲಿಸುವ ಕಣ್ಣಾಲೆಗಳು! ತಾನೇ ಯಜ್ಞಸ್ವರೂಪವಾಗಿದ್ದರೂ ಆ ಮಾಯಾವರಾಹವು, ಪಶುಸ್ವಭಾವಕ್ಕೆ ತಕ್ಕಂತೆ ತನ್ನ ಮೂಗಿನಿಂದ ಆಗಾಗ ನೆಲವನ್ನು ಮೂಸಿನೋಡುತ್ತ ಭೂಮಿಯ ಮಾರ್ಗವನ್ನು ಹುಡುಕುತ್ತಿರುವುದು! ಭಯಂಕರಗಳಾದ ಕೋರೆದಾಡೆಗಳಿಂದ ಕೂಡಿದ್ದರೂ, ತನ್ನ ಮುಂದೆ ನಿಂತಿದ್ದ ಮಹರ್ಷಿಗಳನ್ನು ಪ್ರಸನ್ನವಾದ ನೋಟದಿಂದ ಸಂತೋಷಗೊಳಿಸುತ್ತಿರುವುದು! ಇಂತಹ ಮಹಾವರಾಹವು ವಜ್ರಮಯವಾದ ಪರ್ವತದಂತೆ ಅತಿ ಕಠಿನವಾದ ತನ್ನ ದೇಹದಿಂದ, ಆ ಸಮುದ್ರಜಲವನ್ನು ಭೇದಿಸಿಕೊಂಡು, ಒಳಗೆ ಪ್ರವೇಶಿಸುವಾಗ, ಮಹಾ ಸಮುದ್ರವೂ ಕೂಡ ಅದರ ವೇಗವನ್ನು ತಡೆಯಲಾರದೆ, ಬಹಳವಾಗಿ ನೊಂದು, ಅಲೆಗಳೆಂಬ ತನ್ನ ಕೈಗಳನ್ನು ನೀಡಿ, "ಯಜ್ಞಮೂರ್ತಿಯಾದ ಹೇ ಪರಮಪುರುಷಾ! ನನ್ನನ್ನು ಹಿಂಸಿಸದೆ ಕೃಪೆಯಿಂದ ರಕ್ಷಿಸಬೇಕು" ಎಂದು ಮೊರೆಯಿಡುವಂತಿತ್ತು. ಸವನಗಳೆಂಬ ಮೂರು ಯಜ್ಞಾಂಗಗಳನ್ನು ತನ್ನ ದೇಹದಲ್ಲಿಯೇ ತೋರಿಸುವಂತೆ, ಮೂರು ರೇಖೆಗಳಿಂದ ಕೂಡಿದ ಹಿರಳುಳ್ಳ ಅಪ್ರಮೇಯಮಹಿಮನಾದ ಆ ಯಜ್ಞವರಾಹನು, ಕತ್ತಿಯಂತಿರುವ ತನ್ನ ಗೊರಸಲುಗಳಿಂದ ಜಲವನ್ನು ಭೇದಿಸಿಕೊಂಡು, ಒಳಗೆ ಪ್ರವೇಶಿಸಿ, ರಸಾತಲದವರೆಗೆ ಹೋದನು. ಮೊದಲು ತಾನು ಸಮುದ್ರಶಾಯಿಯಾಗಿ ಯೋಗನಿದ್ರೆಯಲ್ಲಿದ್ದಾಗ, ಸಮಸ್ತಜೀವರಾಶಿಗೂ ಆಶ್ರಯವಾದ ಯಾವ ಭೂಮಿಯನ್ನು ತನ್ನ ದೇಹದಲ್ಲಿ ಧರಿಸಿದ್ದನೋ, ಆ ಭೂಮಿಯು ಅಲ್ಲಿರುವುದನ್ನು ಕಂಡನು. ಒಡನೆಯೇ ಆ ಭೂಮಿಯನ್ನು ತನ್ನ ಕೊನೆದಾಡೆಯಿಂದ ಮೀಟಿ, ರಸಾತಲದಿಂದ ಮೇಲಕ್ಕೆದ್ದು ಬಂದು ದಿವ್ಯತೇಜಸ್ಸಿನಿಂದ ಶೋಭಿಸುತ್ತಿದ್ದನು. ಈ ಸಮಯದಲ್ಲಿ ಆದಿದೈತ್ಯನೆನಿಸಿಕೊಂಡ ಹಿರಣ್ಯಾಕ್ಷನೆಂಬ ಕ್ರೂರರಾಕ್ಷಸನೊಬ್ಬನು ಗದೆಯನ್ನು ಹಿಡಿದು ಭಯಂಕರವಾದ ಸಿಂಹನಾದವನ್ನು ಮಾಡುತ್ತ, ಆ ವರಾಹಮೂರ್ತಿಯನ್ನು ಇದಿರಿಸುವುದಕ್ಕೆ ನಿಂತನು. ಆಗ ಈ ಆದಿವರಾಹನು, ಆ ರಾಕ್ಷಸನನ್ನು ನೋಡಿ, ಅತಿ ತೀವ್ರವಾದ ಕೋಪಾವೇಶವನ್ನು ಹೊಂದಿದವ

ನಾಗಿ, ಸಿಂಹವು ಆನೆಯನ್ನು ಸೀಳುವಂತೆ ಲೀಲಾಮಾತ್ರದಿಂದಲೇ ಆ ರಾಕ್ಷಸನನ್ನು ಕೊಂದು ಕೆಡಹಿದನು. ಆಗ ಆ ರಾಕ್ಷಸನ ದೇಹ ರಕ್ತದಿಂದ ತೊಯ್ದ ಮೂರ್ತಿಯುಳ್ಳ ಆ ಆದಿವರಾಹನು, ಪರ್ವತದ ಮೇಲೆ ವಪ್ರಕ್ರೀಡೆಯನ್ನಾಡುವಾಗ, ಅಲ್ಲಿನ ಗೈರಿಕಾದಿ ಧಾತುಗಳ ಕೆಂಪು ಬಣ್ಣದಿಂದ ಕೂಡಿದ ಕೊಂಬುಳ್ಳ ಮಹಾಗಜವೋ ಎಂಬಂತೆ ಕಾಣುತ್ತಿದ್ದನು. ಹೊಂಗೆಯ ಚಿಗುರಿನಂತೆ ಕಪ್ಪಾದ ದೇಹಕಾಂತಿಯುಳ್ಳ ಆ ಆದಿವರಾಹನು, ಗಜೇಂದ್ರಲೀಲೆಯಲ್ಲಿ ತನ್ನ ಕೊಂಬುಗಳಿಂದ ಭೂಮಿಯನ್ನು ಮೇಲಕ್ಕೆತ್ತಿ ತಂದುದನ್ನು ನೋಡಿ, ಬ್ರಹ್ಮಾದಿ ದೇವತೆಗಳೂ, ಮಹರ್ಷಿಗಳೂ ಅತ್ಯಾನಂದಭರಿತರಾಗಿ ಆ ವರಾಹಮೂರ್ತಿಯ ಮುಂದೆ ಕೈಜೋಡಿಸಿ ನಿಂತು, ವೇದವಾಕ್ಯಗಳಿಂದ ಹೀಗೆಂದು ಸ್ತೋತ್ರಮಾಡತೊಡಗಿದರು.

### ಮಹರ್ಷಿಕೃತ ವಾರಾಹಮೂರ್ತಿ ಸ್ತುತಿಃ

ಜಿತಂ ಜಿತಂ ತೇಽಜಿತ ಯಜ್ಞಭಾವನ
ತ್ರಯೀಂ ತನುಂ ಸ್ವಾಂ ಪರಿಧುನ್ವತೇ ನಮಃ ।
ಯದ್ರೋಮಗರ್ತೇಷು ನಿಲಿಲ್ಯುರಬ್ಧಯ
ಸ್ತಸ್ಮೈ ನಮಃ ಕಾರಣಸೂಕರಾಯ ತೇ ॥ ೧ ॥

ಓ ದೇವಾ! ಎಲೈ ಯಜ್ಞಾರಾಧ್ಯನೇ! ಲೋಕದಲ್ಲಿ ಬೇರೊಬ್ಬರಿಂದ ಅಡಗಿಸಲಸಾಧ್ಯವಾದ ದಿವ್ಯತೇಜಸ್ಸುಳ್ಳ ನಿನಗೆ ಜಯವಾಗಲಿ! ಜಯವಾಗಲಿ! ವೇದಮಯವಾದ ನಿನ್ನ ದಿವ್ಯವಿಗ್ರಹವನ್ನು ಈ ವಿಧವಾಗಿ ತೋರುತ್ತಿರುವ ನಿನಗೆ ನಮಸ್ಕಾರವು! ಯಾವ ನಿನ್ನ ಒಂದೊಂದು ರೋಮಕೂಪದಲ್ಲಿಯೇ ಸಪ್ತಸಮುದ್ರಗಳೂ ಅಡಗಿರುವುವೋ, ಅಂತಹ ಜಗತ್ಕಾರಣನಾದ, ಆದಿವರಾಹಮೂರ್ತಿಯಾದ ನಿನಗೆ ನಮಸ್ಕಾರವು.

ರೂಪಂ ತವೈತನ್ನನು ದುಷ್ಕೃತಾತ್ಮನಾಂ
ದುರ್ದರ್ಶನಂ ದೇವ ಯದಧ್ವರಾತ್ಮಕಮ್ ।
ಛಂದಾಂಸಿ ಯಸ್ಯ ತ್ವಚಿ ಬರ್ಹಿರೋಮ
ಸ್ವಾಜ್ಯಂ ದೃಶಿ ತ್ವಂಘ್ರಿಷು ಚಾತುರ್ಹೋತ್ರಮ್ ॥ ೨ ॥




೧೪೨. ವರಾಹಸ್ವಾಮಿಯು ಭೂಮಿಯನ್ನು ಸಮುದ್ರದಿಂದ ಮೇಲಕ್ಕೆತ್ತಿದುದು

ದೇವಾ! ಯಜ್ಞಮೂರ್ತಿಯಾದ ಈ ನಿನ್ನ ಸ್ವರೂಪವು ಯೋಗನಿಷ್ಠರಿಗಲ್ಲದೆ ಪಾಪಿಗಳಿಗೆ ಗೋಚರಿಸಲಾರದು! ಗಾಯತ್ರಿ ಮೊದಲಾದ ಛಂದಸ್ಸುಗಳೆಲ್ಲವೂ ನಿನ್ನ ಚರ್ಮದಲ್ಲಿ, ಯಜ್ಞಸಾಧನಗಳಾದ ದರ್ಭೆಗಳು ನಿನ್ನ ರೋಮಗಳಲ್ಲಿ, ಹವಿಸ್ಸೆಂಬುದು ನಿನ್ನ ನೇತ್ರದಲ್ಲಿ, ಅಧ್ವರ್ಯು ಮೊದಲಾದ ಚತುರ್ವೇದಾಧಿಕಾರಿಗಳು ನಡೆಸತಕ್ಕ ಚಾತುರ್ಹೋತ್ರವೆಂಬ ಕರ್ಮವು ನಿನ್ನ ನಾಲ್ಕು ಪಾದಗಳಲ್ಲಿಯೂ ನೆಲೆಗೊಂಡಿರುವುದರಿಂದ ನೀನೇ ಯಜ್ಞಸ್ವರೂಪನು.

ಸ್ರುಕ್ತುಂಡ ಆಸೀತ್ಸ್ರುವ ಈಶ ನಾಸಯೋ
ರಿಡೋದರೇ ಚಮಸಾಃ ಕರ್ಣರಂಧ್ರೇ ।
ಪ್ರಾಶಿತ್ರಮಾಸ್ಯೇ ಗ್ರಸನೇ ಗ್ರಹಾಸ್ತು ತೇ
ಯಚ್ಚರ್ವಣಂ ತೇ ಭಗವನ್ನಗ್ನಿಹೋತ್ರಮ್ ॥ ೩ ॥

ಮತ್ತು ಹೇ ದೇವಾ! ಸ್ರುಕ್ಕು, ಸ್ರುವೆ, ಇಡೆ, ಚಮಸ, ಪ್ರಾಶಿತ್ರ, ಗ್ರಹಗಳೆಂಬ ಬೇರೆ ಬೇರೆ ಆರು ಬಗೆಯ ಯಜ್ಞಪಾತ್ರಗಳೂ, ಕ್ರಮವಾಗಿ ನಿನ್ನ ಮುಖಾಗ್ರ, ಮೂಗು, ಗರ್ಭಕೋಶ, ಕಿವಿ, ಬಾಯಿ, ಕಂಠನಾಲವೆಂಬೀ ಆರು ಸ್ಥಾನಗಳಲ್ಲಿ ಸೇರಿರುವುವು. ಅಗ್ನಿಹೋತ್ರವೆಂಬ ಕರ್ಮವೇ ನಿನ್ನ ಭಕ್ಷಣವು.

ದೀಕ್ಷಾನುಜನ್ಮೋಪಸದಶ್ಶಿರೋಧರ
ಸ್ತ್ವಂ ಪ್ರಾಯಣೀಯೋದಯನೀಯದಂಷ್ಟ್ರಃ ।
ಜಿಹ್ವಾ ಪ್ರವರ್ಗ್ಯಸ್ತವ ಶೀರ್ಷಕಂ ತೋ
ಸ್ಸಭ್ಯಾವಸಥ್ಯಂ ಚಿತಯೋಽಸವೋ ಹಿ ತೇ ॥ ೪ ॥

ಓ ಮಹಾತ್ಮಾ! ಯಜ್ಞಗಳಲ್ಲಿ ದೀಕ್ಷಾಸಂಸ್ಕಾರವೆಂಬ ಇಷ್ಟಿಯೇ ನಿನ್ನ ಆಗಾಗಿನ ಅವತಾರಭೇದಗಳು. ಉಪಸತ್ತುಗಳೆಂಬ ಮೂರು ಬಗೆಯ ಯಾಗಗಳೇ ನಿನ್ನ ಕಂಠವು. ಆರಂಭದಲ್ಲಿಯೂ, ಅವಸಾನದಲ್ಲಿಯೂ ನಡೆಸತಕ್ಕ ಪ್ರಾಯಣೀಯ ಉದಯನೀಯಗಳೆಂಬ ಯಜ್ಞಾಂಗಗಳೆರಡೂ ನಿನ್ನ ದಂಷ್ಟ್ರಗಳು. ಪ್ರವರ್ಗ್ಯವೆಂಬ ಕರ್ಮವು ನಿನ್ನ ನಾಲಗೆ. ಸಭ್ಯವೆಂಬ ಅಗ್ನಿಯೂ, ಔಪಾಸನಾಗ್ನಿಯೂ ನಿನ್ನ ಶಿರಸ್ಸು. ಚಿತಿಗಳೆಂಬ ಯಜ್ಞ

ಗಳು ನಿನ್ನ ಪ್ರಾಣಗಳು. ಇಂತಹ ಯಜ್ಞಸ್ವರೂಪನಾದ ನಿನಗೆ ನಮಸ್ಕಾರವು.

ಸೋಮಸ್ತು ರೇತಸ್ಸವನಾನ್ಯವಸ್ಥಿತಿ
ಸ್ಸಂಸ್ಥಾವಿಭೇದಾಸ್ತವ ದೇವ ಧಾತವಃ ।
ಸತ್ರಾಣಿ ಸರ್ವಾಣಿ ಶರೀರಸಂಧಿ
ಸ್ತ್ವಂಸರ್ವಯಜ್ಞಕ್ರತುರಿಷ್ಟಿ ಬನ್ಧನಃ ॥ ೫ ॥

ಹೇ ಸ್ವಾಮಿಾ! ಸೋಮವೆಂಬುದೇ ನಿನ್ನ ವೀರ್ಯವು. ಪ್ರಾತಸ್ಸವನವೇ ಮೊದಲಾದ ಯಾಗಗಳೇ ನಿನ್ನ ಬಾಲ್ಯಾದಿ ದಶೆಗಳು. ಅಗ್ನಿಷ್ಟೋಮ, ಉಕ್ಥ್ಯ, ಷೋಡಶಿ, ವಾಜಪೇಯ, ಅತಿರಾತ್ರ, ಅಪ್ತೋರ್ಯಾಮಗಳೆಂಬ ಏಳು ಬಗೆಯ ಸಂಸ್ಥಾಭೇದಗಳೂ ನಿನ್ನ ಶರೀರದ ಸಪ್ತಧಾತುಗಳು. ಅನೇಕ ಯಜಮಾನರುಳ್ಳ ಸತ್ರಯಾಗಗಳೆಲ್ಲವೂ ನಿನ್ನ ದೇಹದ ಕೀಲುಗಳು. ಯಜ್ಞಗಳೆಂದೂ, ಕ್ರತುಗಳೆಂದೂ ಕರೆಯಲ್ಪಡುವ ಯಾಗಭೇದಗಳೆಲ್ಲವೂ ನೀನೇ! ಇಷ್ಟಿಯೆಂಬುದೇ ನಿನ್ನ ಮಧ್ಯಭಾಗವು. ಇಂತಹ ಯಜ್ಞರೂಪಿಯಾದ ನಿನಗೆ ನಮಸ್ಕಾರವು.

ನಮೋ ನಮಸ್ತೇಽಖಿಲಮಂತ್ರದೇವತಾ
ದ್ರವ್ಯಾಯ ಸರ್ವಕ್ರತವೇ ಕ್ರಿಯಾತ್ಮನೇ ।
ವೈರಾಗ್ಯಭಕ್ತ್ಯಾತ್ಮಜಯಾನುಭಾವಿತ
ಜ್ಞಾನಾಯ ವಿದ್ಯಾಗುರವೇ ನಮೋ ನಮಃ ॥ ೬ ॥

ಓ ದೇವಾ! ನೀನು ಸಮಸ್ತ ಮಂತ್ರವನ್ನೂ ಶರೀರವಾಗಿ ಉಳ್ಳವನು. ಯಜ್ಞದ್ರವ್ಯವೆಲ್ಲವೂ ನಿನ್ನ ರೂಪವೆನಿಸುವುದು. ನೀನೇ ಯಜ್ಞಸ್ವರೂಪನು. ನೀನೇ ಧರ್ಮಸ್ವರೂಪನು. ವೈರಾಗ್ಯದಿಂದಲೂ, ಭಕ್ತಿಯಿಂದಲೂ, ಇಂದ್ರಿಯಜಯದಿಂದಲೂ ಉಂಟಾಗತಕ್ಕ ಜ್ಞಾನವೇ ನಿನ್ನ ಅನುಗ್ರಹಕ್ಕೆ ಮುಖ್ಯಕಾರಣವು. ಬೇರೆ ಬೇರೆ ಅವತಾರಗಳ ಮೂಲಕವಾಗಿ ನ್ಯಾಸವಿದ್ಯೆಯನ್ನು ಪ್ರಕಾಶಪಡಿಸಿದ ಮಹೋಪಕಾರಕನೂ ನೀನೇ! ಹೀಗೆ ವೇದಗಳ ಪೂರ್ವೋತ್ತರಭಾಗಗಳೆಲ್ಲಕ್ಕೂ ಪ್ರತಿಪಾದ್ಯನಾದ ನಿನಗೆ ನಮಸ್ಕಾರವು! ನಮಸ್ಕಾರವು!!

ದಂಷ್ಟ್ರಾಗ್ರ ಕೋಟ್ಯಾ ಭಗವಂಸ್ತ್ವಯಾ ಧೃತಾ
ವಿರಾಜತೇ ಭೂಧರ ಭೂಸ್ಸಭೂಧರಾ ।
ಯಥಾ ವನಾನ್ನಿಸ್ಸರತೋದತಾ ಧೃತಾ
ಮತಙ್ಗಜೇಂದ್ರಸ್ಯ ಸಪತ್ರಪದ್ಮಿನೀ ॥ ೭ ॥

ಎಲೈ ದೇವದೇವನೆ! ಈಗ ನೀನು ದಂಷ್ಟ್ರಾಗ್ರದಿಂದೆತ್ತಿ ತಂದಿರುವ ಪರ್ವತಸಹಿತವಾದ ಈ ಭೂಮಿಯು, ಕೊಳದಲ್ಲಿ ನೀರಾಟವನ್ನಾಡಿ ಮೇಲೆದ್ದು ಬಂದ ಮದದಾನೆಯು ಪದ್ಮಸಹಿತವಾದ ಒಂದು ಕಮಲಲತೆಯನ್ನು ತನ್ನ ಕೊಂಬುಗಳಿಂದ ಕಿತ್ತು ತಂದಂತೆ ತೋರುತ್ತಿರುವುದು.

ತ್ರಯೀಮಯಂ ರೂಪಮಿದಂ ಚ ಸೌಕರಂ
ಭೂಮಣ್ಡಲೇನಾಥ ದತಾ ಧೃತೇನ ತೇ ।
ಚಕಾಸ್ತಿ ಶೃಂಗೇಣ ಘನೇನ ಭೂಯಸಾ
ಕುಲಾಚಲೇನ್ದ್ರಸ್ಯ ಯಥೈವ ವಿಭ್ರಮಃ ॥ ೮ ॥

ದೇವಾ! ವೇದಮಯವಾದ ಈ ನಿನ್ನ ವರಾಹಸ್ವರೂಪವು, ದಂಷ್ಟ್ರಾಗ್ರದಲ್ಲಿ ಧರಿಸಿದ ಈ ಭೂಮಂಡಲದಿಂದ, ಮೇಘಸಮೂಹದಿಂದೊಪ್ಪುವ ಶಿಖರವುಳ್ಳ ದೊಡ್ಡ ಕುಲಪರ್ವತವನ್ನು ಹೋಲುತ್ತಿರುವುದು.

ಸಂಸ್ಥಾಪಯೈನಾಂ ಜಗತೀಂ ಸತಸ್ಥುಷಾಂ
ಲೋಕಾಯ ಪತ್ನೀಮಸಿ ಮಾತರಂ ಪಿತಾ ।
ವಿಧೇಮ ಚಾಸ್ಯೈ ನಮಸಾ ಸಹ ತ್ವಯಾ
ಯಸ್ಯಾಂ ಸ್ವತೇಜೋಽಗ್ನಿಮಿವಾರಣಾವಧಾಃ ॥ ೯ ॥

ಓ ಪರಮಪುರುಷಾ! ಸಮಸ್ತ ಚರಾಚರಗಳ ನಿವಾಸಕ್ಕಾಗಿ ಈಗ ನೀನುದ್ಧರಿಸಿ ತಂದ ಈ ಭೂಮಿಯನ್ನು, ಸರಿಯಾದ ಸ್ಥಾನದಲ್ಲಿ ಸ್ಥಿರವಾಗಿ ನಿಲ್ಲಿಸು! ಸರ್ವಲೋಕಜನಕನಾದ ನಿನಗೆ ಇವಳು ಪತ್ನಿಯಾದುದರಿಂದ, ಈ ಭೂದೇವಿಯೇ ನಮಗೆ ತಾಯಿಯು. ಯಜ್ಞಕರ್ತರು ಮಂತ್ರದಿಂದ ಅರಣಿಯಲ್ಲಿ ಅಗ್ನಿಯನ್ನಿಡುವಂತೆ, ಈಕೆಯಲ್ಲಿ ನೀನು ನಿನ್ನ ತೇಜಸ್ಸನ್ನಿಟ್ಟಿರುವೆ. ಆದುದರಿಂದ ನಿನ್ನೊಡನೆ ಈಕೆಗೂ ನಾವು ವಂದನಗಳನ್ನರ್ಪಿಸುವೆವು.

ಕಶ್ಯ ೨ದ್ಧಧೀತಾನ್ಯತಮಸ್ತವ ಪ್ರಭೋ
ರಸಾಂ ಗತಾಯಾ ಭುವ ಉದ್ವಿಬರ್ಹಣಮ್ ।
ನ ವಿಸ್ಮಯೋಽಸೌ ತ್ವಯಿ ವಿಶ್ವವಿಸ್ಮಯೇ
ಸ್ವಮಾಯಯೇದಂ ಸಸೃಜೇಽತಿವಿಸ್ಮಯಮ್ ॥ ೧೦ ॥

ಹೇ ಪ್ರಭೂ! ರಸಾತಲದಲ್ಲಿ ಹುದುಗಿದ್ದ ಭೂಮಿಯನ್ನು ಮೇಲಕ್ಕೆತ್ತಿ ತಂದ ಈ ಆಶ್ಚರ್ಯವ್ಯಾಪಾರವು ನಿನಗೆ ಹೇಗೆ ಸಾಧ್ಯವಾಯಿತೆಂಬುದನ್ನು ಯಾರೂ ತಿಳಿಯಲಾರರು! ಆದರೇನು? ಮಹಾಶ್ಚರ್ಯಕರವಾದ ಪ್ರಪಂಚವನ್ನು ಚಿತ್ರವಿಚಿತ್ರವಾಗಿ ಸೃಷ್ಟಿಸತಕ್ಕ ಆಶ್ಚರ್ಯಶಕ್ತಿಯುಳ್ಳ, ನಿನಗೆ ಇದೇನೂ ಅಷ್ಟೊಂದು ಅದ್ಭುತಕಾರ್ಯವಲ್ಲ.

ವಿಧೂನ್ವತಾ ವೇದಮಯಂ ನಿಜಂ ವಪು
ರ್ಜನಸ್ತಪಸ್ಸತ್ಯನಿವಾಸಿನೋ ವಯಮ್ ।
ಸಟಾಶಿಖೋದ್ಧೂತಶಿವಾಮ್ಬುಬಿನ್ದುಭಿ
ರ್ವಿಮೃಜ್ಯಮಾನಾ ಭೃಶಮೀಶ ಪಾವಿತಾಃ ॥ ೧೧ ॥

ಹೇ ದೇವಾ! ವೇದಸ್ವರೂಪನಾದ ನೀನು, ಈ ವರಾಹರೂಪದೊಡನೆ ಸಮುದ್ರ ಮಧ್ಯದಿಂದ ಮೇಲೆದ್ದು ಬಂದು, ಕಂಠವನ್ನು ಕೊಡಹಿದಾಗ ನಿನ್ನ ಸಟಾಗ್ರದಿಂದ (ಕತ್ತಿನ ಕೂದಲಿನಿಂದ) ಉದುರಿದ ಪರಮಪವಿತ್ರವಾದ ಜಲಬಿಂದುಗಳೇ, ಜನಲೋಕ, ತಪೋಲೋಕ, ಸತ್ಯಲೋಕನಿವಾಸಿಗಳಾದ ನಮ್ಮೆಲ್ಲರನ್ನೂ ಪಾವನಮಾಡಿದುವು.

ಸ ವೈ ಬತ ಭ್ರಷ್ಟಮತಿಸ್ತವೇಷತೇ
ಯಃ ಕರ್ಮಣಾಂ ಪಾರಮಪಾರಕರ್ಮಣಃ ।
ಯದ್ಯೋಗಮಾಯಾಗುಣಯೋಗಮೋಹಿತಂ
ವಿಶ್ವಂ ಸಮಸ್ತಂ ಭಗವನ್ ವಿಧೇಹಿ ಶಂ ॥ ೧೨ ॥

ಎಲೈ ಭಗವಂತನೇ! ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳನ್ನು ನಡೆಸುತ್ತಿರುವ ನಿನ್ನ ಅದ್ಭುತ ಕಾರ್ಯವನ್ನು ಯಾರು ತಾನೇ ಕಾಣಬಲ್ಲರು! ಈ ವಧವಾದ ನಿನ್ನ ಚರಿತ್ರೆಗಳ ಎಲ್ಲೆಯನ್ನು ಯಾವನು ತಿಳಿಯಬೇಕೆಂದಪೇಕ್ಷಿಸುವನೋ, ಅಂತವನನ್ನು ಕೇವಲ ಬುದ್ಧಿಹೀನನೆಂದೇ ಎಣಿಸಬೇಕಲ್ಲವೇ?

ಓ ಸ್ವಾಮೀ! ಷಡ್ಗುಣಪರಿಪೂರ್ಣನಾಗಿ, ವಿಚಿತ್ರ ಸೃಷ್ಟಿಯನ್ನು ನಡೆಸುವ ನಿನ್ನ ಮಾಯೆಯ ಗುಣಗಳಾದ ಸತ್ವರಜಸ್ತಮಸ್ಸುಗಳ ಸಂಬಂಧದಿಂದ ಮೋಹಗೊಂಡಿರುವ ಲೋಕಕ್ಕೆ ನೀನು ಕ್ಷೇಮವನ್ನುಂಟುಮಾಡುವವನಾಗು" ಎಂದರು.

ಹೀಗೆ ಮಹರ್ಷಿಗಳು ವೇದವಾಕ್ಯಗಳಿಗೆ ಸಮಾನವಾದ ವಾಕ್ಯಗಳಿಂದ ಸ್ತೋತ್ರಮಾಡಲು, ಲೋಕರಕ್ಷಕನಾದ ಭಗವಂತನು, ತನ್ನ ಕಾಲ್ಗೊರಸಲಿನ ರಂಧ್ರದಲ್ಲಿ ಸೇರಿದ್ದ ನೀರಿನ ಮೇಲೆಯೇ ಆ ಭೂಮಿಯನ್ನು ಸ್ಥಾಪಿಸಿಟ್ಟನು. ಹೀಗೆ ವರಾಹಮೂರ್ತಿಯು ಕೇವಲ ಲೀಲಾಮಾತ್ರದಿಂದಲೇ ರಸಾತಲದಲ್ಲಿ ಹುದುಗಿದ್ದ ಭೂಮಿಯನ್ನು ಮೇಲಕ್ಕೆತ್ತಿ ತಂದು, ಅದನ್ನು ತನ್ನ ಆಶ್ಚರ್ಯಶಕ್ತಿಯಿಂದ ಜಲದ ಮೇಲೆ ಸ್ಥಿರವಾಗಿ ನಿಲ್ಲಿಸಿ, ಅವರೆಲ್ಲರೂ ನೋಡುತ್ತಿದ್ದ ಹಾಗೆಯೇ ಅಂತರ್ಧಾನವನ್ನೂ ಹೊಂದಿದನು. ಓ ವಿದುರಾ! ಆದಿವರಾಹನು ಭೂಮಿಯನ್ನುದ್ಧರಿಸಿದ ಈ ಪವಿತ್ರವಾದ ಕಥೆಯನ್ನು ಯಾರು ಕಿವಿಯಿಂದ ಕೇಳುವರೋ, ಯಾರು ಬಾಯಿಂದ ಹೇಳುವರೋ, ಅವರ ಹೃದಯದಲ್ಲಿ ಶ್ರೀಮನ್ನಾರಾಯಣನು ಯಾವಾಗಲೂ ಪ್ರಸನ್ನನಾಗಿ ನೆಲೆಗೊಂಡಿರುವನು. ಸರ್ವಾಭೀಷ್ಟಗಳನ್ನೂ ಕೊಡತಕ್ಕ ಪ್ರಭುವಾದ ಆ ಪರಮಪುರುಷನು ಪ್ರಸನ್ನನಾದ ಮೇಲೆ, ಯಾವುದು ತಾನೇ ದುರ್ಲಭವು? ಈ ಭಗವದನುಗ್ರಹದಿಂದ ಬೇಕಾದ ಕೋರಿಕೆಗಳೆಲ್ಲವೂ ಈಡೇರುವ ಹಾಗಿದ್ದರೂ, ಅತ್ಯಲ್ಪಗಳಾದ ಇತರ ಪುರುಷಾರ್ಥಗಳಿಗಾಗಿ ಅದನ್ನು ಬಯಸುವುದರಿಂದ ಫಲವಿಲ್ಲ. "ನಾವು ಯಾವ ಫಲವನ್ನೂ ಅಪೇಕ್ಷಿಸದಿದ್ದರೆ, ಭಗವದುಪಾಸದಿಂದ ನಮಗಾಗುವ ಲಾಭವೇನು?" ಎಂದು ಕೇಳುವೆಯಾ? ಆ ಭಗವಂತನೇ ನಮ್ಮೆಲ್ಲರನ್ನೂ ಶರೀರವಾಗಿ ಹೊಂದಿ, ನಮ್ಮಲ್ಲಿ ಅಂತರಾತ್ಮನಾಗಿ, ಧಾರಕನಾಗಿಯೂ, ಪೋಷಕನಾಗಿಯೂ ಇರುವ ದೃಢಜ್ಞಾನವನ್ನು ಹೊಂದಿ ಅವನನ್ನು ಯಾರು ಉಪಾಸನೆಮಾಡುವರೋ, ಅಂತವರ ಹೃದಯದಲ್ಲಿ ಭಗವಂತನು ನಿತ್ಯವಾಸವನ್ನು ಮಾಡುತ್ತ, ಅವರಿಗೆ ಉತ್ತಮಗತಿಯಾದ ತನ್ನ ಸಾನ್ನಿಧ್ಯವನ್ನೂ ತಾನಾಗಿಯೇ ಅನುಗ್ರಹಿಸುವನು. ಇದೊಂದೇ ಮನುಷ್ಯನಿಗೆ ಉತ್ತಮಪುರುಷಾರ್ಥವು. ಇದನ್ನು ಬೇರೆ ಯಾವ ಉಪಾಯದಿಂದಲೂ ಪಡೆಯಲು ಸಾಧ್ಯವಲ್ಲ. ಪುರುಷಾರ್ಥಗಳ ಸಾರಾಸಾರವನ್ನು

ತಿಳಿದ ಯಾವ ಮನುಷ್ಯನು ತಾನೇ, ತನ್ನ ಕಿವಿಗಳೆಂಬ ಬೊಗಸೆಗಳಿಂದ ಸಂಸಾರ ತಾರಕವಾದ ಹರಿಕಥಾಮೃತವನ್ನು ಪಾನಮಾಡಿ, ಅದರ ರುಚಿಯನ್ನು ತಿಳಿದ ಮೇಲೆ, ತಿರುಗಿ ಅದನ್ನು ಪ್ರೀತಿಸದಿರುವನು? ವಿವೇಕಜ್ಞಾನವಿಲ್ಲದ ಕೇವಲ ಪಶುಗಳು ಹೊರತು ಮನುಷ್ಯನೆನಿಸಿಕೊಂಡವನೊಬ್ಬನೂ ಅದರಲ್ಲಿ ಅನಾದರವನ್ನು ತೋರಿಸಲಾರನು. ಆಃ! ಇದಲ್ಲವೇ ಭಗವತ್ಕಥಾಮೃತದ ಅದ್ಭುತಮಹಿಮೆಯು!" ಎಂದನು. ಇಲ್ಲಿಗೆ ಹದಿಮೂರನೆಯ ಅಧ್ಯಾಯವು.

---

ದಿತಿದೇವಿಯಲ್ಲಿ ಗರ್ಭೋತ್ಪತ್ತಿ ಮುಂತಾದ ವೃತ್ತಾಂತಗಳು.

ಹೀಗೆ ಮೈತ್ರೇಯನಿಂದ ವರ್ಣಿಸಲ್ಪಟ್ಟ ಆದಿವರಾಹಮೂರ್ತಿಯಾದ ಪರಮಪುರುಷನ ಚರಿತ್ರವನ್ನು ಕೇಳಿಯೂ ಕೂಡ, ಭಗವತ್ಕಥಾಶ್ರವಣದಲ್ಲಿ ಅತ್ಯಾಸೆಯುಳ್ಳ ವಿದುರನು, ಅಷ್ಟರಲ್ಲಿ ತೃಪ್ತಿಹೊಂದದೆ ಬದ್ಧಾಂಜಲಿಯಾಗಿ ನಿಂತು "ಓ ಮೈತ್ರೇಯಾ! ಭೂಮಿಯನ್ನುದ್ಧರಿಸುವಾಗ ವರಾಹಮೂರ್ತಿಯು, ಆದಿದೈತ್ಯನಾದ ಹಿರಣ್ಯಾಕ್ಷನನ್ನು ಕೊಂದನೆಂದು ಹೇಳಿದೆಯಲ್ಲವೆ? ಆ ವರಾಹಮೂರ್ತಿಯು ಭೂಮಿಯನ್ನುದ್ಧರಿಸುವಾಗ ಅವನಿಗೆ ಹಿರಣ್ಯಾಕ್ಷನೊಡನೆ ಯುದ್ಧವು ಹೇಗೆ ಸಂಭವಿಸಿತು? ಅದನ್ನು ವಿಸ್ತಾರವಾಗಿ ನನಗೆ ತಿಳಿಸಬೇಕು" ಎಂದನು. ಅದಕ್ಕಾ ಮೈತ್ರೇಯನು, "ಶಹಬಾಸ್! ವಿದುರಾ! ಮನುಷ್ಯರಿಗೆ ಮೃತ್ಯುಪಾಶವನ್ನು ತಪ್ಪಿಸತಕ್ಕ ಭಗವದವತಾರವನ್ನು ನೀನು ಕೇಳುವುದಕ್ಕಾಗಿ ನಾನು ಸಂತೋಷಪಟ್ಟೆನು. ಲೋಕದಲ್ಲಿ ಹರಿಕಥಾಶ್ರವಣವೆಂಬುದೇ ಸದ್ಗತಿಗೆ ಮುಖ್ಯಕಾರಣವು. ಈ ಭಗವಚ್ಚರಿತ್ರವನ್ನು ಕೇಳಿದುದರಿಂದಲ್ಲವೇ ಮೊದಲು, ಉತ್ತಾನಪಾದನ ಮಗನಾದ ಧ್ರುವನು, ಮೃತ್ಯುವಿನ ತಲೆಯನ್ನು ಮೆಟ್ಟಿ, ಭಗವಂತನ ಸಾನ್ನಿಧ್ಯವನ್ನು ಹೊಂದಿದನು. ಅದರಂತೆಯೇ ಆ ವಿಷ್ಣುವಿನ ಚರಿತ್ರವನ್ನು ಕುರಿತು ಪೂರ್ವದಲ್ಲಿ ಬ್ರಹ್ಮನು ದೇವತೆಗಳಿಗೆ ತಿಳಿಸಿದ ಒಂದಾನೊಂದು ಇತಿಹಾಸವನ್ನು ಹೇಳುವೆನು ಕೇಳು. ಪೂರ್ವದಲ್ಲಿ ದಕ್ಷನ ಮಗಳಾದ ದಿತಿಯೆಂಬವಳು ಕಶ್ಯಪ

ಪ್ರಜಾಪತಿಯನ್ನು ಮದುವೆಯಾದ ಮೇಲೆ, ಒಂದಾನೊಂದು ದಿನದಲ್ಲಿ ಕಾಮಾತುರದಿಂದಲೂ, ಸಂತಾನಾಭಿಲಾಷೆಯಿಂದಲೂ, ಸಂಧ್ಯಾಕಾಲದ ಸಮಯದಲ್ಲಿ, ತನ್ನ ಪತಿಯಾದ ಕಶ್ಯಪನ ಬಳಿಗೆ ಬಂದಳು. ಇವಳು ಕಶ್ಯಪನ ಬಳಿಗೆ ಬಂದ ಸಮಯದಲ್ಲಿ, ಕಶ್ಯಪನು, ಬಹಳ ಶ್ರದ್ಧೆಯಿಂದಲೂ, ನಿಯಮದಿಂದಲೂ, ಯಜ್ಞಾರಾಧ್ಯನಾದ ಪರಮಪುರುಷನನ್ನು ಪೂಜಿಸಿ, ಆತನನ್ನು ಹೃದಯದಲ್ಲಿ ಧ್ಯಾನಿಸುತ್ತ, ಅಗ್ನಿಶಾಲೆಯಲ್ಲಿ ನಿಷ್ಠೆಯಿಂದ ಕುಳಿತಿದ್ದನು. ಆಗ ದಿತಿಯು ಕಶ್ಯಪನನ್ನು ಸಮೀಪಿಸಿ "ಎಲೈ ಪ್ರಾಣಕಾಂತನೇ! ದುಷ್ಟನಾದ ಮನ್ಮಥನು ಧನುರ್ಬಾಣಗಳನ್ನು ಧರಿಸಿ, ಮದದಾನೆಯು ಬಾಳೆಯ ಕಂಬವನ್ನು ಮುರಿಯುವಂತೆ, ಅಬಲೆಯಾದ ನನ್ನನ್ನು ಬಾಧಿಸಿ ನಿನ್ನೊಡನೆ ಸಂಭೋಗಕ್ಕಾಗಿ ಪ್ರೇರಿಸುತ್ತಿರುವನು. ಆ ಮನ್ಮಥಬಾಧೆಯನ್ನು ತಡೆಯಲಾರದೆ ನಿನ್ನ ಬಳಿಗೆ ಬಂದಿರುವೆನು. ನಾಥಾ! ನೀನು ಸಮಸ್ತವನ್ನೂ ಬಲ್ಲವನು. ಆದುದರಿಂದ, ಸ್ತ್ರೀಯರಿಗೆ ಈ ಕಾಮಬಾಧೆಯೆಂಬುದು ಎಷ್ಟು ದುಸ್ಸಹವೋ, ಅದನ್ನು ನಾನು ಹೇಳಬೇಕಾದುದಿಲ್ಲ. ಇದಲ್ಲದೆ ನನ್ನ ಸವತಿಯರಾದ ನಿನ್ನ ಇತರ ಪತ್ನಿಯರೆಲ್ಲರೂ ಗರ್ಭಿಣಿಯರಾಗಿರುವರು. ಅದನ್ನು ನೋಡಿ ಹೇಗೆ ತಾನೇ ನಾನು ಸಹಿಸಲಿ? ಕಾಂತಾ! ನಿನಗೆ ಮಂಗಳವಾಗಲಿ! ಧರ್ಮಜ್ಞನಾದ ನಿನಗೆ, ಈ ಸ್ಥಿತಿಯಲ್ಲಿ ನನ್ನನ್ನು ರಕ್ಷಿಸಬೇಕಾದುದೇ ಅವಶ್ಯಕರ್ತವ್ಯವು. ನನ್ನನ್ನನುಗ್ರಹಿಸಬೇಕು. ನಾಥಾ! ಲೋಕದಲ್ಲಿ ಪತಿಯಿಂದ ಆದರಿಸಲ್ಪಡತಕ್ಕ ಸ್ತ್ರೀಯರೇ, ತಮ್ಮ ತಮ್ಮ ಇಷ್ಟಸಿದ್ಧಿಯನ್ನು ಪಡೆದು, ನಿರ್ಮಲವಾದ ಕೀರ್ತಿಯನ್ನೂ ಸಂಪಾದಿಸಬಲ್ಲರು. ನಿನ್ನಂತಹ ಪತಿಯು ನಮ್ಮ ಗರ್ಭದಲ್ಲಿ ಪುತ್ರರೂಪದಿಂದ ಜನಿಸಿದ ಪಕ್ಷದಲ್ಲಿ, ಅದರಿಂದ ನಮಗುಂಟಾಗತಕ್ಕ ಸನ್ಮಾನಕ್ಕೆ ಮಿತಿಯುಂಟೇ? ಇವೆಲ್ಲವೂ ನಿನಗೆ ತಿಳಿಯದ ವಿಷಯವಲ್ಲ. ಇದಲ್ಲದೆ, ಆದಿಯಿಂದಲೂ ನಿನ್ನಲ್ಲಿ ನನಗಿರತಕ್ಕ ಅನುರಾಗಕ್ಕೆ ಮಿತಿಯಿಲ್ಲ. ಇದಕ್ಕೆ ನಿದರ್ಶನವೇನೆಂದು ಕೇಳುವೆಯಾ? ನಮ್ಮ ಬಾಲ್ಯದಲ್ಲಿ ನಮ್ಮ ತಂದೆಯಾದ ದಕ್ಷನು, ನಮ್ಮೆಲ್ಲರನ್ನೂ ಕರೆಸಿ ನಮಗೆ ಇಷ್ಟನಾದ ವರನು ಯಾರೆಂಬುದನ್ನು ತಿಳಿಸಿದರೆ, ಅವನಿಗೇ ನಮ್ಮನ್ನು ಕೊಟ್ಟು ವಿವಾಹ ಮಾಡುವುದಾಗಿ ತಿಳಿಸಿದನು. ಆಗ ನಾವೆಲ್ಲರೂ ನಿನ್ನನ್ನೇ ವರಿಸುವುದಾಗಿ ಹೇಳಿದೆವು. ಆ ನಮ್ಮ ಅಭಿಪ್ರಾಯ

ವನ್ನು ತಿಳಿದ ಮೇಲೆಯೇ, ನನ್ನೊಡನೆ ಹದಿಮೂರು ಮಂದಿ ಸಹೋದರಿಯರನ್ನೂ ನಿನಗೆ ಕೊಟ್ಟು ವಿವಾಹ ಮಾಡಿದನು. ಮದುವೆಯಾದುದು ಮೊದಲು ನಾವು ನಿನ್ನ ಧರ್ಮಪತ್ನಿಯರಾಗಿ ನಿನ್ನನ್ನೇ ಅನುಸರಿಸುತ್ತಿರುವೆವು. ಹೀಗೆ ಅವಿಚ್ಛಿನ್ನವಾದ ಪ್ರೇಮವುಳ್ಳ ನಮ್ಮ ಕೋರಿಕೆಯನ್ನು ಈಡೇರಿಸದಿರುವುದು ನಿನಗೆ ಧರ್ಮವಲ್ಲ! ಇದಲ್ಲದೆ ನಿಮ್ಮಂತವರಲ್ಲಿ ಯಾಚಿಸಿದ ಕೋರಿಕೆಯು ಯಾವಾಗಲೂ ವ್ಯರ್ಥವಾಗಲಾರದು. ಆದುದರಿಂದ ನನ್ನನ್ನು ರಕ್ಷಿಸಬೇಕು" ಎಂದನು. ಹೀಗೆ ಕಾಮಾತುರದಿಂದ ಬಾಯಿಗೆ ಬಂದ ಹಾಗೆ ಮಾತುಗಳನ್ನಾಡುತ್ತಿರುವ ದಿತಿಯನ್ನು ನೋಡಿ ಕಶ್ಯಪನು, ಒಳಗೊಳಗೆ ನಗುತ್ತ, ಒಳ್ಳೇ ಮಾತುಗಳಿಂದಲೇ ಅವಳನ್ನು ಆ ಅಕೃತ್ಯದಿಂದ ತಪ್ಪಿಸಬೇಕೆಂದೆಣಿಸಿ, 'ಓ ಸುಂದರಿ! ನೀನು ಹೇಳಿದುದೆಲ್ಲವೂ ಸತ್ಯವು! ನಿನ್ನ ಕೋರಿಕೆಯನ್ನು ನಡೆಸಬೇಕಾದುದೇ ನನ್ನ ಕೃತ್ಯವು. ಭಯಪಡಬೇಡ! ನಿನ್ನ ಇಷ್ಟವನ್ನು ಈಡೇರಿಸುವೆನು. ಪುರುಷನಿಗೆ ಯಾರಿಂದಲೇ ಧರ್ಮಾರ್ಥಕಾಮಗಳೆಂಬ ಮೂರು ಪುರುಷಾರ್ಥಗಳ ಫಲವೂ ಸಿದ್ಧಿಸಬೇಕಾಗಿರುವುದೋ, ಅಂತಹ ಭಾರ್ಯೆಯರ ಕೋರಿಕೆಯನ್ನು ಯಾವನು ತಾನೇ ತೀರಿಸದಿರುವನು? ಪುರುಷನು ಪತ್ನೀಸಮೇತನಾಗಿದ್ದರಲ್ಲವೇ ಬ್ರಹ್ಮಚರ್ಯವೇ ಮೊದಲಾದ ಬೇರೆ ಆಶ್ರಮದಲ್ಲಿರುವವರನ್ನೂ ಪೋಷಿಸಬಲ್ಲನು. ಮತ್ತು ಹಡಗು ಸಮುದ್ರವನ್ನು ದಾಟಿಸುವಂತೆ, ಪುರುಷರಿಗೆ ಉಂಟಾಗತಕ್ಕ ಇಂದ್ರಿಯವ್ಯಸನವೆಂಬ ಮಹಾಸಮುದ್ರವನ್ನು ದಾಟಿಸುವುದಕ್ಕೆ ಅವರ ಭಾರ್ಯೆಯರೇ ಮುಖ್ಯಸಾಧನವು. ಇಂದ್ರಿಯಜಯಕ್ಕೂ ಭಾರ್ಯೆಯೇ ಸಹಕಾರಿಣಿಯು. ಮತ್ತು ಪುರುಷನಿಗೆ ಪತ್ನಿಯು ಅರ್ಧದೇಹವೆನಿಸಿರುವಳು. ಆದುದರಿಂದಲೇ ಪುರುಷನು ಗೃಹಕೃತ್ಯದ ಭಾರಗಳೆಲ್ಲವನ್ನೂ ಭಾರ್ಯೆಯಲ್ಲಿರಿಸಿ, ತಾನು ನಿಶ್ಚಿಂತನಾಗಿರುವನು. ಓ ಸುಂದರೀ! ದುರ್ಗಪಾಲಕನಾದ ರಾಜನು, ದುರ್ಗದ ಆಶ್ರಯದಿಂದ ಶತ್ರುಗಳನ್ನೂ, ಚೋರರನ್ನೂ, ಲೀಲಾಮಾತ್ರದಿಂದಲೇ ತಡೆಯುವಂತೆ, ಪುರುಷರಾದ ನಾವು, ನಿಮ್ಮಂತಹ ಧರ್ಮಪತ್ನಿಗಳನ್ನಾಶ್ರಯಿಸಿಯೇ ಬ್ರಹ್ಮಚರ್ಯಾದ್ಯಾಶ್ರಮಗಳಲ್ಲಿಯೂ ಜಯಿಸಲಸಾಧ್ಯವಾದ ಇಂದ್ರಿಯಗಳನ್ನು ಅನಾಯಾಸವಾಗಿ ನಿಗ್ರಹಿಸುವೆವು. ಪತಿಗೆ ಇಷ್ಟು ವಿಧದಲ್ಲಿ ಸಹಾಯಕಳಾದ ಭಾರ್ಯೆಗೆ ತಕ್ಕ ಪ್ರತ್ಯುಪಕಾರವನ್ನು ಮಾಡಿ,

ಆ ಋಣವನ್ನು ತೀರಿಸುವುದಕ್ಕೆ ನಮ್ಮ ಈ ಪುರುಷಾಯುಸ್ಸೇ ಸಾಲದೆಂದು ಹೇಳಬಹುದು. ಕೊನೆಗೆ ಜನ್ಮಾಂತರವೂ ಸಾಲದೆಂದೇ ಎಣಿಸುವೆನು. ಹಾಗಿದ್ದರೂ ನನ್ನಿಂದ ಸಾಧ್ಯವಾದ ಉಪಕಾರವನ್ನು ಮಾಡಿ ನಿನ್ನನ್ನು ನಾನು ಸಂತೋಷಪಡಿಸುವುದಕ್ಕೆ ಯಾವ ಸಂದೇಹವೂ ಇಲ್ಲ. ಸಂತಾನಾಪೇಕ್ಷೆಯಿಂದ ಬಂದ ಈ ನಿನ್ನ ಕೋರಿಕೆಯನ್ನು ತಪ್ಪದೆ ಈಡೇರಿಸುವೆನು. ಆದರೆ ಒಂದೆರಡು ಮುಹೂರ್ತಕಾಲದವರೆಗೆ ನೀನು ನಿರೀಕ್ಷಿಸುತ್ತಿರಬೇಕು. ಈ ಸಮಯವಾದರೋ ಬಹಳ ಭಯಂಕರವಾದುದು! ಭಯಂಕರ ವಸ್ತುಗಳಿಗೂ ಭಯವನ್ನುಂಟುಮಾಡುತ್ತಿರುವುದು! ಇದು ಸಂಭೋಗಕ್ಕೆ ಉಚಿತಕಾಲವಲ್ಲ. ಇದು ಸಂಧ್ಯಾಸಮಯವು. ಈ ಸಮಯದಲ್ಲಿ ರುದ್ರನಿಗೆ ಅನುಚರಗಳಾದ ಭೂತಗಣಗಳೆಲ್ಲವೂ ಸಂಚರಿಸುತ್ತಿರುವುವು. ಭೂಪತಿಯಾದ ರುದ್ರನೂ ಕೂಡ, ಈ ಸಮಯದಲ್ಲಿ ತನ್ನ ಪ್ರಮಥಗಣಗಳೊಡನೆ ಎಲ್ಲೆಲ್ಲಿಯೂ ಸಂಚರಿಸುತ್ತಿರುವನು. ಲೋಕಸುಖಕ್ಕಾಗಿ ಈಗ ರುದ್ರನು ತನ್ನ ವಾಹನವಾದ ನಂದಿಯನ್ನೇರಿ, ನಾನಾಕಡೆಗಳಲ್ಲಿಯೂ ಸುತ್ತುತ್ತಿರುವನು. ಎಲೆ ದೇವಿ! ನಿನ್ನ ಮೈದುನ (ಸಹೋದರಿಯ ಗಂಡ) ನಾದ ಆ ರುದ್ರನ ಪ್ರಭಾವವನ್ನು ಕೇಳಬೇಕೆ? ಶ್ಮಶಾನದಲ್ಲಿ ವಾಸ! ಸುಳಿಗಾಳಿಯಿಂದೆದ್ದ ಧೂಳಿನಿಂದ ಧೂಮ್ರವರ್ಣವಾದ ಜಟೆಗಳು! ಸುವರ್ಣದಂತಿರುವ ದೇಹಕಾಂತಿಯನ್ನು ಮರೆಸುವಂತೆ ಮೈಮೇಲೆ ಬೂದಿ! ಈ ವೇಷದಿಂದ ಅಲ್ಲಲ್ಲಿ ಸಂಚರಿಸುತ್ತ, ತನ್ನ ಮೂರು ಕಣ್ಣುಗಳಿಂದಲೂ, ಲೋಕವ್ಯಾಪಾರವನ್ನು ನೋಡುತ್ತಿರುವನು. ಆತನ ಕಣ್ಣಿಗೆ ಬೀಳದ ಸ್ಥಳವೊಂದಾದರೂ ಇರುವುದಿಲ್ಲ. ಪ್ರಿಯೇ! ಅವನಿಗೂ, ನಮಗೂ ಇರುವ ಬಂಧುತ್ವವನ್ನಾದರೂ ಆಲೋಚಿಸು! ಅಂತಹ ಬಂಧುಗಳ ಕಣ್ಣೆದಿರಿಗೆ ಸಂಭೋಗಿಸುವುದು ನಮಗೆ ಯುಕ್ತವೇ? ಈ ಬಂಧುತ್ವದ ದಾಕ್ಷಿಣ್ಯದಿಂದ ಆತನು ನಮ್ಮ ಅಕೃತ್ಯವನ್ನು ಮನ್ನಿಸಬಹುದೆಂದೆಣಿಸಬೇಡ! ಅವನಿಗೆ ತನ್ನವರೆಂದೂ, ಹೆರವರೆಂದೂ ಭೇದಬುದ್ಧಿಯಿಲ್ಲ. ಆತನಿಗೆ ಪ್ರೀತಿಪಾತ್ರನೆಂದೂ ನಿಂದನೀಯನೆಂದೂ ವ್ಯತ್ಯಾಸವಿಲ್ಲ! ಪ್ರಕೃತಿ ಸಂಬಂಧದಿಂದ ಬುದ್ಧಿಮೋಹವನ್ನು ಹೊಂದಿ ಸ್ವಪ್ರಯೋಜನವನ್ನು ಅಪೇಕ್ಷಿಸುವವನಿಗಲ್ಲವೇ, ತನ್ನದೆಂದೂ, ಇತರರದೆಂದೂ ಭೇದಬುದ್ಧಿಯುಂಟಾಗುವುದು. ಈ ರುದ್ರನಾದರೋ ಎಲ್ಲರನ್ನೂ

ಸಮವಾಗಿ ನೋಡತಕ್ಕವನು. ಸಾಂಸಾರಿಕ ಲೋಕಗಳನ್ನೂ, ಇದರೊಳಗಿನ ಅತಿಶಯಗಳನ್ನೂ ಆಶಿಸುವವನಲ್ಲ. ಆದುದರಿಂದಲೇ ಇವನಿಗೆ ತನ್ನವರೆಂದೂ, ಇತರರೆಂದೂ ಭೇದಬುದ್ಧಿಯುಂಟಾಗಲಾರದು. ಎಲೆ ದೇವಿ! ಆ ಮಹಾನು ಭಾವನು ಯಥೇಚ್ಛವಾಗಿ ಅನುಭವಿಸಿ, ಕೊನೆಗೆ ನಿರ್ಮಾಲ್ಯದಂತೆ ಕಾಲಿಂ ದೊದೆದು ನಿರಾಕರಿಸಿರುವ ಮಾಯೆಯ ಪರಿಣಾಮರೂಪವಾದ ಐಶ್ವರ್ಯ ವನ್ನು ಪಡೆಯುವುದಕ್ಕಾಗಿ, ಸಂಸಾರಿಗಳಾದ ನಾವೆಲ್ಲರೂ ಅನೇಕ ಕರ್ಮ ಗಳಲ್ಲಿ ಬಿದ್ದು ಶ್ರಮಪಡುತ್ತಿರುವೆವು. ಅವನು ಕಾಲಿಂದೊದೆದು ತಳ್ಳಿದು ದನ್ನು ಪಡೆಯುವುದಕ್ಕಾಗಿಯೇ ನಮ್ಮಂತವರು ಎಷ್ಟೋ ಶ್ರಮಪಡಬೇಕಾ ಗಿರುವಾಗ, ಇನ್ನು ಅವನ ಮಹಿಮೆಯನ್ನು ಕೇಳಬೇಕೇ? ಎಲೆ ಪ್ರಿಯೇ! "ಶ್ಮಶಾನವಾಸಿಯಾಗಿ ಪಿಶಾಚದಂತೆ ತಿರುಗುವ ಆ ರುದ್ರನಿಗಾಗಿ ನಾವು ಶಂಕಿಸಬೇಕಾದುದೇನು?" ಎಂದು ನೀನು ಕೇಳಬಹುದು. ಅದು ಹಾಗಲ್ಲ. ಆ ರುದ್ರನೇ ಎಲ್ಲರಿಗೂ ಜ್ಞಾನಪ್ರದನೆನಿಸಿರುವನು. ಜ್ಞಾನವನ್ನು ಮರೆ ಸಿಡತಕ್ಕ ಅವಿದ್ಯೆಯೆಂಬ ಆವರಣವನ್ನು (ತೆರೆಯನ್ನು) ಕಿತ್ತುಹಾಕಬೇಕೆಂಬ ಅಪೇಕ್ಷೆಯುಳ್ಳ ಪಂಡಿತರೆಲ್ಲರೂ, ನಿರ್ದುಷ್ಟವಾದ ಆತನ ಚರಿತ್ರವನ್ನೇ ವಿಶೇಷವಾಗಿ ಆದರಿಸುವರು. ಆದರೆ 'ಇಷ್ಟು ಮಹಾಪ್ರಭಾವವುಳ್ಳ ಆ ರುದ್ರನು, ಶ್ಮಶಾನವಾಸಿಯಾಗಿ ಭೂತಗಣಗಳೊಡನೆ ಕಲೆತಿರುವುದೇಕೆ?' ಎಂದು ನೀನು ಕೇಳಬಹುದು. ಆ ರುದ್ರನು ತನಗಿಂತಲೂ ಉತ್ತಮರಾಗಲೀ, ತನಗೆ ಸಮಾನರಾಗಲೀ ಇಲ್ಲದಷ್ಟು ಜ್ಞಾನಾತಿಶಯವುಳ್ಳವನೆನಿಸಿದ್ದರೂ, ಕೇವಲ ಜ್ಞಾನಾಪೇಕ್ಷೆಯುಳ್ಳವರೆಲ್ಲರೂ ತನ್ನಂತೆಯೇ ಸರ್ವವಿಧದಲ್ಲಿಯೂ ವಿರಕ್ತರಾಗಿರಬೇಕೆಂದು ತೋರಿಸುವುದಕ್ಕಾಗಿಯೇ ಹಾಗೆ ನಟಿಸುವನು. ಮತ್ತು ಎಲೆ ಕಾಂತೆ! ಆ ರುದ್ರನಾದರೋ ಕೇವಲ ಆತ್ಮಾನಂದದಲ್ಲಿ ನಿರತ ನಾದವನು. ಇವನ ಉದ್ದೇಶವನ್ನೂ, ನಡತೆಯನ್ನೂ ಚೆನ್ನಾಗಿ ತಿಳಿಯ ಲಾರದ ದುರ್ಭಾಗ್ಯರು ಮಾತ್ರ, ಅವನ ಆಕೃತಿಯನ್ನು ನೋಡಿ ಹಾಸ್ಯ ಮಾಡಬಹುದೇ ಹೊರತು, ತತ್ವಜ್ಞರು ಅವನನ್ನು ನಿಂದಿಸಲಾರರು. ಲೋಕದಲ್ಲಿ ಯಾವ ಮನುಷ್ಯರು, ನಾಯಿನರಿಗಳ ಆಹಾರಯೋಗ್ಯವಾದ ಈ ದೇಹವನ್ನೇ ಆತ್ಮವೆಂದು ಭ್ರಮಿಸಿ, ಅದನ್ನು ಅನೇಕ ವಸ್ತ್ರಾಭರಣಗಳಿಂ ದಲೂ, ಪುಷ್ಪಮಾಲಿಕೆಗಳಿಂದಲೂ, ಕುಂಕುಮ, ಕಸ್ತೂರಿ ಮೊದಲಾದ

ಲೇಪನ ದ್ರವ್ಯಗಳಿಂದಲೂ ಅಲಂಕರಿಸುತ್ತಿರುವರೋ ಅಂತವರು ಮಾತ್ರವೇ ಆ ಮಹಾನುಭಾವನ ವೇಷವನ್ನು ನೋಡಿ ಹಾಸ್ಯಮಾಡುವರು. ಇಂತವರನ್ನು ಅಜ್ಞರೆಂದೂ, ನಿರ್ಭಾಗ್ಯರೆಂದೂ ಹೇಳುವುದರಲ್ಲಿ ಸಂದೇಹವೇನಿದೆ? ಎಲೆ ದೇವಿ! ಮುಖ್ಯವಾಗಿ ಸಂಗ್ರಹಿಸಿ ಹೇಳುವೆನು ಕೇಳು! ಚತುರ್ಮುಖನನ್ನು ಬಿಟ್ಟು, ಉಳಿದ ಸಮಸ್ತ ಜೀವರಾಶಿಗಳೂ ಯಾವನ ನಿಯಮಕ್ಕೊಳಪಟ್ಟು ನಡೆಯುತ್ತಿರುವುವೋ, ಈ ಜಗತ್ತಿಗೆಲ್ಲಕ್ಕೂ ಯಾವನು ಕಾರಣಭೂತನೋ, ಅಹಂಕಾರರೂಪವಾದ ಮಾಯೆಯೆಂಬುದು ಯಾವನ ಆಜ್ಞಾಧೀನವಾಗಿ ನಡೆಯುತ್ತಿರುವುದೋ, ಅಂತಹ ಮಹಾನುಭಾವನು, ಸ್ವೇಚ್ಛೆಯಿಂದ ಅಂಗೀಕರಿಸತಕ್ಕ ಆ ಪಿಶಾಚಸ್ವಭಾವವು, ನಟನಮಾತ್ರವಲ್ಲದೆ ಬೇರೆಯಲ್ಲ. ಅಂತಹ ಮಹಾತ್ಮನು ಕಣ್ಣಿಟ್ಟು ನೋಡುತ್ತಿರುವಾಗ, ನಾವು ಈ ಸಂಧ್ಯಾಕಾಲದಲ್ಲಿ ಸಂಗಮಿಸುವುದು ಯುಕ್ತವೇ!" ಎಂದು ಹೇಳಿ ಕಶ್ಯಪನು ದಿತಿಯನ್ನು ನಿರಾಕರಿಸಿಬಿಟ್ಟನು. ಕಶ್ಯಪನು ಹೀಗೆ ಬುದ್ಧಿವಾದವನ್ನು ಹೇಳುತ್ತಿದ್ದರೂ ಕೇಳದೆ, ಕಾಮಪೀಡಿತೆಯಾದ ದಿತಿಯು, ವೇಶ್ಯಾಸ್ತ್ರೀಯಂತೆ ನಾಚಿಕೆಯನ್ನು ಬಿಟ್ಟು, ತಾನೇ ಪತಿಯ ಮೇಲೆ ಬಿದ್ದು ಆತನ ಬಟ್ಟೆಯನ್ನು ಹಿಡಿದೆಳೆಯುವುದಕ್ಕಾರಂಭಿಸಿದಳು. ಹೀಗೆ ಕಾಮಾತುರದಿಂದ ಮೇಲೆಬಿದ್ದು ಬರುತ್ತಿರುವ ದಿತಿಯನ್ನು ತಡೆಯಲಾರದೆ, ಕಶ್ಯಪನು ಭಗವಂತನಲ್ಲಿ ಅಪರಾಧಕ್ಷಮಾಪಣವನ್ನು ಬೇಡಿಕೊಂಡು, ಏಕಾಂತಸ್ಥಳವನ್ನು ಸೇರಿ, ಅವಳ ಕೋರಿಕೆಯನ್ನು ಈಡೇರಿಸಿದನು. ಆಮೇಲೆ ಆ ಮಹರ್ಷಿಯು ನದಿಗೆ ಹೋಗಿ ಮುಳುಗಿ, ಪ್ರಾಣಾಯಾಮವನ್ನು ಮಾಡಿ ಮೌನವನ್ನವಲಂಬಿಸಿ ಬ್ರಹ್ಮಧ್ಯಾನವನ್ನು ಮಾಡುತ್ತ, ಪ್ರಣವಮಂತ್ರವನ್ನು ಜಪಿಸಲಾರಂಭಿಸಿದನು. ಇತ್ತಲಾಗಿ ದಿತಿಗೂ ಕೂಡ ತನ್ನ ಕಾಮಾತುರವು ತೀರಿದ ಮೇಲೆ, ತಾನು ನಡೆಸಿದ ಅಕೃತ್ಯಕ್ಕಾಗಿ ನಾಚಿಕೆ ಹುಟ್ಟಿತು. ಮನಸ್ಸಿನಲ್ಲಿ ಕೊರಗುತ್ತ ಪತಿಯಾದ ಕಶ್ಯಪನ ಬಳಿಗೆ ಹೋಗಿ, ನಾಚಿಕೆಯಿಂದ ತಲೆಬಗ್ಗಿ ನಿಂತು "ಓ ನಾಥಾ! ನಾನು ಬಹಳ ಕೆಟ್ಟಕಾರ್ಯವನ್ನು ನಡೆಸಿದೆನು. ನಿನ್ನ ಬುದ್ಧಿವಾದವನ್ನು ಕೇಳದೆ ಅತಿಕ್ರಮಿಸಿ ಬಂದ ನನ್ನಲ್ಲಿ ಕೋಪಿಸದೆ ನೀನು ದಯಾದೃಷ್ಟಿಯಿಂದ ಅನುಗ್ರಹಿಸಬೇಕು. ಭೂಪತಿಯಾದ ರುದ್ರನ ಕೋಪಕ್ಕೂ ನಾನು ಪಾತ್ರಳಾದೆನು. ಈ ಕೋಪದಿಂದ ಆತನು ನನ್ನ

ಗರ್ಭವನ್ನು ಹಿಂಸಿಸದಿರಲಾರನು. ಆತನು ನನ್ನ ಸಂತಾನವನ್ನು ಕೆಡಿಸ ದಂತೆ, ಈಗಲೂ ಯಾವುದಾದರೂ ಒಂದುಪಾಯವನ್ನು ನೀನೇ ಆಲೋಚಿಸ ಬೇಕು. ದೇವನಾಥನಾಗಿಯೂ, ಭೂಪತಿಯಾಗಿಯೂ, ಶಾಂತಸ್ವರೂಪ ನಾಗಿಯೂ, ದುಷ್ಟಸಂಹಾರಕನಾಗಿಯೂ, ಆಶ್ರಿತರ ಕಷ್ಟವನ್ನು ನೀಗಿಸ ತಕ್ಕವನಾಗಿಯೂ ಇರುವ ಆ ರುದ್ರನಲ್ಲಿ, ನಾನೂ ಅಪರಾಧಕ್ಷಮಾಪಣವನ್ನು ಮಾಡಿಕೊಂಡು ಪ್ರಾರ್ಥಿಸುವೆನು. "ಸತೀದೇವಿಗೆ ಪತಿಯಾದ ಆ ಶಂಕರನು ಕೇವಲ ಘಾತುಕರಿಗೂ ಕನಿಕರವನ್ನು ಹುಟ್ಟಿಸತಕ್ಕ ಅಬಲೆಯರಾದ ನಮ್ಮಂ ತವರಲ್ಲಿ ದಯೆಯಿಂದ ವರ್ತಿಸಲಿ! ಆ ಶಂಕರನು ನನಗೆ ಪ್ರಸನ್ನನಾಗಲಿ" ಎಂದು ದೈನ್ಯದಿಂದ ಪ್ರಾರ್ಥಿಸುತ್ತಿದ್ದಳು. ಹೀಗೆ ತನ್ನ ಗರ್ಭಕ್ಕೆ ಅಪಾಯ ವಿಲ್ಲದಿರುವುದಕ್ಕಾಗಿ ದೇವಪ್ರಾರ್ಥನೆಯನ್ನು ಮಾಡುತ್ತ, ಭಯದಿಂದ ತತ್ತಳಿ ಸುತ್ತಿರುವ ತನ್ನ ಭಾರ್ಯೆಯನ್ನು ನೋಡಿ ಕಶ್ಯಪನು, ತನ್ನ ಆಹ್ನಿಕಕೃತ್ಯ ಗಳು ಮುಗಿದ ಮೇಲೆ ಆಕೆಯನ್ನು ಕುರಿತು "ಎಲೆ ನಿರ್ಭಾಗ್ಯಳೇ! ಈಗ ನೀನು ಪರಿತಪಿಸುವುದರಿಂದ ಪ್ರಯೋಜನವೇನು? ಮುಖ್ಯವಾಗಿ ನಿನ್ನ ಮನಸ್ಸು ಶುದ್ಧವಾದುದಲ್ಲ. ಈ ಸಂಧ್ಯಾಕಾಲದಲ್ಲಿ ಸಂಭೋಗವನ್ನು ಮಾಡಿದ ದೋಷಕ್ಕೆ ನೀನು ಪಾತ್ರಳಾದೆ! ಪತಿಯಾದ ನನ್ನ ಹಿತೋಪದೇಶ ವನ್ನೂ ತಿರಸ್ಕರಿಸಿದೆ! ಭೂತಪತಿಯಾದ ಈಶ್ವರನನ್ನು ಅಸಡ್ಡೆಮಾಡಿದೆ! ಈ ಕಾರಣಗಳಿಂದ ನಿನಗೆ ಯಾವುದಾದರೂ ಒಂದು ವಿಧದಲ್ಲಿ ಅಶ್ರೇಯಸ್ಸುಂ ಟಾಗದೆ ತೀರದು. ನಿನ್ನಲ್ಲಿ ಹುಟ್ಟತಕ್ಕ ಕುಮಾರರು ಲೋಕಕಂಟಕರಾಗಿ, ಕ್ರೂರಸ್ವಭಾವದಿಂದ ನಡೆಯುವರು. ಆ ನಿನ್ನ ದುಷ್ಪುತ್ರರು, ಲೋಕದಲ್ಲಿ ಸ್ತ್ರೀಯರನ್ನೂ, ದೇವತೆಗಳನ್ನೂ, ಮನುಷ್ಯರನ್ನೂ, ಮಹರ್ಷಿಗಳನ್ನೂ, ಬಹಳವಾಗಿ ಪೀಡಿಸುವರು. ತಮ್ಮ ಕ್ರೂರಕಾರ್ಯಗಳಿಂದ ಮೂರುಲೋಕಕ್ಕೂ ಬಾಧೆಯನ್ನುಂಟುಮಾಡಿ, ಅವೆಲ್ಲವನ್ನೂ ಆಕ್ರಮಿಸಿಕೊಳ್ಳುವರು. ಇದರಿಂದ ಮಹಾತ್ಮರ ಕೋಪಕ್ಕೆ ಪಾತ್ರರಾಗುವರು. ದುರ್ಬಲರಾದ ಮನುಷ್ಯರನ್ನು ಕೊಲ್ಲುವರು! ಪತಿವ್ರತಾಸ್ತ್ರೀಯರನ್ನು ಬಲಾತ್ಕರಿಸುವರು! ಹೀಗೆ ಸ್ವೇಚ್ಛೆ ಯಿಂದ ನಡೆಯುತ್ತಿರುವುದನ್ನು ನೋಡಿ, ಲೋಕರಕ್ಷಕನಾದ ಶ್ರೀಹರಿಯು ವರಾಹನೃಸಿಂಹಾವತಾರಗಳನ್ನು ಧರಿಸಿ ದೇವೇಂದ್ರನು ಪರ್ವತಗಳನ್ನು ಭೇದಿ ಸುವಂತೆ ಆ ನಿನ್ನ ಪುತ್ರರಿಬ್ಬರನ್ನೂ ಕೊಲ್ಲುವನು. ಇವೆಲ್ಲಕ್ಕೂ ಈ ನಿನ್ನ

ಅಕೃತ್ಯವೇ ಮೂಲವೆಂದು ತಿಳಿ" ಎಂದನು. ಅದಕ್ಕಾ ದಿತಿಯು, "ಓ ನಾಥಾ! ಚಿಂತೆಯಿಲ್ಲ! ನನ್ನ ಮಕ್ಕಳಿಗೆ ಆ ಭಗವಂತನ ಕೈಯಿಂದಲೇ ಮರಣವುಂಟಾಗುವುದೆಂಬ ವಾರ್ತೆಯು ನನ್ನ ಮನಸ್ಸಿಗೆ ಎಷ್ಟೋ ಸಂತೋಷವನ್ನುಂಟು ಮಾಡಿತು. ಅದು ಹಾಗೆಯೇ ನಡೆಯುವಂತೆ ನೀನು ಅನುಗ್ರಹಿಸಬೇಕು. ಬ್ರಾಹ್ಮಣಶಾಪದಿಂದ ಸಾಯುವುದಕ್ಕಿಂತಲೂ, ಭಗವಂತನ ಕೈಯಿಂದ ಸಾಯುವುದು ಎಷ್ಟೋ ಉತ್ತಮವು. ಬ್ರಾಹ್ಮಣಶಾಪದಿಂದ ಹತರಾದವರು ಕೇವಲ ಪಾಪಾತ್ಮರೆನಿಸುವರು. ಅವರ ವಿಷಯದಲ್ಲಿ ನರಕವಾಸಿಗಳಿಗಾದರೂ ದಯೆಹುಟ್ಟದು. ಅಂತಹ ಪಾಪಿಗಳನ್ನು ಪಡೆದ ತಂದೆತಾಯಿಗಳಿಗೂ ಕೂಡ ನರಕಪ್ರಾಪ್ತಿಯೇ ನಿಶ್ಚಯವು" ಎಂದಳು. ಅದಕ್ಕಾ ಕಶ್ಯಪನು "ಓ ಸುಂದರಿ! ನೀನು ಮೊದಲು ವಿವೇಕವಿಲ್ಲದೆ ಪಾಪಕಾರ್ಯದಲ್ಲಿ ಪ್ರವರ್ತಿಸಿದರೂ, ಅದಕ್ಕಾಗಿ ಈಗ ಪಶ್ಚಾತ್ತಾಪ ಪಡುವುದನ್ನು ನೋಡಿ ನಾನು ಸಂತೋಷಿಸುವೆನು. ಇದಲ್ಲದೆ, ನೀನು ಆ ಶ್ರೀಹರಿಯಲ್ಲಿ ವಿಶೇಷಗೌರವವನ್ನೂ, ನನ್ನಲ್ಲಿ ಭಕ್ತಿಯನ್ನೂ ತೋರಿಸುತ್ತಿರುವುದಕ್ಕಾಗಿ ನಾನು ನಿನ್ನಲ್ಲಿ ಪ್ರಸನ್ನನಾದೆನು. ನಿನ್ನ ಮಕ್ಕಳಿಬ್ಬರೂ ಕೇವಲ ದುರಾತ್ಮರಾಗಿದ್ದರೂ, ಅವರಲ್ಲಿ ಒಬ್ಬನಾದ ಹಿರಣ್ಯಕಶಿಪುವೆಂಬವನಿಗೆ ಬಹಳ ಗೌರವಾಸ್ಪದನಾಗಿಯೂ, ವಿಷ್ಣುಭಕ್ತಶಿರೋಮಣಿಯಾಗಿಯೂ ಇರುವ ಪುತ್ರನೊಬ್ಬನು ಹುಟ್ಟುವನು. ಲೋಕದಲ್ಲಿ ಸತ್ಪುರುಷರೆಲ್ಲರೂ ಆ ಮಹಾತ್ಮನ ಕೀರ್ತಿಯನ್ನು ಭಗವಂತನ ಕೀರ್ತಿಗೆ ಸಮಾನವಾಗಿ ಭಾವಿಸಿ ಕೊಂಡಾಡುವರು. ಕ್ಷಾರವೇ ಮೊದಲಾದ ಇತರವಸ್ತುಗಳ ಸಂಬಂಧದಿಂದ, ಬಂಗಾರವನ್ನು ಶುದ್ಧಮಾಡುವ ಹಾಗೆ ಸಾಧುಗಳೂ ಕೂಡ ಆತನ ಸುಗುಣಗಳನ್ನನುಸರಿಸಿಯೇ ತಮ್ಮ ಮನಸ್ಸನ್ನು ಶುದ್ಧಪಡಿಸಿಕೊಳ್ಳಬೇಕಾಗುವುದು. ಪ್ರಿಯೇ! ಯಾವನ ಅನುಗ್ರಹದಿಂದ ಈ ಸಮಸ್ತಲೋಕಗಳೂ ಪ್ರಸನ್ನವಾಗುವುವೋ, ಯಾವನಿಗೆ ಈ ಜಗತ್ತೆಲ್ಲವೂ ಶರೀರಭೂತವಾಗಿರುವುದೋ ಅಂತಹ ಭಗವಂತನನ್ನು ನಿನ್ನ ಮೊಮ್ಮಗನು ತನ್ನ ಭಕ್ತಿಯಿಂದ ವಶಮಾಡಬಲ್ಲನು. ಆ ಸಣ್ಣ ಬಾಲಕನು ಸಮಸ್ತಗುಣಗಳಿಗೂ ನೆಲೆಯಾಗುವನು. ಪರಮಭಾಗವತೋತ್ತಮನೆಂಬ ಖ್ಯಾತಿಯನ್ನು ಹೊಂದುವನು. ಮಹಾತ್ಮರಿಗೂ ಮಹಾತ್ಮನೆನಿಸಿಕೊಳ್ಳುವನು. ಅವನು ಮೇಲೆ ಮೇಲೆ ಹೆಚ್ಚುವ ವಿಷ್ಣುಭಕ್ತಿಯಿಂದ, ತದೇಕಧ್ಯಾನಪರನಾಗಿ

ಉಳಿದ ರಾಜ್ಯಸಂಪತ್ತುಗಳೆಲ್ಲವನ್ನೂ ತೊರೆದುಬಿಡುವನು. ಸಂಸಾರದಲ್ಲಿ, ವಿರಕ್ತಿಯನ್ನು ಹೊಂದುವನು. ಪರಮಸುಶೀಲನೆನಿಸಿಕೊಳ್ಳುವನು. ಬಹಳ ದಯಾಶಾಲಿಯೆನಿಸಿಕೊಳ್ಳುವನು. ಅಜಾತಶತ್ರುವೆಂದು ಪ್ರಸಿದ್ಧಿಹೊಂದು ವನು. ಚಂದ್ರನು ತನ್ನ ತಂಪಾದ ಕಿರಣಗಳಿಂದ ಬೇಸಗೆಯಕಾಲದ ಸಂತಾ ಪವನ್ನು ನೀಗಿಸುವಂತೆ, ಆ ನಿನ್ನ ಮುಮ್ಮಗನು, ತನ್ನ ತಂದೆಯಿಂದ ಪೀಡಿತವಾದ ಲೋಕವನ್ನು ತನ್ನ ಸುಗುಣಗಳಿಂದ ಸಂತೋಷಪಡಿಸುವನು. ಮತ್ತು ಆ ನಿನ್ನ ಪುತ್ರನು, ಶ್ರಿಯಃಪತಿಯಾಗಿಯೂ, ದಿವ್ಯಕುಂಡಲಗಳಿಂದ ಶೋಭಿತವಾದ ಮುಖಕಮಲವುಳ್ಳವನಾಗಿಯೂ, ಪುಂಡರೀಕಾಕ್ಷನಾಗಿಯೂ, ಆಶ್ರಿತರ ಇಚ್ಛಾನುಸಾರವಾಗಿ ಬೇರೆ ಬೇರೆ ರೂಪಗಳನ್ನು ಕೈಕೊಂಡು ಅವರಿಗೆ ಗೋಚರಿಸತಕ್ಕವನಾಗಿಯೂ, ಶುದ್ಧಸ್ವರೂಪನಾಗಿಯೂ ಇರುವ ಆ ಶ್ರೀಹರಿ ಯನ್ನು ತನ್ನ ಹೃದಯಕಮಲದಲ್ಲಿಯೂ, ಹೊರಭಾಗದಲ್ಲಿಯೂ ಸಾಕ್ಷಾತ್ಕ ರಿಸಬಲ್ಲನು." ಎಂದನು. ಆಗ ದಿತಿದೇವಿಯು ತನ್ನ ಕುಮಾರರಿಗೆ ಸಾಕ್ಷಾದ್ಭ ಗವಂತನ ಕೈಯಿಂದಲೇ ಮರಣವೆಂಬುದನ್ನೂ, ತನ್ನ ಮುಮ್ಮಗನು ಪರಮ ಭಾಗವತೋತ್ತಮನಾಗಿ ಹುಟ್ಟುವನೆಂಬುದನ್ನೂ ಕೇಳಿ, ಅತ್ಯಂತ ಸಂತೋಷ ಭರಿತಳಾಗಿದ್ದಳು. ಇಲ್ಲಿಗೆ ಹದಿನಾಲ್ಕನೆಯ ಅಧ್ಯಾಯವು.

---

{ ದಿತಿಯ ಗರ್ಭವು ಬೆಳೆಯುತ್ತ ಬಂದ ಹಾಗೆಲ್ಲಾ ಅದರ ತೇಜಸ್ಸಿನಿಂದ ಲೋಕವೆಲ್ಲವೂ ಅಂಧಕಾರಮಯವಾ ದುದು. ಬ್ರಹ್ಮನು ದೇವತೆಗಳಿಗೆ ಅದರ ಕಾರಣವನ್ನು ತಿಳಿಸಿದುದು. ಜಯವಿಜಯರ ಶಾಪ ಮುಂತಾದುವು. }

ವಿದುರಾ! ಹೀಗೆ ದಿತಿಯು ಸಂತೋಷದಿಂದ ಕಾಲವನ್ನು ಕಳೆಯುತ್ತ ಬರುವಾಗ, ಅವಳ ಗರ್ಭದಲ್ಲಿ ಕಶ್ಯಪನ ವೀರ್ಯವು ಕ್ರಮಕ್ರಮವಾಗಿ ಬೆಳೆ ಯುತ್ತ ಬಂದಿತು. ಅದರ ತೇಜಸ್ಸು ಇತರ ತೇಜಸ್ಸುಗಳೆಲ್ಲವನ್ನೂ ಮರೆ ಸಿತು. ಆ ಗರ್ಭವನ್ನು ದಿತಿಯು ನೂರು ವರುಷಗಳವರೆಗೆ ಧರಿಸಿದ್ದಳು. ಆದರೆ ಇಷ್ಟುಕಾಲವೂ ಅವಳು, ತನ್ನ ಸವತಿಯ ಮಗನಾದ ಇಂದ್ರನಿಂದ

ತನ್ನ ಗರ್ಭಕ್ಕೆ ಯಾವ ಅಪಾಯವುಂಟಾಗುವುದೋ ಎಂದು ಭಯಪಡುತ್ತಿದ್ದಳು. ಇಷ್ಟರೊಳಗಾಗಿ ಅವಳ ಗರ್ಭದ ತೇಜಸ್ಸು, ನಾನಾದಿಕ್ಕುಗಳಿಗೂ ವ್ಯಾಪಿಸಿ, ಸೂರ್ಯಚಂದ್ರರ ಕಾಂತಿಯನ್ನೇ ಅಡಗಿಸಿಬಿಟ್ಟುದರಿಂದ, ಲೋಕವೆಲ್ಲವೂ ಅಂಧಕಾರಮಯವಾಗಿ, ದೇವತೆಗಳಿಗೆ ಹಗಲಿರುಳೆಂಬ ವಿಭಾಗವೇ ತಿಳಿಯದಂತಾಯಿತು. ಆಗ ದೇವತೆಗಳೆಲ್ಲರೂ ಸೇರಿ ಚತುರ್ಮುಖನ ಬಳಿಗೆ ಹೋಗಿ ಹೀಗೆಂದು ಮೊರೆಯಿಡುವರು. 'ಚತುರ್ಮುಖಾ! ನಿನಗೆ ವಂದನವು. ನೀನು ಭೂತಭವಿಷ್ಯದ್ವರ್ತಮಾನಗಳೆಲ್ಲವನ್ನೂ ತಿಳಿದವನಾದುದರಿಂದ, ನಮಗೆ ಈಗ ಪ್ರಾಪ್ತವಾಗಿರುವ ಭಯಕ್ಕೆ ಕಾರಣವೇನೆಂಬುದನ್ನು ತಿಳಿಸಬೇಕು.' ಭಗವಂತನ ಆವೇಶಾವತಾರವೆನಿಸಿದ ನೀನು ದೇವತೆಗಳಿಗೂ ದೇವನೆನಿಸಿಕೊಂಡವನು. ಲೋಕಪಾಲಕರೆಲ್ಲರಿಗೂ ಶಿರೋಮಣಿಯಂತಿರುವವನು. ಹಿಂದುಮುಂದಿನ ವಿಷಯಗಳೆಲ್ಲವನ್ನೂ ತಿಳಿದವನು. ಜಗತ್ಸೃಷ್ಟಿಗಾಗಿ ರಜೋಗುಣವನ್ನು ಹೊಂದಿದ ಭಗವಂತನೇ ನೀನಲ್ಲದೆ ಬೇರೆಯಲ್ಲ! ಮಾಯೆಯನ್ನೇ ಮುಂದಿಟ್ಟುಕೊಂಡು ಸಮಸ್ತ ಜಗತ್ತುಗಳನ್ನೂ ಸೃಷ್ಟಿಸುವೆ! ನೀನು ಜ್ಞಾನವನ್ನೇ ವೀರ್ಯವಾಗಿ ಉಳ್ಳವನು. ಸಮಸ್ತ ಪ್ರಪಂಚಕ್ಕೂ ಕಾರಣಭೂತನು. ಇಂತಹ ನಿನಗೆ ನಮ್ಮ ವಂದನೆಗಳನ್ನರ್ಪಿಸುವೆವು. ಓ, ಕಮಲಾಸನಾ! ನೀನು ಸಮಸ್ತ ಜೀವಗಳನ್ನೂ ದೇವಮನುಷ್ಯಾದಿ ರೂಪಗಳಿಂದ ನಿರ್ಮಿಸಿ, ಕೊನೆಗೆ ಆ ಸಮಸ್ತ ಚರಾಚರಪ್ರಪಂಚವನ್ನೂ ನಿನ್ನಲ್ಲಿಯೇ ಅಡಗಿಸಿಕೊಳ್ಳತಕ್ಕವನು. ಕಾರ್ಯಕಾರಣಗಳೆಂಬ ಎರಡು ರೂಪದಿಂದಲೂ ತೋರತಕ್ಕವನು. ಇಂತಹ ನಿನ್ನನ್ನು ಯೋಗಾಭ್ಯಾಸದಿಂದ ಪರಿಪಕ್ವವಾದ ಮನಸ್ಸಿನಲ್ಲಿಟ್ಟು ಯಾರು ಭಾವಿಸುವರೋ, ಅಂತವರು ತಮ್ಮ ಶ್ವಾಸವನ್ನೂ, ಇಂದ್ರಿಯವನ್ನೂ ನಿಗ್ರಹಿಸಿ, ನಿನ್ನ ದಯೆಗೆ ಪಾತ್ರರಾಗಿ, ಲೋಕದಲ್ಲಿ ಬೇರೊಬ್ಬರ ಪರಾಭವಕ್ಕೆ ಸಿಕ್ಕದೆ ವರ್ತಿಸಬಲ್ಲರು. ಹೇ ದೇವಾ! ಹಗ್ಗದಿಂದ ಕಟ್ಟಲ್ಪಟ್ಟ ಪಶುಗಳಂತೆ, ಸಮಸ್ತ ಜಂತುಗಳೂ, ವೇದಾತ್ಮಕವಾದ ನಿನ್ನ ವಾಕ್ಯಗಳಿಗೆ ಬದ್ಧವಾಗಿ, ನಿನಗೆ ಪರತಂತ್ರವಾಗಿ, ನಿನ್ನ ಪೂಜೆಗಳನ್ನು ನಡೆಸುವುವು. ಅಂತಹ ಪ್ರಧಾನ ಪುರುಷನಾದ ನಿನಗೆ ನಮಸ್ಕಾರವು. ಓ ಪ್ರಭೂ! ಈಗ ನಮ್ಮ ದುರವಸ್ಥೆಯನ್ನು ನೋಡು! ಲೋಕವೆಲ್ಲವೂ ಕತ್ತಲೆ ಕವಿದಂತಿರುವುದು. ಅಹೋ

ರಾತ್ರಿವಿಭಾಗವೇ ಕಾಣದುದರಿಂದ ನಮ್ಮ ಕರ್ಮಗಳೆಲ್ಲವೂ ಕೆಟ್ಟುಹೋಗು ತ್ತಿರುವುವು. ಹೀಗೆ ವಿಪತ್ತಿನಲ್ಲಿ ಸಿಕ್ಕಿ ಬಿದ್ದಿರುವ ನಮ್ಮನ್ನು ನಿನ್ನ ಕೃಪಾ ಕಟಾಕ್ಷದಿಂದ ನೋಡಿ ರಕ್ಷಿಸಬೇಕು. ಎಲೈ ಲೋಕಕರ್ತನೇ! ದಾರುವಿನಲ್ಲಿ ಅಗ್ನಿಯಂತೆ ಕಶ್ಯಪನ ತೇಜಸ್ಸು ದಿತಿಯ ಗರ್ಭದಲ್ಲಿ ಗೂಢವಾಗಿ ಬೆಳೆಯುತ್ತ, ಸಮಸ್ತ ದಿಕ್ಕುಗಳನ್ನೂ ಅಂಧಕಾರಮಯವಾಗಿ ಮಾಡುತ್ತಿರುವುದು. ಈ ಕತ್ತಲೆಯಲ್ಲಿ ಕಣ್ಣುಕಾಣದೆ ತತ್ತಳಿಸುತ್ತಿರುವ ನಮ್ಮನ್ನು ಈ ವಿಪತ್ತಿನಿಂದ ತಪ್ಪಿಸಿ ಕಾಪಾಡಬೇಕು." ಎಂದರು. ಇದನ್ನು ಕೇಳಿ ವೇದವೇದ್ಯನಾದ ಬ್ರಹ್ಮನು, ಆ ದೇವತೆಗಳನ್ನು ನೋಡಿ ನಗುತ್ತ, ಮಧುರವಾಕ್ಯದಿಂದ ಅವರನ್ನು ಸಮಾಧಾನಪಡಿಸಿ, "ಎಲೈ ದೇವತೆಗಳಿರಾ! ನೀವು ಇದಕ್ಕಾಗಿ ದುಃಖಿಸಬೇಡಿರಿ. ನನ್ನ ಮಾತನ್ನು ಸಾವಧಾನವಾಗಿ ಕೇಳಿರಿ! ನಿಮಗಿಂ ತಲೂ ಮೊದಲು ನನ್ನಿಂದ ಹುಟ್ಟಿದ ಸನಕಾದಿಮುನಿಕುಮಾರರು ನಾಲ್ವರೂ, ಲೋಕವ್ಯಾಪಾರಗಳಲ್ಲಿ ವಿರಕ್ತರಾಗಿ, ಆಕಾಶಗಮನದಿಂದ ಹೊರಟು, ಸಮಸ್ತ ಲೋಕಗಳನ್ನೂ ದಾಟಿ, ಕೊನೆಗೆ ಒಂದಾನೊಂದು ದಿನದಲ್ಲಿ ಭಗವಂತನಿಗೆ ನಿವಾಸಸ್ಥಾನವಾಗಿ ಸರ್ವಲೋಕನಮಸ್ಕೃತವಾಗಿರುವ ವಿಷ್ಣುಲೋಕಕ್ಕೆ ಹೋದರು. ಆ ವೈಕುಂಠದ ಮಹಿಮೆಯಾದರೋ ಅನಿರ್ವಣ್ಯವಾದುದು. ಅಲ್ಲಿ ವಾಸಮಾಡತಕ್ಕವರೆಲ್ಲರೂ ವಿಷ್ಣುವಿಗೆ ಸಮಾನರೂಪವುಳ್ಳವರಾಗಿ, ನಿಷ್ಕಾಮರಾಗಿ, ಸರ್ವಕಾಲದಲ್ಲಿಯೂ ಆ ಹರಿಯನ್ನು ಪೂಜಿಸುತ್ತಿರುವರು. ಅಲ್ಲಿ ಆದಿಪುರುಷನಾಗಿಯೂ, ವೇದವೇದ್ಯನಾಗಿಯೂ ಜಗತ್ಕಾರಣಭೂತ ನಾಗಿಯೂ, ಜ್ಞಾನಾದಿ ಷಡ್ಗುಣಪರಿಪೂರ್ಣನಾಗಿಯೂ ಇರುವ ಶ್ರೀಮನ್ನಾ ರಾಯಣನು, ರಜಸ್ಸು ಮೊದಲಾದ ಇತರ ಗುಣಗಳ ಸಂಪರ್ಕವೇ ಇಲ್ಲದೆ, ಕೇವಲ ಶುದ್ಧಸತ್ವಮಯವಾದ ದಿವ್ಯಮಂಗಳವಿಗ್ರಹದೊಡನೆ, ತನ್ನ ಭಕ್ತ ಜನರನ್ನು ಸಂತೋಷಪಡಿಸುತ್ತಿರುವನು. ಅಲ್ಲಿ ನಿಃಶ್ರೇಯಸವೆಂದು ಕರೆಯಲ್ಪ ಡುವ ಒಂದಾನೊಂದು ದಿವ್ಯೋದ್ಯಾನವುಂಟು. ಆ ವನದಲ್ಲಿ ಬೇರೆ ಬೇರೆ ಋತುಗಳಲ್ಲಿ ಹುಟ್ಟತಕ್ಕ ಪುಷ್ಪಫಲಗಳೆಲ್ಲವೂ ಕಾಲನಿಯಮವಿಲ್ಲದೆ ಯಾವಾ ಗಲೂ ಸಮೃದ್ಧವಾಗಿರುವುವು. ಕೇಳಿದ ಕೋರಿಕೆಗಳೆಲ್ಲವನ್ನೂ ಈಡೇರಿಸತಕ್ಕ ಕಲ್ಪವೃಕ್ಷಗಳು ಅಲ್ಲಿ ಎಷ್ಟೋ ತುಂಬಿರುವುವು. ಮೋಕ್ಷಸುಖವೇ ಆ ಉದ್ಯಾನ ರೂಪದಿಂದ ಕಾಣುವಂತೆ ತೋರುವುದು. ಅಲ್ಲಿನವರೆಲ್ಲರೂ ತಮ್ಮ ತಮ್ಮ



೧೫೬. ಶ್ರೀವೈಕುಂಠವು

ಪತ್ನಿಯರೊಡನೆ ವಿಮಾನಾರೂಢರಾಗಿ ಆ ವನವನ್ನು ಸುತ್ತಿಸುತ್ತಿ ಬರುವಾಗ ಅಲ್ಲಿ ಅವಿಚ್ಛಿನ್ನವಾಗಿ ಮಕರಂದವನ್ನು ಸುರಿಸುತ್ತಿರುವ ಮಾಧವೀಪುಷ್ಪಗಳ ಮೇಲೆ ಬೀಸಿ ಬರುವ ಸುಗಂಧವಾಯುವು, ಎಂತವರ ಮನಸ್ಸನ್ನಾದರೂ ಕ್ಷಣಮಾತ್ರದಲ್ಲಿ ಆಕರ್ಷಿಸತಕ್ಕವುಗಳಾಗಿದ್ದರೂ, ಆ ವೈಮಾನಿಕ ದಂಪತಿಗಳು, ಆ ಸುಗಂಧವಾಯುವನ್ನೂ ಲಕ್ಷಿಸದೆ, ಹರಿಕೀರ್ತನಾನಂದವನ್ನೇ ಮೇಲಾಗಿ ಭಾವಿಸಿ, ಅದರಲ್ಲಿಯೇ ಮನಸ್ಸಿಟ್ಟು ವಿಹರಿಸುತ್ತಿರುವವರು. ಹೀಗೆ ಅಲ್ಲಿ ಭೋಗವಸ್ತುಗಳೂ, ಭೋಗಸಾಧನಗಳೂ (ಇಂದ್ರಿಯಗಳೂ), ಭೋಗಸ್ಥಾನಗಳೂ ಅನುಕೂಲವಾಗಿದ್ದರೂ, ಆ ಲೋಕದಲ್ಲಿರುವರು ಅವೊಂದಕ್ಕೂ ಲಕ್ಷಕೊಡದೆ ಭಗವದ್ಗುಣಾನುಭವವೊಂದರಲ್ಲಿಯೇ ಆಸೆಯುಳ್ಳವರಾಗಿರುವರು. ಇದಕ್ಕಿಂತಲೂ ಮತ್ತೊಂದಾಶ್ಚರ್ಯವೇನೆಂದರೆ ಅಲ್ಲಿನ ತಿರ್ಯಗ್ಜಂತುಗಳೂ ಸ್ಥಾವರವರ್ಗಗಳೂ ಕೂಡ ಭಗವಂತನಲ್ಲಿಯೇ ತಮಗಿರುವ ಆತ್ಮಾಸಕ್ತಿಯನ್ನು ತೋರಿಸುತ್ತಿರುವುವು. ಅಲ್ಲಿನ ವನಗಳಲ್ಲಿ, ಪಾರಿವಾಳ, ಕೋಗಿಲೆ, ಸಾರಸ, ಚಕ್ರವಾಕ, ಚಾತಕ, ಹಂಸ, ಗಿಳಿ, ತಿತ್ತಿರಿ, ನವಿಲು, ಮುಂತಾದ ಪಕ್ಷಿಜಾತಿಗಳೆಲ್ಲವೂ ಅತ್ಯುತ್ಸಾಹದಿಂದ ಕೋಲಾಹಲ ಧ್ವನಿಯನ್ನು ಮಾಡಿ ಕೂಗುತ್ತಿರುವ ಸಮಯದಲ್ಲಿ, ಆ ಸುತ್ತಿನಲ್ಲಿ ಬೇರೆ ಯಾವ ಕಡೆಯಿಂದಲಾದರೂ ಒಂದು ಭ್ರಮರಜಂಕಾರ ಧ್ವನಿಯು ಕಿವಿಗೆ ಬಿದ್ದೊಡನೆ, ಪಕ್ಷಿಗಳೆಲ್ಲವೂ ಸ್ತಬ್ಧವಾಗಿ "ಇದೋ! ಆ ಭೃಂಗವು ಹರಿಕಥೆಗಳನ್ನು ಗಾನ ಮಾಡುವಂತಿದೆ! ಇನ್ನು ನಾವು ಸಾವಧಾನವಾಗಿ ಕೇಳಬೇಕು!" ಎಂಬ ಅಭಿಪ್ರಾಯದಿಂದ, ತಮ್ಮ ಕಲಕಲವನ್ನು ನಿಲ್ಲಿಸಿ, ಭಕ್ತಿಯಿಂದ ಕಿವಿಗೊಟ್ಟು ಕೇಳುತ್ತಿರುವುವು. ಮತ್ತು ಆ ವನದಲ್ಲಿ ಪಾರಿಜಾತ, ಮಲ್ಲಿಗೆ, ಗೋರಂಟಿ, ನೈದಿಲೆ, ಹೊನ್ನೆ, ಸಂಪಂಗೆ, ತಾವರೆ, ನಾಗಕೇಸರಿ, ಪಗಡ, ಮಂದಾರ, ಮುಂತಾದ ಹೂಗಿಡಗಳು, ತಮ್ಮ ಪುಷ್ಪಗಳ ಸುವಾಸನೆಯನ್ನು ಸರ್ವತೋಮುಖವಾಗಿ ಹರಡುತ್ತಿದ್ದರೂ, ಕೇವಲ ತುಲಸಿಯೊಂದನ್ನೇ ಭಗವಂತನು ತನಗೆ ಮುಖ್ಯಾಭರಣವಾಗಿ ಅಂಗೀಕರಿಸುವುದನ್ನು ನೋಡಿ, ಅಂತಹ ಭಾಗ್ಯವು ತಮಗಿಲ್ಲದುದಕ್ಕಾಗಿ ಆ ತುಲಸಿಯ ತಪಸ್ಸನ್ನು ಕೊಂಡಾಡುತ್ತಿರುವುವು. ಹೀಗೆ ಅಲ್ಲಿನ ತಿರ್ಯಗ್ಜಂತುಗಳೂ, ಸ್ಥಾವರಗಳೂ ಕೂಡ, ಶ್ರೀಹರಿಯ ಸೇವೆಯೊಂದೇ ಜನ್ಮಕ್ಕೆ ಸಾಫಲ್ಯವೆಂದು ಭಾವಿಸಿರುವುವು. ಮತ್ತು ಆ ವೈಕುಂಠವು ಸುವರ್ಣಮಯ

ವಾಗಿಯೂ, ವೈಡೂರ್ಯಮರಕತ ಮಣಿಗಳಿಂದ ಕೆತ್ತಲ್ಪಟ್ಟುದಾಗಿಯೂ, ಕೇವಲ ಭಗವದ್ಭಕ್ತಿಯಿಂದಲೇ ಲಭಿಸತಕ್ಕುದಾಗಿಯೂ ಇರುವ ದಿವ್ಯ ವಿಮಾನಗಳಿಂದ ಎಡೆಬಿಡದೆ ಶೋಭಿಸುತ್ತಿರುವುದು. ಅಲ್ಲಿನ ವಿಷ್ಣುಭಕ್ತರು, ತಮ್ಮ ತಮ್ಮ ಪ್ರಿಯಪತ್ನಿಯರ ಸಹವಾಸದಲ್ಲಿದ್ದರೂ ಕೂಡ ಕೇವಲ ಭಗವದ್ಧ್ಯಾನಪರರಾಗಿರುವರೇ ಹೊರತು, ಅವರಿಗೆ ತಮ್ಮ ಪತ್ನಿಯರ ವಿಸ್ತಾರವಾದ ಕಟಿಪ್ರದೇಶವಾಗಲೀ, ಮುಗುಳ್ನಗೆಯಿಂದ ಕೂಡಿದ ಸುಂದರ ವದನವಾಗಲೀ ಮನಸ್ಸಿನಲ್ಲಿ ಕಾಮವನ್ನು ಹುಟ್ಟಿಸಲಾರದು. ಬ್ರಹ್ಮನೇ ಮೊದಲಾಗಿ ಸಮಸ್ತ ಜಗತ್ತೂ ಯಾವಳ ಅನುಗ್ರಹಕ್ಕಾಗಿ ಇದಿರುನೋಡು ತ್ತಿರುವುದೋ, ಅಂತಹ ಲಕ್ಷ್ಮೀದೇವಿಯು ನಿರ್ದುಷ್ಟವಾದ ನಿಜರೂಪ ದೊಡನೆ, ಚಿನ್ನದ ರೇಕುಗಳಿಂದ ಚಿತ್ರಿಸಲ್ಪಟ್ಟ ಸ್ಫಟಿಕದ ಗೋಡೆಗಳುಳ್ಳ ಆ ನಿವಾಸಗೃಹದಲ್ಲಿ, ತನ್ನ ಕಾಲಂದುಗೆಗಳ ಘಲ್ಘಲಧ್ವನಿಯೊಡನೆ ಸಂಚರಿ ಸುತ್ತ, ಆ ಭಗವನ್ಮಂದಿರವನ್ನು ತನ್ನ ಕೈಯಿಂದಲೇ ಮಕರಂದರಸದಿಂದ ಸಾರಿಸುವಂತೆ ಕಮಲವನ್ನು ಲೀಲೆಯಿಂದಾಡಿಸುತ್ತಿರುವಳು. ಮತ್ತು ಹವಳ ಮಯವಾದ ತೀರಗಳಿಂದಲೂ, ಅಮೃತಸಮಾನವಾದ ತಿಳಿನೀರಿನಿಂದಲೂ ಕೂಡಿದ ಅಲ್ಲಿನ ಬಾವಿಗಳಲ್ಲಿಯೂ, ಕ್ರೀಡಾವನಗಳಲ್ಲಿಯೂ, ಆ ಮಹಾ ಲಕ್ಷ್ಮಿಯು, ತನ್ನ ಪರಿಚಾರಿಕೆಯರೊಡನೆ ವಿಹರಿಸುತ್ತ, ತನ್ನ ಕೈಯಿಂ ದಲೇ ತುಲಸೀದಳಗಳನ್ನೆತ್ತಿ ಭಗವಂತನನ್ನು ಪೂಜಿಸುತ್ತಿರುವಳು. ಆ ಬಾವಿಯ ದಡದಲ್ಲಿ ನಿಂತು, ಸ್ವಚ್ಛವಾದ ಆ ನೀರಿನಲ್ಲಿ ತನ್ನ ಪ್ರತಿಬಿಂಬ ವನ್ನು ನೋಡಿ, ಅಂದವಾದ ಮುಂಗುರುಳುಗಳಿಂದಲೂ, ಉನ್ನತವಾದ ನಾಸಾಗ್ರದಿಂದಲೂ ಶೋಭಿಸುತ್ತಿರುವ ಆ ತನ್ನ ಪ್ರತಿಬಿಂಬವನ್ನೇ ಭಗವಂ ತನ ಮುಖವೆಂದು ಭ್ರಮಿಸಿ, ತನ್ನ ಮುಖವನ್ನು ಮುದ್ದಿಡುವುದಕ್ಕಾಗಿ ಭಗವಂತನು ಮುಖವನ್ನು ನೀಡುತ್ತಿರುವನೆಂದು ತನ್ನಲ್ಲಿ ತಾನೇ ನಾಚಿಕೆ ಪಡುತ್ತಿರುವಳು. ಮತ್ತು ಆ ವೈಕುಂಠನಗರವು ಕೇವಲ ಪುಣ್ಯಾತ್ಮರಿಗೆ ಸುಲಭವಲ್ಲದೆ ಪಾಪಿಗಳಿಗೆ ಲಭಿಸಲಾರದು. ಹರಿಕಥೆಗಳನ್ನು ಅನಾದರಿಸಿ ಕುತ್ಸಿತಕಥೆಗಳನ್ನು ಕೇಳುತ್ತಿರುವವರು ಆ ಸ್ಥಾನವನ್ನು ನೋಡಲಾರರು. ಅಂತಹ ಕುತ್ಸಿತಕಥೆಗಳು ನಿರ್ಭಾಗ್ಯರಾದ ಮನುಷ್ಯರ ಕಿವಿಗೆ ಬಿದ್ದೊಡನೆ ಅವರ ಪೂರ್ವಪುಣ್ಯಗಳೆಲ್ಲವನ್ನೂ ಅಪಹರಿಸಿ, ಅಂತವರನ್ನು ನಿರಾಶ್ರಯವಾದ

ನರಕಗಳಲ್ಲಿ ಬೀಳಿಸುವುವು. ಕೆಲವು ನೀಚಾತ್ಮರು, ತಮ್ಮ ಅದೃಷ್ಟವಶದಿಂದ ಮನುಷ್ಯಜನ್ಮವನ್ನು ಹೊಂದಿರುವಾಗಲೂ, ನಿವೃತ್ತಿಧರ್ಮಸಹಿತವಾದ ತತ್ವಜ್ಞಾನವನ್ನು ಸಂಪಾದಿಸದೆ, ಮಾಯೆಯಿಂದ ಮೋಹಿತರಾಗಿ, ಭಕ್ತಿಹೀನರಾಗಿ, ಭಗವದಾರಾಧನದಿಂದ ತಾವು ಪಡೆದ ಮಾನವ ಜನ್ಮವನ್ನು ಸಾರ್ಥಕಗೊಳಿಸದೆ ಕೆಟ್ಟುಹೋಗುವರು. ಅಂತಹ ಅವಿವೇಕಿಗಳನ್ನು ನೋಡಿ ನನ್ನ ಮನಸ್ಸು ಕನಿಕರಗೊಳ್ಳುವುದು. ಅಂತವರು ಆ ದಿವ್ಯಲೋಕವನ್ನು ಸ್ವಪ್ನದಲ್ಲಿಯೂ ಕಾಣಲಾರರು. ಹೀಗಿಲ್ಲದೆ, ಯಾವ ಮಹಾತ್ಮರು, ತಮ್ಮ ಹೃದಯಕಮಲದಲ್ಲಿ ಆ ಶ್ರೀಹರಿಯ ಪಾದಕಮಲವನ್ನು ನೆಲೆಗೊಳಿಸಿ, ಶಮದಮಾದಿಗುಣಗಳುಳ್ಳವರಾಗಿ, ಯಾವಾಗಲೂ ಆ ಶ್ರೀಹರಿಯ ಗುಣಾನುವಾದವನ್ನು ಮಾಡುತ್ತಿರುವರೋ, ಯಾರು ಭಕ್ತಿಪಾರವಶ್ಯದಿಂದ ಆನಂದ ಬಾಷ್ಪವನ್ನು ಸುರಿಸುತ್ತಿರುವರೋ, ಯಾರು ಆ ಭಗವಂತನ ಗುಣಶ್ರವಣ ಮಾಡುವಾಗ ಅದರಿಂದುಂಟಾದ ಆನಂದದಿಂದ ಪುಳಕಿತವಾದ ಮೈಯುಳ್ಳವರಾಗುವರೋ, ಅಂತವರಿಗೆ ಆ ವೈಕುಂಠಲೋಕವು ಬಹಳ ಸುಲಭವಾಗಿ ಗೋಚರಿಸುವುದು. ಎಲೈ ದೇವತೆಗಳಿರಾ! ಹೀಗೆ ಲೋಕೈಕ ಸುಂದರವಾಗಿಯೂ, ಮಹಾದ್ಭುತವಾಗಿಯೂ, ದೇವಶ್ರೇಷ್ಠರ ವಿಮಾನಕಾಂತಿಯಿಂದ ಶೋಭಿತವಾಗಿಯೂ ಇರುವ ವೈಕುಂಠನಗರವನ್ನು, ಸನಕಾದಿ ಮುನಿಕುಮಾರರು ತಮ್ಮ ಯೋಗಬಲದಿಂದ ಪ್ರವೇಶಿಸಿದರು. ಅಲ್ಲಿನ ಒಂದೊಂದು ಸನ್ನಿವೇಶವೂ ಅತ್ಯಾನಂದಕರವಾಗಿದ್ದರೂ, ಆ ಸನಕಾದಿಗಳು ಭಗವಂತನನ್ನು ದರ್ಶನಮಾಡಬೇಕೆಂಬ ಒಂದೇ ಆತುರದಿಂದ ಅಲ್ಲಿನ ಅದ್ಭುತಗಳೊಂದನ್ನೂ ಲಕ್ಷಿಸದೆ, ವೈಕುಂಠದ ಆರು ಪ್ರಾಕಾರದ್ವಾರಗಳನ್ನೂ ದಾಟಿ ಏಳನೆಯ ತೊಟ್ಟಿಯ ಬಾಗಿಲಿಗೆ ಬಂದಾಗ, ಅಲ್ಲಿ ಸಮಾನವಯಸ್ಸುಳ್ಳ ದೇವತೆಗಳಿಬ್ಬರು, ಅತ್ಯುತ್ತಮವಾದ ಕಿರೀಟಕೇಯೂರಾದ್ಯಾಭರಣಗಳಿಂದ ಶೋಭಿತರಾಗಿ, ಕೈಯಲ್ಲಿ ಗದೆಯನ್ನು ಹಿಡಿದು ನಿಂತಿರುವುದನ್ನು ಕಂಡರು. ಆ ದ್ವಾರಪಾಲಕರಿಗಾದರೋ ಚತುರ್ಭುಜಗಳು! ಕಂಠದಲ್ಲಿ ಭ್ರಮರಪಙ್ತಿಗಳಿಂದ ಶೋಭಿತವಾದ ತುಲಸೀಮಾಲಿಕೆ! ಕೋಪವನ್ನು ಸೂಚಿಸುವಂತೆ ಸ್ವಲ್ಪ ಕೆಂಪಾದ ಕಣ್ಣು! ಮುಖದಲ್ಲಿ ಕುಟಿಲವಾದ ಮತ್ತು ಭಯಂಕರವಾದ ಹುಬ್ಬುಗಂಟು! ಗಂಭೀರವಾದ ಉಸಿರಾಟದಿಂದ ಆಗಾಗ ಅರಳುತ್ತಿ

ರುವ ಮೂಗಿನ ರಂಧ್ರಗಳು! ಸನಕಾದಿಮುನಿಗಳು ಈ ದ್ವಾರಪಾಲಕರನ್ನು ನೋಡಿಯೂ ಕೂಡ, ಅವರನ್ನು ಮಾತಾಡಿಸದೆ, ಅವರ ಭಯಂಕರಸ್ವರೂಪಕ್ಕೆ ಸ್ವಲ್ಪಮಾತ್ರವೂ ಹೆದರದೆ, ಭಗವದ್ದರ್ಶನವೊಂದರಲ್ಲಿಯೇ ಆತುರವುಳ್ಳವರಾಗಿ, ಹಿಂದಿನ ಆರು ಗೋಪುರದ್ವಾರಗಳನ್ನು ದಾಟಿ ಬಂದಂತೆ, ಈ ಏಳನೆಯ ತೊಟ್ಟಿಯಬಾಗಿಲನ್ನೂ ನಿರ್ಭಯವಾಗಿ ಪ್ರವೇಶಿಸುವುದಕ್ಕೆ ಹೋದರು. ವಿದುರಾ! ದ್ವಾರಪಾಲಕರ ಅನುಮತಿಯಿಲ್ಲದೆ ಒಳಗೆ ಪ್ರವೇಶಿಸುವುದು ತಪ್ಪಲ್ಲವೆ? ಎಂದು ನೀನು ಶಂಕಿಸಬಹುದು. ಹಾಗಲ್ಲ. ಆ ಮಹರ್ಷಿಗಳು ಎಲ್ಲವನ್ನೂ ಸಮದೃಷ್ಟಿಯಿಂದ ನೋಡತಕ್ಕವರು! ಎಲ್ಲರನ್ನೂ ತಮ್ಮಂತೆಯೇ ಭಾವಿಸಿ ನಿಶ್ಶಂಕವಾಗಿ ತಿರುಗುತ್ತಿದ್ದರು. ಹೀಗೆ ನಿರಂಕುಶವಾಗಿ ನಡೆಯುತಕ್ಕವರಿಗೆ ಇತರರಲ್ಲಿ ದೈನ್ಯವನ್ನು ತೋರಿಸಿ ಪ್ರಾರ್ಥಿಸಬೇಕಾದ ಅವಶ್ಯವೇನು? ವಯೋವೃದ್ಧರಾಗಿದ್ದರೂ ಐದು ವರುಷದ ಸಣ್ಣ ಮಕ್ಕಳಂತೆ ಕಾಣುತ್ತ, ಪರಮಾತ್ಮನ ಸ್ವರೂಪವನ್ನು ತಿಳಿದವರಾಗಿದ್ದ ಆ ಮಹರ್ಷಿಗಳು ಮೈಮೇಲೆ ಬಟ್ಟೆಯಿಲ್ಲದೆ, ಹೀಗೆ ಅತಿಕ್ರಮಿಸಿ ಬರುವುದನ್ನು ನೋಡಿದಾಗ ಆ ದ್ವಾರಪಾಲಕರಿಗೆ ಕೋಪವು ಹುಟ್ಟಿತು ಆ ದ್ವಾರಪಾಲಕರಾದರೋ ಈ ಮಹರ್ಷಿಗಳ ಪ್ರಭಾವವನ್ನು ತಿಳಿದವರಲ್ಲ. ಮತ್ತು ಅವರು, ಆಶ್ರಿತವತ್ಸಲನಾದ ಭಗವಂತನ ಸ್ವಭಾವಕ್ಕೆ ಕೇವಲ ವಿರುದ್ಧಸ್ವಭಾವವುಳ್ಳವರು. ಇದರಿಂದ ಆ ದ್ವಾರಪಾಲಕರಿಬ್ಬರೂ ಈ ಮಹರ್ಷಿಗಳನ್ನು ಹಾಸ್ಯಮಾಡುತ್ತ, ತಾವು ಕೈಯಲ್ಲಿ ಹಿಡಿದಿದ್ದ ದಂಡದಿಂದಲೂ, ಭಯಂಕರವಾದ ನೇತ್ರಸಂಜ್ಞೆಯಿಂದಲೂ, ಕಠಿಣವಾಕ್ಯದಿಂದಲೂ ಅವರನ್ನು ಅಲ್ಲಿಯೇ ತಡೆದು ನಿಲ್ಲಿಸಿಬಿಟ್ಟರು. ಅನೇಕ ದೇವತೆಗಳ ಮುಂದೆ ತಮಗೆ ಈ ಅವಮಾನವುಂಟಾದುದನ್ನೂ ಭಗವಂತನನ್ನು ದರ್ಶನಮಾಡಬೇಕೆಂಬ ತಮ್ಮ ಉದ್ದೇಶಕ್ಕೆ ಭಂಗವುಂಟಾದುದನ್ನೂ ನೋಡಿ, ಆ ಮಹರ್ಷಿಗಳು, ಆಗಲೇ ಸ್ವಲ್ಪವಾಗಿ ಅಂಕುರಿಸುತ್ತಿರುವ ಕೋಪದಿಂದ ಕೆರಳಿದ ಕಣ್ಣುಳ್ಳವರಾಗಿ, ಆ ದ್ವಾರಪಾಲಕರನ್ನು ಕುರಿತು ಹೀಗೆಂದು ಹೇಳುವರು. "ಆಹಾ! ಏನಿದು? ನಾವು ಶ್ರೀಮನ್ನಾರಾಯಣನ ಪಾದಪದ್ಮಸಂದರ್ಶನಕ್ಕಾಗಿ ಭಕ್ತಿಯಿಂದ ಬರುತ್ತಿರುವಾಗ, ನಮ್ಮನ್ನು ತಡೆಯುವ ಈ ದುರಾತ್ಮರಾರು? ಅನೇಕ ಪುಣ್ಯಕಾರ್ಯಗಳನ್ನು ನಡೆಸಿ, ನಿರತಿಶಯವಾದ ಹರಿಭಕ್ತಿಯನ್ನು ಸಂಪಾದಿಸಿ,



೧೬೦. ಜಯವಿಜಯರೆಂಬ ದ್ವಾರಪಾಲಕರು ವೈಕುಂಠದ್ವಾರದಲ್ಲಿ ಸನಕಾದಿ ಮುನಿಕುಮಾರರನ್ನು ತಡೆದುದು.

ಅದರಿಂದ ಭಗವದನುಗ್ರಹಕ್ಕೆ ಪಾತ್ರರಾದವರಲ್ಲವೇ ಈ ಲೋಕದಲ್ಲಿರುವುದಕ್ಕೆ ಯೋಗ್ಯರು! ಸಾಮಾನ್ಯವಾಗಿ ಇಲ್ಲಿನವರೆಲ್ಲರೂ ಆ ಭಗವಂತನಿಗೆ ಸಮಾನಗುಣವುಳ್ಳವರಾಗಿಯೇ ಇರಬೇಕಲ್ಲವೇ? ಭಕ್ತವತ್ಸಲನಾದ ಭಗವಂತನು ಇಂತಹ ವಿಷಮ ಸ್ವಭಾವಕ್ಕೆ ಎಂದಿಗೂ ಸಮ್ಮತಿಸುವವನಲ್ಲ. ಹೀಗಿರುವಾಗ ಕೇವಲ ದುಸ್ಸ್ವಭಾವವುಳ್ಳ ನಿಮಗೆ ಈ ಪುಣ್ಯಸ್ಥಾನವು ಎಂದಿಗೂ ವಾಸಾರ್ಹವಲ್ಲ. ಇಲ್ಲಿನವರೆಲ್ಲರೂ ಕೇವಲ ಶಾಂತಸ್ವಭಾವವುಳ್ಳವರು. ಇಲ್ಲಿ ಕಲಹವೆಂಬ ಪ್ರಸಕ್ತಿಯೇ ಇರದು. ಯಾರ ಬಾಯಿಂದಲೂ ಕ್ರೂರವಾಕ್ಯವೆಂಬುದು ಹೊರಡದು! ಇಂತಹ ನಿರ್ದುಷ್ಟವಾದ ಈ ಲೋಕದಲ್ಲಿಯೂ, ಶೀಲಸ್ವಭಾವಗಳ ವಿಷಯದಲ್ಲಿ ಸಂದೇಹಿಸಬೇಕಾದವನೊಬ್ಬನುಂಟೇ? ಎಲೆ ದುರಾತ್ಮರೆ! ನಿಮ್ಮಂತೆ ಕುಟಿಲಸ್ವಭಾವವುಳ್ಳ ಬೇರೆ ಕೆಲವರು ಈ ಲೋಕದಲ್ಲಿದ್ದರಲ್ಲವೇ ಆಗ "ಭಗವದಾಲಯಕ್ಕೆ ಯಾರನ್ನು ಬಿಡಬಹುದು! ಯಾರನ್ನು ಬಿಡಬಾರದು" ಎಂಬ ಸಂದೇಹವುಂಟಾಗಬಹುದು! ಯಾರಲ್ಲಿಯೂ, ಯಾವ ದೋಷವೂ ಇಲ್ಲದ ಈ ಪುಣ್ಯಸ್ಥಳದಲ್ಲಿಯೂ, ನಿಮಗೆ ನಮ್ಮಂತಹ ಬೇರೊಬ್ಬರಲ್ಲಿ ಸಂದೇಹವೇ? ಈ ಲೋಕದವರೆಲ್ಲರೂ ಶುದ್ಧಸ್ವಭಾವವುಳ್ಳವರಾಗಿದ್ದರೂ ಭಗವಂತನಿಗೆ ಇಷ್ಟರಾದವರನ್ನು ಮಾತ್ರ ಬಿಡುವುದಾಗಿ ಹೇಳುವಿರೇನು? ಸಮಸ್ತ ಜೀವರಾಶಿಯನ್ನೂ ಸಮಬುದ್ಧಿಯಿಂದ ತನ್ನ ಹೊಟ್ಟೆಯಲ್ಲಿ ಧರಿಸಿರತಕ್ಕ ಭಗವಂತನಿಗೆ, ಒಬ್ಬನು ಇಷ್ಟನೆಂದೂ, ಮತ್ತೊಬ್ಬನು ಅನಿಷ್ಟನೆಂದೂ ತಾರತಮ್ಯವುಂಟೇ? ಎಲೈ ಮೂಢಾತ್ಮರೇ! ಭಗವಂತನನ್ನು ಬಿಟ್ಟ ವಸ್ತುವು ಲೋಕದಲ್ಲಿ ಯಾವುದುಂಟು? ಘಟಪಟಾದಿಗಳಲ್ಲಿರುವ ಆಕಾಶವನ್ನು ಮಹಾಕಾಶದಲ್ಲಿ ಅಪೃಥಕ್ಸಿದ್ಧವಾಗಿ (ಏಕಾಕಾರವಾಗಿ) ಅನುಸಂಧಾನ ಮಾಡುವಂತೆ ಯೋಗೀಶ್ವರರೆಲ್ಲರೂ ಪರಮಾತ್ಮನಲ್ಲಿ ಜೀವಾತ್ಮಗಳನ್ನು ಅಪೃಥಕ್ಸಿದ್ಧವಾಗಿಯೇ ನೋಡುತ್ತಿರುವರಲ್ಲವೇ? ಪರಮಾತ್ಮನಿಗೆ ಶರೀರದಂತಿರುವ ಜೀವನು ಅವನನ್ನಗಲಿರುವುದೆಂದರೇನು? ಆ ಜೀವಪರಮಾತ್ಮರಿಗೆ ಕೆಲವು ವಿಷಯಗಳಲ್ಲಿ ಅವಾಂತರ ಭೇದವಿದ್ದರೂ ಜ್ಞಾನೈಕಾಕಾರತ್ವದ ಮೂಲಕವಾಗಿ ಭೇದವೇನೂ ಇರದು. ಹೀಗೆ ಸರ್ವಾತ್ಮಕನಾಗಿರುವ ಭಗವಂತನಿಗೆ "ತನ್ನವರು, ಹೆರವರು" ಎಂಬ ಪಕ್ಷಪಾತವೆಲ್ಲಿಯದು? ರಾಗದ್ವೇಷಗಳೇ ಮೊದಲಾದ ದೋಷವೊಂದಕ್ಕೂ ಅವಕಾಶವಿಲ್ಲದ ಈ ಪುಣ್ಯ

ಲೋಕದಲ್ಲಿಯೂ ನಿಮಗೆ ಬೇರೊಬ್ಬರನ್ನು ತಡೆಯಬೇಕೆಂಬ ಬುದ್ಧಿಯು ಹೇಗೆ ಹುಟ್ಟಿತು? ಇಲ್ಲಿಗೆ ತಕ್ಕಂತೆ ವೈಷ್ಣವವೇಷದಿಂದಿರುವ ನಿಮಗೆ ಈ ವೈಷಮ್ಯಬುದ್ಧಿಯೆಲ್ಲಿಯದು? ಬೇರೊಬ್ಬರನ್ನು ನೀವು ತಡೆಯುವುದೆಂದ ರೇನು? ಎಲೈ ದ್ವಾರಪಾಲಕರೇ! ನೀವು ಆ ಶ್ರೀಮಹಾವಿಷ್ಣುವಿನ ಸೇವಕ ರಾಗಿದ್ದರೂ ಕೂಡ, ಹೀಗೆ ಮೂಢಬುದ್ಧಿಯುಳ್ಳವರಾಗಿ ಈ ಕುಚೇಷ್ಟೆ ಯನ್ನು ನಡೆಸಿದಿರಲ್ಲವೆ? ನಾವೂ ಇದಕ್ಕೆ ತಕ್ಕ ಪ್ರತಿಕ್ರಿಯೆಯನ್ನು ಆಲೋ ಚಿಸದೆ ಬಿಡಲಾರೆವು! ಇನ್ನು ನೀವು ಈ ಲೋಕದಲ್ಲಿರಬಾರದು! ಕೇವಲ ಪಾಪಪ್ರಚುರವಾಗಿಯೂ, ಈ ವಿಧವಾದ ವೈಷಮ್ಯಬುದ್ಧಿಗೆ ಮುಖ್ಯಸ್ಥಾನ ವಾಗಿಯೂ, ಕಾಮ, ಕ್ರೋಧ, ಲೋಭಾದಿ ದುರ್ಗುಣಗಳಿಂದ ತುಂಬಿದು ದಾಗಿಯೂ ಇರುವ ಭೂಲೋಕಕ್ಕೆ ಹೋಗಿರಿ! ನಿಮ್ಮಂತಹ ವಿಷಮಬುದ್ಧಿ ಗಳಿಗೆ ಆ ಸ್ಥಳವು ಯೋಗ್ಯವೇ ಹೊರತು, ಇದು ಯೋಗ್ಯವಾದ ಸ್ಥಳವಲ್ಲ" ಎಂದರು. ಎಷ್ಟೋ ಶಸ್ತ್ರಸಮೂಹಗಳಿಂದಲೂ ತಡೆಯುವುದಕ್ಕಾಗದ ಬ್ರಹ್ಮದಂಡದಂತೆ ಭಯಂಕರವಾದ ಈ ಶಾಪವಾಕ್ಯವು ಆ ಮಹರ್ಷಿಗಳ ಬಾಯಿಂದ ಹೊರಟಕೂಡಲೇ, ದ್ವಾರಪಾಲಕರಿಬ್ಬರೂ ಬಹಳ ಭಯಪೀಡಿತ ರಾಗಿ, ತಟ್ಟನೆ ಆ ಮುನಿಗಳ ಕಾಲ ಮೇಲೆ ಬಿದ್ದು ದೈನ್ಯದಿಂದ ಪ್ರಾರ್ಥಿಸು ವರು. "ಎಲೈ ಮುನೀಂದ್ರರೇ! ನಿಮ್ಮಲ್ಲಿ ನಾವು ಮಹಾಪರಾಧವನ್ನು ನಡೆಸಿಬಿಟ್ಟೆವು! ನಮ್ಮ ತಪ್ಪಿತಕ್ಕಾಗಿ ನಾವು ಶಿಕ್ಷೆಯನ್ನು ಅನುಭವಿಸಿಯೇ ತೀರಬೇಕು. ಇದುವರೆಗೆ ಭಗವಂತನ ಪಾದದರ್ಶನಕ್ಕಾಗಿ ಬಂದ ಎಷ್ಟೋ ದೇವತೆಗಳನ್ನೂ, ಈಗ ನಿಮ್ಮನ್ನೂ ತಿರಸ್ಕರಿಸಿದ ನಮ್ಮ ಪಾಪಕ್ಕೆ ಈಗ ನಿಮ್ಮಿಂದಾದ ಶಿಕ್ಷೆಯೇ ಪ್ರಾಯಶ್ಚಿತ್ತರೂಪವಾಗಿ ನಮ್ಮ ಪಾಪವನ್ನು ಪರಿ ಹರಿಸಲಿ! ಆದರೆ ನಮ್ಮದೊಂದು ಪ್ರಾರ್ಥನೆಯುಂಟು. ನಿಮ್ಮ ಶಾಪದಿಂದ ನಾವು ಇನ್ನುಮುಂದೆ ನೀಚಯೋನಿಗಳಲ್ಲಿ ಹುಟ್ಟಿದರೂ, ಆ ನೀಚಜನ್ಮ ದಲ್ಲಿಯೂ ನಮಗೆ ಭಗವನ್ನಾಮಸ್ಮರಣವನ್ನು ತಪ್ಪಿಸತಕ್ಕ ಬುದ್ಧಿಮೋಹವು ಮಾತ್ರ ಉಂಟಾಗದಂತೆ ಅನುಗ್ರಹಿಸಬೇಕು. ಈ ನಮ್ಮ ಕೋರಿಕೆಯು ಈಡೇರುವಂತೆ ನಮ್ಮಲ್ಲಿ ಲೇಶಮಾತ್ರ ಕೃಪೆಯನ್ನು ತೋರಿಸಬೇಕು" ಎಂದು ದೈನ್ಯದಿಂದ ಪ್ರಾರ್ಥಿಸುತ್ತಿದ್ದರು. ಇಷ್ಟರಲ್ಲಿ ಲಕ್ಷ್ಮೀಸಹಿತನಾಗಿ ಅಂತಃಪುರ ದಲ್ಲಿದ್ದ ಭಗವಂತನಿಗೆ ಈ ವೃತ್ತಾಂತವು ತಿಳಿಯಿತು. ಒಡನೆಯೇ ಭಕ್ತ

ವತ್ಸಲನಾದ ಆ ಭಗವಂತನು, ತನ್ನ ಕಡೆಯ ಕಿಂಕರರಿಂದ ಸನಕಾದಿ ಮಹರ್ಷಿಗಳಿಗೆ ತಿರಸ್ಕಾರ ಉಂಟಾದುದಕ್ಕಾಗಿ ಪರಿತಪಿಸುತ್ತ, ಅವರನ್ನು ತಾನೇ ಬಂದು ಸಮಾಧಾನಪಡಿಸಬೇಕೆಂದೆಣಿಸಿ, ಮಹಾಲಕ್ಷ್ಮೀಸಮೇತನಾಗಿ ಅಲ್ಲಿಂದ ಹೊರಟನು. ಗರುತ್ಮಂತನ ಹೆಗಲಿನ ಮೇಲೆ ತನ್ನ ಎಡದ ಕೈಯ ನ್ನೂರಿ ಬಲಗೈಯಲ್ಲಿ ನಾಳಸಹಿತವಾದ ಒಂದು ಕಮಲವನ್ನು ಲೀಲೆಯಿಂದ ತಿರುಗಿಸುತ್ತ, ಕಾಲುನಡೆಯಿಂದಲೇ ಹೊರಟು, ಸನಕಾದಿಗಳು ನಿಂತಿದ್ದ ದ್ವಾರಪ್ರದೇಶದ ಕಡೆಗೆ ಬಂದನು. ಯಾವ ಪಾದಾರವಿಂದಗಳನ್ನು ಮಹಾ ಯೋಗಿಗಳೂ ಪ್ರಯತ್ನಪೂರ್ವಕವಾಗಿ ಹುಡುಕುತ್ತಿರುವರೋ, ಆ ಪಾದ ಗಳಿಂದಲೇ ಭಗವಂತನು ತಮಗಿದಿರಾಗಿ ನಡೆದು ಬರುತ್ತಿರುವುದನ್ನು ಕಂಡು, ಸನಕಾದಿ ಮಹರ್ಷಿಗಳೆಲ್ಲರೂ, ತಮ್ಮ ತಪಃಫಲವೇ ಅಲ್ಲಿಗೆ ಮೂರ್ತೀಭವಿಸಿ ಬಂದಂತೆ ತಿಳಿದು, ಪರಮಾನಂದಭರಿತರಾಗಿ ನೋಡುತ್ತಿದ್ದರು. ಸುತ್ತಲೂ ಸೇವಾನಿರತರಾದ ಅನೇಕ ಭಕ್ತವರ್ಗದಿಂದ ಪರಿವೃತನಾಗಿ ಬರುತ್ತಿದ್ದ ಆ ಭಗವಂತನ ದಿವ್ಯವೈಭವವನ್ನು ಕೇಳಬೇಕೇ? ಆತನ ಉಭಯಪಾರ್ಶ್ವಗಳ ಲ್ಲಿಯೂ ಹಂಸಮಿಥುನದಂತೆ ಬಿಳೀ ಚಾಮರಗಳು ತೂಗಾಡುತ್ತಿರುವುವು! ಕಿರೀಟಾಗ್ರದಲ್ಲಿ ಚಂದ್ರಬಿಂಬಕ್ಕೆಣೆಯಾದ ಶ್ವೇತಚ್ಛತ್ರವು ಕಂಗೊಳಿಸುತ್ತಿ ರುವುದು! ಈ ಶ್ವೇತಚ್ಛತ್ರದ ಸುತ್ತಿನ ಜಾಲರಿಗಳು, ಚಾಮರದ ಗಾಳಿ ಯಿಂದ ಅಲುಗಾಡುತಿದ್ದ ಹಾಗೆಲ್ಲಾ, ಅವುಗಳಿಂದ ಅಮೃತಬಿಂದುಗಳು ಭಗವಂತನ ಮೈಮೇಲೆ ಮೆಲ್ಲಮೆಲ್ಲನೆ ತೊಟ್ಟಿಕ್ಕುತ್ತಿರುವುವು! ಮತ್ತು ಆ ಭಗವಂತನ ಮುಖದಲ್ಲಿ ಭಕ್ತಾನುಗ್ರಹಸೂಚಕವಾದ ಮುಗುಳ್ನಗೆ! ಸರ್ವ ಜನಸ್ಪೃಹಣೀಯವಾದ ದೇಹಕಾಂತಿ! ಲೋಕಮನೋಹರವಾದ ಪ್ರಸನ್ನ ದೃಷ್ಟಿ! ವಿಶಾಲವಾದ ಉಬ್ಬಿದ ಆತನ ವಕ್ಷಃಸ್ಥಳದಲ್ಲಿ ವೈಕುಂಠಲೋಕ ವೆಲ್ಲವನ್ನೂ ಬೆಳಗುವಂತೆ ಥಳಥಳಿಸುವ ಲಕ್ಷ್ಮೀದೇವಿಯ ದೇಹಕಾಂತಿ! ಆತನ ಕಟಿಪ್ರದೇಶದಲ್ಲಿ ಪೀತಾಂಬರವೆಂಬ ಪಟ್ಟೆಮಡಿ! ಅದರ ಮೇಲೆ ಸುತ್ತಿ ಕಟ್ಟಿದ ಸುವರ್ಣಮಯವಾದ ಡಾಬು! ಕಂಠದಲ್ಲಿ ಭ್ರಮರ ಜಂಕಾರಗಳಿಂದ ಕೂಡಿದ ವನಮಾಲಿಕೆ! ಹಸ್ತಾಗ್ರದಲ್ಲಿ ಕಾಂತಿಯಿಂದ ಜಗಜಗಿಸುವ ರತ್ನಾಂಗದ ಗಳು! ಕಪೋಲದಲ್ಲಿ ಮಿಂಚಿನ ಕಾಂತಿಯನ್ನು ತಿರಸ್ಕರಿಸುವಂತಿರುವ ಮಕರ ಕುಂಡಲಗಳು! ಉಬ್ಬಿ ಎಸಳಾದ ಮೂಗು! ವಿಶಾಲವಾದ ಹಣೆ! ತಲೆಯ

ಮೇಲೆ ಜಾಜ್ವಲ್ಯಮಾನವಾಗಿ ಹೊಳೆಯುವ ರತ್ನಕಿರೀಟದ ಕಾಂತಿ! ಚತುರ್ಭುಜಗಳ ನಡುವೆ ತೂಗಾಡುತ್ತಿರುವ ಅತ್ಯುತ್ತಮವಾದ ಮುತ್ತಿನ ಸರಗಳು! ಕಂಠದಲ್ಲಿ ಕೌಸ್ತುಭಮಣಿ! ತ್ರಿಲೋಕಸುಂದರಿಯೆನಿಸಿದ ಲಕ್ಷ್ಮೀದೇವಿಗೂ ಆಶ್ಚರ್ಯವನ್ನುಂಟುಮಾಡತಕ್ಕ ಸೌಂದರ್ಯಸಮೃದ್ಧಿ! ಭಕ್ತರ ಮನಸ್ಸಿನಲ್ಲಿ ಅನವರತವೂ ಭಾವಿಸಲ್ಪಡತಕ್ಕ ನಿರತಿಶಯವಾದ ದೇಹಕಾಂತಿ! ಇಂತಹ ಮಹಾದ್ಭುತ ಸೌಂದರ್ಯವಿಶಿಷ್ಟನಾದ ಭಗವಂತನನ್ನು ನೋಡಿದೊಡನೆ, ಸನಕಾದಿ ಮಹರ್ಷಿಗಳೆಲ್ಲರೂ, ಆ ಶ್ರೀಮನ್ನಾರಾಯಣನ ದಿವ್ಯಸೌಂದರ್ಯವನ್ನು ಎಷ್ಟೆಷ್ಟು ನೋಡಿದರೂ ದಣಿಯಲಾರದೆ, ಬ್ರಹ್ಮಾದಿ ದೇವತೆಗಳಿಗೂ, ಸಮಸ್ತ ಯೋಗೀಶ್ವರರಿಗೂ ವಂದನೀಯವಾದ ಆತನ ಪಾದಾರವಿಂದಗಳಿಗೆ ತಲೆಯನ್ನು ಸೋಕಿಸಿ ಸಾಷ್ಟಾಂಗ ಪ್ರಣಾಮವನ್ನು ಮಾಡಿದರು. ಆ ಮಹರ್ಷಿಗಳು ಯಾವ ವಿಷಯದಲ್ಲಿಯೂ ಕದಲದ ದೃಢಮನಸ್ಸುಳ್ಳವರಾಗಿದ್ದರೂ, ಆ ಭಗವಂತನು ಮೆಲ್ಲಮೆಲ್ಲಗೆ ಹೆಜ್ಜೆಯನ್ನಿಟ್ಟು ಮುಂದೆ ಬರುವಾಗ, ಕಮಲದಳದಂತಿರುವ ಅವನ ಕಾಲ್ಬೆರಳುಗಳಿಂದ ಚಿಮ್ಮಿಬಂದ ಧೂಳಿಯು, ತುಳಸೀಗಂಧಮಿಶ್ರವಾಗಿ ವಾಯುವಿನಲ್ಲಿ ಕಲೆತು, ಈ ಮಹರ್ಷಿಗಳ ಘ್ರಾಣೇಂದ್ರಿಯದಲ್ಲಿ ಪ್ರವೇಶಿಸಿದೊಡನೆ, ಇವರಿಗೆ ಮೈಮರೆಯುವಂತೆ ಮಾಡಿತು. ಆ ಮಹರ್ಷಿಗಳು ಮೊದಲು, ನೀಲೋತ್ಪಲದಂತಿರುವ ಆ ಭಗವಂತನ ಮಂದಹಾಸ ಸುಂದರವಾದ ಮುಖಬಿಂಬವನ್ನು ನೋಡಿ, ಅದರ ಸೌಂದರ್ಯಾನುಭವದಿಂದ ಆನಂದಿತರಾಗಿ, ಬಾರಿಬಾರಿಗೂ ಆಪಾದಚೂಡಪರ್ಯಂತವಾಗಿ ಆ ಭಗವಂತನ ದಿವ್ಯಸೌಂದರ್ಯಾಮೃತವನ್ನು ಪಾನಮಾಡುತ್ತಿದ್ದರು. ಆ ಸೌಂದರ್ಯವನ್ನು ಮನಸ್ಸಿನಲ್ಲಿಯೇ ಅನವರತವೂ ಧ್ಯಾನಿಸುತ್ತಿದ್ದರು. ವಿದುರಾ! ಬೇರೊಬ್ಬರಿಗೆ ದುರ್ಲಭವಾದ ಸಹಜಗುಣಗಳಿಂದಲೂ, ಅಣಿಮಾದ್ಯಷ್ಟೈಶ್ವರ್ಯಗಳಿಂದಲೂ ಶೋಭಿತನಾದ ಆ ಭಗವಂತನು, ಕರ್ಮಜ್ಞಾನಭಕ್ತಿಗಳೆಂಬ ಯೋಗಮಾರ್ಗಗಳಿಂದ ಆತ್ಮಸ್ವರೂಪವನ್ನು ಚಿಂತಿಸತಕ್ಕವರೆಲ್ಲರಿಗೂ, ಯಾವುದೊಂದೇ ಧ್ಯಾನವಿಷಯವಾಗಿರುವುದೋ, ನೋಡುತ್ತಿದ್ದಹಾಗೆಲ್ಲಾ ಯಾವುದು ನೇತ್ರಾನಂದಕರವಾಗಿ ಮೇಲೆ ಮೇಲೆ ಆತ್ಯಾದರವನ್ನು ಹೆಚ್ಚಿಸುತ್ತಿರುವುದೋ, ಅಂತಹ ಪುರುಷಾಕೃತಿಯಿಂದ ಬಂದುದನ್ನು ಕಂಡೊಡನೆ ಈ ಮುನಿಕುಮಾರರು ನಾಲ್ವರೂ

ಬದ್ಧಾಂಜಲಿಗಳಾಗಿ ಹೀಗೆಂದು ಸ್ತುತಿಸಿದರು. "ಹೇ ದೇವಾ! ನೀನು ಸರ್ವ ಸಮವಾಗಿ ಎಲ್ಲರ ಹೃದಯದಲ್ಲಿ ಸೇರಿದ್ದರೂ, ಯೋಗಬಲವಿಲ್ಲದವರಿಗೆ ಗೋಚರಿಸದ ಮಹಾಮಹಿಮೆಯುಳ್ಳವನು! ಇಂತಹ ನೀನು ಈಗ ನಮ್ಮ ಕಣ್ಣುಗಳಿಗೆ ಗೋಚರಿಸಿದುದು ನಮ್ಮ ಮಹಾಭಾಗ್ಯವಲ್ಲದೆ ಬೇರೆಯಲ್ಲ. ಆದಿಯಲ್ಲಿ ನಿನ್ನಿಂದ ಜನಿಸಿದ ನಮ್ಮ ಜನಕನಾದ ಚತುರ್ಮುಖನಿಂದ, ನಾವು ನಿನ್ನ ಮಹಾಮಹಿಮೆಯನ್ನು ಕಿವಿಯಿಂದ ಕೇಳಿದ್ದೆವು. ನಿನ್ನ ರೂಪವು ನಮ್ಮ ಹೃದಯಗುಹೆಯಲ್ಲಿ ಪ್ರವೇಶಿಸಿ, ಇದುವರೆಗೂ ಕೇವಲ ಧ್ಯಾನವಿಷಯ ವಾಗಿದ್ದಿತು. ಆ ರೂಪವು ಈಗ ನಮ್ಮ ಕಣ್ಣುಗಳಿಗೆ ಸಾಕ್ಷಾತ್ತಾಗಿಯೇ ಗೋಚರಿಸಿತು. ಈಗಲೀಗ ನಮ್ಮ ಜನ್ಮವು ಕೃತಾರ್ಥವಾಯಿತು. ಎಲೈ ಪರಮಪುರುಷನೇ! ಕೇವಲ ಸತ್ವಮಯವಾದ ದೇಹದಿಂದ, ನಮ್ಮಂತಹ ಭಕ್ತರಿಗೆ ಕ್ಷಣಕ್ಷಣಕ್ಕೂ ಭಕ್ತಿರೂಪವಾದ ಅನುರಾಗವನ್ನು ಹೆಚ್ಚಿಸುತ್ತಿರುವ ಈ ನಿನ್ನ ರೂಪವೇ, ಹಿಂದೆ ನಮ್ಮ ಜನಕನು ನಮಗೆ ಉಪದೇಶಿಸಿದ ಆತ್ಮ ತತ್ವವೆಂಬುದನ್ನು ಈಗ ನಾವು ಚೆನ್ನಾಗಿ ತಿಳಿದೆವು. ಸಂಸಾರದ ವಿಷಯದಲ್ಲಿ ಜಿಹಾಸೆ ಹೊಂದಿ, ಅದರಿಂದ ಹುಟ್ಟಿದ ಭಕ್ತಿಯೋಗದಿಂದ ವಿಷಯಾಭಿಲಾಷೆ ಗಳನ್ನೂ ಬಿಟ್ಟು, ವಿರಕ್ತರಾಗಿಯೂ, ಅಹಂಕಾರ ರಹಿತರಾಗಿಯೂ ಇರುವ ಪುರಾತನ ಮಹರ್ಷಿಗಳು ಮನಸ್ಸಿನಲ್ಲಿ ಯಾವುದನ್ನು ಆತ್ಮತತ್ವವೆಂದು ಭಾವಿಸುವರೋ, ಅದೇ ಈ ನಿನ್ನ ರೂಪವೆಂಬುದನ್ನೂ ತಿಳಿದೆವು. ಹೇ ದೇವಾ! ನಿನ್ನ ಪಾದಾಶ್ರಯದಿಂದ ಮೇಲ್ಮೆಯನ್ನು ಪಡೆದು, ನಿನ್ನ ಕಥಾ ಮೃತದ ರುಚಿಯನ್ನು ತಿಳಿದು, ಅದರಿಂದ ತಮ್ಮನ್ನು ಕೃತಾರ್ಥರೆಂದು ಭಾವಿಸಿದ ಭಕ್ತೋತ್ತಮರು ಯಾರುಂಟೋ, ಅವರು ನಿನ್ನ ಪೂರ್ಣಾನು ಗ್ರಹದಿಂದ ಪಡೆಯಬೇಕಾದ ಮೋಕ್ಷಸುಖವನ್ನೂ ಕೂಡ ಲಕ್ಷ್ಯೀಕರಿಸಲಾರರು. ಹೀಗಿರುವಾಗ ನಿನ್ನ ಹುಬ್ಬಿನಾಟಗಳಿಂದಲೇ ಸ್ಥಿತಿನಾಶಗಳನ್ನು ಹೊಂದತಕ್ಕು ದಾಗಿ, ಭಯಾಸ್ಪದವಾದ ಬೇರೆ ಸ್ವರ್ಗಾದಿ ಲೋಕಗಳನ್ನು ಅಪೇಕ್ಷಿಸಲಾರ ರೆಂಬುದನ್ನು ಹೇಳಬೇಕೇ? ಅಂತಹ ನಿನ್ನ ರೂಪವೇ ನಮ್ಮ ಕಣ್ಣುಮುಂದೆ ಗೋಚರಿಸಿದ ಮೇಲೆ ನಮ್ಮ ಭಾಗ್ಯಕ್ಕೆಣೆಯುಂಟೇ? ಹೇ ದೇವಾ! ನಮ್ಮ ಮನಸ್ಸು ನಿನ್ನ ಪಾದಾರವಿಂದದಲ್ಲಿ ಭ್ರಮರದಂತೆ ಯಾವಾಗಲೂ ವಿಹರಿ ಸುತ್ತಿದ್ದರೆ, ನಮ್ಮ ಮಾತುಗಳು ಅನವರತವೂ ನಿನ್ನ ಪುಣ್ಯಚರಿತ್ರಗಳನ್ನು

ಕೀರ್ತಿಸುತ್ತಿದ್ದರೆ, ನಮ್ಮ ಕರ್ಣರಂಧ್ರಗಳು ಯಾವಾಗಲೂ ನಿನ್ನ ಗುಣ ಶ್ರವಣದಿಂದ ಸಂತೋಷ ಹೊಂದುತ್ತಿದ್ದರೆ, ನಮ್ಮ ಪೂರ್ವಾರ್ಜಿತ ಪಾಪಗಳೂ ಕೂಡ ನಮಗೆ ಅಧೋಗತಿಯನ್ನುಂಟುಮಾಡಲಾರವು. ಇದು ನಿಶ್ಚಯವು! ಎಲೈ ದೇವದೇವನೇ! ವೇದಗಳಿಗೂ ಅಗೋಚರವಾದ ಈ ನಿನ್ನ ದಿವ್ಯ ರೂಪವು ನಮ್ಮ ಕಣ್ಣಿಗೆ ಗೋಚರಿಸಿದುದರಿಂದ, ನಮ್ಮ ಕಣ್ಣುಗಳು ಪೂರ್ಣ ಸುಖವನ್ನು ಹೊಂದಿದುವು. ಕುತ್ಸಿತಯೋಗಿಗಳಿಗೆ ಗೋಚರವಾಗದ ನಿನಗೆ, ಇದೋ! ನಾವು ಅನೇಕ ವಂದನೆಗಳನ್ನರ್ಪಿಸುವೆವು" ಎಂದು ದಂಡಪ್ರಣಾಮ ವನ್ನು ಮಾಡಿದರು. ಇಲ್ಲಿಗೆ ಹದಿನೈದನೆಯ ಅಧ್ಯಾಯವು.

---

## ಭಗವಂತನು ಸನಕಾದಿಗಳನ್ನು ಸಮಾಧಾನಪಡಿಸಿದುದು

ಯೋಗನಿಷ್ಠರಾದ ಮಹರ್ಷಿಗಳು ಹೀಗೆ ಸ್ತುತಿಸುತ್ತಿರುವುದನ್ನು ಕೇಳಿ ಭಗವಂತನು ಪ್ರಸನ್ನನಾಗಿ ಅವರನ್ನು ಪ್ರತಿನಮಸ್ಕಾರದಿಂದ ಮನ್ನಿಸಿ, ಹೀಗೆಂದು ಹೇಳುವನು. "ಎಲೈ ಮುನೀಂದ್ರರೇ! ಇವರಿಬ್ಬರೂ ನನ್ನ ದ್ವಾರಪಾಲಕರು! ಇವರಿಗೆ ಜಯವಿಜಯರೆಂದು ಹೆಸರು. ಇವರು ನಿಮ್ಮನ್ನು ಲಕ್ಷ್ಯಮಾಡದೆ, ನಿಮ್ಮ ಮಾರ್ಗವನ್ನು ತಡೆದು, ನಿಮ್ಮಲ್ಲಿ ಅತಿಕ್ರಮಿಸಿ ನಡೆದುದೇನೋ ಬಹಳ ತಪ್ಪು! ನೀವು ಇದಕ್ಕಾಗಿ ಕೋಪಿಸಿ, ಇವರಿಗೆ ಶಿಕ್ಷೆ ಯನ್ನು ವಿಧಿಸಿದುದು ನನಗೂ ಸಮ್ಮತವು. ಮಹಾತ್ಮರಾದ ನಿಮ್ಮಲ್ಲಿ ಅತಿ ಕ್ರಮಿಸಿ ನಡೆದುದಕ್ಕೆ ಇಂತಹ ಶಿಕ್ಷೆಯು ಯುಕ್ತವಾಗಿಯೂ ಇರುವುದು. ಆದರೆ ಎಲೈ ಮಹಾತ್ಮರೇ! ಇದೋ! ಅವರ ಅಪರಾಧಕ್ಕಾಗಿ ನಾನೇ ನಿಮ್ಮಲ್ಲಿ ಕ್ಷಮೆಯನ್ನು ಬೇಡುವೆನು. ನಿಮ್ಮಂತಹ ಬ್ರಾಹ್ಮಣರೇ ನನಗೆ ಪರದೈವವು! ನನ್ನ ಕಡೆಯವರು ನಿಮ್ಮನ್ನು ಅವಮಾನಪಡಿಸಿದುದು, ನಾನೇ ನಿಮ್ಮಲ್ಲಿ ತಪ್ಪಿ ನಡೆದಂತಾಗುವುದೇ ಹೊರತು ಬೇರೆಯಲ್ಲ! ಭೃತ್ಯರ ಅಪರಾಧವು ಯಜಮಾನನಿಗೇ ಸೇರುವುದು! ಆದುದರಿಂದ ನಿಮ್ಮಲ್ಲಿ ಅಪ ರಾಧಿಯಾದ ನನ್ನನ್ನು ಮನ್ನಿಸಬೇಕು! ಲೋಕದಲ್ಲಿ ರಾಜಭಟರು ತಪ್ಪಿತ ವನ್ನು ನಡೆಸಿದರೂ, ಅದರಿಂದುಂಟಾಗತಕ್ಕ ಅಪರಾಧಕ್ಕೆ ರಾಜನೇ ಭಾಗಿ

ಯಾಗುವನು. ದೇಹದೊಳಗಿನ ರೋಗವು ಮೇಲಿನ ಚರ್ಮದ ಬಣ್ಣವನ್ನು ಕೆಡಿಸುವಂತೆ, ಭಟರ ದೋಷವು ರಾಜನ ಕೀರ್ತಿಗೇ ಕಳಂಕವನ್ನುಂಟು ಮಾಡುವುದು. ಎಲೈ ಮಹರ್ಷಿಗಳೇ! ಇನ್ನು ಹೆಚ್ಚಾಗಿ ಹೇಳಿದುದರಿಂದೇನು? ಲೋಕದಲ್ಲಿ ನನಗಿರತಕ್ಕ ಗೌರವವೂ ಕೂಡ ನಿಮ್ಮಂತಹ ಮಹಾತ್ಮರ ಸೇವಾಫಲವೆಂದೇ ಎಣಿಸುವೆನು! ಚಂಡಾಲಪರ್ಯಂತವಾಗಿ ಸಮಸ್ತ ಜೀವರಾಶಿಗಳೂ ಕೂಡ ನನ್ನ ಕೀರ್ತಿಯನ್ನು ಕೇಳಿದ ಮಾತ್ರಕ್ಕೆ ಪವಿತ್ರವಾಗುವುದೆಂದು ಜನರೆಲ್ಲರೂ ಹೇಳುವರು. ನಿಮ್ಮ ಅನುಗ್ರಹಬಲದಿಂದಲೇ ನಾನು ಇಂತಹ ಕೀರ್ತಿಗೆ ಪಾತ್ರನಾದೆನು. ನಿಮಗೆ ಪ್ರತಿಕೂಲವಾಗಿ ನಡೆದ ನನ್ನ ತೋಳನ್ನಾದರೂ ನಾನು ಕತ್ತರಿಸಿಡುವುದಕ್ಕೆ ಹಿಂಜರಿಯುವವನಲ್ಲ. ಹೀಗಿರುವಾಗ ದುರಾತ್ಮರಾದ ಈ ನನ್ನ ಭಟರು, ನಿಮ್ಮ ವಿಷಯದಲ್ಲಿ ತಪ್ಪಿ ನಡೆದ ಮೇಲೆ ಅವರನ್ನು ಶಿಕ್ಷಿಸುವ ವಿಷಯದಲ್ಲಿ ನಾನು ಸಮ್ಮತಿಸದಿರುವೆನೆ? ಎಲೈ ಮಹಾತ್ಮರೆ! ಇನ್ನು ಹೆಚ್ಚು ಮಾತಿನಿಂದೇನು? ನಿಮ್ಮಂತಹ ಮಹಾನುಭಾವರನ್ನು ಅನವರತವೂ ನಾನು ಸೇವಿಸುತ್ತಿರುವುದರಿಂದಲೇ ನನ್ನ ಪಾದರಜಸ್ಸು ಲೋಕಪವಿತ್ರವೆನಿಸಿಕೊಂಡಿತು. ನಿಮ್ಮಂತಹ ಬ್ರಾಹ್ಮಣರ ಸೇವೆಯಿಂದಲ್ಲವೇ ನನ್ನ ಚರಿತ್ರವು ಲೋಕಪಾವನವೆನಿಸಿರುವುದು! ಬ್ರಹ್ಮಾದಿದೇವತೆಗಳೂ ಕೂಡ ಯಾವಳ ಲೇಶಮಾತ್ರ ಕೃಪೆಗಾಗಿ ಅನೇಕ ವ್ರತಗಳನ್ನಾಚರಿಸುತ್ತಿರುವರೋ, ಅಂತಹ ಲಕ್ಷ್ಮೀದೇವಿಯು ನಾನಾಗಿ ಉಪೇಕ್ಷಿಸಿದರೂ ನನ್ನನ್ನು ಬಿಡದೆ, ನನಗೆ ನಿತ್ಯಾನಪಾಯಿನಿಯಾಗಿ ನನ್ನನ್ನನುಸರಿಸುತ್ತಿರುವುದೂ ನಿಮ್ಮಂತಹ ಮಹಾತ್ಮರ ಸೇವಾಪ್ರಭಾವದಿಂದಲ್ಲದೆ ಬೇರೆಯಲ್ಲ! ಮತ್ತು ಯಾಗಮಾಡತಕ್ಕವರು ಯಜ್ಞದಲ್ಲಿ ಘೃತಮಿಶ್ರವಾದ ಹವಿಸ್ಸನ್ನು ಅಗ್ನಿಮುಖವಾಗಿ ನನಗೆ ಕೊಡುತ್ತಿದ್ದರೂ, ಅದರಿಂದ ನನಗುಂಟಾಗುವ ತೃಪ್ತಿಯು, ತಮ್ಮ ತಮ್ಮ ವರ್ಣಾಶ್ರಮಧರ್ಮಗಳೆಲ್ಲವನ್ನೂ ನನ್ನ ಪ್ರೀತ್ಯರ್ಥವಾಗಿಯೇ ನಡೆಸತಕ್ಕ ನಿಮ್ಮಂತಹ ಬ್ರಾಹ್ಮಣರಿಗೆ ಭೋಜನವನ್ನಿಕ್ಕಿ, ಅವರು ಒಂದೊಂದು ಕಬಳವನ್ನು ಭುಜಿಸುವಾಗ ನನಗುಂಟಾಗತಕ್ಕ ತೃಪ್ತಿಗೆ ಕಲಾಮಾತ್ರವೂ ಸಾಟಿಯಾಗಲಾರದು! ಮತ್ತು ಲೋಕದ ಜನರು ನನ್ನನ್ನು ಯಾವ ವಿಷಯದಲ್ಲಿಯೂ ತಡೆಯಿಲ್ಲದೆ ಆಶ್ಚರ್ಯಶಕ್ತಿಯುಳ್ಳವನೆಂದೂ, ಚಂದ್ರಚೂಡನಾದ ಶಿವನಿಗೂ ಕೂಡ ತನ್ನ ಪಾದತೀರ್ಥದ

ಸಂಬಂಧದಿಂದ ಲೋಕಪೂಜ್ಯತೆಯನ್ನುಂಟುಮಾಡಿದವನೆಂದೂ ಕೊಂಡಾಡುತ್ತಿರುವರು. ಈ ವಿಧವಾಗಿ ಜನಗಳಿಂದ ಗೌರವಿಸಲ್ಪಡುತ್ತಿರುವ ನಾನೇ ಮಹಾತ್ಮರಾದ ನಿಮ್ಮಂತಹ ಬ್ರಾಹ್ಮಣರ ಪಾದಧೂಳಿಯನ್ನು ಶಿರಸ್ಸಿನಲ್ಲಿ ಧರಿಸತಕ್ಕವನಾಗಿರುವೆನು. ಇನ್ನು ಇತರ ಜನರು ನಿಮ್ಮನ್ನು ಗೌರವಿಸಬೇಕೆಂಬುದನ್ನು ಹೇಳಬೇಕಾದುದೇನು ? ಲೋಕದಲ್ಲಿ ಯಾವ ಮೂಢಾತ್ಮರು, ನನಗೆ ಶರೀರದಂತಿರುವ ಗೋಬ್ರಾಹ್ಮಣರನ್ನಾಗಲೀ, ಅನಾಥವೆನಿಸಿಕೊಂಡ ಇತರ ಭೂತಗಳನ್ನಾಗಲೀ, ನನ್ನಂತೆಯೇ ಭಾವಿಸದೆ, ಭೇದಬುದ್ಧಿಯನ್ನಿಟ್ಟು, ಸರ್ಪದಂತೆ ಕ್ರೂರದೃಷ್ಟಿಯಿಂದ ನೋಡುವರೋ, ಅಂತಹ ಪಾಪಿಗಳು ಸತ್ತು ನರಕದಲ್ಲಿ ಬಿದ್ದೊಡನೆ, ಅಲ್ಲಿ ನನ್ನ ಕಡೆಯ ದಂಡಾಧಿಕಾರಿಯಾದ ಯಮನ ಪ್ರೇರಣೆಯಿಂದ ಉಕ್ಕಿನ ಮೂತಿಯುಳ್ಳ ರಣಹದ್ದುಗಳು ಅವರ ಕಣ್ಣುಗಳನ್ನು ಕುಕ್ಕಿ ತಿನ್ನದೆ ಬಿಡಲಾರವು- ಹೀಗಿಲ್ಲದೆ ಅಪಕಾರ ಮಾಡಿದ ಬ್ರಾಹ್ಮಣರನ್ನೂ ಯಾರು ಪ್ರಸನ್ನ ದೃಷ್ಟಿಯಿಂದ ನೋಡಿ, ಪ್ರೇಮವಾಕ್ಯದಿಂದ ಮನ್ನಿಸಿ, ತಂದೆಯು ಮಕ್ಕಳನ್ನು ಕಾಣುವಂತೆ ಪ್ರೀತಿಯಿಂದ ಕಾಣುವರೋ, ಅಂತಹ ಸಾಧುಗಳು ನನ್ನ ಪೂರ್ಣಾನುಗ್ರಹಕ್ಕೆ ಪಾತ್ರರಾಗುವರು. ಅಂತವರನ್ನು ನಾನು ನನಗೆ ಪರಮೋಪಕಾರಿಗಳನ್ನಾಗಿ ಭಾವಿಸುವೆನು. ಈ ದ್ವಾರಪಾಲಕರು, ಈ ನನ್ನ ಸ್ವಭಾವವನ್ನು ತಿಳಿಯದೆ, ಅವಿವೇಕದಿಂದ ನಿಮ್ಮಲ್ಲಿ ತಪ್ಪಿ ನಡೆದರು. ನೀವು ಅದಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸಿದುದಕ್ಕಾಗಿ ನಾನು ಸಂತೋಷಿಸುವೆನೇ ಹೊರತು, ಅಸಮಾಧಾನಪಡುವವನಲ್ಲ. ಆದರೆ ಇವರು ನನ್ನ ಕಿಂಕರರಾದುದಕ್ಕಾಗಿ, ಇವರಲ್ಲಿ ನಾನು ಸ್ವಲ್ಪಮಾತ್ರವಾದರೂ ಕನಿಕರವನ್ನು ತೋರಿಸಬೇಕಾಗಿರುವುದು. ಇದಕ್ಕಾಗಿ ನಾನು ನಿಮ್ಮಲ್ಲಿಯೇ ಪ್ರಾರ್ಥಿಸಿಕೊಳ್ಳುವುದೇನೆಂದರೆ, ನಿಮ್ಮ ಆಜ್ಞೆಯಂತೆ ಇವರು ಹೀನಜಾತಿಯಲ್ಲಿ ಹುಟ್ಟಿದರೂ, ಶೀಘ್ರದಲ್ಲಿಯೇ ನನ್ನ ಸ್ಥಾನಕ್ಕೆ ಹಿಂತಿರುಗಿ ಬಂದು ಸೇರುವಂತೆ ನೀವು ಅನುಗ್ರಹಿಸಬೇಕು. ಇದೇ ಅವರ ವಿಷಯದಲ್ಲಿ ನಾನು ಮಾಡಬಹುದಾದ ವಾಕ್ಸಹಾಯವು." ಎಂದನು. ವೇದಮಂತ್ರಕ್ಕೆ ಸಮಾನವಾದ ಭಗವಂತನ ಈ ಮಧುರವಾಕ್ಯವನ್ನು ಕೇಳಿ, ಆ ಮಹರ್ಷಿಗಳಿಗೆ ದಿಗ್ಭ್ರಮೆ ಹಿಡಿದಂತಾಯಿತು! ಈ ಮಹರ್ಷಿಗಳು ತಮಗೆ ಯಾವಾಗಲೂ ಸಹಜವಾಗಿರಬೇಕಾದ ಶಾಂತಸ್ವಭಾವವನ್ನು ಬಿಟ್ಟು,

ಕೋಪಕ್ಕೆ ವಶರಾಗಿ, ಜಯವಿಜಯರನ್ನು ಶಪಿಸಿದುದರಿಂದ, ತಾವೇ ಅಪರಾಧಿಗಳೆಂಬ ಶಂಕೆಯು ಇವರ ಮನಸ್ಸನ್ನು ಮೊದಲೇ ಬಹಳವಾಗಿ ಬಾಧಿಸುತಿತ್ತು. ಇದರ ಮೇಲೆ ಭಗವಂತನ ಬಾಯಿಂದ ಹೊರಟ ಗಂಭೀರಾರ್ಥವುಳ್ಳ ಆ ಒಂದೆರಡು ಮಾತುಗಳನ್ನು ತಮ್ಮ ಮನಸ್ಸಿನಲ್ಲಿಯೇ ಚೆನ್ನಾಗಿ ಆಲೋಚನೆ ಮಾಡಿದರೂ, ಅದರ ಅಭಿಪ್ರಾಯವೇನೆಂಬುದನ್ನು ನಿಶ್ಚಯಿಸಲಾರದೆ, ಮುಂದೆ ಮಾಡಬೇಕಾದ ಕಾರ್ಯವೇನೆಂದೂ ತಿಳಿಯದೆ ಸ್ವಲ್ಪಹೊತ್ತಿನವರೆಗೆ ಸುಮ್ಮನಿದ್ದರು. ಸಂದೇಹಾಸ್ಪದವಾದ ಈ ವಾಕ್ಯಗಳನ್ನು ಕೇಳಿ, ಅವರ ಮನಸ್ಸಿನಲ್ಲಿ ಕೋಪವು ಅಂಕುರಿಸುತ್ತಿದ್ದರೂ, ಆ ಭಗವಂತನ ಮುಖಾರವಿಂದವನ್ನು ನೋಡಿದೊಡನೆ ಅವನ ಪ್ರಸನ್ನದೃಷ್ಟಿಗಳು ತಮ್ಮ ಮೇಲೆ ಬೀಳುತ್ತಿರುವುದನ್ನು ಕಂಡು, ಆನಂದದಿಂದ ಪುಲಕಿತವಾದ ಮೈಯುಳ್ಳವರಾಗಿದ್ದರು. ಹೀಗೆ ಸಂತುಷ್ಟಾಂತರಂಗರಾದ ಆ ಮಹರ್ಷಿಗಳು, ಪ್ರಕೃತಿಜನ್ಯವಾದ ಪ್ರಪಂಚದ ಮೇಲೆ ಬ್ರಹ್ಮಾದಿ ದೇವತೆಗಳಿಗೂ ಆಯಾ ಅಧಿಕಾರವನ್ನು ನಿಯಮಿಸತಕ್ಕ ಆ ಶ್ರೀಹರಿಯ ಮುಂದೆ, ಬದ್ಧಾಂಜಲಿಗಳಾಗಿ ನಿಂತು ವಿಜ್ಞಾಪಿಸುವರು. "ದೇವಾ! ಸರ್ವೇಶ್ವರನಾಗಿಯೂ, ಸರ್ವಜ್ಞನಾಗಿಯೂ ಇರುವ ನೀನು, ನಮ್ಮನ್ನು ಇಷ್ಟೊಂದು ಪ್ರಶಂಸೆಮಾಡಿ, ನಮ್ಮಲ್ಲಿಯೇ ಅನುಗ್ರಹವನ್ನು ಬೇಡುತ್ತಿರುವಿಯಲ್ಲಾ! ಈ ನಿನ್ನ ವಾಕ್ಯದ ಅಭಿಪ್ರಾಯವೇನೋ ತಿಳಿಯಲಿಲ್ಲ! ನಿನ್ನ ವಿಚಿತ್ರ ವ್ಯಾಪಾರಗಳನ್ನು ಯಾರು ತಾನೇ ತಿಳಿಯಬಲ್ಲರು? ದೇವಾ! ಬ್ರಾಹ್ಮಣರನ್ನೇ ನಿನಗೆ ದೈವವೆಂದು ಹೇಳಿದೆಯಲ್ಲವೇ? ಸರ್ವಲೋಕೇಶ್ವರನಾದ ನೀನು, ಬ್ರಾಹ್ಮಣರನ್ನು ನಿನಗೆ ದೇವತೆಗಳನ್ನಾಗಿ ಹೇಳುವುದು ಆಶ್ಚರ್ಯಕರವಾಗಿರುವುದು. ದೇವತೆಗಳೆಲ್ಲರಿಗೂ ಪರದೇವತೆಯೆನಿಸಿಕೊಂಡು, ಷಡ್ಗುಣೈಶ್ವರ್ಯಪರಿಪೂರ್ಣನಾಗಿ, ತನಗೆ ತಾನೇ ದೈವವಾಗಿರುವ ನಿನಗೆ ಬೇರೆ ದೈವವೊಂದುಂಟೇ? ನೀನು ನಮ್ಮಂತಹ ಬಡಬ್ರಾಹ್ಮಣರನ್ನು ದೈವವೆಂದು ಗೌರವಿಸುತ್ತಿರುವುದು, ಇತರ ಜನಗಳಿಗೆ ಹಾಗೆ ನಡೆಯಬೇಕೆಂದು ತೋರಿಸುವುದಕ್ಕಾಗಿಯೇ ಹೊರತು ಬೇರೆಯಲ್ಲ! ಹೇ ಸರ್ವೇಶ್ವರಾ! ಬ್ರಾಹ್ಮಣಾದಿ ವರ್ಣಾಶ್ರಮಗಳನ್ನು ಏರ್ಪಡಿಸಿದವನೇ ನೀನು! ಬೇರೆ ಬೇರೆ ಅವತಾರಗಳನ್ನೆತ್ತಿ ಅದನ್ನು ರಕ್ಷಿಸತಕ್ಕವನೂ ನೀನೇ! ಆಯಾ ಧರ್ಮಗಳಿಗೆ ಫಲವೂ ನೀನೇ! ಸಮಸ್ತ ಧರ್ಮಗಳಿಗೂ ನಿನ್ನ

ಪಾದಪದ್ಮವನ್ನು ಸೇರುವುದೊಂದೇ ಮುಖ್ಯಫಲವೇ ಹೊರತು ಬೇರೆ ಫಲವಿಲ್ಲ. ಲೋಕದಲ್ಲಿ ಯೋಗೀಶ್ವರರೆಲ್ಲರೂ ನಿನ್ನ ಅನುಗ್ರಹವನ್ನು ಸಂಪಾದಿಸಿದಮೇಲಲ್ಲವೇ ಮಹಾತ್ಮರೆನಿಸಿಕೊಂಡು, ಮೃತ್ಯುಭಯವನ್ನೂ ನೀಗುವರು. ಹೀಗಿರುವಾಗ ನೀನು ಮತ್ತೊಬ್ಬರ ಅನುಗ್ರಹವನ್ನು ಕೋರುವುದೆಂದರೇನು ? ಓ ಪರಮಪುರುಷಾ! ಚತುರ್ವಿಧ ಪುರುಷಾರ್ಥಗಳನ್ನು ಕೋರುವ ಮನುಷ್ಯರೆಲ್ಲರೂ, ಯಾವಳ ಪಾದರೇಣುವನ್ನು ತಮ್ಮ ಶಿರಸ್ಸಿನಿಂದ ಧರಿಸುತ್ತಿರುವರೋ, ಅಂತಹ ಲಕ್ಷ್ಮೀದೇವಿಯೇ ಕ್ಷಣಮಾತ್ರವೂ ನಿನ್ನ ಪಾದವನ್ನು ಎಡೆಬಿಡದೆ ಅನುವರ್ತಿಸುತ್ತಿರುವಳು. ಆ ಶ್ರೀದೇವಿಗೆ ನೀನು ನಿನ್ನ ವಕ್ಷಃಸ್ಥಳವನ್ನೇ ನಿವಾಸಸ್ಥಾನವಾಗಿ ಕೊಟ್ಟಿದ್ದರೂ, ಅವಳು ಆ ಸ್ಥಳವನ್ನು ಬಿಟ್ಟು, ತುಲಸೀಮಾಲಿಕೆಯಿಂದ ಶೋಭಿತವಾದ ನಿನ್ನ ಪಾದಪದ್ಮಗಳನ್ನೇ ಬಯಸಿ ಬಂದು, ಅಲ್ಲಿನ ಗಂಧಕ್ಕಾಗಿ ಸುತ್ತುತ್ತಿರುವ ಭ್ರಮರಗಳ ಗುಂಪಿನಲ್ಲಿ ತಾನೂ ಸೇರಿ, ಎಡೆಬಿಡದೆ ನಿನ್ನನ್ನು ಸೇವಿಸುತ್ತಿರುವಳು. ಹೀಗೆ ಶ್ರೀದೇವಿಯು ಪರಮಪ್ರೇಮದಿಂದ ನಿನ್ನ ಪಾದಗಳನ್ನು ಸೇವಿಸುತ್ತಿದ್ದರೂ ಕೂಡ, ನೀನು ಅವಳನ್ನು ಆದರಿಸುವುದಕ್ಕೂ ತಕ್ಕಷ್ಟು ಸಮಯವಿಲ್ಲದೆ, ಪಾದಾಶ್ರಿತರಾದ ಭಕ್ತರನ್ನಾದರಿಸುವುದರಲ್ಲಿ ಹೆಚ್ಚು ಪ್ರೀತಿಯುಳ್ಳವನಾಗಿರುವೆ. ಎಲೈ ಭಗವಂತನೆ! ಬ್ರಾಹ್ಮಣರ ಪಾದಧೂಳಿಯೇ ನಿನಗೆ ಭೂಷಣವೆಂದು ಹೇಳಿದೆಯಷ್ಟೆ! ಇತರ ಜನರಿಗೆ ಬ್ರಾಹ್ಮಣರಲ್ಲಿ ಗೌರವವನ್ನು ಹುಟ್ಟಿಸುವುದಕ್ಕಾಗಿ ನೀನು ಈ ಮಾತನ್ನಾಡಿರಬಹುದೇ ಹೊರತು, ಪರಮಪಾವನನಾದ ನೀನೆಲ್ಲಿ? ನಿನ್ನ ಆಜ್ಞಾನುವರ್ತಿಗಳಾದ ನಮ್ಮಂತಹ ಬ್ರಾಹ್ಮಣರೆಲ್ಲಿ? ಅವರ ಪಾದರೇಣುವು ನಿನ್ನನ್ನು ಪಾವನಮಾಡುವುದೆಂದರೇನು? ಈ ನಿನ್ನ ವಾಕ್ಯವೊಂದೊಂದೂ ಆಶ್ಚರ್ಯವನ್ನುಂಟುಮಾಡುತ್ತಿರುವುದು! ಸಹಜವಾಗಿ ನಿರತಿಶಯ ಸೌಂದರ್ಯ ವಿಶಿಷ್ಟನಾದ ನೀನು, ಶ್ರೀವತ್ಸವೆಂಬ ಮಚ್ಚೆಯನ್ನು ಒಂದು ಭೂಷಣವನ್ನಾಗಿ ತಳೆದಂತೆ, ಲೋಕಪಾವನನಾದ ನೀನು ಬ್ರಾಹ್ಮಣ ಪಾದರೇಣುವನ್ನೂ ಭೂಷಣಕ್ಕಾಗಿ ಧರಿಸಬೇಕಲ್ಲದೆ ಪವಿತ್ರತೆಗಲ್ಲ! ಷಡ್ಗುಣೈಶ್ವರ್ಯ ಪರಿಪೂರ್ಣನಾದ ಎಲೈ ಭಗವಂತನೇ! ಧರ್ಮಸ್ವರೂಪನಾದ ನಿನಗೆ, ತಪಸ್ಸು, ದಾನ, ದಯೆ, ಎಂಬಿವು ಮೂರೂ ಮೂರು ಪಾದಗಳೆನಿಸಿರುವುವು- ಈ ಪಾದತ್ರಯದಿಂದ ನೀನು

ಬ್ರಾಹ್ಮಣರನ್ನೂ, ದೇವತೆಗಳನ್ನೂ ರಕ್ಷಿಸುವುದಕ್ಕಾಗಿ, ಬೇರೆ ಬೇರೆ ಅವತಾರಗಳನ್ನೆತ್ತಿ, ರಜಸ್ತಮೋಗುಣಗಳ ಹೆಚ್ಚಿಕೆಯಿಂದ ಅವರಿಗೆ ವಿರೋಧಿಗಳಾಗಿ ಪ್ರವರ್ತಿಸುತ್ತಿರುವ ದುರ್ಮಾರ್ಗರನ್ನು ನಿಗ್ರಹಿಸಿ, ಚರಾಚರಾತ್ಮಕವಾದ ಸಮಸ್ತ ಪ್ರಪಂಚಕ್ಕೂ ಕ್ಷೇಮವನ್ನುಂಟುಮಾಡಿ, ಧರ್ಮವನ್ನು ಪಾಲಿಸುತ್ತಿರುವೆ. ಹಾಗಿಲ್ಲದ ಪಕ್ಷದಲ್ಲಿ ಧರ್ಮವೆಂಬುದು ಈ ಲೋಕದಲ್ಲಿ ನಿರ್ಮೂಲವಾಗಿ ನಾಶಹೊಂದುತ್ತಿದ್ದಿತು. ಈ ಕಾರ್ಯವು ನಿನ್ನಿಂದಲ್ಲದೆ ಬೇರೊಬ್ಬರಿಂದ ಸಾಧ್ಯವೇ? ಹೀಗೆ ಸರ್ವಶಕ್ತನಾದ ನೀನು ಬೇರೆ ಬೇರೆ ಅವತಾರಗಳನ್ನೆತ್ತಿ, ಸ್ವತಃ ಧರ್ಮಗಳನ್ನು ನಡೆಸಿ ತೋರಿಸುವುದರಿಂದಲೂ, ಇತರರಿಗೆ ಪ್ರಿಯವಾಕ್ಯಗಳಿಂದ ಅದನ್ನುಪದೇಶಿಸುವುದರಿಂದಲೂ ಬ್ರಾಹ್ಮಣಕುಲಕ್ಕೆ ಕ್ಷೇಮವನ್ನುಂಟುಮಾಡದಿದ್ದ ಪಕ್ಷದಲ್ಲಿ, ಸಮಸ್ತಲೋಕಕ್ಕೂ ಶ್ರೇಯಸ್ಸಂಪಾದಕವಾಗಿಯೂ, ಕರ್ಮೋಪಾಸನಾತ್ಮಕವಾಗಿಯೂ ಇರುವ ವೇದಮಾರ್ಗವು ಆಗಲೇ ನಶಿಸುತ್ತಿತ್ತು. ಲೋಕವೆಲ್ಲ ನಿನ್ನಂತಹ ಹಿರಿಯರ ನಡತೆಯನ್ನೇ ಪ್ರಮಾಣವಾಗಿಟ್ಟುಕೊಂಡು ಅದನ್ನನುವರ್ತಿಸಿ ನಡೆಯಬೇಕೆಂಬ ಉದ್ದೇಶದಿಂದಲೇ ನೀನೂ ಕರ್ಮಗಳನ್ನಾಚರಿಸುತ್ತಿರುವೆ. ಹೇ ದೇವಾ! ಕೇವಲ ಶುದ್ಧಸತ್ವಮಯನಾಗಿ, ಅನವರತವೂ ಲೋಕಕ್ಷೇಮದಲ್ಲಿಯೇ ನಿರತನಾಗಿ ನೀನು, ಬೇರೆ ಬೇರೆ ಅವತಾರಗಳನ್ನೆತ್ತಿ ಲೋಕಕಂಟಕರಾದ ದುರ್ಮಾರ್ಗರನ್ನು ನಿಗ್ರಹಿಸುವಂತೆ, ವೇದಮಾರ್ಗವನ್ನು ರಕ್ಷಿಸಬೇಕಾದುದೂ ನಿನ್ನ ಕರ್ತವ್ಯವು. ಸರ್ವಲೋಕಾಧಿಪತಿಯಾಗಿಯೂ, ಸರ್ವಶಕ್ತನಾಗಿಯೂ, ಸರ್ವದೇವದೇವನಾಗಿಯೂ ಇರುವ ನೀನು, ಹೀಗೆ ಬ್ರಾಹ್ಮಣರಿಗೆ ತಲೆಬಗ್ಗಿದ ಮಾತ್ರಕ್ಕೆ, ಅದರಿಂದ ನಿನ್ನ ಮಹಿಮೆಗೆ ಕೊರತೆಯೇನೂ ಉಂಟಾಗಲಾರದು. ಈ ನೈಚ್ಯಾನುಸಂಧಾನವೂ ಕೂಡ, ನೀನು ಲೋಕಶಿಕ್ಷಣಾರ್ಥವಾಗಿ ನಡೆಸತಕ್ಕ ಲೀಲೆಯೇ ಹೊರತು ಬೇರೆಯಲ್ಲ. ದೇವಾ! ಈಗ ನಮ್ಮದೊಂದು ವಿಜ್ಞಾಪನೆಯುಂಟು. ಲಾಲಿಸಬೇಕು! ಈಗ ನಾವೇನೋ ನಿನ್ನ ಕಿಂಕರರಾದ ಈ ಜಯವಿಜಯರನ್ನು ಶಪಿಸಿಬಿಟ್ಟೆವು. ಈ ಶಾಪವೇ ಅವರಿಗೆ ತಕ್ಕ ದಂಡನೆಯೆಂದು ನೀನು ಅಂಗೀಕರಿಸಿದರೂ ಅಂಗೀಕರಿಸಬಹುದು! ಇಲ್ಲವೇ ಇದಕ್ಕೆ ನೀನು ಬೇರೆ ಪ್ರತಿಕಾರವನ್ನು ಯೋಚಿಸಿ, ಅವರನ್ನು ಅನುಗ್ರಹಿಸಿದರೂ ಅನುಗ್ರಹಿಸಬಹುದು! ಅಥವಾ ಅತಿಕ್ರಮಿಸಿ

ಬಂದವರನ್ನು ತಡೆದು ನಿಲ್ಲಿಸುವುದು ಈ ದ್ವಾರಪಾಲಕರಿಗೆ ಕರ್ತವ್ಯವಾದುದರಿಂದ, ಆ ವಿಷಯದಲ್ಲಿ ನಿರಪರಾಧಿಗಳಾದ ಈ ಜಯವಿಜಯರನ್ನು ನಾವು ವಿವೇಕವಿಲ್ಲದೆ ಶಪಿಸಿದುದಕ್ಕಾಗಿ, ನಮ್ಮನ್ನೇ ನೀನು ಶಿಕ್ಷಿಸುವುದಾದರೂ ಆ ಶಿಕ್ಷೆಯನ್ನನುಭವಿಸುವುದಕ್ಕೂ ನಾವು ಸಿದ್ಧರಾಗಿರುವೆವು. ಈ ವಿಷಯದಲ್ಲಿ ನಾವು ನಿನ್ನ ಆಜ್ಞಾಧೀನರಾಗಿ ನಡೆದುಕೊಳ್ಳ ತಕ್ಕವರು!" ಎಂದು ಹೇಳಿ ಬದ್ಧಾಂಜಲಿಗಳಾಗಿ ನಿಂತಿದ್ದರು. ಆಗ ಭಗವಂತನು ಆ ಮುನಿಕುಮಾರರ ಭಕ್ತಿವಿನಯಗಳನ್ನು ನೋಡಿ, ಅವರಲ್ಲಿ ಕನಿಕರಗೊಂಡು "ಎಲೈ ಮಹರ್ಷಿಗಳಿರಾ! ಇವರು ನಿಮ್ಮಾಜ್ಞೆಯಂತೆ ಅಸುರಜನ್ಮದಲ್ಲಿ ಹುಟ್ಟಬೇಕಾದುದೇ ಅವಶ್ಯವು. ಆದರೆ ಇವರಿಗೆ ಆಗಲೂ ನನ್ನ ಸ್ಮರಣವು ಮಾತ್ರ ತಪ್ಪದಂತೆ ಅನುಗ್ರಹಿಸುವೆನು. ಇವರು ರಾಕ್ಷಸಜನ್ಮದಲ್ಲಿ ಹುಟ್ಟಿ, ಹುಟ್ಟಿದುದು ಮೊದಲು ಸಾಯುವವರೆಗೆ ನನ್ನಲ್ಲಿ ವೈರಬುದ್ಧಿಯುಳ್ಳವರಾಗಿದ್ದರೂ, ಆ ನೆವದಿಂದಲೇ ನನ್ನನ್ನು ಅನವರತವೂ ಭಾವಿಸುತ್ತಿದ್ದು, ಅದರ ಫಲದಿಂದ ಶೀಘ್ರದಲ್ಲಿ ತಿರುಗಿ ನನ್ನ ಸಾನ್ನಿಧ್ಯಕ್ಕೆ ಬಂದು ಸೇರಲಿ! ಎಲೈ ಮಹರ್ಷಿಗಳೇ! ನೀವು ಇವರಿಗೆ ಕೊಟ್ಟ ಶಾಪವನ್ನು ನಾನೇ ನಿಮ್ಮ ಬಾಯಿಂದ ನುಡಿಸಿರುವೆನೆಂದು ತಿಳಿಯಿರಿ" ಎಂದನು. ಆ ಮೇಲೆ ಸನಕಾದಿ ಮಹರ್ಷಿಗಳೆಲ್ಲರೂ ನೇತ್ರಾನಂದಕರನಾದ ಆ ಭಗವಂತನನ್ನೂ, ಆತನಿಗೆ ನಿವಾಸಸ್ಥಾನವಾಗಿ ಸ್ವಯಂಪ್ರಕಾಶವುಳ್ಳ ವೈಕುಂಠಲೋಕದ ಸೊಬಗನ್ನೂ ನೋಡುತ್ತ, ಪರಮಾನಂದಭರಿತರಾಗಿ ಆ ಭಗವಂತನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಆತನ ಅನುಜ್ಞೆಯನ್ನು ಪಡೆದು, ಆ ವಿಷ್ಣುವಿನ ಮಹಾಮಹಿಮೆಯನ್ನು ಕೊಂಡಾಡುತ್ತ ಸಂತೋಷದಿಂದ ತಮ್ಮ ಸ್ಥಾನಕ್ಕೆ ಹಿಂತಿರುಗಿದರು. ಆ ಮೇಲೆ ನಾರಾಯಣನು ತನ್ನ ಭೃತ್ಯರಾದ ಜಯವಿಜಯರನ್ನು ನೋಡಿ "ಎಲೈ ಭೃತ್ಯರೇ! ಇನ್ನು ನೀವು ಹೊರಡಬಹುದು! ಇದಕ್ಕಾಗಿ ನೀವು ಭಯಪಡಬೇಕಾದುದಿಲ್ಲ! ನಿಮಗೆ ಶುಭವಾಗಲಿ! ನಾನು ಈ ಬ್ರಾಹ್ಮಣ ಶಾಪವನ್ನು ತಪ್ಪಿಸುವುದಕ್ಕೆ ಶಕ್ತನಾಗಿದ್ದರೂ ನಿಮಗೆ ಈ ಶಿಕ್ಷೆಯಾಗಬೇಕೆಂದು ನನಗೂ ಸಮ್ಮತವಾದುದರಿಂದಲೇ ತಪ್ಪಿಸಲಿಲ್ಲವು. ಇದಲ್ಲದೆ ನನ್ನ ಪ್ರಿಯಪತ್ನಿಯಾದ ಲಕ್ಷ್ಮೀದೇವಿಗೂ, ನಿಮಗೆ ಈ ವಿಧವಾದ ದಂಡನೆಯಾಗಬೇಕೆಂಬುದೇ ಇಷ್ಟವು. ಅದಕ್ಕೆ ಕಾರಣವನ್ನು ತಿಳಿಸುವೆನು

ಕೇಳಿರಿ! ಹಿಂದೆ ನಾನು ಲಕ್ಷ್ಮೀದೇವಿಯಲ್ಲಿ ಪ್ರಣಯಕಲಹದಿಂದ ಮಾತಾಡದೆ ಸುಮ್ಮನೆ ಮಲಗಿದ್ದಾಗ, ಆಕೆಯು ಅಂತಃಪುರವನ್ನು ಬಿಟ್ಟು, ಸ್ವಲ್ಪ ಹೊತ್ತಿನವರೆಗೆ ಹೊರಗಿದ್ದು ಹಿಂತಿರುಗಿ ಶಯನಗೃಹವನ್ನು ಪ್ರವೇಶಿಸುವುದಕ್ಕೆ ಬರಲು, ಈಗಿನಂತೆಯೇ ನೀವು ಆ ದೇವಿಯನ್ನೂ ನಿವಾರಿಸಿದಿರಿ! ಇದಕ್ಕಾಗಿ ಆಕೆಯೂ ಹಿಂದೆಯೇ ನಿಮ್ಮನ್ನು ಇದೇ ರೀತಿಯಲ್ಲಿ ಶಪಿಸಿರುವಳು. ಆದುದರಿಂದ ನಿಮಗೆ ಈ ರಾಕ್ಷಸಜನ್ಮವು ಹೇಗಿದ್ದರೂ ತಪ್ಪದು. ನೀವು ಹುಟ್ಟಿದುದು ಮೊದಲು ನನ್ನಲ್ಲಿ ವೈರವನ್ನೇ ಬೆಳಸಿ, ದೇವತೆಗಳಿಗೂ, ಲೋಕಗಳಿಗೂ ಅಪಾಯವನ್ನುಂಟುಮಾಡುತ್ತಿರುವಾಗ, ನಾನು ಬೇರೆ ಬೇರೆ ಅವತಾರಗಳನ್ನೆತ್ತಿ ನನ್ನ ಕೈಯಿಂದಲೇ ನಿಮ್ಮನ್ನು ಕೊಲ್ಲುವೆನು. ಸ್ವಲ್ಪ ಕಾಲದಲ್ಲಿಯೇ ನೀವು ನನ್ನ ಸನ್ನಿಧಾನವನ್ನೂ ಸೇರುವಿರಿ" ಎಂದನು. ಹೀಗೆ ಭಗವಂತನು ಜಯವಿಜಯರಿಗೆ ನಿಯಮಿಸಿ, ಅನೇಕ ವಿಮಾನ ಪರಂಪರೆಗಳಿಂದ ಶೋಭಿತವಾಗಿ ನಿರತಿಶಯಸೌಂದರ್ಯದಿಂದೊಪ್ಪುತ್ತಿರುವ ತನ್ನ ನಿವಾಸಸ್ಥಾನಕ್ಕೆ ಲಕ್ಷ್ಮೀಸಹಿತನಾಗಿ ಹಿಂತಿರುಗಿದನು. ಒಡನೆಯೇ ಇತ್ತಲಾಗಿ ಜಯವಿಜಯರಿಬ್ಬರಿಗೂ ಬ್ರಾಹ್ಮಣಶಾಪದಿಂದ ಮುಖವು ಕಳೆಗುಂದಿತು. ಅವರ ಪ್ರಭಾವವೆಲ್ಲವೂ ನಶಿಸಿತು. ಆಗಲೇ ವೈಕುಂಠಲೋಕದಿಂದ ಕೆಳಕ್ಕೆ ಇಳಿಯಲಾರಂಭಿಸಿದರು. ಹೀಗೆ ಆ ಜಯವಿಜಯರಿಬ್ಬರೂ ಕೊಬ್ಬಡಗಿ, ವೈಕುಂಠದಿಂದ ಕೆಳಗೆ ಬೀಳುವಾಗ, ಆಕಾಶದಲ್ಲಿ ವಿಮಾನಸಂಚಾರಿಗಳಾದ ಮಹಾತ್ಮರೆಲ್ಲರೂ, ಅವರ ದುಃಸ್ಥಿತಿಯನ್ನು ನೋಡಿ ಕನಿಕರಗೊಂಡು, ಹಾಹಾಕಾರದಿಂದ ಕೂಗಿಡುತ್ತಿದ್ದರು. ಎಲೈ ದೇವತೆಗಳಿರಾ! ವೈಕುಂಠದ್ವಾರಪಾಲಕರಾದ ಆ ಜಯವಿಜಯರೇ ಈಗ ದಿತಿಯ ಗರ್ಭದಲ್ಲಿ ಕಶ್ಯಪನ ತೇಜಸ್ಸಾಗಿ ಪ್ರವೇಶಿಸಿರುವರು. ಅವರ ತೇಜಸ್ಸಿನಿಂದಲೇ ಲೋಕವೆಲ್ಲವೂ ಹೀಗೆ ಅಂಧಕಾರಮಯವಾಗಿರುವುದು. ಆ ರಾಕ್ಷಸರ ತೇಜಸ್ಸು ಕ್ರಮಕ್ರಮವಾಗಿ ಹೆಚ್ಚಿ, ಕೆಲವು ಕಾಲದವರೆಗೆ ನಿಮ್ಮ ಶಕ್ತಿಯನ್ನಡಗಿಸಿದರೂ, ಸ್ವಲ್ಪಕಾಲದೊಳಗಾಗಿಯೇ ಭಗವಂತನು ಅವತಾರಗಳನ್ನೆತ್ತಿ ಅವರ ಶಕ್ತಿಯನ್ನಡಗಿಸಿ, ನಿಮ್ಮ ತೇಜಸ್ಸನ್ನು ಸ್ಥಾಪಿಸುವನು. ಪ್ರಪಂಚದ ಸೃಷ್ಟಿಸ್ಥಿತಿಲಯಗಳನ್ನು ನಿರ್ವಹಿಸತಕ್ಕವನಾಗಿಯೂ, ತ್ರಿಲೋಕಾಧಿಪತಿಯಾಗಿಯೂ, ಯೋಗೀಶ್ವರರಿಗೂ ಮೀರಲಸಾಧ್ಯವಾದ ಮಾಯೆಯನ್ನು

ತನ್ನ ಕೈವಶವಾಗಿಟ್ಟುಕೊಂಡವನಾಗಿಯೂ ಇರುವ ಆ ಸರ್ವೇಶ್ವರನು, ಆಯಾ ಕಾಲವು ಬಂದೊಡನೆ, ಆ ರಾಕ್ಷಸರನ್ನು ಕೊಂದು, ನಮ್ಮೆಲ್ಲರಿಗೂ ಕ್ಷೇಮವನ್ನುಂಟುಮಾಡದೆ ಬಿಡಲಾರನು. ಇದಕ್ಕಾಗಿ ಈಗ ನಾವು ಚಿಂತಿಸಿ ಪ್ರಯೋಜನವಿಲ್ಲ. ನಾವು ಚಿಂತಿಸಬೇಕಾದ ಅವಶ್ಯಕತೆಯೂ ಇಲ್ಲ" ಎಂದನು. ಇಲ್ಲಿಗೆ ಹದಿನಾರನೆಯ ಅಧ್ಯಾಯವು.

---

## ಹಿರಣ್ಯಾಕ್ಷ ಹಿರಣ್ಯಕಶಿಪುಗಳ ಜನನವು

ಹೀಗೆ ಬ್ರಹ್ಮನು ಸಮಾಧಾನವನ್ನು ಹೇಳಿದೊಡನೆ, ದೇವತೆಗಳೆಲ್ಲರೂ ತಮ್ಮ ಮನಸ್ಸಿನಲ್ಲಿದ್ದ ಭಯವನ್ನು ಬಿಟ್ಟು, ಬ್ರಹ್ಮಲೋಕದಿಂದ ಹಿಂತಿರುಗಿ ತಮ್ಮ ತಮ್ಮ ಲೋಕಗಳನ್ನು ಸೇರಿದರು. ಓ! ವಿದುರಾ! ಇತ್ತಲಾಗಿ ದಿತಿಯು ತನ್ನ ಗರ್ಭದಲ್ಲಿ ಲೋಕಕಂಟಕರಾದ ದುಷ್ಪುತ್ರರು ಹುಟ್ಟುವ ರೆಂದು ಹೇಳಿದ ತನ್ನ ಪತಿಯ ವಾಕ್ಯವನ್ನು ಕೇಳಿದಮೇಲೆ, ಅವಳ ಮನಸ್ಸಿಗೆ ಪಶ್ಚಾತ್ತಾಪವು ಹುಟ್ಟಿತು. ತನ್ನ ಮಕ್ಕಳಿಗೆ ದೇವತೆಗಳಿಂದ ಸಾವು ಸಿದ್ಧ ವೆಂಬ ವಿಷಯವನ್ನೂ ಕೇಳಿ ಮನಸ್ಸಿನಲ್ಲಿ ಕೊರಗುತ್ತ, ನೂರು ವರುಷಗಳ ವರೆಗೆ ಗರ್ಭವನ್ನು ಧರಿಸಿದ್ದು ಇಬ್ಬರು ಕುಮಾರರನ್ನು ಹಡೆದಳು. ಈ ಮಕ್ಕಳ ಜನನಕಾಲದಲ್ಲಿಯೇ ಸಮಸ್ತ ಲೋಕಗಳಿಗೂ ಭಯವನ್ನು ಹುಟ್ಟಿಸು ವಂತೆ ಆಕಾಶದಲ್ಲಿಯೂ, ಭೂಮಿಯಲ್ಲಿಯೂ, ಅಸಂಖ್ಯಾತಗಳಾದ ಮಹೋ ತ್ಪಾತಗಳು ಕಾಣಿಸಿದುವು. ಸಮಸ್ತ ಪರ್ವತಸಮೂಹಗಳೊಡನೆ ಭೂಮಿಯು ಗಿರಗಿರನೆ ತಿರುಗಲಾರಂಭಿಸಿತು. ದಿಕ್ಕುಗಳೆಲ್ಲವೂ ಉರಿಯುತ್ತಿದ್ದವು. ಆಕಾಶ ದಿಂದ ಚುಕ್ಕಿಗಳು ಬೀಳುತ್ತಿದ್ದವು. ನಾನಾಕಡೆಗಳಲ್ಲಿಯೂ ಸಿಡಿಲಿನ ವರ್ಷವು ಕರೆಯುತ್ತಿತ್ತು. ಲೋಕೋಪದ್ರವಸೂಚಕಗಳಾದ ಧೂಮಕೇತುಗಳು ಆಕಾಶದಲ್ಲಿ ಕಾಣಿಸಿದುವು. ತಡೆಯಲಸಾಧ್ಯವಾದ ದೊಡ್ಡ ಬಿರುಗಾಳಿಯು ಮಹಾಧ್ವನಿಯಿಂದ ಘೋರ್ಗರೆಯುತ್ತ ಬೀಸತೊಡಗಿತು. ಈ ಬಿರುಗಾಳಿಯ ವೇಗದಿಂದ ಅನೇಕ ವೃಕ್ಷಗಳು ಮೂಲಸಹಿತವಾಗಿ ಕಿತ್ತು ಬೀಳುತಿದ್ದವು. ಮತ್ತು ಆ ಬಿರುಗಾಳಿಯ ಜಯಧ್ವಜದಂತೆ ದೊಡ್ಡ ಧೂಳಿಯೆದ್ದು, ಸಮಸ್ತ

ಲೋಕಕ್ಕೂ ಭಯವನ್ನು ಹುಟ್ಟಿಸುತ್ತಿತ್ತು. ಕಣ್ಣುಗಳನ್ನು ಕೋರೈಸುವ ಮಿಂಚುಗಳೊಡನೆ ಮೇಘಸಮೂಹವು ಆಕಾಶವೆಲ್ಲವನ್ನೂ ದಟ್ಟವಾಗಿ ತುಂಬಿ, ಸಮಸ್ತ ಲೋಕವನ್ನೂ ಅಂಧಕಾರಮಯವನ್ನಾಗಿ ಮಾಡಿತು. ಇದೇ ಸಮಯದಲ್ಲಿ ಸಪ್ತಸಮುದ್ರಗಳೂ ಅಲೆಗಳೆಂಬ ಕೈಗಳಿಂದ ಎದೆಯನ್ನು ಚಚ್ಚಿಕೊಂಡು, ದುಃಖದಿಂದ ಕೂಗುತ್ತಿರುವಂತೆ ಭಯಂಕರ ಧ್ವನಿಯಿಂದ ಮೊರೆಯಿಡುತ್ತಿದ್ದುವು. ಕೊಳ, ಕೆರೆ, ಬಾವಿಗಳೆಲ್ಲವೂ ಕಲಗಿಹೋದುವು. ಚಂದ್ರಸೂರ್ಯಬಿಂಬಗಳೆರಡಕ್ಕೂ ಅಕಾಲಗ್ರಹಣದೊಡನೆ, ಸುತ್ತಲೂ ಪರಿವೇಷವು ಕಾಣುತ್ತಿತ್ತು. ಮೇಘಗರ್ಜನೆಗಳೂ, ಪರ್ವತಗುಹೆಯಲ್ಲಿ ಅದರ ಪ್ರತಿಧ್ವನಿಗಳೂ, ಭಯಂಕರವಾಗಿ ಕೇಳಿಸುತ್ತಿದ್ದುವು. ನರಿ, ಗೂಬೆ, ಮೊದಲಾದ ಶ್ಮಶಾನಜೀವಿಗಳೆಲ್ಲವೂ ಗ್ರಾಮ ಮಧ್ಯದಲ್ಲಿ ಪ್ರವೇಶಿಸಿ, ಬಾಯಿಂದ ಬೆಂಕಿಯನ್ನು ಕಕ್ಕುತ್ತ, ಭಯಂಕರವಾಗಿ ಅಮಂಗಳಧ್ವನಿಯಿಂದ ಕೂಗಲಾರಂಭಿಸಿದುವು. ಅಲ್ಲಲ್ಲಿ ನಾಯಿಗಳು ತಮ್ಮ ಮುಖವನ್ನು ಮೇಲಕ್ಕೆತ್ತಿ, ಒಮ್ಮೊಮ್ಮೆ ಹಾಡುವಂತೆಯೂ, ಮತ್ತೊಮ್ಮೆ ಅಳುವಂತೆಯೂ ಕೂಗುತ್ತಿದ್ದುವು. ಅಲ್ಲಲ್ಲಿ ಕತ್ತೆಗಳು ಕಠಿಣವಾದ ತಮ್ಮ ಕಾಲ್ಗೊರಸುಗಳಿಂದ ನೆಲವನ್ನಪ್ಪಳಿಸುತ್ತ, ಕ್ರೂರಧ್ವನಿಯಿಂದ ಅರಚಿಕೊಂಡು, ನಾನಾದಿಕ್ಕುಗಳಿಗೆ ಓಡುತ್ತಿದ್ದುವು. ಹೀಗೆ ನಾನಾಕಡೆಗಳಿಂದ ಹೊರಟ ಅಮಂಗಳಧ್ವನಿಯನ್ನು ಕೇಳಿ ಭಯಪಟ್ಟು, ಆಕಾಶದಲ್ಲಿದ್ದ ಪಕ್ಷಿಗಳೂ ಕೂಡ ವಿಕಾರ ಧ್ವನಿಯಿಂದ ಕೂಗುತ್ತ, ತಮ್ಮ ಗೂಡುಗಳನ್ನು ಬಿಟ್ಟು ಹಾರಾಡುತ್ತಿದ್ದುವು. ಮಂದೆಗಳಲ್ಲಿಯೂ, ಕಾಡುಗಳಲ್ಲಿಯೂ, ಹಸುಗಳು ಎಡೆಬಿಡದೆ ಮಲಮೂತ್ರಗಳನ್ನು ಸುರಿಸತೊಡಗಿದುವು. ಗೋವುಗಳು ಭಯದಿಂದ ಮೈಮರೆತು ಹಾಲಿಗೆ ಬದಲಾಗಿ ರಕ್ತವನ್ನು ಕರೆಯುತ್ತಿದ್ದುವು. ಮೇಘಗಳು ಮಳೆಯನ್ನು ಸುರಿಸುತ್ತಿದ್ದುವು. ದೇವಾಲಯದಲ್ಲಿರುವ ದೇವತಾಪ್ರತಿಮೆಗಳೆಲ್ಲವೂ ಕಣ್ಣೀರುಬಿಡುತ್ತಿದ್ದುವು. ನಿಷ್ಕಾರಣವಾಗಿ ಅಲ್ಲಲ್ಲಿ ವೃಕ್ಷಗಳು ಉರುಳುತ್ತಿದ್ದುವು. ಶುಭಗ್ರಹಗಳೆಲ್ಲವನ್ನೂ ಕ್ರೂರಗ್ರಹಗಳು ಪೀಡಿಸತೊಡಗಿದುವು. ಒಂದೊಂದು ಗ್ರಹವೂ ವಕ್ರಗತಿಯಿಂದ ತಿರುಗುತ್ತ ಅನ್ಯೋನ್ಯವಾಗಿ ಯುದ್ಧವನ್ನಾರಂಭಿಸಿದುವು. ಈ ವಿಧವಾಗಿ ಮಹೋತ್ಪಾತಗಳು ಇನ್ನೂ ಅನೇಕವಾಗಿ ಕಾಣಿಸಿಕೊಂಡವು. ಜ್ಞಾನಸಂಪನ್ನರಾದ ಮರೀಚಿ ಮೊದಲಾದ

ಬ್ರಹ್ಮಪುತ್ರರು ಹೊರತು ಇತರ ಸಮಸ್ತಪ್ರಜೆಗಳೂ ಭಯದಿಂದ ತತ್ತಳಿಸುತ್ತಿದ್ದುವು. ಸಮಸ್ತಲೋಕಗಳಿಗೂ ಯಾವುದೋ ಒಂದು ಮಹಾವಿಪತ್ತು ಸಂಭವಿಸದೆಬಿಡದೆಂದು ಎಲ್ಲರಿಗೂ ನಿಶ್ಚಯವು ಹುಟ್ಟಿತು. ಇದು ಹೀಗಿರಲು, ಅತ್ತಲಾಗಿ ದಿತಿಯ ಗರ್ಭದಲ್ಲಿ ಹುಟ್ಟಿದ ರಾಕ್ಷಸರಿಬ್ಬರೂ ಪೂರ್ವಜನ್ಮದಲ್ಲಿ ತಮಗಿದ್ದ ಪೌರುಷಪ್ರಭಾವಗಳನ್ನೇ ತೋರಿಸುತ್ತ, ಮೇಲೆ ಮೇಲೆ ಬೆಳೆಯುತ್ತ ಬಂದರು. ಅವರ ಎಣೆಯಿಲ್ಲದ ಶಕ್ತಿಯನ್ನೂ, ಮಹಾದ್ಭುತವಾದ ಆಕಾರವನ್ನೂ ಕೇಳಬೇಕೇ? ಉಕ್ಕಿನಂತೆ ಕಠಿಣವಾದ ಮೈ! ಪರ್ವತಗಳಂತೆ ಮಹತ್ತಾದ ಆಕೃತಿ! ಕಿರೀಟಾಗ್ರದಿಂದ ಆಕಾಶವನ್ನೇ ಮೇಲೆತ್ತುವಂತೆ ಮಹೋನ್ನತವಾದ ಬೆಳವಳಿಕೆ! ಎಂಟು ದಿಕ್ಕುಗಳನ್ನೂ ಅಪ್ಪಿಕೊಳ್ಳುವಂತೆ, ಕೇಯೂರಾಂಗದಗಳಿಂದ ಶೋಭಿತವಾಗಿ ನೀಡಿದ ತೋಳುಗಳು! ನೆಲವನ್ನು ನಡುಗಿಸುವಂತೆ ಭಾರವಾದ ನಡೆ! ಇಂತಹ ಅದ್ಭುತಾಕಾರವುಳ್ಳ ಆ ರಾಕ್ಷಸರಿಬ್ಬರೂ, ಕಾಂಚೀದಾಮದಿಂದ ಶೋಭಿತವಾದ ತಮ್ಮ ಕಟಿಸ್ಥಳ (ನಡುವಿನಿಂದ) ದಿಂದಲೇ ಸೂರ್ಯನನ್ನತಿಕ್ರಮಿಸುವಂತೆ ವೃದ್ಧಿಹೊಂದುತ್ತ ಬಂದರು. ಆಗ ಕಶ್ಯಪನು ಆ ಅವಳಿಮಕ್ಕಳಿಬ್ಬರನ್ನೂ ನೋಡಿ, ಅವರಲ್ಲಿ, * ತನ್ನ ದೇಹದಿಂದ ಮೊದಲು ಹುಟ್ಟಿದ ಬಾಲಕನಿಗೆ ಹಿರಣ್ಯ

* ಇಲ್ಲಿ ಕಶ್ಯಪನು ತನಗೆ ಮೊದಲು ಹುಟ್ಟಿದ ಮಗನಿಗೆ ಹಿರಣ್ಯಕಶಿಪುವೆಂದೂ ದಿತಿಗೆ ಮೊದಲು ಹುಟ್ಟಿದ ಮಗನಿಗೆ ಹಿರಣ್ಯಾಕ್ಷನೆಂದೂ ಹೆಸರಿಟ್ಟನೆಂದು ಹೇಳಿದುದರ ತಾತ್ಪರ್ಯವೇನೆಂದರೆ:—ಪುರುಷನ ವೀರ್ಯವು ಸ್ತ್ರೀಗರ್ಭದಲ್ಲಿ ಪ್ರವೇಶಿಸುವಾಗ, ಆ ಸ್ತ್ರೀಯುರ ಗರ್ಭಕೋಶದಲ್ಲಿರುವ ವ್ಯತ್ಯಾಸದಿಂದ, ಎರಡು ಭಾಗವಾಗಿ ಬೇರ್ಪಡುವುದುಂಟು. ಇಂತಹ ಸ್ಥಿತಿಯಲ್ಲಿಯೇ ಅವಳಿ ಮಕ್ಕಳು ಹುಟ್ಟುವರು. ಈ ಸಂದರ್ಭದಲ್ಲಿ ಪುರುಷ ಶರೀರದಿಂದ ಮೊದಲು ಹೊರಟ ವೀರ್ಯವು, ಸ್ತ್ರೀಗರ್ಭದಲ್ಲಿ ಹಿಂದಾಗಿ ನಿಂತು, ಆ ಮೇಲೆ ಎರಡನೆಯ ಬಿಂದುವು ಅದಕ್ಕೆ ಮುಂದಾಗಿ ನಿಲ್ಲುವುದು. ಪ್ರಸವಕಾಲದಲ್ಲಿ ಎರಡನೆಯ ವೀರ್ಯಬಿಂದುವಿನಿಂದುಂಟಾದ ಶಿಶುವು ಮೊದಲು ಹುಟ್ಟಿ, ಆ ಮೇಲೆ ಅದರ ಹಿಂದೆ ಸೇರಿದ ಮೊದಲನೆಯ ಬಿಂದುವಿನಿಂದುಂಟಾದ ಶಿಶುವು ಜನಿಸುವುದು. ಇದರಿಂದ ಪುರುಷಶರೀರದಿಂದ ಸ್ತ್ರೀಗರ್ಭದಲ್ಲಿ ಸೇರಿದ ತೇಜಸ್ಸು, ಅಲ್ಲಿಂದ ಶಿಶುವಾಗಿ ಹುಟ್ಟುವಾಗ ಜನನಕ್ರಮವು ವ್ಯತ್ಯಸ್ತವಾಗುವುದು. ಈ ಕ್ರಮವನ್ನನುಸರಿಸಿ ದಿತಿಯ ಗರ್ಭದಿಂದ ಮೊದಲು ಹುಟ್ಟಿದವನು ಹಿರಣ್ಯಾಕ್ಷನೆಂದೂ, ಕಶ್ಯಪನ ಶರೀರದಿಂದ ಮೊದಲು ಜನಿಸಿದವನು ಹಿರಣ್ಯಕಶಿಪುವೆಂದೂ ತಿಳಿಯಬೇಕು.

ಕಶಿಪುವೆಂದೂ, ದಿತಿಯ ದೇಹದಿಂದ ಮೊದಲು ಹುಟ್ಟಿದ ಮಗನಿಗೆ ಹಿರಣ್ಯಾಕ್ಷನೆಂದೂ ಹೆಸರಿಟ್ಟು ನಾಮಕರಣವನ್ನು ಮಾಡಿದನು. ಆ ಮೇಲೆ ಹಿರಣ್ಯಕಶಿಪುವೆಂಬವನು, ತನ್ನ ಬಾಹುಬಲದಿಂದಲೂ ಬ್ರಹ್ಮನು ತನಗೆ ಕೊಟ್ಟ ವರದ ಬಲದಿಂದಲೂ, ತನಗೆ ಮರಣವೇ ಇಲ್ಲವೆಂದು ನಿಶ್ಚಯಿಸಿ, ಮೂರು ಲೋಕಗಳನ್ನೂ ಪೀಡಿಸಿ ತನ್ನ ವಶಮಾಡಿಕೊಂಡನು. ಆತನ ತಮ್ಮನಾದ ಹಿರಣ್ಯಾಕ್ಷನೂ ಕೂಡ, ತನ್ನಣ್ಣನಿಗೆ ಸಹಾಯಕನಾಗಿ, ದೇವತೆಗಳಿಗೆ ಪೀಡಿಸುವುದರಿಂದ ಅವನಿಗೆ ಸಂತೋಷವನ್ನುಂಟುಮಾಡುತ್ತಿದ್ದನು. ಹೀಗಿರುವಲ್ಲಿ ಒಮ್ಮೆ ಹಿರಣ್ಯಾಕ್ಷನು, ವೈರಿಕೊಬ್ಬನಿಂದ ಯುದ್ಧಮಾಡಬೇಕೆಂದು ಆಸೆಪಟ್ಟು, ತನ್ನೊಡನೆ ಸಮವಾಗಿ ಯುದ್ಧಕ್ಕೆ ನಿಲ್ಲತಕ್ಕವರನ್ನು ಭೂಮಿಯಲ್ಲಿ ಕಾಣದೆ, ಸ್ವರ್ಗಕ್ಕೆ ಹೋದನು. ಅಸಾಧ್ಯವೇಗವುಳ್ಳ ಈ ಹಿರಣ್ಯಾಕ್ಷನು, ಕೊರಲಿಗೆ ಒಂದು ದೊಡ್ಡ ಹೂವಿನ ದಂಡೆಯನ್ನು ಹಾಕಿಕೊಂಡು, ಮಹಾಗದೆಯನ್ನು ಕೈಯಲ್ಲಿ ಹಿಡಿದು, ಚಿನ್ನದ ಕಾಲಂದುಗೆಗಳ ಘಲಘಲಧ್ವನಿಯೊಡನೆ, ವೇಗದಿಂದ ನಿರ್ಭಯವಾಗಿ ಮುಂದೆ ಬರುವುದನ್ನು ನೋಡಿ, ದೇವತೆಗಳೆಲ್ಲರಿಗೂ ಮನಸ್ಸಿನಲ್ಲಿ ಭಯವು ಹುಟ್ಟಿತು. ಹಿರಣ್ಯಾಕ್ಷನಿಗಾದರೋ ಸಹಜವಾಗಿಯೇ ಮನಸ್ಸಿನಲ್ಲಿ ಹುಟ್ಟಿರುವ ಗರ್ವವೊಂದು! ದೇಹಬಲವೊಂದು! ವರಬಲವೊಂದು! ಇವುಗಳಿಂದ ಮೈಮರೆಯುವಷ್ಟು ಮದೋದ್ರೇಕವುಂಟಾಯಿತು. ಅವನನ್ನು ತಡೆಯು ವವರೊಬ್ಬರಾದರೂ ಇರಲಿಲ್ಲ. ತನಗೆ ಯಾರೂ ಇದಿರಿಲ್ಲದೆ ನಿರ್ಭಯವಾಗಿ ಬರುತ್ತಿರುವ ಹಿರಣ್ಯಾಕ್ಷನನ್ನು ನೋಡಿದೊಡನೆ, ದೇವತೆಗಳು ಗರುಡನನ್ನು ಕಂಡ ಹಾವುಗಳಂತೆ ಸಂದುಗೊಂದುಗಳಲ್ಲಿ ಅಡಗಿಕೊಂಡಿದ್ದರು. ಇಂದ್ರಾದಿ ದೇವತೆಗಳೆಲ್ಲರೂ ತನ್ನ ವೀರ್ಯಕ್ಕೆ ಹೆದರಿ ಓಡಿ ಹೋದುದನ್ನು ನೋಡಿ, ಹಿರಣ್ಯಾಕ್ಷನು ಅಲ್ಲಿ ಮತ್ತಷ್ಟು ಗರ್ವಿತನಾಗಿ, ತನ್ನಿದಿರಿಗೆ ನಿಲ್ಲುವವರೊಬ್ಬರನ್ನೂ ಕಾಣದುದಕ್ಕಾಗಿ ಭಯಂಕರವಾದ ಒಂದು ಸಿಂಹನಾದವನ್ನು ಮಾಡಿ ಹಿಂತಿರುಗಿ, ತನಗೆ ತೋರಿದಂತೆ ಪ್ರಾಣಿಹಿಂಸೆಗಳಿಂದ ವಿಹರಿಸುತ್ತ, ಕೊಳದಲ್ಲಿಳಿಯುವ ಮದದಾನೆಯಂತೆ ಸಮುದ್ರದಲ್ಲಿ ಪ್ರವೇಶಿಸಿ, ಪಾತಾಳದ ಕಡೆಗೆ ಹೊರಟನು. ದಾರಿಯಲ್ಲಿ ಅಲ್ಲಲ್ಲಿ ವರುಣನ ಸೈನಿಕರೂ, ಇತರ ಜಲಜಂತುಗಳೂ ಅವನನ್ನು ನೋಡಿ ಭಯಪಟ್ಟು, ಚಿಂತಾಕುಲರಾಗಿ ಮುಂದೇನು ಮಾಡಬೇಕೆಂದು ತೋರದೆ,

ತಮಗೆ ತಾವೇ ಮೈಮರೆಸಿಕೊಂಡು ಅಲ್ಲಲ್ಲಿ ಅಡಗಿದರು. ಇದನ್ನು ನೋಡಿ ಹಿರಣ್ಯಾಕ್ಷನಿಗೆ ಮತ್ತಷ್ಟು ಹೆಮ್ಮೆಯುಂಟಾಯಿತು. ಆ ಸಮುದ್ರಜಲದಲ್ಲಿಯೇ ನಿರಾತಂಕವಾಗಿ ಅನೇಕ ಸಂವತ್ಸರಗಳವರೆಗೆ ಸುತ್ತುತ್ತಿದ್ದನು. ಬಿರುಗಾಳಿಯಿಂದುಬ್ಬಿರುವ ಆ ಸಮುದ್ರದ ಅಲೆಗಳೆಲ್ಲವನ್ನೂ ತನ್ನ ಉಕ್ಕಿನ ಗದಾದಂಡದಿಂದ ಅಪ್ಪಳಿಸುತ್ತ, ಮುಂದೆ ಮುಂದೆ ಹೋಗಿ ಕೊನೆಗೆ ವರುಣನ ರಾಜಧಾನಿಯಾದ ವಿಭಾವರೀಪಟ್ಟಣವನ್ನು ಪ್ರವೇಶಿಸಿದನು. ಅಲ್ಲಿ ಜಲಾಧಿಪತಿಯಾದ ವರುಣನನ್ನು ನೋಡಿ, ಮಂದಹಾಸದಿಂದ ನಗುತ್ತ, ಅವನಲ್ಲಿ ಬಹಳ ನೈಚ್ಯವನ್ನು ತೋರಿಸುವಂತೆ ತಲೆಬಗ್ಗಿ ನಮಸ್ಕರಿಸಿ, "ಓ ಜಲಾಧಿಪತೀ! ನನಗೆ ಯುದ್ಧಭಿಕ್ಷೆಯನ್ನು ನೀಡಬೇಕು! ನೀನು ಲೋಕಪಾಲಕನೆಂದು ಪ್ರಸಿದ್ಧಕೀರ್ತಿಯನ್ನು ಹೊಂದಿದವನಲ್ಲವೇ? ಇದಲ್ಲದೆ ಪೂರ್ವದಲ್ಲಿ ನೀನು ಅನೇಕ ದೇವದಾನವರನ್ನು ಜಯಿಸಿ, ದೊಡ್ಡ ರಾಜಸೂಯಯಾಗವನ್ನು ನಡೆಸಿದ ಮಹಾವೀರನೆಂದೂ ಕೇಳಿರುವೆನು! ಆದುದರಿಂದ ಈಗ ನನ್ನೊಡನೆ ಯುದ್ಧವನ್ನು ಮಾಡಿ, ನನಗೂ ನಿನ್ನ ಪರಾಕ್ರಮವನ್ನು ತೋರಿಸಿ ಸಂತೋಷಪಡಿಸಬೇಕು" ಎಂದನು. ಈ ಮಾತನ್ನು ಕೇಳಿದ ವರುಣನಿಗೆ, ದುರಾತ್ಮನಾದ ಆ ರಾಕ್ಷಸನ ಮಹಾ ಗರ್ವವನ್ನೂ, ಅವನ ಕೊಬ್ಬನ್ನೂ, ನೋಡಿ, ತಡೆಯಲಾರದ ಕೋಪವುಂಟಾಯಿತು. ಹಾಗಿದ್ದರೂ ಆದು ಸಮಯವಲ್ಲವೆಂದು ಆ ಕೋಪವನ್ನು ತನ್ನಲ್ಲಿಯೇ ಅಡಗಿಸಿಕೊಂಡು, ಅವನಿಗಿಂತಲೂ ಹೆಚ್ಚಾದ ವಿನಯವನ್ನು ನಟಿಸುತ್ತ ಹೀಗೆಂದು ಹೇಳುವನು. "ಎಲೈ ದಾನವಸಾರ್ವಭೌಮನೇ! ನಾನು ಪೂರ್ವದಲ್ಲಿ ಯಾವಾಗಲೋ ಒಮ್ಮೆ ಒಬ್ಬಿಬ್ಬರನ್ನು ಜಯಿಸಿ, ರಾಜಸೂಯಯಾಗವನ್ನು ನಡೆಸಿದುದುಂಟು! ಈಗ ಅಶಕ್ತನಾಗಿ ಯುದ್ಧದ ಪ್ರಸಕ್ತಿಯನ್ನೇ ಬಿಟ್ಟಿರುವೆನು. ವೀರಾಗ್ರಣಿಯಾದ ನೀನೆಲ್ಲಿ? ಅತಿ ದುರ್ಬಲನಾದ ನಾನೆಲ್ಲಿ? ನಾನು ನಿನ್ನೊಡನೆ ಎಂದಿಗೂ ಯುದ್ಧಮಾಡಲಾರೆನು. ಆದರೆ ನಿನಗೆ ಸಮಾನನಾದ ಬೇರೊಬ್ಬ ವೀರನನ್ನು ತೋರಿಸಿಕೊಡುವೆನು. ಅವನು ಮಹಾಬಲಾಢ್ಯನು! ಯುದ್ಧದಲ್ಲಿ ಬಹಳ ಆಸೆಯುಳ್ಳವನು! ನಿನ್ನಂತಹ ವೀರರನ್ನು ಕಂಡರೆ ಬಹಳ ಸಂತೋಷಪಡುವನು! ಪುರುಷರಲ್ಲಿ ತಾನೇ ಮೇಲೆನಿಸಿಕೊಂಡಿರುವನು. ಅವನೊಬ್ಬನನ್ನು ಬಿಟ್ಟರೆ, ಬೇರೊಬ್ಬರೂ ನಿನ್ನೊಡನೆ

ಹೋರಾಡಲಾರನು. ಅವನು ವೈಕುಂಠದಲ್ಲಿರುವರು. ನೀನು ಅಲ್ಲಿಗೆ ಹೋದರೆ, ನಿನ್ನ ಕೋರಿಕೆಯನ್ನು ತೀರಿಸಿಕೊಳ್ಳಬಹುದು. ರಾಕ್ಷಸೇಂದ್ರಾ! ಅವನು ನಿಮ್ಮಂತವರನೇಕರನ್ನು ಕೊಲ್ಲುವುದಕ್ಕಾಗಿಯೇ ಬೇರೆ ಬೇರೆ ರೂಪಗಳನ್ನೂ ಧರಿಸುತ್ತಿರುವನು. ಅಲ್ಲಿಗೆ ಹೋದಪಕ್ಷದಲ್ಲಿ ನೀನು ಬದುಕಿ ಬರುವುದೇ ಸಂದೇಹವೆಂದೂ ನನಗೆ ತೋರಿರುವುದು. ನೀನು ಆ ವೀರನೊಡನೆ ಯುದ್ಧಕ್ಕೆ ನಿಂತರೆ, ಅವನು ರಣರಂಗದಲ್ಲಿ ನಿನ್ನನ್ನು ಸೀಳಿ, ನಿನ್ನ ಮಾಂಸದಿಂದ ನಾಯಿ ನರಿಗಳಿಗೆ ಔತಣವನ್ನು ಮಾಡದೆ ಬಿಡಲಾರನು" ಎಂದನು. ಇಲ್ಲಿಗೆ ಹದಿನೇಳನೆಯ ಅಧ್ಯಾಯವು.

---

{ಹಿರಣ್ಯಾಕ್ಷನು ವರುಣನ ಮಾತಿನ ಮೇಲೆ ಶ್ರೀಮಹಾವಿಷ್ಣುವನ್ನು ಹುಡುಕುತ್ತ ಹೊರಟುದು. ವರಾಹ ಹಿರಣ್ಯಾಕ್ಷ ಯುದ್ಧವು.}

ವಿದುರಾ ಕೇಳು! ವರುಣನು ಹೇಳಿದ ಈ ಮಾತನ್ನು ಕೇಳಿ ಹಿರಣ್ಯಾಕ್ಷನು ಬಹಳ ಉತ್ಸಾಹಗೊಂಡನು. ವರುಣನು ವಿಷ್ಣುವಿನಿಂದ ತನಗೆ ಸಾವು ನಿಶ್ಚಯವೆಂಬ ಮಾತನ್ನು ಸೂಚಿಸಿದ್ದರೂ, ಅದನ್ನೂ ಲಕ್ಷ್ಯಮಾಡದೆ, ಮದೋದ್ರಿಕ್ತನಾಗಿ ವೈಕುಂಠದ ಕಡೆಗೆ ಹೊರಟನು. ಇಷ್ಟರಲ್ಲಿ ನಾರದನು ದಾರಿಯಲ್ಲಿ ಇವನನ್ನು ಸಂಧಿಸಿ, ವಿಷ್ಣುವು ವೈಕುಂಠದಿಂದ ರಸಾತಲಕ್ಕೆ ಹೋಗಿರುವುದಾಗಿ ಸೂಚಿಸಲು, ಒಡನೆಯೇ ಅತಿವೇಗದಿಂದ ಪಾತಾಳದ ಕಡೆಗೆ ತಿರುಗಿ ರಸಾತಲವನ್ನು ಪ್ರವೇಶಿಸಿದನು. ಅಲ್ಲಿ ಪರ್ವತದಂತೆ ಮಹೋನ್ನತನಾಗಿ, ತನ್ನ ದಂಷ್ಟ್ರಾಗ್ರದಿಂದ ಭೂಮಿಯನ್ನು ಮೀಟಿ ಮೇಲಕ್ಕೆತ್ತುತ್ತ, ತನ್ನ ಕೆಂಪಾದ ಕಣ್ಣುಗಳ ಕಾಂತಿಯಿಂದಲೇ ಶತ್ರುತೇಜಸ್ಸನ್ನು ತಗ್ಗಿಸುವಂತೆ ನಿಂತಿರುವ ವರಾಹರೂಪಿಯಾದ ಹರಿಯನ್ನು ಕಂಡು ಅಟ್ಟಹಾಸದಿಂದ ನಗುತ್ತ, "ಓಹೋ! ಇದೇನಿದು! ಕಾಡಿನಲ್ಲಿರಬೇಕಾದ ಹಂದಿಯು ಇಲ್ಲಿಗೆ ಬಂದುದು ಹೇಗೆ?" ಎಂದು ಮಂದಹಾಸದೊಡನೆ ಮುಂದೆ ಬಂದು, ಆ ವರಾಹವನ್ನು "ಓ ಬುದ್ಧಿಯಿಲ್ಲದ ಕಾಡುಮೃಗವೇ! ಇದೇನಿದು? ನೀನು

ಕೋರೆಯಲ್ಲಿ ಕಿತ್ತಿರುವ ಭೂಮಿಯನ್ನು ಅಲ್ಲಿಯೇ ಇಡು! ಇದೋ ನನ್ನ ಸಮೀಪಕ್ಕೆ ಬಂದು ನನ್ನೊಡನೆ ಯುದ್ಧಮಾಡು! ಈ ಭೂಮಿಯನ್ನು ಬ್ರಹ್ಮನು ಪಾತಾಳಲೋಕದಲ್ಲಿರುವವರಿಗೆ ಕೊಟ್ಟುಬಿಟ್ಟಿರುವನು. ಇದು ರಾಕ್ಷಸರಾದ ನಮಗೆ ಸೇರತಕ್ಕುದು. ಹೀಗಿರುವಾಗಲೂ ನೀನು ನನ್ನ ಕಣ್ಣಮುಂದೆಯೇ ಕಳ್ಳತನದಿಂದ ಅದನ್ನು ಸಾಗಿಸಿಕೊಂಡು ಹೋಗು ವೆಯಾ? ಈ ಭೂಮಿಯನ್ನೆತ್ತಿಕೊಂಡು ಹೋಗುವುದರಿಂದ ಎಂದಿಗೂ ನಿನಗೆ ಕ್ಷೇಮವುಂಟಾಗದು! ಎಲೆ ಸುರಾಧಮಾ! ಏನೋ ಮೋಸಕ್ಕಾಗಿಯೇ ಈ ಆಕಾರವನ್ನು ತಾಳಿರುವಂತಿದೆ. ಹಿಂದೆಯೂ ನೀನು ಇದೇ ವಿಧವಾದ ನಿನ್ನ ಮಾಯಾಬಲದಿಂದಲೇ ನಮ್ಮ ಕಡೆಯವರನೇಕರನ್ನು ಸಂಹರಿಸಿರುವೆ. ದೇವತೆಗಳು ನಮ್ಮ ನಾಶಕ್ಕಾಗಿಯೇ ನಿನಗೆ ಈ ರೂಪವನ್ನು ಕೊಟ್ಟು ಕಳು ಹಿಸಿರಬಹುದು! ಅತ್ಯಲ್ಪ ಬಲವುಳ್ಳವನಾದುದರಿಂದಲೇ ನೀನು ಹೀಗೆ ವೇಷಾಂತರಗಳಿಂದ ಬರುವಹಾಗಿದೆ! ಆದರೇನು! ಇರಲಿ! ಇದೋ ನೋಡು! ಈಗಲೇ ಈ ಗದಾದಂಡದಿಂದ ನಿನ್ನನ್ನು ಬಡಿದು, ನಮ್ಮ ಬಂಧುಮಿತ್ರರ ಕಣ್ಣೀರನ್ನೊರೆಸುವೆನು. ಇದೋ! ಒಂದೇ ಪ್ರಹಾರದಿಂದ ನನ್ನ ಗದೆ ಯಿಂದ ನಿನ್ನನ್ನು ಕೊಂದು, ನಿನ್ನ ತಲೆಯನ್ನು ಮುರಿಯುವೆನು ನೋಡು! ಇದುವರೆಗೆ ನಿನ್ನನ್ನಾಶ್ರಯಿಸಿಕೊಂಡು, ನಿನಗೆ ಬಲಿಗಳನ್ನು ತಂದೊಪ್ಪಿಸು ತ್ತಿದ್ದ ಋಷಿಗಳೂ, ದೇವತೆಗಳೂ ಇನ್ನು ಮೇಲೆ ದಿಕ್ಕಿಲ್ಲದೆ ಸಾಯುವುದರಲ್ಲಿ ಸಂದೇಹವಿಲ್ಲ" ಎಂದನು. ರಾಕ್ಷಸನು ಈ ಮಾತನ್ನಾಡಲು, ಆ ವರಾಹ ಮೂರ್ತಿಗೆ, ಅವನ ಕ್ರೂರವಾಕ್ಯಗಳೆಂಬ ಶೂಲಗಳು ಮೈಗೆ ನಾಟಿದಂತಾಗಿ, ಸಹಿಸಲಾರದ ಕೋಪವುಂಟಾಯಿತು. ಹೀಗೆ ಕೋಪೋದ್ರಿಕ್ತನಾದ ಆದಿ ವರಾಹನು, ಮಡುವಿನಲ್ಲಿ ಮೊಸಳೆಯ ಕೈಗೆ ಸಿಕ್ಕಿಬಿದ್ದ ಮಹಾಗಜವು, ತನ್ನ ಹೆಣ್ಣಾನೆಯನ್ನೂ ಹಿಂದಿಕ್ಕಿಕೊಂಡು ಕೋಪದಿಂದ ಹೆಣಗಾಡುವಂತೆ, ತನ್ನ ದಂಷ್ಟ್ರಾಗ್ರದಲ್ಲಿ ಭಯದಿಂದ ನಡುಗುತ್ತಿರುವ ಭೂದೇವಿಯನ್ನು ದೃಢ ವಾಗಿ ಹಿಡಿದು, ಆ ಜಲಮಧ್ಯದಿಂದ ಮೇಲಕ್ಕೆದ್ದು ಬರುತ್ತಿದ್ದನು. ಹೀಗೆ ವೇಗದಿಂದ ಮೇಲಕ್ಕೆದ್ದು ಬರುತ್ತಿರುವ ಆ ವರಾಹಮೂರ್ತಿಯನ್ನು, ಮದ ದಾನೆಯನ್ನು ಬೆನ್ನಟ್ಟಿ ಬರುವ ಮೊಸಳೆಯಂತೆ ಹಿರಣ್ಯಾಕ್ಷನೂ ಕೂಡ ಭಯಂಕರವಾದ ಕೋರೆ ದಾಡೆಗಳೊಡನೆ ಬೆನ್ನಟ್ಟಿ ಸಿಡಿಲಿನಂತೆ ಆರ್ಭಟಿಸಿ,

ಎಲೈ ದುರಾತ್ಮಾ! ನಾಚಿಕೆಯಿಲ್ಲದೆ ಭಯಪಟ್ಟು ಪಲಾಯನಮಾಡು ವೆಯಾ? ನಿನ್ನಂತಹ ನೀಚಜಂತುಗಳು ಲೋಕಾಪವಾದಕ್ಕೂ ಅಂಜದೆ ಓಡಿಹೋಗುವುದೇನೋ ಸಹಜವೇ?" ಎಂದು ಮೂದಲಿಸಿ, ಮುಂದೆ ಬರು ತ್ತಿದ್ದನು. ಈ ರಾಕ್ಷಸನ ಮಾತನ್ನು ಕೇಳಿ ವರಾಹಮೂರ್ತಿಗೂ ಮೇಲೆ ಮೇಲೆ ಕೋಪವು ಉಕ್ಕಿಬರುತ್ತಿತ್ತು. ತನ್ನ ದಂಷ್ಟ್ರಾಗ್ರದಲ್ಲಿ ಧರಿಸಿದ್ದ ಭೂಮಿಯನ್ನು ಆ ಮಹಾಸಮುದ್ರದ ಮೇಲೆಯೇ ತನ್ನ ಆಧಾರಶಕ್ತಿಯಿಂದ ನಿಲ್ಲಿಸಿಬಿಟ್ಟನು. ಈ ಅದ್ಭುತ ವ್ಯಾಪಾರವನ್ನು ನೋಡಿ ಬ್ರಹ್ಮಾದಿ ದೇವತೆ ಗಳೆಲ್ಲರೂ ಆಶ್ಚರ್ಯದಿಂದಲೂ ಸಂತೋಷದಿಂದಲೂ ಆ ಆದಿವರಾಹನನ್ನು ಕೊಂಡಾಡುತ್ತಿದ್ದರು. ಹಿರಣ್ಯಾಕ್ಷನು ನೋಡುತ್ತಿದ್ದ ಹಾಗೆಯೇ ಆಕಾಶ ದಿಂದ ಪುಷ್ಪವರ್ಷವನ್ನೂ ಕರೆದರು. ಹೀಗೆ ದೇವತೆಗಳೆಲ್ಲರೂ ನಾನಾ ದಿಕ್ಕುಗಳಿಂದ ಸ್ತೋತ್ರಮಾಡುತ್ತಿರಲು, ಭಗವಂತನು ಮರ್ಮ ಭೇದಕಗಳಾದ ಮಾತಿನಿಂದ ತನ್ನನ್ನು ಬೆನ್ನಟ್ಟಿ ಬರುತ್ತಿದ್ದ ಗದಾ ಪಾಣಿಯಾದ ಹಿರಣ್ಯಾಕ್ಷನನ್ನು ನೋಡಿ, ಮಂದಹಾಸದಿಂದ ನಗುತ್ತ "ಎಲೆ ರಾಕ್ಷಸಾ! ನೀನು ನನ್ನನ್ನು ನೋಡಿ ಕಾಡುಮೃಗವೆಂದು ಹಾಸ್ಯಮಾಡಿದೆ ಯಲ್ಲವೇ? ಹೌದು! ನಾವು ಕಾಡುಮೃಗಗಳೆಂಬುದೇನೋ ವಾಸ್ತವವು! ನಿಮ್ಮಂತಹ ನಾಯಿಗಳನ್ನು ಹುಡುಕಿ ಕೊಲ್ಲುವುದಕ್ಕಾಗಿಯೇ ನಾವು ಈ ಮೃಗರೂಪವನ್ನು ಧರಿಸಿರುವೆವು. ಎಲೆ ದುರಾತ್ಮಾ! ಕೆಲಸಕ್ಕೆ ಬಾರದ ಈ ಕೂಗಾಟಗಳಿಂದ ಫಲವಿಲ್ಲ! ನಿಜವಾದ ವೀರ್ಯವುಳ್ಳವರು ಯಾವಾಗಲೂ ಇಂತಹ ಗರ್ವೋಕ್ತಿಗಳನ್ನು ಬಾಯಿಂದ ನುಡಿಯಲಾರರು. ಮೃತ್ಯುಪಾಶ ದಲ್ಲಿ ಸಿಕ್ಕಿಬಿದ್ದಿರುವ ನೀನು ಈ ಆತ್ಮಸ್ತುತಿಯನ್ನು ಮಾಡಿಕೊಂಡಮಾತ್ರಕ್ಕೆ ಇದನ್ನು ವೀರರೊಬ್ಬರೂ ಮೆಚ್ಚಲಾರರು! ಅದು ಹಾಗಿರಲಿ! ನೀನೇನು ಹೇಳಿದೆ? ಪಾತಾಳವಾಸಿಗಳಿಗಾಗಿ ಬ್ರಹ್ಮನು ನಿರ್ಮಿಸಿಕೊಟ್ಟ ಈ ಭೂಮಿ ಯನ್ನು ನಾವು ಕದ್ದುಕೊಂಡು ಭಯದಿಂದೋಡಿ ಬರುವುದರಿಂದ ನಾಚಿಕೆ ಯಿಲ್ಲದವರೆಂದು ಹೇಳಿದೆಯಲ್ಲವೆ? ಹಾಗೆಯೇ ಆಗಲಿ! ಪಾತಾಳವಾಸಿ ಗಳಾದ ನಿಮ್ಮ ಸ್ವತ್ತನ್ನೇ ನಾವು ಅಪಹರಿಸಿಕೊಂಡು ಬರುತ್ತಿರುವೆವು. ನಾವು ನಾಚಿಕೆಯಿಲ್ಲದವರು! ನಿನ್ನ ಗದೆಗೆ ಭಯಪಟ್ಟೇ ಓಡಿಬರುತ್ತಿರುವೆವು. ಆಹಾ! ಮಹಾಬಲಾಢ್ಯನಾದ ನಿನ್ನೊಡನೆ ವೈರವನ್ನು ಬೆಳೆಸಿ, ನಾವು

ಮತ್ತೆಲ್ಲಿಗೆ ಹೋದರೆ ತಾನೇ ಬದುಕಬಲ್ಲೆವು! ನೀನು ಹೇಳಿದಂತೆ ನಾವೇನೋ ಅಲ್ಪಬಲವುಳ್ಳವರೇ ವಾಸ್ತವವು! ನಮಗೆ ನಿಮ್ಮಂತಹ ಬಲಾಢ್ಯರೊಡನೆ ಯುದ್ಧಮಾಡುವಷ್ಟು ಬಲವಿಲ್ಲದಿದ್ದರೂ, ನಮ್ಮಿಂದಾದಷ್ಟು ಶಕ್ತಿಯನ್ನುಪ ಯೋಗಿಸಿ, ನಿನ್ನೊಡನೆ ಯುದ್ಧಮಾಡಿಯೇ ತೀರಬೇಕಲ್ಲವೆ? ಎಲೈ ರಾಕ್ಷಸಾ! ಪದಾತಿಗಳಲ್ಲಿ ಮೇಲೆನಿಸಿಕೊಂಡ ನೀನೂ ಕೂಡ ಆದಷ್ಟು ಶೀಘ್ರ ದಲ್ಲಿ ನನ್ನನ್ನು ಜಯಿಸುವುದಕ್ಕೆ ಯತ್ನಿಸು! ನಿರ್ಭಯವಾಗಿ ಮುಂದೆ ಬಂದು ನಿಲ್ಲು. ನಮ್ಮನ್ನು ಕೊಂದು ನಿನ್ನ ಬಂಧುಮಿತ್ರರ ಕಣ್ಣೀರನ್ನೊರಸುವವ ನಾಗು. ನೀನು ವೀರನಾಗಿದ್ದರೆ ಹಾಗೆಯೇ ನಡೆಸಬೇಕು! ಆಡಿದ ಮಾತನ್ನು ನಡೆಸದ ಮೇಲೆ ಮನುಷ್ಯನಿಗೆ ಗೌರವವೆಲ್ಲಿ?" ಎಂದನು. ವರಾಹ ಮೂರ್ತಿಯು ಹೇಳಿದ ಈ ವ್ಯಂಗ್ಯವಾಕ್ಯಗಳು ಆ ರಾಕ್ಷಸನ ಕಿವಿಯಲ್ಲಿ ಶೂಲ ದಂತೆ ನಾಟಿದುವು. ಕಾಲಿಂದ ಮೆಟ್ಟಿದ ಕಾಲಸರ್ಪದಂತೆ ಆ ದುಷ್ಟರಾಕ್ಷಸನು ಕೋಪದಿಂದ ಬುಸುಗುಟ್ಟುತ್ತಿದ್ದನು. ತಡೆಯಲಾರದ ಕೋಪದಿಂದ ಅವನ ಕಣ್ಣುಗಳು ಉರಿಯನ್ನು ಕಾರುತ್ತಿದ್ದುವು. ಅವನ ಇಂದ್ರಿಯಗಳೆಲ್ಲವೂ ಕಲಗಿ ಹೋದುವು. ಒಡನೆಯೇ ಮಹಾಗದೆಯನ್ನು ಗಿರಗಿರನೆ ತಿರುಗಿಸಿ ಆ ವರಾಹದ ಎದೆಗೆ ಗುರಿಯಿಟ್ಟು ಬೀಸಿದನು. ಇಷ್ಟರೊಳಗಾಗಿ ವರಾಹಮೂರ್ತಿಯು, ಥಟ್ಟನೆ ಅಡ್ಡಲಾಗಿ ತಿರುಗಿ, ಯೋಗಸಿದ್ಧನು ಮೃತ್ಯುವನ್ನು ತಪ್ಪಿಸಿಕೊಳ್ಳು ವಂತೆ ಅದರ ಪ್ರಹಾರವನ್ನು ತಪ್ಪಿಸಿಕೊಂಡನು. ಇಷ್ಟರಲ್ಲಿ ಹಿರಣ್ಯಾಕ್ಷನು, ಮತ್ತೊಮ್ಮೆ ಗದೆಯನ್ನು ತಿರುಗಿಸುತ್ತ ಮುಂದೆ ಬರುತ್ತಿರಲು, ವರಾಹ ಮೂರ್ತಿಯು ಕೋಪದಿಂದ ತುಟಿಗಳನ್ನು ಕಚ್ಚುತ್ತ, ತಾನು ಹಿಡಿದಿದ್ದ ಗದೆ ಯಿಂದ ಆ ರಾಕ್ಷಸನ ಬಲಭುಜಕ್ಕೆ ಗುರಿಯಿಟ್ಟು ಹೊಡೆದನು. ಆದರೆ ಗದಾಯುದ್ಧದಲ್ಲಿ ಚತುರನಾದ ರಾಕ್ಷಸನು, ತನ್ನ ಗದೆಯನ್ನು ಅಡ್ಡಲಾಗಿ ಹಿಡಿದು, ಆ ಪ್ರಹಾರವನ್ನೂ ತಪ್ಪಿಸಿಕೊಂಡನು. ಅವರಿಬ್ಬರೂ ಒಬ್ಬರ ನ್ನೊಬ್ಬರು ಕ್ರೂರವಾಗಿ ಹೊಡೆದಾಡುತ್ತಿದ್ದರು. ಹೀಗೆ ಒಬ್ಬರಮೇಲೊ ಬ್ಬರು ಸ್ಪರ್ಧೆಯಿಂದ ಹೋರಾಡುತ್ತ, ಗದೆಯಿಂದಪ್ಪಳಿಸುವಾಗ, ಮೈಗಾಯ ದಿಂದ ಹೊರಟ ರಕ್ತದ ವಾಸನೆಯು ಮೂಗಿಗೆ ಏರಿದ ಹಾಗೆಲ್ಲಾ, ಇಬ್ಬರಿಗೂ ಮೇಲೆ ಮೇಲೆ ಕೋಪವೂ ಹೆಚ್ಚಿಬರುತ್ತಿತ್ತು. ಒಬ್ಬರನ್ನೊಬ್ಬರು ಜಯಿಸ ಬೇಕೆಂಬ ಹಟದಿಂದ, ಆ ವರಾಹರಾಕ್ಷಸರಿಬ್ಬರೂ, ವಿಚಿತ್ರಗತಿಗಳಿಂದ ತಿರುಗಿ

ತಿರುಗಿ ಎರಡು ಮಹಾವೃಷಭಗಳಂತೆ ಯುದ್ಧಮಾಡುತ್ತ ಬಂದರು. ಮಾಯಾವರಾಹಸ್ವರೂಪವನ್ನು ಕೈಕೊಂಡಿದ್ದ ಯಜ್ಞಮೂರ್ತಿಯಾದ ಆ ಮಹಾವಿಷ್ಣುವಿಗೂ, ಹಿರಣ್ಯಾಕ್ಷನಿಗೂ ನಡೆಯುತ್ತಿದ್ದ ಈ ಮಹಾಯುದ್ಧ ವನ್ನು ನೋಡಬೇಕೆಂಬ ಕುತೂಹಲದಿಂದ ಚತುರ್ಮುಖನು, ತನ್ನ ಮಕ್ಕ ಳಾದ ಮರೀಚಿ ಮೊದಲಾದವರೊಡನೆ ಅಲ್ಲಿಗೆ ಬಂದು ಸೇರಿದನು. ಆ ಹಿರಣ್ಯಾಕ್ಷನ ಪರಾಕ್ರಮವಾದರೋ ಸ್ವಲ್ಪಮಾತ್ರವೂ ತಗ್ಗದೆ ಮೇಲೆ ಮೇಲೆ ಹೆಚ್ಚುತ್ತಿತ್ತು. ಭಗವಂತನು ಪ್ರಯೋಗಿಸಿದ ಒಂದೊಂದು ಗದಾಪ್ರಹಾರವೂ ಅವನ ಮೇಲೆ ಬೀಳದೆ ತಪ್ಪಿಹೋಗುತ್ತಿದ್ದಿತು. ಆ ರಾಕ್ಷಸನೂ ನಿರ್ಭಯ ವಾಗಿ ಮೇಲೆ ಬಿದ್ದು ಹೆಮ್ಮೆಯಿಂದುಕ್ಕುತಿದ್ದನು. ಅವನ ಪರಾಕ್ರಮವು ತಡೆಯಲಸಾಧ್ಯವಾಯಿತು. ಈ ಸ್ಥಿತಿಯನ್ನು ನೋಡಿ, ದೇವಾಧಿಪತಿಯಾದ ಬ್ರಹ್ಮನು, ಆದಿವರಾಹರೂಪಿಯಾದ ಭಗವಂತನನ್ನು ಹೀಗೆಂದು ಪ್ರಾರ್ಥಿಸ ತೊಡಗಿದನು. "ಓ ದೇವಾ! ಈ ರಾಕ್ಷಸನಾದರೋ ಬಹಳ ದುರಾತ್ಮನು! ನಿನ್ನನ್ನೇ ನಂಬಿ ಬದುಕುತ್ತಿರುವ ಬ್ರಾಹ್ಮಣರನ್ನೂ, ದೇವತೆಗಳನ್ನೂ ನಿರಪರಾಧಿಗಳಾದ ಇತರ ಭೂತಗಳನ್ನೂ ಕರುಣೆಯಿಲ್ಲದೆ ಕೊಲ್ಲುತ್ತಿರುವನು. ಲೋಕವೆಲ್ಲವನ್ನೂ ಹೆದರಿಸುತ್ತಿರುವನು. ನಾನು ಕೊಟ್ಟ ವರಬಲದಿಂದಲೇ ಬಹಳವಾಗಿ ಕೊಬ್ಬಿ ಲೋಕವನ್ನು ಹಿಂಸಿಸುತ್ತಿರುವನು. ತನಗೆ ಬೇರೆ ಯಾರೂ ಇದಿರಿಲ್ಲವೆಂಬ ಮೈಕೊಬ್ಬಿನಿಂದ, ಸಿಕ್ಕಿದವರನ್ನೆಲ್ಲಾ ಯುದ್ಧಕ್ಕೆ ಕರೆಯುತ್ತ, ಲೋಕವನ್ನು ಸುತ್ತುತ್ತಿರುವನು. ಲೋಕಕಂಟಕನಾದ ಈತನು, ಬಹಳ ಮಾಯಾವಿಯಾಗಿ, ತನ್ನ ವೀರ್ಯಕ್ಕೆ ಎಲ್ಲಿಯೂ ತಡೆಯಿಲ್ಲವೆಂದು ಬೀಗಿ ಬೆರೆಯುತ್ತಿರುವನು. ಅತಿ ಕ್ರೂರಾತ್ಮನಾದ ಇವನೊಡನೆ ಯುದ್ಧ ಮಾಡುವಾಗಲೂ ನೀನು ಅಲಕ್ಷ್ಯಭಾವದಿಂದ ಮಕ್ಕಳಾಟಿಕೆಯನ್ನಾಡುತ್ತಿರು ವೆಯಲ್ಲಾ! ಈ ದುರಾತ್ಮನೊಡನೆ ಹೀಗೆ ಆಟವಾಡುತ್ತಿರುವುದು, ಹಾವಿ ನೊಡನೆ ಸರಸವಾಡುವಂತೆಯೇ ಹೊರತು ಬೇರೆಯಲ್ಲ! ಇನ್ನು ನೀನು ತಡ ಮಾಡುತ್ತಿರುವುದು ಸರಿಯಲ್ಲ. ಇದೋ! ಈಗಾಗಲೇ ಸಂಧ್ಯಾಕಾಲವು ಸಮೀಪಿಸುತ್ತಿರುವುದು. ಈ ಕಾಲದಲ್ಲಿ ರಾಕ್ಷಸರಿಗೆ ಬಲವು ಹೆಚ್ಚು! ಆದುದರಿಂದ ನೀನು ಮಾಯಾಬಲವನ್ನು ಹಿಡಿದು, ಸಾಯಂಕಾಲಕ್ಕೆ ಮೊದಲೇ ಇವನನ್ನು ಕೊಂದುಬಿಡಬೇಕು. ಅದರಿಂದಾಚೆಗೆ ಇವನನ್ನು

ಕೊಲ್ಲುವುದು ದುಸ್ಸಾಧ್ಯವಾಗುವುದು. ಸಂಧ್ಯಾಕಾಲವೆಂಬುದು ಲೋಕಕ್ಕೆ ಭಯಂಕರವಾದುದು. ಆದುದರಿಂದ ಎಲೈ ಸರ್ವಾತ್ಮಕನೇ! ಅದಕ್ಕೆ ಮೊದಲೇ ಇವನನ್ನು ಸಂಹರಿಸಿ, ದೇವತೆಗಳಿಗೆ ಕ್ಷೇಮವನ್ನುಂಟುಮಾಡು! ಈಗ ಅಭಿಜಿತ್ತೆಂಬ ಹೆಸರುಳ್ಳ ಮಧ್ಯಾಹ್ನಕಾಲವು ಆರಂಭಿಸಿರುವುದು. ಇವನನ್ನು ಕೊಲ್ಲುವುದಕ್ಕೆ ಇದೇ ತಕ್ಕ ಸಮಯವು. ದುರ್ಜಯನಾದ ಈತನನ್ನು ಈಗಲೇ ಕೊಂದು ನಿನ್ನ ಪಾದಾಶ್ರಿತರಾದ ನಮಗೆ ಕ್ಷೇಮವನ್ನುಂಟುಮಾಡು! ಇವನಿಗೂ ಮರಣಕಾಲವು ಸಮೀಪಿಸಿರುವುದು! ಈಗಲೇ ನೀನು ತಕ್ಕ ಪರಾಕ್ರಮವನ್ನುಪಯೋಗಿಸಿ, ಇವನನ್ನು ಕೊಂದು ಸಮಸ್ತಲೋಕಕ್ಕೂ ಕ್ಷೇಮವನ್ನುಂಟುಮಾಡು!" ಎಂದನು. ಇಲ್ಲಿಗೆ ಹದಿನೆಂಟನೆಯ ಅಧ್ಯಾಯವು.

---

### ವರಾಹಮೂರ್ತಿಯು ಹಿರಣ್ಯಾಕ್ಷನನ್ನು ಕೊಂದುದು.

ಹೀಗೆ ಚತುರ್ಮುಖನು ಭಗವಂತನನ್ನು ಕುರಿತು, ನಿರ್ದುಷ್ಟವಾಗಿಯೂ ಯಥಾರ್ಥವಾಗಿಯೂ, ಅಮೃತದಂತೆ ಪ್ರಿಯವಾಗಿಯೂ ಇರುವ ವಾಕ್ಯಗಳಿಂದ ಪ್ರಾರ್ಥಿಸುತ್ತಿರಲು, ಭಗವಂತನು ಅದನ್ನು ಕೇಳಿ, ತನ್ನಲ್ಲಿ ತಾನು "ಆಹಾ! ಕಾಲಸ್ವರೂಪನಾಗಿ, ಸರ್ವಸಂಹಾರಕನಾದ ನನಗೆ ಇರುವ ಶತ್ರುಭಯವನ್ನು ಕಲ್ಪಿಸುತ್ತಿರುವರಲ್ಲಾ!" ಎಂದು ಒಳಗೊಳಗೆ ನಗುತ್ತ, ಮಂದಹಾಸಪೂರ್ವಕವಾಗಿ ಬ್ರಹ್ಮನ ಕಡೆಗೆ ತಿರುಗಿ, ಅವನ ಮಾತನ್ನು ಪ್ರೀತಿಪೂರ್ವಕವಾಗಿ ಅಂಗೀಕರಿಸಿದಂತೆ, ಪ್ರಸನ್ನದೃಷ್ಟಿಯಿಂದ ನೋಡಿದನು. ಆದರೆ ರಾಕ್ಷಸರಿಗೆ ಬಲವನ್ನು ಹೆಚ್ಚಿಸತಕ್ಕ ಸಂಧ್ಯಾಕಾಲದಲ್ಲಿಯೇ ಅವನನ್ನು ಸಂಹರಿಸಿ, ತನ್ನ ಮಹಿಮೆಯನ್ನು ಬ್ರಹ್ಮಾದಿಗಳಿಗೆ ತೋರಿಸಿಕೊಡಬೇಕೆಂದು ತನ್ನಲ್ಲಿ ತಾನು ಸಂಕಲ್ಪಿಸಿಕೊಂಡನು. ಅನಂತರದಲ್ಲಿ ಆ ವರಾಹಮೂರ್ತಿಯು ತನ್ನ ಮುಂದೆ ಮದದಾನೆಯಂತೆ ನಿರ್ಭಯವಾಗಿ ನಿಂತಿರುವ ಆ ರಾಕ್ಷಸನನ್ನು ನೋಡಿ, ಕೋಪಾವೇಶವನ್ನು ನಟಿಸುತ್ತ, ತನ್ನ ಗದಾದಂಡವನ್ನೆತ್ತಿ ಹಾರಿಬಂದು ಆ ರಾಕ್ಷಸನ ಮೇಲೆ ವೇಗದಿಂದ ಅಪ್ಪಳಿಸಿದನು. ಈ ಗದೆಯು ಇಷ್ಟರಲ್ಲಿಯೇ ರಾಕ್ಷಸನ ಗದೆಯಿಂದ ಪ್ರತಿಹತವಾಗಿ, ಭಗವಂತನ ಕೈ

ಯಿಂದ ಜಾರಿ, ಮಹಾಧ್ವನಿಯೊಡನೆ ಕೆಳಗೆ ಬಿದ್ದಿತು. ಇದು ನೋಡುವ ವರಿಗೆ ಅತ್ಯಾಶ್ಚರ್ಯವನ್ನುಂಟುಮಾಡಿತು. ಈ ಸಮಯದಲ್ಲಿ ವರಾಹ ಮೂರ್ತಿಯನ್ನು ಹೊಡೆಯುವುದಕ್ಕೆ ರಾಕ್ಷಸನಿಗೆ ತಕ್ಕ ಅವಕಾಶವಿದ್ದರೂ ಆ ರಾಕ್ಷಸನು ಯುದ್ಧಧರ್ಮವನ್ನು ಯೋಚಿಸಿ, ನಿರಾಯುಧನಾಗಿದ್ದ ಭಗ ವಂತನನ್ನು ಹೊಡೆಯಲಾರದೆ, ಉಕ್ಕಿಬರುವ ಕೋಪವನ್ನು ಹಾಗೆಯೇ ಅಡಗಿಸಿಕೊಂಡು ಸುಮ್ಮನಿದ್ದನು. ಭಗವಂತನ ಗದೆಯು ವಿಫಲವಾಗಿ ಬಿದ್ದುದನ್ನು ನೋಡಿ ಸುತ್ತಲೂ ಹಾಹಾಕಾರವು ಹೊರಟಿತು. ಆದರೆ ಭಗ ವಂತನು ಮಾತ್ರ ರಾಕ್ಷಸನ ಧರ್ಮಬುದ್ಧಿಯನ್ನೇ ಗೌರವಿಸುತ್ತ, ಕೊನೆಗೆ ಸುನಾಭವೆಂಬ ತನ್ನ ಚಕ್ರಾಯುಧವನ್ನು ಸ್ಮರಿಸಿದೊಡನೆ ಸುದರ್ಶನಚಕ್ರವು ಆತನ ಕೈಗೆ ಬಂದು ಸೇರಿತು. ಈ ಸುದರ್ಶನಚಕ್ರವು, ಪೂರ್ವಜನ್ಮದಲ್ಲಿ ಸಹವಾಸಿಯಾಗಿದ್ದ ಆ ದಿತಿಪುತ್ರನ ಮೇಲೆ ಬಿದ್ದು, ಅವನೊಡನೆ ಸೇರುವು ದಕ್ಕೆ ಆತುರಪಡುತ್ತಿರುವುದನ್ನು ನೋಡಿ, ಯುದ್ಧದರ್ಶನಕ್ಕಾಗಿ ಬಂದಿದ್ದ ದೇವತೆಗಳ ಗುಂಪಿನಲ್ಲಿ "ದೇವಾ! ಆ ರಾಕ್ಷಸನನ್ನು ಕೊಲ್ಲು! ಕೊಲ್ಲು! ನಿನಗೆ ಜಯವಾಗಲಿ" ಎಂಬಿವೇ ಮೊದಲಾದ ಉತ್ಸಾಹ ವಾಕ್ಯಗಳು ನಾನಾ ವಿಧವಾಗಿ ಹೊರಡುತ್ತಿದ್ದುವು. ಹಿರಣ್ಯಾಕ್ಷನಿಗಾದರೋ, ತನ್ನ ಮುಂದೆ ಸುದರ್ಶನವನ್ನು ಕೈಯಲ್ಲಿ ಹಿಡಿದು ನಿಂತಿದ್ದ ಪುಂಡರೀಕಾಕ್ಷನಾದ ಆ ವರಾಹ ಮೂರ್ತಿಯನ್ನು ನೋಡಿದೊಡನೆ ಮೇಲೆ ಮೇಲೆ ಕೋಪವು ಉಕ್ಕುತ್ತಿತ್ತು. ಆಗಾಗ ತುಟಿಯನ್ನು ಕಚ್ಚುವನು! ಉದ್ದವಾಗಿ ನಿಟ್ಟುಸಿರನ್ನು ಬಿಡುವನು! ಹೀಗೆ ಭಯಂಕರವಾದ ಕೋರೆದಾಡೆಗಳುಳ್ಳ ಆ ರಾಕ್ಷಸನು, ಕೋಪಾವೇಶ ದೊಡನೆ ವೇಗದಿಂದೋಡಿ ಬಂದು "ಇದೋ! ಇದರಿಂದ ನೀನು ಸತ್ತೆ" ಎಂದು ತನ್ನ ಗದೆಯನ್ನು ಬೀಸಿದನು. ಯಜ್ಞಮೂರ್ತಿಯಾದ ಭಗವಂತನಾದರೋ ವಾಯುವೇಗದಿಂದ ಹೊರಟ ಆ ಗದೆಯು ತನ್ನ ಸಮೀಪಕ್ಕೆ ಬರುವಷ್ಟರಲ್ಲಿ, ಆ ಶತ್ರುವು ನೋಡುತ್ತಿದ್ದ ಹಾಗೆಯೇ ಲೀಲಾಮಾತ್ರದಿಂದ ಅದನ್ನು ತನ್ನ ಎಡಗಾಲಿನಿಂದ ಮೆಟ್ಟಿನಿಂತು, ಆಶಾಭಂಗಹೊಂದಿ ಮುಂದೆ ನಿಂತಿದ್ದ ರಾಕ್ಷಸ ನನ್ನು ನೋಡಿ "ಎಲೆ ರಾಕ್ಷಸಾ! ಚಿಂತಿಸಬೇಡ! ಇದೋ ತಿರುಗಿ ನಿನ್ನ ಆಯುಧವನ್ನೆತ್ತಿಕೊಂಡು ಯುದ್ಧಕ್ಕೆ ನಿಲ್ಲು! ನಿನ್ನಿಂದಾದ ಪ್ರಯತ್ನವನ್ನು ಮಾಡು! ಅವಶ್ಯವಾಗಿ ನೀನೇ ಜಯಿಸಬಹುದು" ಎಂದನು. ಇದನ್ನು ಕೇಳಿ

ರಾಕ್ಷಸನಿಗೆ ಮತ್ತಷ್ಟು ಕೋಪವುಂಟಾಯಿತು. ತಿರುಗಿ ಅದೇ ಗದೆಯನ್ನು ತೆಗೆದು ವರಾಹಮೂರ್ತಿಯ ಮೇಲೆ ಬೀಸಿ ಸಿಂಹನಾದವನ್ನು ಮಾಡಿದನು. ಈ ಗದೆಯು ಸಮೀಪಕ್ಕೆ ಬರುವುದನ್ನು ನೋಡಿ ಭಗವಂತನು, ಗರುಡನು ಹಾವನ್ನು ಹಿಡಿಯುವಂತೆ ಲೀಲಾಮಾತ್ರದಲ್ಲಿ ಅದನ್ನು ತನ್ನ ಕೈಯಿಂದಾತು ಕೊಂಡನು. ಹೀಗೆ ತನ್ನ ಪೌರುಷವೆಲ್ಲವೂ ವ್ಯರ್ಥವಾದುದಕ್ಕಾಗಿ ಆ ಹಿರಣ್ಯಾಕ್ಷನು, ಮನಸ್ಸಿನಲ್ಲಿ ಗರ್ವವಡಗಿ, ಚಿಂತಾಕುಲನಾಗಿದ್ದನು. ಭಗ ವಂತನು ತಿರುಗಿ ಅದೇ ಗದೆಯನ್ನು ಕೈಗೆ ಕೊಡುವುದಕ್ಕೆ ಬಂದಾಗಲೂ ಕೂಡ, ಆ ರಾಕ್ಷಸನು ಅದನ್ನು ತೆಗೆದುಕೊಳ್ಳುವುದಕ್ಕೆ ನಾಚಿಕೆಪಟ್ಟು ಉತ್ಸಾಹಹೀನನಾಗಿದ್ದನು. ಕೊನೆಗೆ ಅಗ್ನಿಯಂತೆ ಜಾಜ್ವಲ್ಯಮಾನವಾದ ಒಂದು ತ್ರಿಶೂಲವನ್ನು ಕೈಗೆತ್ತಿಕೊಂಡು, ಬಹಳ ಶುದ್ಧಾತ್ಮನಾದ ಬ್ರಾಹ್ಮ ಣನ ಮೇಲೆ ಶೂನ್ಯದೇವತೆಯನ್ನು ಕಳುಹಿಸುವಂತೆ, ಅದನ್ನು ಯಜ್ಞ ಸ್ವರೂಪನಾದ ವರಾಹಮೂರ್ತಿಯ ಮೇಲೆ ಪ್ರಯೋಗಿಸಿದನು. ಆಕಾಶ ಮಧ್ಯದಲ್ಲಿ ಅತ್ಯಂತ ಕಾಂತಿಯಿಂದ ಜ್ವಲಿಸುತ್ತ, ಮುಂದೆ ಬರುತ್ತಿರುವ ಆ ತ್ರಿಶೂಲವನ್ನು ನೋಡಿ ಭಗವಂತನು, ಹರಿತವಾದ ಅಲಗುಗಳುಳ್ಳ ತನ್ನ ಚಕ್ರಾಯುಧವನ್ನು ಪ್ರಯೋಗಿಸಿ * ಪೂರ್ವದಲ್ಲಿ ಗರುಡನು ತನ್ನ ಮೈಯಿಂ ದುದಿರಿಸಿದ ರೆಕ್ಕೆಯ ಗರಿಯನ್ನು ದೇವೇಂದ್ರನು ಹೇಗೋ ಹಾಗೆ, ಆ ತ್ರಿಶೂಲ ವನ್ನು ಛಿನ್ನಭಿನ್ನವಾಗಿ ಭೇದಿಸಿದನು. ಈ ಚಕ್ರಾಯುಧದಿಂದ ತನ್ನ ತ್ರಿಶೂಲವು ಮುರಿದು ಬಿದ್ದೊಡನೆ, ರಾಕ್ಷಸನು ಮತ್ತಷ್ಟು ಕೋಪಾವೇಶ ವನ್ನು ಹೊಂದಿ, ದೃಢವಾದ ಮುಷ್ಟಿಯನ್ನು ಹಿಡಿದು, ಸಿಂಹನಾದ ಮಾಡುತ್ತ ಮುಂದೆ ಬಂದು ಲಕ್ಷ್ಮೀದೇವಿಗೆ ನಿವಾಸಸ್ಥಾನವಾದ, ಆ ಭಗವಂ ತನ ಎದೆಯ ಮೇಲೆ ವೇಗದಿಂದಪ್ಪಳಿಸಿ, ಒಡನೆಯೇ ತನ್ನ ಮಾಯೆಯಿಂದ

---

* ಪೂರ್ವದಲ್ಲಿ ದೇವತೆಗಳನ್ನು ಜಯಿಸಿ, ಅಮೃತಕಲಶವನ್ನು ಸಾಗಿಸಿಕೊಂಡು ಹೋಗುತ್ತಿದ್ದ ಗರುಡನ ಮೇಲೆ, ಇಂದ್ರನು ತನ್ನ ವಜ್ರಾಯುಧವನ್ನು ಪ್ರಯೋಗಿಸಿ ದನು. ಅಮೋಘವಾದ ಆ ವಜ್ರಾಯುಧಕ್ಕೆ ಗೌರವವನ್ನು ಕೊಡಬೇಕೆಂಬುದಕ್ಕಾಗಿ ಗರುಡನು ತನ್ನ ಮೈಯಿಂದ ಒಂದು ಗರಿಯನ್ನುದುರಿಸಿ ಮುಂದೆ ಸಾಗಿದುದಾಗಿಯೂ. ಆ ಗರಿಯನ್ನು ಇಂದ್ರನು ಕೋಪದಿಂದ ತುಂಡುತುಂಡಾಗಿ ಭೇದಿಸಿದುದಾಗಿಯೂ ಪೂರ್ವಕಥೆಯುಂಟು.




೧೮೬. ವರಾಹಮೂರ್ತಿಯು ಹಿರಣ್ಯಾಕ್ಷನನ್ನು ಕೊಂದುದು

ಕಣ್ಮರೆಯಾದನು. ವಿದುರಾ! ಈ ಪ್ರಹಾರವೇಗವೂ ಕೂಡ ಆದಿಮೂರ್ತಿ ಯಾದ ಭಗವಂತನ ಮೈಮೇಲೆ ಬಿದ್ದಾಗ, ಪುಷ್ಪಮಾಲಿಕೆಯಿಂದ ಮದದಾನೆ ಯನ್ನು ಹೊಡೆದಂತಾಯಿತು ಹೊರತು, ಅವನಿಗೆ ಸ್ವಲ್ಪವಾದರೂ ನೋವ ನ್ನುಂಟುಮಾಡಲಿಲ್ಲ. ಆಮೇಲೆ ಹಿರಣ್ಯಾಕ್ಷನು, ಸಮಸ್ತಮಾಯಾಶಕ್ತಿ ಗಳಿಗೂ ನಿಯಾಮಕನಾದ ಆ ಭಗವಂತನ ಮೇಲೆ, ತನ್ನ ಮಾಯೆಗಳನ್ನು ಇನ್ನೂ ನಾನಾವಿಧವಾಗಿ ತೋರಿಸುವುದಕ್ಕೆ ತೊಡಗಿದನು. ರಾಕ್ಷಸನು ಈ ಮಾಯಾ ಯುದ್ಧವನ್ನಾರಂಭಿಸಿದೊಡನೆ, ಸಮಸ್ತಪ್ರಜೆಗಳೂ, "ಲೋಕಕ್ಕೆ ಇದೇನೋ ಒಂದು ಮಹಾಪ್ರಳಯು" ವೆಂದು ಮನಸ್ಸಿನಲ್ಲಿ ಭಯಪಟ್ಟು ನಡುಗುತ್ತಿದ್ದರು. ವಿದುರಾ! ಆ ರಾಕ್ಷಸನ ಮಾಯಾಪ್ರಭಾವವನ್ನು ಕೇಳ ಬೇಕೇ? ಇದ್ದಕ್ಕಿದ್ದ ಹಾ ಭಯಂಕರವಾದ ಬಿರುಗಾಳಿಯೆದ್ದು, ದೊಡ್ಡ ಧೂಳಿಯನ್ನೆಬ್ಬಿಸಿತು! ಕವಣೆಗಳಿಂದ ಬೀರಿದಂತೆ ನಾನಾದಿಕ್ಕುಗಳಿಂದಲೂ ಶಿಲಾವರ್ಷವು ಕರೆಯುತ್ತಿತ್ತು! ಆಕಾಶದಲ್ಲಿ ನಕ್ಷತ್ರಗಳ ಹುಟ್ಟೇ ಇರಲಿಲ್ಲ! ಇದ್ದಕ್ಕಿದ್ದ ಹಾಗೆ ಅಂತರಿಕ್ಷದಲ್ಲಿ ಮಿಂಚುಗುಡುಗುಗಳೊಡನೆ ಮೇಘಗಳು ಗುಂಪುಗೂಡಿ, ಅತಿ ದುರ್ಗಂಧವುಳ್ಳ ಮಲಮೂತ್ರಗಳನ್ನೂ, ಒಮ್ಮೊಮ್ಮೆ ರಕ್ತಧಾರೆಗಳನ್ನೂ ಕರೆಯುತ್ತಿದ್ದವು. ಅಲ್ಲಲ್ಲಿರುವ ಪರ್ವತಗಳಿಂದ ಇದ್ದಕ್ಕಿದ್ದ ಹಾಗೆ ಆಯುಧ ಪರಂಪರೆಗಳು ಹಾರಿಬೀಳುತಿದ್ದುವು. ಅಲ್ಲಲ್ಲಿ ಪಿಶಾಚಿಗಳೂ ರಾಕ್ಷಸಿಯರೂ, ಕೈಯಲ್ಲಿ ಶೂಲವನ್ನು ಹಿಡಿದು, ತಲೆಯನ್ನು ಕೆದರಿ, ನಿರ್ವಾಣವಾಗಿ ನಿಂತಹಾಗೆ ಕಾಣಿಸುತ್ತಿದ್ದುವು. ಇಷ್ಟರಲ್ಲಿ ಇತ್ತಲಾಗಿ ರಾಕ್ಷಸ ಸೈನ್ಯದಿಂದ, ಆನೆ, ಕುದುರೆ, ರಥ, ಕಾಳಾಳುಗಳೆಂಬ ಚತುರಂಗ ಗಳೊಡಗೂಡಿ, ಯಕ್ಷರೂ, ರಾಕ್ಷಸರೂ ಅಲ್ಲಲ್ಲಿ ಗುಂಪುಗುಂಪಾಗಿ ಹೊರಟು, 'ಕೊಲ್ಲು! ತಿವಿ!' ಎಂದು ಕೂಗಿಡುತ್ತಿದ್ದರು. ಹೀಗೆ ಆ ರಾಕ್ಷಸನ ಮಾಯೆಯು ಲೋಕಭಯಂಕರವಾಗಿ ಹಬ್ಬುತ್ತಿರುವುದನ್ನು ನೋಡಿ ಭಗವಂತನು, ಅದನ್ನ ಡಗಿಸುವುದಕ್ಕಾಗಿ ತನ್ನ ಸುದರ್ಶನಚಕ್ರವನ್ನು ಪ್ರಯೋಗಿಸಿ ಬಿಟ್ಟನು. ಭಗವಂತನ ಕೈಯಿಂದ ಚಕ್ರಾಯುಧವು ಹೊರಟೊಡನೆ, ಅತ್ತಲಾಗಿ ಹಿರಣ್ಯಾಕ್ಷನ ತಾಯಿಯಾದ ದಿತಿಗೆ ಕುಮಾರನಿಗೆ ಶ್ರೀವಿಷ್ಣುವಿನಿಂದಲೇ ಮರಣವೆಂಬ ಮಾತು ನೆನಪಿಗೆ ಬಂದು, ಅವಳ ಮನಸ್ಸಿಗೆ ನಡುಕವು ತೋರಿತು. ಅವಳ ಸ್ತನಾಗ್ರದಿಂದ ರಕ್ತವು ಜಿನುಗಿತು. ಇತ್ತಲಾಗಿ ರಣ

ರಂಗದಲ್ಲಿ ಸುದರ್ಶನಚಕ್ರದ ಪ್ರಭಾವದಿಂದ ಆ ರಾಕ್ಷಸನ ಮಾಯೆಯೆಲ್ಲವೂ ವ್ಯರ್ಥವಾಯಿತು. ಆದರೂ ಬಿಡದೆ ಹಿರಣ್ಯಾಕ್ಷನು, ಉದ್ದವಾದ ತನ್ನ ತೋಳುಗಳನ್ನು ನೀಡಿಕೊಂಡು, ಮುಂದೆ ನುಗ್ಗಿ, ಆ ವರಾಹಮೂರ್ತಿಯನ್ನು ತನ್ನ ಭುಜಗಳ ನಡುವೆ ಸಿಕ್ಕಿಸಿಕೊಳ್ಳಬೇಕೆಂದು ಪ್ರಯತ್ನಿಸಿದನು. ಆಗಲೂ ವರಾಹಮೂರ್ತಿಯು ತನ್ನ ಕೈಗೆ ಸಿಕ್ಕದೆ ತಪ್ಪಿಸಿಕೊಂಡುದನ್ನು ನೋಡಿ, ವಜ್ರಮುಷ್ಟಿಯನ್ನು ಹಿಡಿದು, ಭಗವಂತನ ಎದೆಯ ಮೇಲೆ ಹೊಡೆದನು. ಇಷ್ಟರಲ್ಲಿ ಶ್ರೀಹರಿಯು, ದೇವೇಂದ್ರನು ವೃತ್ರಾಸುರನನ್ನು ಹೊಡೆದಂತೆ, ತನ್ನ ಅಂಗೈಯಿಂದ ಆ ರಾಕ್ಷಸನ ಕೆನ್ನೆಯ ಮೇಲೆ ಅಪ್ಪಳಿಸಿದನು. ಈ ಪ್ರಹಾರವು ಬಿದ್ದೊಡನೆ, ಆ ರಾಕ್ಷಸನು ಗಿರಗಿರನೆ ಸುತ್ತಿ, ಬಿರುಗಾಳಿಯಿಂದ ಮುರಿದುಬಿದ್ದ ವೃಕ್ಷದಂತೆ ಕಣ್ಣುಮುಚ್ಚಿ ಕೆಳಗೆ ಬಿದ್ದನು. ಆ ರಾಕ್ಷಸನ ಕೈ, ಕಾಲು, ಕಂಠ, ಮುಂತಾದ ಅವಯವಗಳೆಲ್ಲವೂ ಛಿನ್ನಭಿನ್ನವಾದವು. ಭಯಂಕರವಾದ ಕೋರೆಗಳುಳ್ಳ ಆ ರಾಕ್ಷಸನು, ಹೀಗೆ ವರಾಹಮೂರ್ತಿಯಿಂದ ಹತನಾಗಿ ತುಟಿಯನ್ನು ಕಚ್ಚಿ ಕೆಳಗೆ ಬಿದ್ದಿರುವುದನ್ನೂ, ಸತ್ತಮೇಲೆಯೂ ಅವನ ತೇಜಸ್ಸು ಕುಂದದಿರುವುದನ್ನೂ ನೋಡಿ, ಬ್ರಹ್ಮಾದಿ ದೇವತೆಗಳೆಲ್ಲರೂ ಆಶ್ಚರ್ಯಭರಿತರಾಗಿ ಮುಂದೆ ಬಂದು, "ಆಹಾ! ಈತನಲ್ಲವೇ ಪುಣ್ಯಾತ್ಮನು! ಭಗವಂತನ ಕೈಯಿಂದಲೇ ಮರಣವನ್ನು ಹೊಂದುವ ಇಂತಹ ಪುಣ್ಯಾತ್ಮರು ಲೋಕದಲ್ಲಿ ವಿರಳವಲ್ಲವೇ! ಯೋಗೀಶ್ವರರೆಲ್ಲರೂ ಸಂಸಾರವನ್ನು ತ್ಯಜಿಸಿ, ಯೋಗಮಾರ್ಗವನ್ನು ಹಿಡಿದು, ಬಹಳ ಶ್ರಮದಿಂದ ಯಾವನ ಪಾದಪದ್ಮಗಳನ್ನು ರಹಸ್ಯವಾಗಿ ಹುಡುಕುತ್ತಿರುವರೋ, ಅಂತಹ ಭಗವಂತನ ಪಾದದಿಂದಲೇ ಈತನಿಗೆ ಮರಣವುಂಟಾಯಿತಲ್ಲವೇ? ಪ್ರಾಣೋತ್ಕ್ರಮಣಕಾಲದಲ್ಲಿಯೂ ಕೂಡ, ಪ್ರತ್ಯಕ್ಷದಲ್ಲಿ ಭಗವಂತನ ಮುಖವನ್ನು ನೋಡುತ್ತ ತನ್ನ ದೇಹವನ್ನು ನೀಗಿದ ಈ ರಾಕ್ಷಸನಲ್ಲವೇ ಪರಮಧನ್ಯನು! ಇಂತಹ ಭಾಗ್ಯವು ಬೇರೊಬ್ಬರಿಗೆ ಲಭಿಸುವುದೇ? ಪೂರ್ವದಲ್ಲಿ ಭಗವಂತನ ದ್ವಾರಪಾಲಕರಾಗಿದ್ದ ಜಯವಿಜಯರೇ ಇವರು! ಬ್ರಾಹ್ಮಣಶಾಪದಿಂದ ರಾಕ್ಷಸರಾಗಿ ಹುಟ್ಟಿದ್ದು, ಕೆಲವು ದಿನಗಳೊಳಗಾಗಿಯೇ ತಿರುಗಿ ಆ ಭಗವಂತನ ಸಾನ್ನಿಧ್ಯವನ್ನು ಸೇರತಕ್ಕವರು! ಇವರನ್ನು ಪುಣ್ಯಾತ್ಮರೆಂಬುದನ್ನು ಹೇಳಬೇಕಾದುದೇನು?" ಎಂದು ಆ ರಾಕ್ಷಸನ

ಭಾಗ್ಯವನ್ನು ಕೊಂಡಾಡುತ್ತಿದ್ದರು. ಆ ಮೇಲೆ ಬ್ರಹ್ಮಾದಿ ದೇವತೆಗಳೆಲ್ಲರೂ ಮುಂದೆ ಬಂದು, ಭಗವಂತನನ್ನು ಸ್ತೋತ್ರಮಾಡುವರು. “ಓ ದೇವಾ! ಸಕಲಯಜ್ಞಸ್ವರೂಪನಾದ ನಿನಗೆ ನಮಸ್ಕಾರವು. ಶುದ್ಧಸತ್ವಮೂರ್ತಿ ಯಾದರೂ, ಲೋಕರಕ್ಷಣಕ್ಕಾಗಿ ಹೀಗೆ ಸ್ವೇಚ್ಛೆಯಿಂದ ನಾನಾವಿಧ ಶರೀರ ಗಳನ್ನು ಧರಿಸತಕ್ಕ ನಿನಗೆ ನಮಸ್ಕಾರವು! ನಮ್ಮ ಭಾಗ್ಯೋದಯದಿಂದ ಲೋಕಕಂಟಕನಾದ ಈ ರಾಕ್ಷಸನು ಹತನಾದನು! ನಿನ್ನ ಪಾದಾಶ್ರಯ ದಿಂದ ನಾವು ಸುಖಿಗಳಾದೆವು” ಎಂದರು. ವಿದುರಾ! ಹೀಗೆ ಆದಿವರಾಹ ರೂಪವನ್ನು ಧರಿಸಿದ ಭಗವಂತನು, ಬೇರೊಬ್ಬರಿಂದ ತಡೆಯಲಸಾಧ್ಯವಾದ ಕ್ರೂರಪರಾಕ್ರಮವುಳ್ಳ ಹಿರಣ್ಯಾಕ್ಷನನ್ನು ಕೊಂದು, ಬ್ರಹ್ಮಾದಿ ದೇವತೆ ಗಳಿಂದ ಸ್ತುತಿಸಲ್ಪಡುತ್ತ, ಸರ್ವೋತ್ತಮ ಸೌಭಾಗ್ಯವುಳ್ಳ ತನ್ನ ವೈಕುಂಠ ಲೋಕಕ್ಕೆ ಹಿಂತಿರುಗಿದನು. ಎಲೈ ಮಿತ್ರನೇ! ಈಗ ನಾನು ವರಾಹರೂಪಿ ಯಾದ ಆ ಭಗವಂತನ ಚರಿತ್ರೆಯನ್ನು ಎಷ್ಟು ಸುಲಭವಾಗಿ ನಿನಗೆ ತಿಳಿಸಿ ದೆನೋ, ಇದರಂತೆಯೇ ಆ ಭಗವಂತನೂ ಕೂಡ ಕೇವಲ ಲೀಲಾಮಾತ್ರ ದಿಂದಲೇ ಹಿರಣ್ಯಾಕ್ಷನನ್ನು ಕೊಂದು ಕೆಡಹಿದನು. ಆ ಭಗವಂತನ ಅದ್ಭುತ ಶಕ್ತಿಗೆ ಇದೊಂದು ದುಷ್ಕರಕಾರ್ಯವೆಂದೆಣಿಸಬೇಡ” ಎಂದು ಮೈತ್ರೇಯನು ಈ ಕಥೆಯನ್ನು ಹೇಳಿದೊಡನೆ, ಭಾಗವತೋತ್ತಮನಾದ ವಿದುರನಿಗೆ ಅತ್ಯಾ ನಂದವುಂಟಾಯಿತು. ಎಲೈ ಪರೀಕ್ಷಿದ್ರಾಜನೇ! ಲೋಕದಲ್ಲಿ ಸಾಮಾನ್ಯ ವಾಗಿ ಒಂದೊಂದು ಕಾರ್ಯದಲ್ಲಿ ಹೆಸರನ್ನು ಪಡೆದ ಮಹಾತ್ಮರ ಚರಿತ್ರೆಯನ್ನು ಕೇಳುವಾಗಲೇ, ಮನುಷ್ಯರಿಗೆ ಎಷ್ಟೋ ಸಂತೋಷವಾಗುವುದು. ಇನ್ನು ಸಾಕ್ಷಾದ್ಭಗವಂತನ ಚರಿತ್ರವನ್ನು ಕೇಳುವುದರಿಂದುಂಟಾಗುವ ಆನಂದವನ್ನು ಕೇಳಬೇಕೇ! ರಾಜೇಂದ್ರಾ! ಪೂರ್ವದಲ್ಲಿ ಅನೇಕ ಸಂವತ್ಸರಗಳವರೆಗೆ ಮೊಸ ಳೆಯ ಬಾಯಿಗೆ ಸಿಕ್ಕಿ, ಪ್ರಾಣಾಪಾಯದಲ್ಲಿದ್ದ ಗಜೇಂದ್ರನು, ತನ್ನ ಹೆಣ್ಣಾ ನೆಗಳೊಡನೆ ಒಂದಾವರ್ತಿ ಭಗವಂತನ ಹೆಸರನ್ನು ಕೂಗಿ ಕರೆದಮಾತ್ರಕ್ಕೆ, ಆ ಭಗವಂತನು ಚಕ್ರಧಾರಿಯಾಗಿ ಬಂದು, ಮೊಸಳೆಯನ್ನು ಕೊಂದು, ಗಜೇಂದ್ರನನ್ನು ಕಾಪಾಡಿದನಲ್ಲವೇ? ದಿಕ್ಕಿಲ್ಲದ ಮನುಷ್ಯರಿಗೆ ಬಹಳ ಸುಲಭ ವಾಗಿ ಪ್ರಸನ್ನನಾಗತಕ್ಕವನಾಗಿಯೂ ದುರಾತ್ಮರಿಗೆ ಎಷ್ಟೆಷ್ಟೇ ಪ್ರಯತ್ನ ಪಟ್ಟರೂ ದುರ್ಲಭನಾಗಿಯೂ ಇರುವ ಆಶ್ರಿತವತ್ಸಲನಾದ ಆ ಭಗವಂತ

ನನ್ನು ಸೇವಿಸುವುದಕ್ಕಾಗಲೀ, ಆತನ ಸಚ್ಚರಿತ್ರಗಳನ್ನು ಕೇಳುವುದಕ್ಕಾಗಲೀ, ಕೃತಜ್ಞಬುದ್ಧಿಯುಳ್ಳ ಯಾವ ಮನುಷ್ಯನು ತಾನೇ ಹಿಂತೆಗೆಯುವನು? ಓ ರಾಜೇಂದ್ರಾ! ಅದು ಹಾಗಿರಲಿ! ಲೋಕದಲ್ಲಿ ಯಾವನು, ಹಿರಣ್ಯಾಕ್ಷವಧರೂಪವಾದ ಈ ವರಾಹಾವತಾರದ ಚರಿತ್ರವನ್ನು ಕಿವಿಯಿಂದ ಕೇಳುವನೋ, ಇಲ್ಲವೇ ಬೇರೆಯವರು ಹೇಳುವುದನ್ನು ಕೇಳಿಯಾದರೂ ಅನುಮೋದಿಸುವನೋ, ಅಂತವನು ಬ್ರಹ್ಮಹತ್ಯಾದಿ ಸಮಸ್ತಪಾಪಗಳಿಂದಲೂ ವಿಮುಕ್ತನಾಗುವನು. ಈ ಚರಿತ್ರವು ಬಹಳ ಪವಿತ್ರವಾದುದು. ಬಹಳ ಪುಣ್ಯಕರವಾದುದು. ವಿಶೇಷ ಕೀರ್ತಿಸಾಧಕವು. ಆಯುಸ್ಸನ್ನು ಹೆಚ್ಚಿಸತಕ್ಕುದು. ಇಷ್ಟಾರ್ಥವನ್ನು ಕೈಗೂಡಿಸತಕ್ಕುದು. ಯುದ್ಧದಲ್ಲಿ ನಿಂತವರು ಈ ಚರಿತ್ರವನ್ನು ಸ್ಮರಿಸಿದಮಾತ್ರಕ್ಕೆ, ಅವರ ಪ್ರಾಣಗಳಿಗೂ, ಇಂದ್ರಿಯಗಳಿಗೂ ಶಕ್ತಿಯನ್ನು ಹೆಚ್ಚಿಸುವುದು. ಇವೆಲ್ಲವೂ ಹಾಗಿರಲಿ! ದೇಹಾವಸಾನದಲ್ಲಿ ಭಗವಂತನ ಸಾನ್ನಿಧ್ಯವನ್ನೇ ಸೇರಿಸುವುದು" ಎಂದನು. ಇಲ್ಲಿಗೆ ಹತ್ತೊಂಭತ್ತನೆಯ ಅಧ್ಯಾಯವು.

---

## ದೇವ ಸೃಷ್ಟಿ ಕ್ರಮವು.

ಇದುವರೆಗೆ ವಿದುರನು ಮೈತ್ರೇಯನಿಂದ ಕೇಳಿದ ವಿಷಯಗಳನ್ನೇ ಶುಕಮುನಿಯು ಪರೀಕ್ಷಿದ್ರಾಜನಿಗೆ ತಿಳಿಸಿದುದಾಗಿ, ಸೂತಪೌರಾಣಿಕನು ಶೌನಕಾದಿಗಳಿಗೆ ಹೇಳುತ್ತಿರುವಾಗ, ಶೌನಕಮುನಿಯು ನಡುವೆ ಒಂದು ಪ್ರಶ್ನೆಯನ್ನು ಮಾಡುವನು. "ಓ ಮಹಾತ್ಮಾ! ಸೂತಾ! ಸ್ವಾಯಂಭುವಮನುವು ಭೂಮಿಯನ್ನು ಸ್ಥಿರವಾಗಿ ನಿಲ್ಲುವಂತೆ ಮಾಡಿದ ಮೇಲೆ, ಲೋಕಕ್ಕೆ ಧರ್ಮಾರ್ಥಕಾಮಮೋಕ್ಷಗಳೆಂಬ ಪುರುಷಾರ್ಥಗಳನ್ನು ಕೈಗೂಡಿಸುವುದಕ್ಕಾಗಿ ಯಾವಯಾವ ಮಾರ್ಗಗಳನ್ನು ತೋರಿಸಿಕೊಟ್ಟನು? ಅದಕ್ಕಾಗಿ ತಾನು ಯಾವ ರೀತಿಯಲ್ಲಿ ನಡೆಯುತ್ತಿದ್ದನು? ಅವೆಲ್ಲವನ್ನೂ ವಿಸ್ತರಿಸಬೇಕು. ಮತ್ತು ವಿದುರನು ವಿಶೇಷವಾದ ಭಗವದ್ಭಕ್ತಿಯುಳ್ಳವನು. ಕೃಷ್ಣನಿಗೆ ಅತ್ಯಂತ ಪ್ರೀತಿಪಾತ್ರನು. ಭಾರತಯುದ್ಧಕ್ಕೆ ಮೊದಲು, ಕೃಷ್ಣನು ಸಂಧಿ

ಕಾರ್ಯಕ್ಕಾಗಿ ಪಾಂಡವದೂತನಾಗಿ ಬಂದಿದ್ದಾಗ, ಅವನನ್ನು ಅವಮಾನಪಡಿಸಿದರೆಂಬ ಕೋಪಕ್ಕಾಗಿ ತನ್ನ ಒಡಹುಟ್ಟಿದ ಧೃತರಾಷ್ಟ್ರನನ್ನೂ ಅವನ ಪುತ್ರನನ್ನೂ ಪರಿತ್ಯಾಗಮಾಡಿ ಬಂದವನು. ಮತ್ತು ಪೂಜ್ಯನಾದ ವ್ಯಾಸಮಹಾಮುನಿಗೆ ಪುತ್ರನಾಗಿ ಹುಟ್ಟಿ, ಮಹಿಮೆಯಲ್ಲಿ ಅವನಿಗೆ ಸಮಾನನೆನಿಸಿಕೊಂಡವನು. ಸರ್ವಕಾಲಗಳಲ್ಲಿಯೂ ಆ ಕೃಷ್ಣನನ್ನೂ, ಕೃಷ್ಣಭಕ್ತರನ್ನೂ ಸೇವಿಸತಕ್ಕವನು. ಇಂತಹ ಮಹಾನುಭಾವನಾದ ವಿದುರನು, ಗಂಗಾದಿ ಪುಣ್ಯತೀರ್ಥಗಳೆಲ್ಲವನ್ನೂ ಯಾತ್ರೆಮಾಡಿ ಬಂದು, ಪಾಪರಹಿತನಾಗಿ, ಕುಶಾವರ್ತವೆಂಬ ಪುಣ್ಯತೀರ್ಥವನ್ನು ಸೇರಿ, ಅಲ್ಲಿ ತತ್ವಜ್ಞನಾದ ಮೈತ್ರೇಯನನ್ನು ಕಂಡು, ಭಗವದ್ವಿಷಯಗಳನ್ನು ಪ್ರಶ್ನೆಮಾಡತೊಡಗಿದನೆಂದು ಹೇಳಿದೆಯಲ್ಲವೇ ? ಅವನು ಯಾವಯಾವ ಪ್ರಶ್ನೆಗಳನ್ನು ಕೇಳಿದನು ? ಭಾಗವತೋತ್ತಮರಾದ ವಿದುರ ಮೈತ್ರೇಯರಿಬ್ಬರಿಗೂ ನಡೆದ ಪ್ರಸಂಗಗಳಲ್ಲಿ, ಆ ಭಗವಂತನ ಪುಣ್ಯಚರಿತ್ರವೊಂದಲ್ಲದೆ ಬೇರೊಂದಿರದು. ಭಗವಂತನ ಪಾದಾಗ್ರದಿಂದ ಹೊರಟ ಗಂಗಾಜಲದಂತೆ, ಅವರ ಮುಖದಿಂದ ಹೊರಟ ಒಂದೊಂದು ವಿಷಯವೂ ಲೋಕಪಾವನವಾಗಿರುವುದರಲ್ಲಿ ಸಂದೇಹವಿಲ್ಲ. ಆದುದರಿಂದ ಯಾವಾಗಲೂ ಸಾಧುಗಳಿಂದ ಕೀರ್ತಿಸಲ್ಪಡತಕ್ಕುದಾಗಿಯೂ ಅದ್ಭುತಚರಿತ್ರಗಳುಳ್ಳುದಾಗಿಯೂ ಇರುವ ಆ ಕಥೆಗಳನ್ನೆಲ್ಲಾ ನನಗೆ ತಿಳಿಸಬೇಕು. ನಿನಗೆ ಮಂಗಳವಾಗಲಿ! ಒಂದಾವರ್ತಿ ಹರಿಕಥೆಯೆಂಬ ಅಮೃತವನ್ನು ಪಾನಮಾಡಿ, ಅದರ ರಸವನ್ನು ತಿಳಿದ ಮೇಲೆ, ಯಾವನು ತಾನೇ ಅದರಲ್ಲಿ ತೃಪ್ತಿಹೊಂದುವನು !” ಎಂದನು. ಆಗ ಭಗವದ್ಧ್ಯಾನಪರನಾದ ಸೂತನು, ಶೌನಕಾದಿಗಳನ್ನು ಕುರಿತು “ಎಲೈ ಮಹರ್ಷಿಗಳಿರಾ ! ಕೇಳಿರಿ ! ನಿಮ್ಮಂತೆಯೇ ಪರೀಕ್ಷಿದ್ರಾಜನೂ ಶುಕಮುನಿಯನ್ನು ಕುರಿತು, ಈ ವಿದುರ ಮೈತ್ರೇಯರ ಸಂವಾದವನ್ನೇ ತಿಳಿಸಬೇಕೆಂದು ಕೇಳಿದನು. ಶುಕಮುನಿಯೂ ಅದೇ ವಿಷಯವನ್ನು ವಿವರಿಸಿ ತಿಳಿಸಿರುವನು. ಅದನ್ನೇ ನಿಮಗೂ ಹೇಳುವೆನು. ಶ್ರೀಮಹಾವಿಷ್ಣುವು ವರಾಹಾವತಾರವನ್ನೆತ್ತಿ, ರಸಾತಲದಿಂದ ಭೂಮಿಯನ್ನುದ್ಧರಿಸಿ, ಹಿರಣ್ಯಾಕ್ಷನನ್ನು ಕೊಂದು, ನಿಜಲೋಕವನ್ನು ಸೇರಿದನೆಂಬ ಕಥೆಯನ್ನು ಕೇಳಿ ವಿದುರನು, ಸಂತೋಷಭರಿತನಾದನಷ್ಟೇ ! ಅವನು ತಿರುಗಿ ಮೈತ್ರೇಯನನ್ನು ಕುರಿತು ಹೀಗೆಂದು ಪ್ರಶ್ನೆಮಾಡುವನು. “ಓ ಮುನೀಂದ್ರಾ!

ಚತುರ್ಮುಖನು ಪ್ರಜೆಗಳನ್ನು ಹೆಚ್ಚಿಸುವುದಕ್ಕಾಗಿ, ಮರೀಚಿ ಮೊದಲಾದ ಪ್ರಜಾಧಿಪತಿಗಳನ್ನು ಸೃಷ್ಟಿಸಿದನೆಂದು ಹೇಳಿದೆಯಲ್ಲವೇ? ಅದರಿಂದಾಚೆಗೆ ಬ್ರಹ್ಮನು ಮಾಡಿದ ಕೆಲಸವೇನು? ನೀನು ಇಂದ್ರಿಯಗಳಿಗೆ ಗೋಚರಿಸದ ವಿಷಯಗಳನ್ನೂ ತಿಳಿದುಕೊಳ್ಳತಕ್ಕ ಜ್ಞಾನದೃಷ್ಟಿಯುಳ್ಳವನಾದುದರಿಂದ, ಅವೆಲ್ಲವನ್ನೂ ಯಥಾಸ್ಥಿತವಾಗಿ ನನಗೆ ತಿಳಿಸಬೇಕು. ಮರೀಚಿ ಮೊದಲಾದ ಮಹರ್ಷಿಗಳೂ, ಸ್ವಾಯಂಭುವಮನುವೂ ಹುಟ್ಟಿದಮೇಲೆ ಅವರಿಂದ ಪ್ರಜಾವೃದ್ಧಿಯಾದುದು ಹೇಗೆ? ಅವರು ತಮ್ಮ ತಮ್ಮ ಪತ್ನಿಯರ ಮೂಲಕವಾಗಿ ಸೃಷ್ಟಿಸಿದರೇ? ಅಥವಾ ಈ ಸೃಷ್ಟಿಕಾರ್ಯದಲ್ಲಿ ಬೇರೊಬ್ಬರ ಅಪೇಕ್ಷೆಯಿಲ್ಲದೆ ತಾವು ತಾವೇ ಸ್ವತಂತ್ರವಾಗಿ ಸೃಷ್ಟಿಸಿದರೇ? ಅಥವಾ ತಮ್ಮಲ್ಲಿಯೇ ಒಬ್ಬರಿಗೊಬ್ಬರು ಸಹಾಯಕರಾಗಿ ಪ್ರಜಾಸೃಷ್ಟಿಯನ್ನು ನಡೆಸಿದರೇ? ಇದರ ನಿಜಸ್ಥಿತಿಯನ್ನು ತಿಳಿಸಬೇಕು" ಎಂದನು. ಅದಕ್ಕಾ ಮೈತ್ರೇಯನು, "ವಿದುರಾ! ಮಹತ್ತು ಮೊದಲಾದ ತತ್ವಗಳ ಸೃಷ್ಟಿಕ್ರಮವನ್ನು ನಾನು ಮೊದಲೇ ನಿನಗೆ ತಿಳಿಸಿರುವೆನಾದರೂ ಮತ್ತೊಮ್ಮೆ ಸಂಗ್ರಹಿಸಿ ಹೇಳುವೆನು ಕೇಳು. ಎಣೆಯಿಲ್ಲದ ಮಹಾಮಹಿಮೆಯುಳ್ಳ ಸರ್ವೇಶ್ವರನು, ಕಾಲದಿಂದ ಎಚ್ಚರಗೊಂಡು, ಸೃಷ್ಟಿಕಾರ್ಯಕ್ಕೆ ಸಂಕಲ್ಪಿಸಿದೊಡನೆ, ಅವನಿಗೆ ಶರೀರವಾಗಿದ್ದ ಪ್ರಕೃತಿಯಿಂದ, ಮಹತ್ತೆಂಬ ತತ್ವವು ಹುಟ್ಟಿತು. ರಜೋಗುಣಪ್ರಧಾನವಾಗಿ, ಭೂತಗಳ ಮತ್ತು ಇಂದ್ರಿಯಗಳ ಸಮುದಾಯ ಸ್ವರೂಪವಾದ ಆ ಮಹತ್ತತ್ವವು, ಭಗವಂತನಿಂದ ಪ್ರೇರಿಸಲ್ಪಟ್ಟೊಡನೆ, ಅದರಿಂದ ಭೂತಾದಿಯೆಂಬ ಅಹಂಕಾರವೂ, ಪಂಚಮಹಾಭೂತಗಳೂ, ಪಂಚತನ್ಮಾತ್ರಗಳೂ, ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೂ, ಇವೆಲ್ಲವೂ ಕ್ರಮವಾಗಿ ಹುಟ್ಟಿದುವು. ಆಕಾಶವೇ ಮೊದಲಾದ ಈ ಪಂಚಭೂತಗಳು, ಪರಸ್ಪರ ಸಂಬಂಧವಿಲ್ಲದೆ ಬೇರೆಯಾಗಿದ್ದಾಗ, ಮುಂದೆ ತಮ್ಮಿಂದಾಗಬೇಕಾದ ಅಂಡವನ್ನು ಹುಟ್ಟಿಸುವುದಕ್ಕೆ ಅಸಮರ್ಥಗಳಾಗಿದ್ದುವು. ಕೊನೆಗೆ ಭಗವಂತನ ಶಕ್ತಿಯಿಂದ ಅವೆಲ್ಲವೂ ಏಕೀಭವಿಸಿ (ಪಂಚೀಕರಣವನ್ನು ಹೊಂದಿ) ಒಂದು ಸುವರ್ಣಮಯವಾದ ಅಂಡರೂಪಕ್ಕೆ ತಿರುಗಿತು. ಆ ಅಂಡವೆಂಬುದು ನಿಶ್ಚೇತನವಾಗಿ, ಆವರಣಜಲದ ಮಧ್ಯದಲ್ಲಿ ಬಹುಕಾಲದವರೆಗೆ ಮುಳುಗಿದ್ದಿತು. ಅನಿರುದ್ಧರೂಪಿಯಾದ ಭಗವಂತನೂ ಜಲಾವೃತವಾದ ಆ ಅಂಡಕೋಶದಲ್ಲಿಯೇ ಸಹಸ್ರ

ಸಂವತ್ಸರಗಳವರೆಗೆ ಅಡಗಿದ್ದನು. ಹೀಗಿರುವಾಗ ಆ ಅನಿರುದ್ಧನ ನಾಭಿಯಿಂದ, ಕೋಟಿಸೂರ್ಯಪ್ರಕಾಶವುಳ್ಳ ಒಂದು ಕಮಲವು ಮೇಲೆ ಹೊರಟಿತು. ವಿದುರಾ! ಆ ಕಮಲವೇ ಸಮಸ್ತಜೀವರಾಶಿಗಳಿಗೂ ನಿವಾಸಸ್ಥಾನವು. ಆ ಕಮಲದಿಂದ ಮೊದಲು ಬ್ರಹ್ಮನು ತಾನಾಗಿಯೇ ಹುಟ್ಟಿದನು. ಆಗ ಜಲಶಾಯಿಯಾಗಿದ್ದ ಭಗವಂತನು, ತನ್ನ ಸಂಕಲ್ಪರೂಪವಾದ ಜ್ಞಾನದೊಡನೆ ತಾನೂ ಆ ಬ್ರಹ್ಮನಲ್ಲಿ ಪ್ರವೇಶಿಸಿದನು. ಅದರ ಬಲದಿಂದ ಚತುರ್ಮುಖನು, ಈ ಸಮಸ್ತ ಪ್ರಪಂಚವನ್ನೂ ಪೂರ್ವಕಲ್ಪದಂತೆ ನಾಮರೂಪಗಳಿಂದ ಸೃಷ್ಟಿಸಲಾರಂಭಿಸಿದನು. ಎಲ್ಲಕ್ಕಿಂತಲೂ ಮೊದಲು, ತಮೋಗುಣವನ್ನು ಮುಂದಿಟ್ಟುಕೊಂಡು, ತಾಮಿಸ್ರವೆಂದೂ, ಅಂಧತಾಮಿಸ್ರವೆಂದೂ, ತಮಸ್ಸೆಂದೂ, ಮೋಹವೆಂದೂ, ಮಹಾತಮಸ್ಸೆಂದೂ. ಕರೆಯಲ್ಪಡುವ ಐದು ಬಗೆಯ ಅವಿದ್ಯೆಗಳನ್ನು ಸೃಷ್ಟಿಸಿದನು. ಇವುಗಳನ್ನು ಸೃಷ್ಟಿಸಿದ ಮೇಲೆ ಅಜ್ಞಾನಹೇತುವಾದ ಆ ತನ್ನ ಸ್ವಭಾವವನ್ನು ನೋಡಿ, ಅವನಿಗೆ ಜಿಹಾಸೆಯು ಹುಟ್ಟಿತು. ಇದರಿಂದ ಬ್ರಹ್ಮನು, ತಮೋಮಯವಾದ ತನ್ನ ಶರೀರವನ್ನು ಆಗಲೇ ತ್ಯಜಿಸಿಬಿಟ್ಟನು. ಆದರಿಂದ ಯಕ್ಷರೂ, ರಾಕ್ಷಸರೂ ಹುಟ್ಟಿ, ಆ ಬ್ರಹ್ಮಶರೀರವನ್ನೇ ತಮಗೆ ಹಸಿವು ಬಾಯಾರಿಕೆಗಳನ್ನು ಹೆಚ್ಚಿಸತಕ್ಕ ರಾತ್ರಿಯನ್ನಾಗಿ ಗ್ರಹಿಸಿದರು. ಮತ್ತು ಅವರೆಲ್ಲರೂ ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ, ಆ ಚತುರ್ಮುಖ ಶರೀರವನ್ನೇ ಭಕ್ಷಿಸುವುದಕ್ಕೆ ಹೊರಟರು. ಕೆಲವರು "ಅವನನ್ನು ರಕ್ಷಿಸಬೇಡಿರಿ" ಎಂದೂ, ಮತ್ತೆ ಕೆಲವರು "ಭಕ್ಷಿಸಿಬಿಡಿರಿ" ಎಂದೂ ಕೂಗುತ್ತ ಮೇಲೆ ಬೀಳುವುದಕ್ಕೆ ಬರಲು, ಚತುರ್ಮುಖನು ಭಯಪಟ್ಟು ಅವರನ್ನು ಕುರಿತು "ಎಲೈ ನಾನು ನಿಮಗೆ ಜನಕನಲ್ಲವೇ? ನನ್ನ ಮಕ್ಕಳಾದ ನೀವೇ ಈ ನನ್ನ ದೇಹವನ್ನು ಭಕ್ಷಿಸುವುದು ಯುಕ್ತವೇ? ಈ ಕ್ರೂರಕರ್ಮವನ್ನು ಬಿಡಿರಿ! ನಿಮ್ಮಲ್ಲಿ ಕೆಲವರು ನನ್ನನ್ನು ರಕ್ಷಿಸಬಾರದೆಂದೂ. ಬೇರೆ ಕೆಲವರು ಭಕ್ಷಿಸಬೇಕೆಂದೂ ಕೂಗುತ್ತ ಬಂದುದರಿಂದ, ಕ್ರಮವಾಗಿ ನಿಮಗೆ ರಾಕ್ಷಸರೆಂದೂ, ಯಕ್ಷರೆಂದೂ ಹೆಸರುಂಟಾಗಲಿ!" ಎಂದು ಅವರನ್ನು ತಡೆದು, ಒಡನೆಯೇ ಆ ತಮಸ್ಸನ್ನು ನಿವಾರಿಸತಕ್ಕ ತೇಜಸ್ಸನ್ನು ಹೊರಡಿಸಿ, ಪೂರ್ವಾಭಿಮುಖವಾಗಿ ನಿಂತು, ದೇವತೆಗಳನ್ನು ಸೃಷ್ಟಿಸಿದನು. ಆ ದೇವತೆಗಳೆಲ್ಲರೂ ತೇಜೋವಿಶಿಷ್ಟರಾಗಿ ತೇಜೋರೂಪವಾದ ಆ ಬ್ರಹ್ಮ

ದೇಹವನ್ನು ಹಗಲನ್ನಾಗಿ ಕೈಕೊಂಡರು. ಆ ಮೇಲೆ ಬ್ರಹ್ಮನು ತನ್ನ ಜಘನ ಪ್ರದೇಶದಿಂದ ವಿಶೇಷ ಕಾಮಸ್ವಭಾವವುಳ್ಳ ಅಸುರರನ್ನು ಸೃಷ್ಟಿಸಿದನು. ಇವರು ಹುಟ್ಟಿದೊಡನೆ, ಕಾಮಾತುರದಿಂದ ಸಂಭೋಗವನ್ನಪೇಕ್ಷಿಸಿ, ತನ್ನ ತಂದೆಯಾದ ಬ್ರಹ್ಮನ ಮೇಲೆ ಬಿದ್ದು, ಅವನನ್ನೇ ಅಪ್ಪಿಕೊಳ್ಳುವುದಕ್ಕಾಗಿ ಹೋದರಂತೆ! ಹೀಗೆ ನಾಚಿಕೆಯಿಲ್ಲದೆ ಮೇಲೆ ಬಿದ್ದು ಬರುತ್ತಿರುವ ಆ ಅಸುರರನ್ನು ನೋಡಿ ಬ್ರಹ್ಮನು ನಗುತ್ತ, ಅವರ ದುಶ್ಚೇಷ್ಟೆಯನ್ನು ತಡೆಯುವುದಕ್ಕೆ ಸಾಧ್ಯವಿಲ್ಲದೆ, ಓಡಿಹೋಗಿ, ಆಶ್ರಿತರಕ್ಷಕನಾಗಿಯೂ, ಭಕ್ತಾನುಗ್ರಹಾರ್ಥವಾಗಿ ಅವರವರ ಭಾವನೆಗೆ ತಕ್ಕಂತೆ ದರ್ಶನವನ್ನು ಕೊಡತಕ್ಕವನಾಗಿಯೂ ಇರುವ ಶ್ರೀಮನ್ನಾರಾಯಣನನ್ನು ಸಮೀಪಿಸಿ, ಕೈಮುಗಿದು ಹೀಗೆಂದು ಪ್ರಾರ್ಥಿಸುವನು. "ಓ ದೇವಾ! ನನ್ನನ್ನು ರಕ್ಷಿಸು ರಕ್ಷಿಸು! ದುಷ್ಟರನ್ನಡಗಿಸಿ ಶಿಷ್ಟರನ್ನು ಪರಿಪಾಲಿಸತಕ್ಕ ನೀನು, ಅಪಾಯಕ್ಕೆ ಸಿಕ್ಕಿರುವ ನನ್ನನ್ನು ಕಾಪಾಡಬೇಕು. ನಿನ್ನ ಆಜ್ಞಾಧೀನನಾಗಿ ನಾನು ಪ್ರಜೆಗಳನ್ನು ಸೃಷ್ಟಿಸುತ್ತಿರುವ ಸಂದರ್ಭದಲ್ಲಿ, ಈ ದುರಾತ್ಮರು ಬಲಾತ್ಕಾರದಿಂದ ನನ್ನ ಮೇಲೆ ಬೀಳುವುದಕ್ಕೆ ಬರುತ್ತಿರುವರು. ಇವರನ್ನು ನಿವಾರಿಸಿ ನನ್ನನ್ನು ರಕ್ಷಿಸತಕ್ಕ ಭಾರವು ನಿನ್ನದಾಗಿದೆ" ಎಂದನು. ಆಗ ಶ್ರೀಮನ್ನಾರಾಯಣನು ಬ್ರಹ್ಮನ ದೈನ್ಯವನ್ನು ನೋಡಿ ಕನಿಕರಗೊಂಡು "ಓ ಚತುರ್ಮುಖಾ! ನೀನು ಕಾಮಪ್ರಚುರವಾದ ಯಾವ ಸ್ವಭಾವದಿಂದ ಇವರನ್ನು ಸೃಷ್ಟಿಸಿದೆಯೋ, ಆ ಸ್ವಭಾವವನ್ನೂ ತ್ಯಜಿಸಿಬಿಡು" ಎಂದನು. ಒಡನೆಯೇ ಬ್ರಹ್ಮನು ಅದನ್ನೂ ತ್ಯಜಿಸಲು, ಅದು ಕಾಮೋದ್ರೇಕಕಾಲವಾದ ಸಾಯಂಸಂಧ್ಯೆಯಾಗಿ ಪರಿಣಮಿಸಿ, ಸುಂದರಾಕಾರವುಳ್ಳ ಒಂದು ಸ್ತ್ರೀರೂಪದಂತೆ ಕಾಣಿಸಿಕೊಂಡಿತು. ಆ ಸ್ತ್ರೀವ್ಯಕ್ತಿಗಾದರೋ ಕಮಲದಂತೆ ಸುಂದರವಾದ ಕಾಲುಗಳು! ಕಾಲುಗಳಲ್ಲಿ ಘಲಘಲನೆ ಧ್ವನಿಮಾಡುತ್ತಿರುವ ಕಾಲಂದುಗೆಗಳು! ಮದದಿಂದ ತೊಳಲುತ್ತಿರುವ ಕಣ್ಣಾಲೆಗಳು! ರತ್ನಮಯವಾದ ಡಾಬು! ನಿತಂಬಬಿಂಬದಲ್ಲಿ ಶೋಭಿಸುತ್ತಿರುವ ಅಂದವಾದ ದುಕೂಲದ ಮಡಿ! ಒಂದಕ್ಕೊಂದು ಒತ್ತುತ್ತಿರುವ ಉಬ್ಬಿದ ಸ್ತನಗಳು! ಎಸಳಾದ ಮೂಗು! ಅಂದವಾದ ದಂತಪಜ್ಙ್ತಿ! ಮುಖದಲ್ಲಿ ಮನೋಹರವಾದ ಮುಗುಳ್ನಗೆ! ಪ್ರಸನ್ನ ದೃಷ್ಟಿ! ಕಪ್ಪಾದ ಮುಂಗುರುಳು! ನೋಡುವವರಿಗೆ

ಮೋಹವನ್ನುಂಟುಮಾಡುವಂತೆ ಆಗಾಗ ಲಜ್ಜೆಯಿಂದ ಮೈಮೇಲಿನ ಸೆರಗನ್ನು ಮುಂದಕ್ಕೆಳೆದು ಸರಿಮಾಡಿಕೊಳ್ಳತಕ್ಕ ಸೊಬಗು! ಇಂತಹ ಲೀಲಾವಿಶೇಷದಿಂದ ಕೂಡಿದ ಆ ವ್ಯಕ್ತಿಯನ್ನು ನೋಡಿದೊಡನೆ, ಅಸುರರೆಲ್ಲರೂ ಮತ್ತಷ್ಟು ಕಾಮಮೋಹಿತರಾಗಿ ತಮ್ಮೊಳಗೆ ತಾವು "ಆಹಾ! ಎಂತಹ ಸೌಂದರ್ಯವು! ಎಂತಹ ಲಾವಣ್ಯವು! ಎಂತಹ ನವಯೌವನವು! ನಾವು ಇಷ್ಟುಮಂದಿಯೂ ಕಾಮಿಸಿ ಇವಳಲ್ಲಿ ಅನುರಾಗವನ್ನು ತೋರಿಸುತ್ತಿದ್ದರೂ, ಈಕೆಯು ನಮ್ಮಲ್ಲಿ ಒಬ್ಬರನ್ನಾದರೂ ವರಿಸದೆ, ಸ್ವಲ್ಪಮಾತ್ರವೂ ಕಾಮವಿಲ್ಲದವಳಂತೆ ಹೋಗುತ್ತಿರುವಳಲ್ಲಾ! ಇದೇನಾಶ್ಚರ್ಯವು" ಎಂದು ನಾನಾವಿಧವಾಗಿ ಚರ್ಚಿಸುತ್ತ, ಸ್ತ್ರೀರೂಪದಿಂದಿದ್ದ ಆ ಸಂಧ್ಯೆಯನ್ನು ಪ್ರೀತಿಗೌರವಗಳೊಡನೆ ಹೀಗೆಂದು ಪ್ರಶ್ನೆಮಾಡುವರು. "ಎಲೆ ಸುಶ್ರೋಣಿ! ನೀನು ಯಾರು? ಯಾರ ಕಡೆಯವಳು? ಯಾವ ಕಾರ್ಯಕ್ಕಾಗಿ ಇಲ್ಲಿ ಬಂದಿರುವೆ? ನೀನಾದರೋ ಈಗ ನಿನ್ನ ಸೌಂದರ್ಯವೆಂಬ ಅಮೂಲ್ಯವಾದ ವಸ್ತುವನ್ನು ಮಾರಾಟಕ್ಕಾಗಿ ಇಟ್ಟಿರುವಂತಿದೆ! ಆದರೆ ಅದನ್ನು ಕೊಂಡುಕೊಳ್ಳುವಷ್ಟು ಭಾಗ್ಯವನ್ನು ನಾವು ಪಡೆಯಲಿಲ್ಲ! ಹೀಗೆ ಭಾಗ್ಯಹೀನರಾದ ನಮ್ಮನ್ನು ಬಾಧಿಸುತ್ತಿರುವೆಯಲ್ಲಾ? ನೀನು ದೇವತಾಸ್ತ್ರೀಯೋ? ಮನುಷ್ಯಸ್ತ್ರೀಯೋ? ಯಾರೋ ಗೊತ್ತಾಗಲಿಲ್ಲ. ನೀನು ಯಾರಾದರೇನು? ನಮ್ಮ ಭಾಗ್ಯೋದಯದಿಂದ ನಿನ್ನ ದರ್ಶನವು ನಮಗೆ ಲಭಿಸಿತು! ಎಲೆ ನಾರೀಮಣೀ! ಮೇಲೆ ಮೇಲೆ ಪುಟಹಾರುತ್ತಿರುವ ಚೆಂಡನ್ನು ಹೊಡೆಯುವುದಕ್ಕಾಗಿ ಆತುರಪಡುತ್ತಿರುವ ಈ ನಿನ್ನ ಪಾದಕಮಲವು ನಿಂತಲ್ಲಿ ನಿಲ್ಲದೆ ಚಲಿಸುತ್ತಿರುವುದು! ನೀನು ಕೈಯಿಂದ ಚೆಂಡಾಡುತ್ತಿರುವ ರೀತಿಯಲ್ಲಿ, ನಮ್ಮ ಮನಸ್ಸನ್ನೂ ಚೆಂಡಾಡುತ್ತಿರುವೆಯಲ್ಲಾ! ಈ ನಿನ್ನ ಉಬ್ಬಿದ ಸ್ತನಗಳ ಭಾರದಿಂದ ಭಯಪಟ್ಟು ಕಂದಿದಂತೆ ನಿನ್ನ ಮಧ್ಯಭಾಗವು ಬಹಳವಾಗಿ ಕೃಶಿಸಿ ಕಷ್ಟಪಡುತ್ತಿರುವುದು! ನಿನ್ನ ದೃಷ್ಟಿಯು ಗಂಭೀರವಾಗಿ ಪ್ರಸರಿಸುತ್ತಿರುವುದು! ಎಲೆ ಸುಂದರಿ! ಈ ಚೆಂಡಾಟದಲ್ಲಿ ಆತುರದಲ್ಲಿ ಬಿಚ್ಚಿಹೋಗಿರುವ ಈ ನಿನ್ನ ತುರುಬನ್ನಾದರೂ ಸರಿಯಾಗಿ ಕಟ್ಟಿಡಬಾರದೇ? ಎಂದರು. ಹೀಗೆ ಆ ಅಸುರರೆಲ್ಲರೂ ಕಾಮಾತುರದಿಂದ ಗುಂಪುಕೂಡಿ ವಿವೇಕವಿಲ್ಲದವ

ರಾಗಿ * ಆ ಸಂಜೆಯನ್ನೇ ಒಂದು ಸುಂದರಸ್ತ್ರೀಯನ್ನಾಗಿ ತಿಳಿದು ಅವಳನ್ನು ಗ್ರಹಿಸಿದರು. ಆಗ ಬ್ರಹ್ಮನು ತನಗೆ ಬಿಡುಗಡೆಯಾಯಿತೆಂಬ ಸಂತೋಷದಿಂದ ತನ್ನನ್ನೇ ತಾನು ಮೂಸಿ ನೋಡುತ್ತ, ತನ್ನ ಸೌಂದರ್ಯದಿಂದ ಗಂಧರ್ವರನ್ನೂ, ಅಪ್ಸರಸ್ಸುಗಳನ್ನೂ ಹುಟ್ಟಿಸಿ, ಆ ಸ್ವಭಾವವನ್ನೂ ಅವರಲ್ಲಿಯೇ ಬಿಟ್ಟನು. ಅದು ಪ್ರಾತಃಸ್ಸಂಧ್ಯೆಯೆನಿಸಿಕೊಂಡಿತು. ಅದನ್ನು ವಿಶ್ವಾವಸು ಮೊದಲಾದ ಗಂಧರ್ವರೂ, ಅಪ್ಸರಸ್ಸುಗಳೂ ಗ್ರಹಿಸಿದರು. ಆಮೇಲೆ ಬ್ರಹ್ಮನು ನಿದ್ರಾರೂಪವಾದ ಸ್ವಭಾವವನ್ನು ಹಿಡಿದು ಅದರಿಂದ ಭೂತಗಳನ್ನೂ, ಪಿಶಾಚಿಗಳನ್ನೂ ಸೃಷ್ಟಿಸಿದನು. ಕೇವಲ ನಿರ್ವಾಣವಾಗಿ ನಿಂತು ತಲೆಕೆದರಿಕೊಂಡಿದ್ದ ಇವರನ್ನು ನೋಡಿ ಅಸಹ್ಯಪಟ್ಟು, ಕಣ್ಣುಗಳನ್ನು ಮುಚ್ಚಿ ಆ ಸ್ವಭಾವವನ್ನೂ ಅವರಿಗೇ ಬಿಟ್ಟುಬಿಟ್ಟನು. ಅದನ್ನು ಆ ಭೂತಪಿಶಾಚಾದಿಗಳು ಕೈಕೊಂಡುವು. ಆಕಳಿಕೆ ಮುಂತಾದ ವಿಕಾರಗಳುಳ್ಳ ಈ ಆಲಸ್ಯಸ್ವಭಾವದ ಸಂಬಂಧದಿಂದಲೇ, ಭೂತಗಳಲ್ಲಿ ನಿದ್ರೆಯೂ, ಉನ್ಮಾದವೂ, ಆಲಸ್ಯವೂ ಹೆಚ್ಚಾಗಿ ಕಾಣುವುದು. ಆಮೇಲೆ ಬ್ರಹ್ಮನು ತನ್ನ ಬಲವನ್ನು ಮುಂದಿಟ್ಟುಕೊಂಡು, ಸಾಧ್ಯರನ್ನೂ, ಪಿತೃದೇವತೆಗಳನ್ನೂ ಪರೋಕ್ಷದಲ್ಲಿ ಸೃಷ್ಟಿಸಿದನು. ಆ ಸಾಧ್ಯರೂ, ಪಿತೃಗಳೂ, ಜಲರೂಪವಾದ ಆ ಬ್ರಹ್ಮನ ದೇಹವನ್ನೇ ಗ್ರಹಿಸಿದರು. ಇದಕ್ಕಾಗಿಯೇ ರಾಜ್ಯವನ್ನೂ, ಸಂತಾನವೃದ್ಧಿಯನ್ನೂ ಅಪೇಕ್ಷಿಸತಕ್ಕವರು ಕ್ರಮವಾಗಿ ಸಾಧ್ಯರನ್ನೂ, ಪಿತೃದೇವತೆಗಳನ್ನೂ ಭಜಿಸುವರು. ಆ ಮೇಲೆ ಬ್ರಹ್ಮನು ತಿರೋಧಾನಶಕ್ತಿಯನ್ನವಲಂಬಿಸಿ, ಸಿದ್ಧವಿದ್ಯಾಧರರನ್ನು ಸೃಷ್ಟಿಸಿ, ಆ ಅದೃಶ್ಯಶಕ್ತಿಯೆಂಬ, ಅದ್ಭುತ ಸ್ವಭಾವವನ್ನು ಸಿದ್ಧರಿಗೂ, ವಿದ್ಯಾಧರರಿಗೂ ಕೊಟ್ಟನು. ಆಮೇಲೆ ಬ್ರಹ್ಮನು ತನ್ನ ಪ್ರತಿಬಿಂಬವನ್ನು ನೋಡುತ್ತ, ಅದರಿಂದ ಕಿನ್ನರರನ್ನೂ, ಕಿಂಪುರುಷರನ್ನೂ ಸೃಷ್ಟಿಸಿ, ಆ ಪ್ರತಿಬಿಂಬವನ್ನೂ ಅವರಿಗೇ ತ್ಯಜಿಸಿಬಿಟ್ಟನು. ಕಿನ್ನರಾದಿಗಳು ಅದನ್ನು ಗ್ರಹಿಸಿದರು. ಇದರಿಂದಲೇ ಕಿನ್ನರರೂ, ಕಿಂಪುರುಷರೂ, ಬಿಂಬಪ್ರತಿಬಿಂಬಗಳಂತೆ ಜತೆ

* ಇಲ್ಲಿ ಅಸ್ತಮಿಸುತ್ತಿದ್ದ ಸೂರ್ಯನೇ ಚೆಂಡು, ಮೇಘಗಳ ನಡುನಡುವೆ ಕಾಣುವುದೇ ಸಂಚಾರ ರೀತಿ, ನಕ್ಷತ್ರಗಳೇ ಕಣ್ಣು, ಕತ್ತಲೆಯೇ ತಲೆಕೂದಲೆಂದು, ಊಹಿಸಿಕೊಳ್ಳಬೇಕು.

ಜತೆಯಾಗಿಯೇ ಇದ್ದು, ಪ್ರತಿದಿನದ ಪ್ರಾತಃಕಾಲದಲ್ಲಿಯೂ, ಆ ಬ್ರಹ್ಮ ನನ್ನು ಗಾನಮಾಡಿ, ಸ್ತುತಿಸುವರು. ಆ ಮೇಲೆ ಬ್ರಹ್ಮನು ದೇಹವನ್ನು ಉದ್ದಕ್ಕೆ ನೀಡಿ ಮಲಗಿ, ತನ್ನ ಸೃಷ್ಟಿಯು ವೃದ್ಧಿಯಾಗದುದಕ್ಕಾಗಿ ಬಹಳ ಚಿಂತಿಸುತ್ತಿದ್ದು, ಸ್ವಲ್ಪಹೊತ್ತಿನ ಮೇಲೆ ಆ ಚಿಂತಾಸ್ವಭಾವವನ್ನು ಬಿಟ್ಟು ಉಗ್ರವಾದ ಕೋಪವನ್ನು ಹೊಂದಿದನು. ಆಗ ದೇಹದಿಂದುದುರಿದ ಕೂದಲು ಗಳೇ ಸರ್ಪಗಳಾಗಿ ಹುಟ್ಟಿದುವು. ಓ ವಿದುರಾ! ಬ್ರಹ್ಮನು ಚಿಂತೆಯಿಂದ ಕೈಕಾಲುಗಳನ್ನೊದರುವಾಗ, ಆ ವೇಗದಲ್ಲಿ ಹುಟ್ಟಿದುದರಿಂದ, ಅವು ಸರ್ಪ ಗಳೆಂದೂ, (ವೇಗವುಳ್ಳವು) ನಾಗಗಳೆಂದೂ, ಮೈನೀಡಿ ಮಲಗಿದ್ದಾಗ ಹುಟ್ಟಿ ದುದರಿಂದ ಭೋಗಿಗಳೆಂದೂ, ನೀಡಿದ ಕೊರಲುಳ್ಳವುಗಳೆಂದೂ ಕರೆಯಲ್ಪ ಡುವುವು. ಅನಂತರದಲ್ಲಿ ಬ್ರಹ್ಮನು ಈ ದೇವಸೃಷ್ಟಿಯಿಂದ ತನ್ನನ್ನೇ ಕೃತಕೃತ್ಯನನ್ನಾಗಿ ಭಾವಿಸಿ, ಮನಸ್ಸಿನಲ್ಲಿ ಒಮ್ಮೆ ನೆಮ್ಮದಿಯಿಂದಿದ್ದಾಗ, ಪ್ರಜಾಸೃಷ್ಟಿಕಾರ್ಯಕ್ಕೆ ಸಮರ್ಥರಾದ ಮನುಗಳನ್ನು ಸೃಷ್ಟಿಸಿ, ಅವರಿಗೆ ತನ್ನಂತೆ ಪುರುಷಾಕಾರವಾದ ದೇಹವನ್ನೇ ಕೊಟ್ಟನು. ಹೀಗೆ ಬ್ರಹ್ಮನಿಂದ ಪುರುಷಾಕಾರವನ್ನು ಹೊಂದಿದವರೆಲ್ಲರೂ ಆಶ್ಚರ್ಯದಿಂದ ಬ್ರಹ್ಮನ ಬಳಿಗೆ ಬಂದು "ದೇವಾ! ನೀನು ಮಾಡಿದ ಈ ಪುರುಷಾಕಾರಸೃಷ್ಟಿಯೇ ಬಹಳ ಉತ್ತಮವಾದುದು. ಸ್ವರ್ಗಮೋಕ್ಷಸಾಧನಗಳಾದ ಕರ್ಮಗಳೆಲ್ಲವೂ ಇಂತಹ ಪುರುಷಜನ್ಮದಿಂದಲೇ ಆಚರಿಸಲ್ಪಡಬೇಕಾಗಿರುವುದು. ಆದುದರಿಂದ ನಾವು ಈ ಪೌರುಷಶರೀರದಿಂದಲೇ ಸಮಸ್ತಭೋಗ್ಯವರ್ಗಗಳೆಲ್ಲವನ್ನೂ ಅನುಭವಿಸ ಬಲ್ಲೆವು" ಎಂದು ಆ ಬ್ರಹ್ಮನನ್ನು ಕೊಂಡಾಡುತ್ತಿದ್ದರು. ಆ ಮೇಲೆ ಬ್ರಹ್ಮನು ತಪಸ್ಸು, ಭಗವದುಪಾಸನಾರೂಪವಾದ ವಿದ್ಯೆ, ಜ್ಞಾನ, ಚಿತ್ತೈ ಕಾಗ್ರತೆ, ಮುಂತಾದುವುಗಳಿಂದ ಋಷಿಗಳನ್ನು ಸೃಷ್ಟಿಸಿದನು. ಅವರಲ್ಲಿ ಕೆಲಕೆಲವರಿಗೆ, ಆ ತಪಸ್ಸು, ವಿದ್ಯೆ, ಸಮಾಧಿ, ಅಣಿಮಾದಿ ಸಿದ್ಧಿಗಳು, ಇವೇ ಮೊದಲಾದ ತನ್ನ ಸ್ವಭಾವದಲ್ಲಿ ಒಂದೊಂದಂಶಗಳನ್ನು ಕೊಟ್ಟನು." ಎಂದನು. ಇಲ್ಲಿಗೆ ಇಪ್ಪತ್ತನೆಯ ಅಧ್ಯಾಯವು.

---

{ ಕರ್ದಮನ ತಪಸ್ಸು, ಭಗವಂತನು ಅವನಲ್ಲಿ ಪ್ರಸನ್ನ ನಾಗಿ ಅವನಿಗೆ ವಿವಾಹಮಾರ್ಗವನ್ನು ತೋರಿಸಿದುದು. }

ತಿರುಗಿ ವಿದುರನು ಮೈತ್ರೇಯನನ್ನು ಕುರಿತು "ಎಲೈ ಮಹಾತ್ಮನೇ! ಲೋಕದಲ್ಲಿ ಸ್ವಾಯಂಭುವಮನುವಿನ ವಂಶವು ಅತ್ಯಂತ ವಿಖ್ಯಾತವಾದುದಲ್ಲವೇ? ಆ ವಂಶದಲ್ಲಿ ಸ್ತ್ರೀಪುರುಷ ಸಂಯೋಗದಿಂದ ಪ್ರಜಾಭಿವೃದ್ಧಿಯಾದ ಕ್ರಮವೇನು? ಆ ಸ್ವಾಯಂಭುವನ ಪುತ್ರರಾದ ಪ್ರಿಯವ್ರತನೂ, ಉತ್ತಾನಪಾದನೂ, ಸಪ್ತದ್ವೀಪಗಳಿಂದ ಕೂಡಿದ ಸಮಸ್ತ ಭೂಮಿಯನ್ನೂ ಧರ್ಮದಿಂದ ಪಾಲಿಸುತ್ತಿದ್ದುದಾಗಿ ಹೇಳಿದೆಯಷ್ಟೆ? ಅವರ ಧರ್ಮಪರಿಪಾಲನ ಕ್ರಮವನ್ನು ವಿವರಿಸಬೇಕು. ಮತ್ತು ದೇವಹೂತಿಯೆಂಬ ಸ್ವಾಯಂಭುವನ ಪುತ್ರಿಯನ್ನು, ಕರ್ದಮಪ್ರಜಾಪತಿಯು ಮದುವೆಯಾದುದಾಗಿ ಹೇಳಿದೆಯಲ್ಲವೇ? ಶಮದಮಾದಿಗುಣಗಳಿಂದ ಕೂಡಿದ ಆ ದೇವಹೂತಿಯಲ್ಲಿ, ಕರ್ದಮನು ಎಷ್ಟು ಮಕ್ಕಳನ್ನು ಪಡೆದನು? ರುಚಿಯೆಂದೂ, ದಕ್ಷನೆಂದೂ ಪ್ರಸಿದ್ಧರಾದ ಬ್ರಹ್ಮನ ಪುತ್ರರು, ಕ್ರಮವಾಗಿ ಆಕೂತಿಯೆಂದೂ, ಪ್ರಸೂತಿಯೆಂದೂ ಹೆಸರುಗೊಂಡ ಪತ್ನಿಯರನ್ನು ವರಿಸಿದ ಮೇಲೆ, ಅವರು ಪ್ರಜಾವೃದ್ಧಿಯನ್ನು ಮಾಡಿದ ಕ್ರಮವೇನು? ಇವೆಲ್ಲವನ್ನೂ ನನಗೆ ತಿಳಿಸಬೇಕು" ಎಂದನು. ಆದಕ್ಕಾ ಮೈತ್ರೇಯನು ವಿದುರನನ್ನು ಕುರಿತು, "ವಿದುರಾ ಕೇಳು! ಚತುರ್ಮುಖನು ಕರ್ದಮನನ್ನು ಕರೆದು, ಅವನಿಗೆ ಪ್ರಜೆಗಳನ್ನು ಸೃಷ್ಟಿಸಬೇಕೆಂದು ಹೇಳಿದೊಡನೆ, ಆ ಕರ್ದಮನು ಸರಸ್ವತೀನದಿಯ ತೀರಕ್ಕೆ ಹೋಗಿ, ಅಲ್ಲಿ ಹತ್ತುಸಾವಿರ ವರುಷಗಳವರೆಗೆ ತಪಸ್ಸನ್ನು ಮಾಡುತ್ತಿದ್ದನು. ಹೀಗೆ ಕರ್ದಮನು ದೃಢಮನಸ್ಸಿನಿಂದ ಭಗವದುಪಾಸನಾರೂಪವಾದ ಧ್ಯಾನಯೋಗವನ್ನು ಹಿಡಿದು, ಕೃತಯುಗಾರಂಭದಲ್ಲಿ ಹತ್ತುಸಾವಿರ ವರುಷಗಳವರೆಗೆ ತಪಸ್ಸು ಮಾಡುತ್ತಿರಲು, ಪುಂಡರೀಕಾಕ್ಷನಾದ ಭಗವಂತನು ಅವನಲ್ಲಿ ಪ್ರಸನ್ನನಾಗಿ, ಪಂಚೋಪನಿಷತ್ತುಗಳಿಂದ ವೇದ್ಯವಾಗಿಯೂ, ಸೌಂದರ್ಯ ಸೌಕುಮಾರ್ಯಗಳೇ ಮೊದಲಾದ ಅನೇಕ ಕಲ್ಯಾಣಗುಣಗಳಿಗೆ ನೆಲೆಯಾಗಿಯೂ ಇರುವ ತನ್ನ ದಿವ್ಯಮಂಗಳವಿಗ್ರಹದೊಡನೆ ಅವನಿಗೆ ಪ್ರತ್ಯಕ್ಷನಾದನು. ನಿಷ್ಕಲ್ಮಷವಾಗಿಯೂ, ಕೋಟಿಸೂರ್ಯಪ್ರಕಾಶಮಾನವಾಗಿಯೂ ಇದ್ದ ಆ ಭಗವಂತನ ಮಹಾದ್ಭುತ ಸೌಂದರ್ಯವನ್ನು ಕೇಳಬೇಕೇ? ಕಂಠದಲ್ಲಿ

ತಾವರೆ ನೈದಿಲೆಗಳಿಂದ ಕೂಡಿದ ಹೂವಿನ ದಂಡೆ! ಹಣೆಯ ಮೇಲೆ ಹೊಳೆಯು ತ್ತಿರುವ ಕಪ್ಪಾದ ಮುಂಗುರುಳು! ನಡುವಿನಲ್ಲಿ ಸುವರ್ಣಕಾಂತಿಯಿಂದ ಥಳ ಥಳಿಸುವ ಪಟ್ಟೆಮಡಿ! ತಲೆಯಲ್ಲಿ ರತ್ನಕಿರೀಟದ ಹೊಳಪು! ಕಿವಿಯಲ್ಲಿ ಜಾಜ್ವಲ್ಯಮಾನವಾದ ಕುಂಡಲಗಳು! ಮೂರು ಕೈಗಳಲ್ಲಿ ಶಂಖಚಕ್ರಗದೆ ಗಳೆಂಬ ಮೂರು ದಿವ್ಯಾಯುಧಗಳು! ಮತ್ತೊಂದು ಹಸ್ತದಲ್ಲಿ ಲೀಲಾರ್ಥ ವಾಗಿ ಹಿಡಿದಿರುವ ಬಿಳೀ ನೈದಿಲೆಯ ಹೂವು! ನೋಡುವವರ ಮನಸ್ಸನ್ನು ಆಕರ್ಷಿಸುವಂತೆ ಕರುಣಾರಸವನ್ನು ತೊಟ್ಟಿಕ್ಕುತ್ತಿರುವ ಪ್ರಸನ್ನದೃಷ್ಟಿ! ಎದೆಯಲ್ಲಿ ಮಹಾಲಕ್ಷ್ಮಿ! ಕಂಠದಲ್ಲಿ ಕೌಸ್ತುಭಮಣಿ! ಇಂತಹ ದಿವ್ಯ ವೈಭವದಿಂದ ಕೂಡಿದ ಭಗವಂತನು, ಗರುಡಾರೂಢನಾಗಿ ಬಂದು ಆಕಾಶ ಮಧ್ಯದಲ್ಲಿ ನಿಂತಿರುವಂತೆ ಈ ಕರ್ದಮನ ಕಣ್ಣಿಗೆ ಗೋಚರಿಸಿದನು. ಇಂತಹ ದಿವ್ಯಾಕೃತಿಯು ಕಣ್ಣಮುಂದೆ ಗೋಚರಿಸಿದೊಡನೆ, ಕರ್ದಮನು ಆತ್ಮಾ ನಂದದಿಂದುಕ್ಕುತ್ತ, ತನ್ನ ತಲೆಯನ್ನು ನೆಲಕ್ಕೆ ಸೋಕಿಸಿ, ಸಾಷ್ಟಾಂಗ ಪ್ರಣಾಮವನ್ನು ಮಾಡಿ, ಭಕ್ತಿಯುಕ್ತನಾಗಿ ಕೈಜೋಡಿಸಿ ನಿಂತು, ಆ ಭಗ ವಂತನನ್ನು ಸ್ತುತಿಸಲಾರಂಭಿಸಿದನು. “ಓ ದೇವಾ! ಲೋಕಸ್ತುತ್ಯನಾ ಗಿಯೂ, ಶುದ್ಧಸತ್ವಮಯನಾಗಿಯೂ ಇರುವ ನಿನ್ನ ದರ್ಶನದಿಂದ ನನ್ನ ಕಣ್ಣುಗಳು ಈಗ ಸಾರ್ಥಕವಾದುವು. ಎಲ್ಲಾ ತಪಃಫಲವೂ ಈಗ ನನಗೆ ಕೈಗೂಡಿತು. ಈ ನಿನ್ನ ದರ್ಶನಕ್ಕಾಗಿಯೇ ಅಲ್ಲವೇ ಯೋಗೀಶ್ವರರೆಲ್ಲರೂ ಅನೇಕ ಜನ್ಮಗಳವರೆಗೆ ದೃಢವಾದ ಯೋಗವನ್ನು ಹಿಡಿದು, ಕೊನೆಗೆ ಎಷ್ಟೋ ಪ್ರಯತ್ನದಿಂದ ಅದನ್ನು ಸಾಧಿಸುವರು! ಹೀಗೆ ಮಹಾಯೋಗಿ ಗಳಿಗೂ ದುರ್ಲಭವಾದ ನಿನ್ನ ದರ್ಶನವು, ಇಷ್ಟು ಸುಲಭವಾಗಿ ನನಗೆ ಲಭಿಸಿದುದು, ನನ್ನ ಭಾಗ್ಯೋದಯವಲ್ಲವೇ? ದೇವಾ! ಲೋಕದಲ್ಲಿ ಅನೇಕ ಮಾನವರು ನಿನ್ನ ಮಾಯಾಪಾಶದಲ್ಲಿ ಸಿಕ್ಕಿಬಿದ್ದು, ಬುದ್ಧಿಗೆಟ್ಟು, ಸಂಸಾರಸಮುದ್ರಕ್ಕೆ ನಾವೆಯಂತಿರುವ ನಿನ್ನ ಪಾದಾರವಿಂದವನ್ನು ಅತ್ಯಲ್ಪ ಸುಖಕ್ಕಾಗಿಯೇ ಉಪಾಸನೆ ಮಾಡುವುದುಂಟು. ನೀನು ನಿನ್ನನ್ನು ಭಜಿಸಿ ದವರಿಗೆ ಸರ್ವೋತ್ತಮವಾದ ಮೋಕ್ಷವನ್ನೇ ಕೊಡುವುದಕ್ಕೆ ಸಿದ್ಧನಾಗಿದ್ದರೂ, ಅವರವರ ಇಷ್ಟಾನುಸಾರವಾಗಿ ಅವರಿಗೆ ಅತ್ಯಲ್ಪವಾದ ಸಂಸಾರಸುಖವನ್ನೇ ಕೊಟ್ಟು ತೃಪ್ತಿಪಡಿಸುವೆ! ಉತ್ತಮಪುರುಷಾರ್ಥವನ್ನು ಕೈಗೂಡಿಸಬಲ್ಲ

ನಿನ್ನನ್ನು ಭಜಿಸಿ, ಈ ಅಲ್ಪಸುಖವನ್ನು ಪಡೆಯತಕ್ಕವರು ವಿವೇಕಹೀನ ರೆಂಬುದರಲ್ಲಿ ಸಂದೇಹವೇನಿದೆ? ಹಾಗಿದ್ದರೂ ಈಗ ನಾನೂ ಕೂಡ, ಇದು ವರೆಗೆ ಉಪಾಸನೆಮಾಡಿ, ಆ ಅಲ್ಪಸುಖವನ್ನೇ ಅಪೇಕ್ಷಿಸತಕ್ಕವನಾಗಿರು ವೆನು. ಮೋಕ್ಷದಾಯಕನಾದ ನೀನು ನನ್ನಲ್ಲಿ ಪ್ರಸನ್ನನಾಗಿರುವಾಗಲೂ ಕೂಡ, ನನಗೆ ಆ ಮುಕ್ತಿಕಾಂತೆಯನ್ನು ಪಡೆಯತಕ್ಕ ಭಾಗ್ಯವಿಲ್ಲದಂತಿರು ವುದು. ಗುಣದಲ್ಲಿಯೂ, ವಯಸ್ಸಿನಲ್ಲಿಯೂ, ರೂಪದಲ್ಲಿಯೂ, ಮೇಲೆನಿಸಿ ಕೊಂಡು, ನನಗೆ ಅನುಕೂಲೆಯಾಗಿ ಗೃಹಸ್ಥಾಶ್ರಮದಲ್ಲಿ ನನಗೆ ಸೌಖ್ಯ ವನ್ನು ಹೆಚ್ಚಿಸತಕ್ಕ ಒಬ್ಬ ಸಾಮಾನ್ಯ ಸ್ತ್ರೀಯನ್ನು ಅನುಗ್ರಹಿಸಿಕೊಡ ಬೇಕೆಂದು ನಿನ್ನಲ್ಲಿ ಪ್ರಾರ್ಥಿಸಬೇಕಾಗಿರುವುದು. ಆಹಾ! ಈ ನನ್ನ ದುರ್ಬುದ್ಧಿಗೆ ನಾನೇ ಲಜ್ಜೆಪಡಬೇಕಲ್ಲವೆ? ಕಲ್ಪವೃಕ್ಷದಂತೆ ಸರ್ವಫಲ ಪ್ರದನಾದ ನೀನು ನನ್ನ ಕಣ್ಣಮುಂದೆ ಬಂದು ನಿಂತಿರುವಾಗಲೂ, ಅತ್ಯಲ್ಪ ವಾದ ಸಂಸಾರಸುಖವನ್ನಪೇಕ್ಷಿಸಿ, ಕಾಮುಕಸ್ವಭಾವವನ್ನು ನಿನ್ನಲ್ಲಿ ತೋರಿಸಬೇಕಾಯಿತು! ಓ ಪ್ರಭೂ! ಈ ವಿಷಯದಲ್ಲಿ ನಾನು ಯುಕ್ತಾ ಯುಕ್ತವನ್ನು ಬಲ್ಲವನಾಗಿದ್ದರೂ ಕೂಡ, ಈ ಅಲ್ಪಸುಖವನ್ನಪೇಕ್ಷಿಸುವುದೇ ಕೆಂಬುದು ನಿನಗೆ ತಿಳಿಯದ ವಿಷಯವಲ್ಲ! ನಾನು ಯಾವ ಕಾರ್ಯವನ್ನು ನಡೆಸಬೇಕಾದರೂ ನಿನ್ನ ಆಜ್ಞಾಧೀನನಾಗಿ ನಡೆಯಬೇಕೇ ಹೊರತು, ಯಾವ ವಿಷಯದಲ್ಲಿಯೂ ಸ್ವತಂತ್ರನಲ್ಲ. ಓ ಸರ್ವೇಶ್ವರಾ! ಈ ಸಾಂಸಾ ರಿಕ ಸ್ವಭಾವವನ್ನು ಅನುಸರಿಸುವುದಕ್ಕೆ ನನಗೆ ಸ್ವಲ್ಪಮಾತ್ರವೂ ಸಮ್ಮತ ವಿಲ್ಲ! ಹಾಗಿದ್ದರೂ, ನನ್ನ ತಂದೆಯಾದ ಬ್ರಹ್ಮದೇವನ ಆಜ್ಞೆಯನ್ನು ಮೀರಲಾರೆನು. ದೇವಾ! ಸಮಸ್ತಲೋಕವೂ ನಿನ್ನಿಂದ ಉಪದೇಶಿಸಲ್ಪಟ್ಟ ವೇದವಾಕ್ಯಗಳೆಂಬ ಹಗ್ಗದಲ್ಲಿ ಹಸುವಿನಂತೆ ಕಟ್ಟುಬಿದ್ದು ನಡೆಯುತ್ತಿರು ವುದು. ಹಾಗೆಯೇ ನಾನೂ ಕಾಮಕ್ಕೆ ಕಟ್ಟುಬಿದ್ದು, ಈ ಸಾಂಸಾರಿಕ ಲೋಕವನ್ನೇ ಅನುವರ್ತಿಸಿ ನಡೆಯಬೇಕೆಂದು, ಚತುರ್ಮುಖರೂಪದಿಂದ ನನಗೆ ತಂದೆಯಾಗಿದ್ದ ನಿನ್ನಿಂದಲೇ ಆಜ್ಞಾಪಿಸಲ್ಪಟ್ಟಿರುವೆನು. ಆದುದ ರಿಂದ ಆ ಗೃಹಸ್ಥಧರ್ಮಗಳಿಂದಲೇ ನಾನು ನಿನ್ನನ್ನು ಆರಾಧಿಸಬೇಕಾಗಿರು ವುದು. ಎಲೈ ದೇವದೇವನೇ! ಲೋಕದಲ್ಲಿ ಯಾವ ಮಹಾತ್ಮರು, ಈ ಸಾಂಸಾರಿಕ ಲೋಕಗಳನ್ನೂ, ಅದಕ್ಕೆ ಸೇರಿದ ವ್ಯಾಪಾರಗಳನ್ನೂ ಪಶು

ಪ್ರಾಯವಾದ ಇತರ ಪರಿವಾರವನ್ನೂ ಬಿಟ್ಟು, ನಿನ್ನ ಕಥಾಮೃತವನ್ನು ಆಗಾಗ ಪಾನಮಾಡುತ್ತ, ಹುಟ್ಟು, ಮುಪ್ಪು, ಸಾವು ಎಂಬಿವೇ ಮುಂತಾದ ಶರೀರಧರ್ಮಗಳನ್ನು ನಿರಾಕರಿಸಿದವರಾಗಿ, ಸಂಸಾರತಾರಕವಾದ ನಿನ್ನ ಪಾದಾರವಿಂದವನ್ನಾಶ್ರಯಿಸುವರೋ, ಅಂತವರ ಆಯುಸ್ಸು ಮಾತ್ರವೇ ಸಾರ್ಥಕವೆನಿಸುವುದು. ಹಸಿವು, ಬಾಯಾರಿಕೆ, ಮುಪ್ಪು, ಮುಂತಾದ ಕಷ್ಟ ಗಳೊಂದೂ ಅವರನ್ನು ಬಾಧಿಸಲಾರವು. ಓ ದೇವಾ! ಕಾಲವೆಂಬ ಚಕ್ರವು ನಿನ್ನ ಕೈಯಲ್ಲಿ ಅಡಗಿರುವುದು. (ಅಧಿಕಮಾಸದೊಡಗೂಡಿ) ಹದಿಮೂರು ತಿಂಗಳುಗಳೆಂಬ ಅಡ್ಡಗಳಿಂದಲೂ, ದಿನಗಳೆಂಬ ಮುನ್ನೂರರವತ್ತು ಗಿಣ್ಣು (ತುಂಡು) ಗಳಿಂದಲೂ, ಋತುಗಳೆಂಬ ಆರೆಳೆಯ ಪಟ್ಟಿಗಳಿಂದಲೂ, ಕ್ಷಣ ಮುಹೂರ್ತಾದಿಗಳೆಂಬ ಅನೇಕಾನೇಕ ದಳಗಳಿಂದಲೂ, ಚಾತುರ್ಮಾಸ್ಯ ಗಳೆಂಬ ಮೂರು ನಾಭಿ (ಮಧ್ಯರಂಧ್ರ ಅಥವಾ ತಿರುಗುಳಿ) ಗಳಿಂದಲೂ ಏರ್ಪಟ್ಟು ತೀವ್ರವೇಗವುಳ್ಳ ಕಾಲಚಕ್ರವೆಂಬುದು ನಿನ್ನಿಂದಲೇ ತಿರುಗಿಸಲ್ಪ ಡುತ್ತ, ಸಂಸಾರಿಗಳ ಆಯುಸ್ಸನ್ನು ಕ್ಷಣಕ್ಷಣಕ್ಕೂ ಎಳೆದುಕೊಂಡು ಹೋಗು ತ್ತಿದ್ದರೂ, ಅದರಿಂದುಂಟಾಗತಕ್ಕ ಆಯುಃಕ್ಷಯವು ನಿನ್ನ ಗುಣಾನುಭವ ವನ್ನು ಮಾಡತಕ್ಕವರ ವಿಷಯದಲ್ಲಿ ಮಾತ್ರ ಸಂಭವಿಸಲಾರದು. ಅಂತಹ ಕಾಲಚಕ್ರವೇ ನಿನ್ನ ಕೈಯಲ್ಲಿ ಸೇರಿರುವುದರಿಂದ, ಜೀವಗಳ ಆಯುಸ್ಸನ್ನು ತಗ್ಗಿಸುವುದಕ್ಕಾಗಲೀ ನೀನಲ್ಲದೆ ಬೇರೊಬ್ಬರು ಸಮರ್ಥರಲ್ಲ. ಈಗ ನಾನೂ ನಿನ್ನಾಜ್ಞೆಯನ್ನು ಮೀರಲಾರದುದಕ್ಕಾಗಿ ಸಂಸಾರವನ್ನವಲಂಬಿಸುವೆನೇ ಹೊರತು ಕಾಮಸುಖಾಪೇಕ್ಷೆಯಿಂದಲ್ಲ. ಈ ಕಾರಣದಿಂದ ನೀನು ನನ್ನಲ್ಲಿ ದಯೆಯಿಟ್ಟು, ನನ್ನ ಆಯುಃಪ್ರಮಾಣವು ವ್ಯರ್ಥವಾಗಿ ಕಳೆದುಹೋಗದಂತೆ ಅನುಗ್ರಹಿಸಬೇಕು. ನಿನ್ನನ್ನು ನಾನು ಮರೆಹೊಕ್ಕಿರುವೆನು. ಆದರೆ ಬ್ರಹ್ಮ ರುದ್ರಾದಿ ದೇವತೆಗಳೆಲ್ಲರೂ ಇರುವಾಗ, ಅವರೆಲ್ಲರನ್ನೂ ಬಿಟ್ಟು ನಿನ್ನನ್ನು ಮಾತ್ರ ಭಜಿಸುವುದೇಕೆಂದು ಕೇಳುವೆಯಾ? ದೇವಾ! ಸೃಷ್ಟಿಗೆ ಮೊದಲು ನೀನೊಬ್ಬನೇ ನಾಮರೂಪ ವಿಭಾಗಗಳೊಂದೂ ಇಲ್ಲದ, ಸೂಕ್ಷ್ಮದಶೆಯಲ್ಲಿದ್ದ ಚಿದಚಿತ್ತುಗಳನ್ನೂ, ಕಾಲವನ್ನೂ ಶರೀರವಾಗಿ ಹೊಂದಿದ್ದವನು! ಆ ಮೇಲೆ ನೀನೇ ನಾಮರೂಪ ವಿಭಾಗಗಳಿಂದ ಸ್ಥೂಲಾವಸ್ಥೆಯುಳ್ಳ ಪ್ರಪಂಚವನ್ನು ಸೃಷ್ಟಿಸಬೇಕೆಂದೆಣಿಸಿ, ನಿನಗೆ ಶರೀರವಾಗಿದ್ದ ಪ್ರಕೃತಿಯನ್ನು ಮುಂದಿಟ್ಟು

ಕೊಂಡು ಅದರಿಂದ ಪ್ರಪಂಚವನ್ನು ಸೃಷ್ಟಿಸಿದವನು! ತನ್ನ ಶರೀರದಿಂದ ನೂಲನ್ನೆಳೆದು, ಆ ನೂಲಿನ ಬಲೆಯಲ್ಲಿ ತಾನೂ ಅಡಗಿದ್ದು, ಸಮಯವು ಬಂದಾಗ ಆ ನೂಲನ್ನು ತನ್ನಲ್ಲಿಯೇ ಅಡಗಿಸಿಕೊಳ್ಳತಕ್ಕ ಜೇಡರ ಹುಳ ದಂತೆ, ನೀನೂ ಕೂಡ, ನಿನ್ನ ಅದ್ಭುತ ಶಕ್ತಿಯಿಂದ, ನಿನಗೆ ಶರೀರಭೂತ ಗಳಾದ ಚಿದಚಿತ್ತುಗಳನ್ನೇ ಪ್ರಪಂಚರೂಪವಾಗಿ ಹರಡಿ, ಅದರೊಳಗೆ ನೀನೂ ಸೇರಿ, ಅದನ್ನು ಪಾಲಿಸುತ್ತಿದ್ದು, ಕೊನೆಗೆ ಅದನ್ನು ನಿನ್ನಲ್ಲಿಯೇ ಉಪಸಂಹಾರಮಾಡಿಕೊಳ್ಳುವೆ. ಆದುದರಿಂದ ನೀನೇ ಜಗತ್ಕಾರಣನು! ನಿನ್ನನ್ನು ಬಿಟ್ಟ ವಸ್ತುವು ಬೇರೊಂದಿಲ್ಲ! ಜಗತ್ಕಾರಣವಸ್ತುವೇ ಧ್ಯಾನ ಯೋಗ್ಯವೆಂದು ನಾನು ಹಿರಿಯರಿಂದ ಕೇಳಿರುವೆನು. ಆದುದರಿಂದ, ಲೋಕ ಕಾರಣನಾದ ನಿನ್ನ ಪಾದವನ್ನೇ ನಾನು ಮರೆಹೊಕ್ಕಿರುವೆನು. ಓ ದೇವಾ! ನೀನು ನಿನ್ನ ಸಂಕಲ್ಪದಿಂದ ಅಹಂಕಾರವನ್ನು ಮೊದಲು ಸೃಷ್ಟಿಸಿದೆ! ಅದರಿಂದ ಶಬ್ದಾದಿ ಪಂಚತನ್ಮಾತ್ರಗಳನ್ನೂ ಅವುಗಳಿಂದ ಪಂಚಭೂತಗ ಳನ್ನೂ ಸೃಷ್ಟಿಸಿದೆ! ಭೂತಸೃಷ್ಟಿಗೆ ಅಹಂಕಾರವೇ ಪ್ರಥಮಕಾರಣವಾದುದ ರಿಂದ ನಮ್ಮಂತಹ ಜೀವಗಳೆಲ್ಲರೂ ಆದಕ್ಕೆ ವಶ್ಯರಾಗಿ, ನಿನ್ನ ಸ್ಥಾನವನ್ನು ಕೋರದೆ, ಇಂತಹ ತುಚ್ಛವಾದ ಸಂಸಾರಸುಖವನ್ನೇ ಆಶಿಸಬೇಕಾಗಿದೆ. ಆದರೇನು? ತುಲಸೀಮಾಲಿಕೆಯಿಂದ ಶೋಭಿತವಾದ ನಿನ್ನ ದಿವ್ಯಮಂಗಳ ವಿಗ್ರಹವನ್ನು ನೋಡಿದಾಗಲೇ, ನಾನು ನಿನ್ನ ಪೂರ್ಣಾನುಗ್ರಹಕ್ಕೆ ಪಾತ್ರ ನಾದಂತಾಯಿತು. ನಾನಾಗಿ ಅಜ್ಞಾನಸಂಬಂಧದಿಂದ ನಿನ್ನ ಸಾನ್ನಿಧ್ಯ ವನ್ನಪೇಕ್ಷಿಸದಿದ್ದರೂ, ನಿನ್ನಲ್ಲಿ ನನಗಿರುವ ಈ ಅಸಾಧಾರಣ ವಾತ್ಸಲ್ಯ ವನ್ನು ನೋಡಿದರೆ, ನನ್ನನ್ನು ನೀನು ನಿನ್ನ ಸಾನ್ನಿಧ್ಯಕ್ಕೆ ಸೇರಿಸಿಕೊಳ್ಳದೆ ಬಿಡಲಾರೆಯೆಂದೇ ನಂಬಿರುವೆನು. ಓ ಪರಮಪುರುಷಾ! ನಮ್ಮಂತವರನ್ನು ಅನುಗ್ರಹಿಸುವುದಕ್ಕಾಗಿಯೇ ನೀನು ದೀಕ್ಷೆಯನ್ನು ವಹಿಸಿದವನು! ಆನಂದ ಮಯನೆನಿಸಿ ಪೂರ್ಣಕಾಮನಾಗಿದ್ದರೂ, ಸ್ವೇಚ್ಛೆಯಿಂದ ಜಗದ್ವ್ಯಾಪಾರ ವನ್ನು ನಡೆಸತಕ್ಕವನು. ನಿನ್ನನ್ನು ಸ್ವಲ್ಪವಾಗಿ ಆರಾಧಿಸಿದರೂ, ಅವರ ಕೋರಿಕೆಗಳೆಲ್ಲವನ್ನೂ ಈಡೇರಿಸತಕ್ಕವನು. ಸರ್ವಲೋಕಕ್ಕೂ ವಂದನಾರ್ಹ ವಾದ ಪಾದಾರವಿಂದಗಳುಳ್ಳವನು. ಇಂತಹ ನಿನ್ನನ್ನು ಬಾರಿಬಾರಿಗೂ ವಂದಿಸುವೆನು" ಎಂದು ಬದ್ಧಾಂಜಲಿಯಾಗಿ ಸ್ತುತಿಸುತ್ತಿದ್ದನು. ವಿದುರಾ!

ಹೀಗೆ ನಿಷ್ಕಲ್ಮಷವಾಗಿ ಪ್ರಾರ್ಥಿಸುತ್ತಿರುವ ಕರ್ದಮನನ್ನು, ಗರುಡಾರೂಢ ನಾಗಿ ನಿಂತಿದ್ದ ನಾರಾಯಣಮೂರ್ತಿಯು, ಪ್ರೇಮಪೂರ್ವಕವಾದ ಮಂದ ಹಾಸದೊಡನೆ ಪ್ರಸನ್ನದೃಷ್ಟಿಯಿಂದ ನೋಡುತ್ತ, ಅಮೃತದಂತೆ ಮಧುರ ವಾಕ್ಯದಿಂದ ಹೀಗೆಂದು ನಿಯಮಿಸುವನು. "ಓ ಕರ್ದಮಾ! ಶಮದಮಾದಿ ಗುಣಗಳಿಂದ ಕೂಡದ ನೀನು ಭಾರ್ಯೆಯನ್ನಪೇಕ್ಷಿಸಿ, ನನ್ನನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದೆ! ನಿನ್ನ ತಪಸ್ಸಿಗಾಗಿ ನಾನು ಮೆಚ್ಚಿದೆನು. ನಿನ್ನ ಉದ್ದೇಶವನ್ನೂ ನಾನು ಕಂಡುಕೊಂಡೆನು. ನಿನ್ನ ಕೋರಿಕೆಯನ್ನೀ ಡೇರಿಸುವುದಕ್ಕಾಗಿ ಅದಕ್ಕೆ ಮೊದಲೇ ನಾನು ತಕ್ಕ ಉಪಾಯವನ್ನು ಮಾಡಿರುವೆನು. ಓ ಮಹಾತ್ಮಾ! ಸಾಧಾರಣವಾಗಿ ಲೋಕದಲ್ಲಿ ನನ್ನನ್ನು ಕುರಿತು ಮಾಡಿದ ಆರಾಧನವು ಎಂದಿಗೂ ವ್ಯರ್ಥವಾಗಿ ಹೋಗಲಾರದು. ಆದರಲ್ಲಿಯೂ ಮುಖ್ಯವಾಗಿ, ಜಿತೇಂದ್ರಿಯರಾದ ನಿಮ್ಮಂತವರು ನಡೆಸಿದ ಇಂತಹ ತಪಸ್ಸು ವ್ಯರ್ಥವಾಗುವುದೆಂದರೇನು? ಮುಂದೆ ನಡೆಯಬೇಕಾದ ಕಾರ್ಯವನ್ನು ತಿಳಿಸುವೆನು ಕೇಳು! ಬ್ರಹ್ಮಪುತ್ರನಾದ ಸ್ವಾಯಂಭುವನೆಂಬ ಚಕ್ರವರ್ತಿಯೊಬ್ಬನಿರುವನು. ಆತನ ಶುಭಚರಿತ್ರಗಳು ಲೋಕಪ್ರಸಿದ್ಧ ವಾದುವುಗಳು. ಅವನು ಬ್ರಹ್ಮಾವರ್ತದಲ್ಲಿ ವಾಸಮಾಡುತ್ತ, ಸಪ್ತಸಮುದ್ರ ಗಳ ಮಧ್ಯದಲ್ಲಿರುವ ಸಮಸ್ತ ಭೂಮಂಡಲವನ್ನೂ ಪರಿಪಾಲಿಸುತ್ತಿರುವನು. ಆತನಿಗೆ ಶತರೂಪೆಯೆಂಬ ಭಾರ್ಯೆಯೊಬ್ಬಳುಂಟು. ಆ ದಂಪತಿಗಳಿಗೆ ದೇವ ಹೂತಿಯೆಂಬ ಕನ್ಯಾರತ್ನವೊಂದಿರುವುದು. ಆ ಕನ್ಯೆಯು ಲೋಕೋತ್ತರ ವಾದ ಸೌಂದರ್ಯವುಳ್ಳವಳು. ಅವಳಿಗೆ ವಿವಾಹಕಾಲವೂ ಸಮೀಪಿಸಿರು ವುದು. ಆಕೆಯ ತಂದೆಯಾದ ಸ್ವಾಯಂಭುವಮನುವು, ಅವಳನ್ನು ತಕ್ಕ ವರನಿಗೆ ಕೊಡಬೇಕೆಂದು ಆಲೋಚಿಸುತ್ತಿರುವನು. ಇಷ್ಟರಲ್ಲಿ ಅವನು ನಿನ್ನ ಗುಣಗಳನ್ನೂ, ನಿನ್ನ ಪ್ರಭಾವವನ್ನೂ ಕೇಳಿ, ನಿನಗೆ ತನ್ನ ಕುಮಾರಿಯನ್ನು ಕೊಡಬೇಕೆಂಬ ಉದ್ದೇಶದಿಂದ, ನಾಳೆ ತನ್ನ ಪತ್ನೀ ಸಮೇತನಾಗಿ ಆ ಕುಮಾರಿಯನ್ನೂ ಕರೆದುಕೊಂಡು ನಿನ್ನ ಆಶ್ರಮಕ್ಕೆ ಬರುವನು. ಆ ಕನ್ಯೆಯನ್ನು ನಿನಗೆ ಕೊಟ್ಟು ವಿವಾಹಮಾಡುವುದರಲ್ಲಿ ಸ್ವಲ್ಪಮಾತ್ರವೂ ಸಂದೇಹವಿಲ್ಲ. ಓ ಕರ್ದಮಾ! ನೀನು ಇದುವರೆಗೆ ಯಾವ ಉದ್ದೇಶದಿಂದ ಕಳವಳಿಸುತ್ತಿದ್ದೆಯೋ, ಅಂತಹ ಕನ್ಯಾಲಾಭವು

ನಿನಗೆ ಕೂಡಲೇ ಕೈಸೇರುವುದು. ಅವಳು ನಿನ್ನೊಡನೆ ಯಥೇಚ್ಛವಾಗಿ ಕಾಮವನ್ನನುಭವಿಸುತ್ತ, ಅನೇಕ ವರುಷಗಳನ್ನು ಕ್ಷಣಮಾತ್ರದಂತೆ ಕಳೆಯುವಳು. ಆಕೆಯಲ್ಲಿ ನಿನಗೆ ಒಂಭತ್ತುಮಂದಿ ಕುಮಾರಿಯರು ಹುಟ್ಟು ವರು. ಆ ನಿನ್ನ ಕನ್ನೆಯರೆಲ್ಲರೂ, ಮರೀಚಿ ಮೊದಲಾದ ಮಹರ್ಷಿ ಗಳನ್ನು ಪರಿಗ್ರಹಿಸಿ, ಅನೇಕ ಪುತ್ರರನ್ನು ಪಡೆದು, ಸಂತಾನವನ್ನು ವೃದ್ಧಿ ಗೊಳಿಸುವರು. ಓ ಮುನೀಂದ್ರಾ! ಇನ್ನು ನೀನು ಈ ನನ್ನಾಜ್ಞೆಯನ್ನನು ಸರಿಸಿ ನಡೆಸತಕ್ಕ ಒಂದೊಂದು ಕಾರ್ಯಗಳನ್ನೂ ನನ್ನಲ್ಲಿಯೇ ಅರ್ಪಿತವ ನ್ನಾಗಿ ಮಾಡಿ, ಭಕ್ತಿನಿರತನಾಗಿದ್ದ ಪಕ್ಷದಲ್ಲಿ, ನೀನು ನನ್ನ ಸಾನ್ನಿಧ್ಯ ವನ್ನು ಸೇರುವುದರಲ್ಲಿ ಸಂದೇಹವಿಲ್ಲ. ಮತ್ತು ನೀನು ಜಿತೇಂದ್ರಿಯನಾಗಿ, ಸಮಸ್ತ ಪ್ರಾಣಿಗಳಲ್ಲಿಯೂ ದಯೆಯನ್ನೇ ತೋರಿಸುತ್ತಿರು! ಮರೆಹೊಕ್ಕವ ರಿಗೆ ಅಭಯಪ್ರದಾನವನ್ನು ಮಾಡುತ್ತ ಆತ್ಮಜ್ಞಾನಪರನಾಗಿರು! ಆಗ ನಿನಗೆ ಚರಾಚರಾತ್ಮಕವಾದ ಈ ಸಮಸ್ತ ಪ್ರಪಂಚವೂ ನನ್ನಲ್ಲಿಯೇ ಅಡ ಗಿರುವುದೆಂದೂ, ಸಮಸ್ತ ಜಗತ್ತಿನಲ್ಲಿಯೂ ನಾನೇ ಅಂತರಾತ್ಮನಾಗಿ, ಅವು ಗಳಿಗೆ ನಿಯಾಮಕನಾಗಿಯೂ, ಧಾರಕನಾಗಿಯೂ ಇರುವೆನೆಂದೂ ಆ ನನ್ನ ಸ್ವರೂಪವು ಸ್ಪಷ್ಟವಾಗಿ ತಿಳಿಯುವುದು. ಕರ್ದಮಾ! ಕೆಲವು ಕಾಲದ ಮೇಲೆ ನಾನೂ ಕೂಡ ನನ್ನ ಅಂಶದಿಂದ ನಿನ್ನ ಪತ್ನಿಯಾದ ದೇವಹೂತಿ ಯಲ್ಲಿ ನಿನಗೆ ಪುತ್ರನಾಗಿ ಹುಟ್ಟಿ, ಅವಳಿಗೆ, ಪ್ರಕೃತಿ, ಪುರುಷ, ಈಶ್ವರರೆಂಬ ಮೂರು ತತ್ವಗಳ ವಿಭಾಗವನ್ನು ತಿಳಿಸತಕ್ಕ ತತ್ವಸಂಹಿತೆಯನ್ನುಪದೇಶಿಸು ವೆನು" ಎಂದನು. ಭಗವಂತನು ಹೀಗೆ ಕರ್ದಮನಿಗೆ ವರಪ್ರದಾನವನ್ನು ಮಾಡಿ, ಆ ಆಶ್ರಮವನ್ನು ಬಿಟ್ಟು, ಅನೇಕ ಯೋಗೀಶ್ವರರಿಂದಲೂ, ದೇವತೆ ಗಳಿಂದಲೂ ಸ್ತೋತ್ರಮಾಡಲ್ಪಡುತ್ತ, ಗರುಡಾರೂಢನಾಗಿ, ತನ್ನ ಲೋಕಕ್ಕೆ ತೆರಳಿದನು. ಇತ್ತಲಾಗಿ ಕರ್ದಮನು, ಭಗವಂತನು ಹೇಳಿದ್ದ ಕಾಲವನ್ನು ನಿರೀಕ್ಷಿಸುತ್ತಿರುವಲ್ಲಿ, ಸ್ವಾಯಂಭುವಮನುವು, ಸುವರ್ಣಾಲಂಕೃತವಾದ ರಥದಲ್ಲಿ, ತನ್ನ ಪತ್ನಿಯನ್ನೂ, ಕನ್ಯೆಯನ್ನೂ ಕುಳ್ಳಿರಿಸಿಕೊಂಡು ಭೂಮಿ ಯೆಲ್ಲವನ್ನೂ ಸುತ್ತಿಸುತ್ತಿ, ಕೊನೆಗೆ ಭಗವಂತನು ಸೂಚಿಸಿದ್ದ ಕಾಲಕ್ಕೆ ಸರಿಯಾಗಿ, ಈ ಕರ್ದಮಾಶ್ರಮಕ್ಕೆ ಬಂದು ಸೇರಿದರು. ವಿದುರಾ! ಆ ಕರ್ದಮಾಶ್ರಮದ ಮಹಿಮೆಯನ್ನು ಕೇಳಬೇಕೇ? ಹಿಂದೊಮ್ಮೆ ಭಗವಂತನು

ಕರ್ದಮಪ್ರಜಾಪತಿಯ ಭಕ್ತಿವಿಶೇಷವನ್ನು ನೋಡಿ, ದಯಾತಿಶಯದಿಂದ ಆನಂದಬಾಷ್ಪವನ್ನು ಬಿಟ್ಟಾಗ, ಒಂದು ಬಾಷ್ಪಬಿಂದುವು ಅಲ್ಲಿದ್ದ ಸರೋವರದಲ್ಲಿ ಬಿದ್ದುದರಿಂದಲೇ ಅದಕ್ಕೆ ಬಿಂದುಸರೋವರವೆಂದು ಹೆಸರುಂಟಾಯಿತು. ಆ ಬಿಂದುಸರೋವರವು, ಸುತ್ತಲೂ ಸರಸ್ವತೀನದಿಯಿಂದ ಆವೃತವಾಗಿ, ದರ್ಶನಮಾತ್ರದಿಂದಲೇ ಸಮಸ್ತಪಾಪಗಳನ್ನೂ ನೀಗಿಸುವುದು. ಅಮೃತದಂತೆ ಮಧುರವಾದ ಅದರ ಜಲವನ್ನು ಪಾನಮಾಡಿದರೆ ಸಮಸ್ತರೋಗಗಳೂ ನಿವೃತ್ತವಾಗುವುವು. ಪ್ರತಿದಿನವೂ ಅನೇಕ ಮಹರ್ಷಿಗಳು ಅಲ್ಲಿಗೆ ಬಂದು ಆ ಪುಣ್ಯಜಲದಲ್ಲಿ ತಮ್ಮ ನಿತ್ಯಕರ್ಮಗಳನ್ನು ನಡೆಸುತ್ತಿರುವರು. ಇಂತಹ ಸರೋವರನ್ನೊಳಕೊಂಡ ಆ ಪುಣ್ಯಾಶ್ರಮವು, ಸುತ್ತಲೂ ಪರಮಪಾವನಗಳಾದ ಗಿಡಬಳ್ಳಿಗಳಿಂದ ಶೋಭಿತವಾಗಿರುವುದು. ಅಲ್ಲಿನ ಮೃಗಪಕ್ಷಿಗಳೆಲ್ಲವೂ ಪರಮಪಾವನಗಳೆನಿಸಿಕೊಂಡಿರುವುವು. ಋತುಧರ್ಮವನ್ನನುಸರಿಸಿ ಬೇರೆಬೇರೆ ಕಾಲಗಳಲ್ಲಿ ಬಿಡತಕ್ಕ ಫಲಪುಷ್ಪಗಳೆಲ್ಲವೂ, ಅಲ್ಲಿ ಸರ್ವಕಾಲದಲ್ಲಿಯೂ ಕಂಗೊಳಿಸುತ್ತಿರುವುವು. ವನಲಕ್ಷ್ಮಿಗೆ ನಿತ್ಯನಿವಾಸವೆನಿಸಿದ ಆ ವನದ ಒಂದು ಕಡೆಯಲ್ಲಿ ಪಕ್ಷಿಗಳ ಮಧುರಧ್ವನಿ! ಮತ್ತೊಂದು ಕಡೆಯಲ್ಲಿ ಭ್ರಮರ ಝೇಂಕಾರಗಳು! ಇನ್ನೊಂದು ಕಡೆಯಲ್ಲಿ ಮದಿಸಿದ ನವಿಲುಗಳ ನರ್ತನಗಳು! ಬೇರೊಂದು ಕಡೆಯಲ್ಲಿ ಒಂದನ್ನೊಂದು ಕೂಗಿ ಕರೆಯುತ್ತಿರುವ ಕೋಗಿಲೆಗಳ ಮಧುರಧ್ವನಿ! ಹೀಗೆ ಆ ಆಶ್ರಮೋದ್ಯಾನವು ಸರ್ವಸೌಭಾಗ್ಯ ವಿಶಿಷ್ಟವಾಗಿರುವುದು. ಮತ್ತು ಕಡವು, ಪಗಡೆ, ಅಸುಗೆ, ಬಂಧುಗೆ, ವೊಲ್ಲೆ, ಮಲ್ಲಿಗೆ, ಪಾರಿಜಾತ, ಗಿರಿಮಲ್ಲಿಕೆ, ಮಾವು, ಮುಂತಾದ ಫಲವೃಕ್ಷಗಳೆಲ್ಲವೂ ದಟ್ಟವಾಗಿ ತುಂಬಿರುವುವು. ಅಲ್ಲಿನ ಸರೋವರಗಳಲ್ಲಿ, ಹಂಸಗಳು, ಕಾರಂಡವಗಳು, ನೀರು ಕೋಳಿಗಳು, ಸಾರಸಗಳು, ಚಕ್ರವಾಕಗಳು ಇವೇ ಮೊದಲಾದ ಬಗೆಬಗೆಯ ಜಲಪಕ್ಷಿಗಳೆಲ್ಲವೂ ಕಿವಿಗಿಂಪಾಗಿ ಕೂಗುತ್ತಿರುವುವು. ಅದರ ಸುತ್ತಲಿನ ತೋಪುಗಳಲ್ಲಿ, ಜಿಂಕೆ, ಹಂದಿ, ಮುಳ್ಳುಹಂದಿ, ಕಡವೆ, ಆನೆ, ಸಿಂಗಳೀಕ, ಸಿಂಹ, ಕಪಿ, ಮುಂಗುಸಿ, ಕಸ್ತೂರೀಮೃಗಗಳು, ಮುಂತಾದ ಸಮಸ್ತಜಾತಿಯ ಮೃಗಗಳೂ, ಇತರರಿಗೆ ಬಾಧೆಯಿಲ್ಲದೆ ತಮಗೆ ತಾವು ಸ್ವೇಚ್ಛೆಯಿಂದ ವಿಹರಿಸುತ್ತಿರುವುವು. ಆದಿರಾಜನೆನಿಸಿದ ಸ್ವಾಯಂಭುವಮನುವು ಹೀಗೆ ಸರ್ವಶೋಭಾಸ್ಪದವಾಗಿದ್ದ

ಕರ್ದಮಾಶ್ರಮವನ್ನು ಪ್ರವೇಶಿಸಿ, ಅಲ್ಲಿ ಹೋಮಕಾರ್ಯವನ್ನು ಮುಗಿಸಿಕೊಂಡು ಸುಖಾಸೀನನಾಗಿದ್ದ ಕರ್ದಮಮಹರ್ಷಿಯನ್ನು ಕಂಡನು. ಆ ಮಹರ್ಷಿಯಾದರೋ ಭಗವಂತನ ಕೃಪಾಕಟಾಕ್ಷಕ್ಕೆ ಸಂಪೂರ್ಣಪಾತ್ರನಾದುದರಿಂದ, ಬಹುಕಾಲದ ತಪಸ್ಸಿನಲ್ಲಿ ಕ್ಲೇಶಪಟ್ಟಿದ್ದರೂ, ಅವನ ದೇಹದಲ್ಲಿ ಅಷ್ಟಾಗಿ ಕಂದುಕುಂದುಗಳೇನೂ ಕಾಣುತ್ತಿರಲಿಲ್ಲ. ಮತ್ತು ಇದಕ್ಕೆ ಮೊದಲು ಭಗವಂತನು ಆತನಿಗೆ ಪ್ರತ್ಯಕ್ಷನಾಗಿ ಬಂದು, ಅವನೊಡನೆ ಸಂಭಾಷಣಮಾಡಿದಾಗ, ಆ ಭಗವಂತನ ವಾಕ್ಯಾಮೃತಸೇಚನದಿಂದ ಆತನ ದೇಹದಲ್ಲಿ ಅಪೂರ್ವವಾದ ಒಂದು ಶೋಭಾವಿಶೇಷವೂ ಕಾಣುತ್ತಿತ್ತು. ಮತ್ತು ಉನ್ನತ ಆಕೃತಿ! ಕಮಲದಳದಂತೆ ಕಣ್ಣುಗಳು! ಹೀಗೆ ಸರ್ವೋತ್ತಮ ಮಹಾಪುರುಷ ಲಕ್ಷಣಗಳಿಂದ ಕೂಡಿದ್ದರೂ ಆ ಮಹರ್ಷಿಯು, ತಲೆಯಲ್ಲಿ ಜಡೆ, ನಡುವಿನಲ್ಲಿ ನಾರುಮಡಿ, ಇವುಗಳನ್ನು ಧರಿಸಿ ಸಾಣೆಯಿಕ್ಕದ ಮಹಾರತ್ನದಂತೆ ದೇಹಸಂಸ್ಕಾರವಿಲ್ಲದಿದ್ದನು. ಇಂತಹ ಕರ್ದಮನನ್ನು ನೋಡಿ ಸ್ವಾಯಂಭುವಮನುವು, ಆತನ ಸಮೀಪಕ್ಕೆ ಹೋಗಿ ನಮಸ್ಕರಿಸಿದನು. ಆಗ ಕರ್ದಮನು, ತನ್ನ ಪರ್ಣಶಾಲೆಗೆ ಅತಿಥಿಯಾಗಿ ಬಂದ ಆ ಮನುಚಕ್ರವರ್ತಿಯನ್ನು ಮನ್ನಿಸಿ, ಉಚಿತವಾಕ್ಯಗಳಿಂದ ಆಶೀರ್ವದಿಸಿ, ತಕ್ಕ ಸತ್ಕಾರಗಳನ್ನು ಮಾಡಿದನು. ಹೀಗೆ ಮನುಚಕ್ರವರ್ತಿಯು ಆ ಮಹರ್ಷಿಯಿಂದ ಸತ್ಕೃತನಾಗಿ ಕುಳಿತ ಮೇಲೆ, ಕರ್ದಮನು ತನಗೆ ಭಗವಂತನು ಆಜ್ಞಾಪಿಸಿದ ವಾಕ್ಯವನ್ನು ಸ್ಮರಿಸಿಕೊಂಡು, ಮಧುರ ವಾಕ್ಯದಿಂದ ಅವನನ್ನು ಕುರಿತು, “ಓ ಸಾರ್ವಭೌಮಾ! ಭಗವಂತನು ತನ್ನ ರಕ್ಷಣ ಶಕ್ತಿಯನ್ನೇ ನಿನ್ನ ರೂಪದಿಂದ ಭೂಲೋಕದಲ್ಲಿ ಸೃಷ್ಟಿಸಿರುವನು. ಅದರಿಂದಲೇ ನೀನು, ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ಪರಿಪಾಲಿಸುವುದಕ್ಕಾಗಿ ಭೂಮಂಡಲವೆಲ್ಲವನ್ನೂ ಸುತ್ತುತ್ತಿರುವೆ! ರಾಜೇಂದ್ರಾ! ಲೋಕರಕ್ಷಣಾರ್ಥವಾಗಿ ಭಗವಂತನೇ ಸೂರ್ಯಚಂದ್ರಾದಿ ಗ್ರಹಗಳ ರೂಪದಿಂದಲೂ, ಇಂದ್ರ, ಅಗ್ನಿ, ಯಮ, ವರುಣ, ವಾಯು, ಕುಬೇರ, ಮುಂತಾದ ದಿಕ್ಪಾಲಕರ ರೂಪದಿಂದಲೂ, ಆಯಾ ಕಾರ್ಯಗಳನ್ನು ನಡೆಸುತ್ತಿರುವನು. ಶುದ್ಧಸ್ವರೂಪನಾಗಿಯೂ ಮಹಾತ್ಮನಾಗಿಯೂ ಇರುವ ಆ ಭಗವಂತನೇ ನಮ್ಮನ್ನೂ ಒಂದೊಂದು ಕಾರ್ಯದಲ್ಲಿ ನಿಯಮಿಸತಕ್ಕವನು. ಮೊದಲು

ನಮಗೆ ಧ್ಯಾನಯೋಗ್ಯನಾದ ಆ ಭಗವಂತನಿಗೆ ನಮಸ್ಕರಿಸುವೆವು. ಓ, ಚಕ್ರವರ್ತೀ! ನೀನು ರತ್ನಖಚಿತವಾದ ನಿನ್ನ ವಿಜಯರಥವನ್ನೇರಿ, ಶತ್ರು ಭಯಂಕರವಾದ ಧನುಸ್ಸನ್ನು ಕೈಯಲ್ಲಿ ಹಿಡಿದು, ಅದರ ಠೇಂಕಾರದಿಂದಲೇ ಧರ್ಮವಿರೋಧಿಗಳಾದ ದುಷ್ಟರನ್ನು ಹೆದರಿಸುತ್ತ, ಪಾದಾಹತಿಯಿಂದ ಭೂಮಂಡಲವನ್ನು ನಡುಗಿಸುವಂತೆ ದೊಡ್ಡ ಚತುರಂಗ ಸೈನ್ಯವನ್ನು ಸಂಗಡ ಕರೆದುಕೊಂಡು, ಸೂರ್ಯನಂತೆ ದಿವ್ಯತೇಜಸ್ಸಿನಿಂದ ಪ್ರಕಾಶಿಸುತ್ತ ಅನವರತವೂ ಸುತ್ತುತ್ತಿರುವವರೆಗೆ, ಸಮಸ್ತ ವರ್ಣಾಶ್ರಮಧರ್ಮಗಳೂ ಕ್ರಮವಾಗಿ ನಡೆಯುವುವು. ನೀನು ಈ ಕಾರ್ಯವನ್ನು ನಿಲ್ಲಿಸಿ ನಿರ್ವ್ಯಾಪಾರನಾಗಿದ್ದ ಪಕ್ಷದಲ್ಲಿ, ದುಷ್ಟರ ಪ್ರಾಬಲ್ಯದಿಂದ ಆ ವರ್ಣಾಶ್ರಮದ ಕಟ್ಟುಗಳೆಲ್ಲವೂ ಒಡನೆಯೇ ಸಡಿಲಿ ಹೋಗುವುವು- ಕೇವಲ ಅರ್ಥಕಾಮ ಪರಾಯಣರಾದ ನೀಚಜನರಿಂದ ಅಧರ್ಮವು ಹೆಚ್ಚಿಸಲ್ಪಡುವುದು. ನೀನು ಕ್ಷಣಕಾಲದವರೆಗೆ ಶ್ರಮಪರಿಹಾರ್ಥರಾಗಿ ನಿದ್ರೆಮಾಡಿದ ಪಕ್ಷದಲ್ಲಿ ಲೋಕವೆಲ್ಲವೂ ಚೋರರ ಬಾಧೆಯಿಂದ ನಶಿಸಿಹೋಗುವುದು. ಆದುದರಿಂದ ನೀನು ಲೋಕಸಂಚಾರಿಯಾಗಿ ಸುತ್ತುತ್ತಿರಬೇಕಾದುದೇ ಉಚಿತವು! ಈಗ ನೀನು ನನ್ನಲ್ಲಿಗೆ ಬಂದುದೂ ಕೂಡ ಯಾವುದೋ ಒಂದು ವಿಧವಾದ ಲೋಕಕ್ಷೇಮಕ್ಕಾಗಿಯೇ ಇರಬಹುದು! ಹಾಗಿದ್ದರೂ ನನ್ನಲ್ಲಿಗೆ ಬಂದವರ ಉದ್ದೇಶವನ್ನು ಅವರ ಬಾಯಿಂದಲೇ ಕೇಳಿ ತಿಳಿಯಬೇಕಾದುದು ನನಗೆ ಮರ್ಯಾದೆಯಾದುದರಿಂದ, ನಿನ್ನನ್ನು ಪ್ರಶ್ನೆಮಾಡಬೇಕಾಗಿರುವುದು. ನೀನು ಇಷ್ಟುದೂರದವರೆಗೆ ಬಂದ ಉದ್ದೇಶವೇನು? ನಿನ್ನ ಉದ್ದೇಶವನ್ನು ತಿಳಿಸಿದ ಪಕ್ಷದಲ್ಲಿ, ಅದನ್ನು ನಾವು ಮನಃಪೂರ್ವಕವಾಗಿ ವಂಚನೆಯಿಲ್ಲದೆ ನಡೆಸಿಕೊಡುವೆವು" ಎಂದನು. ಇಲ್ಲಿಗೆ ಇಪ್ಪತ್ತೊಂದನೆಯ ಅಧ್ಯಾಯವು.

---

ಸ್ವಾಯಂಭುವಮನುವು ತನ್ನ ಮಗಳಾದ ದೇವಹೂತಿಯನ್ನು ಕರ್ದಮುನಿಗೆ ಕೊಟ್ಟು ವಿವಾಹಮಾಡಿದುದು. ಮನುರಾಜ್ಯವೈಭವವು.

ಮನುಚಕ್ರವರ್ತಿಯು ಬಹಳ ಗಂಭೀರಸ್ವಭಾವವುಳ್ಳವನಾದುದರಿಂದ, ಕರ್ದಮಮುನಿಯು ತನ್ನ ಗುಣಗಳನ್ನೂ, ಕಾರ್ಯಗಳನ್ನೂ, ಬಹಳವಾಗಿ ಸ್ತುತಿಸುತ್ತಿರುವುದಕ್ಕಾಗಿ ನಾಚಿಕೆಗೊಂಡು, ಲೋಕವ್ಯಾಪಾರಗಳಲ್ಲಿ ಕೇವಲ ವಿರಕ್ತನಾದ ಆ ಮಹರ್ಷಿಯನ್ನು ಕುರಿತು "ಎಲೈ ಮಹಾತ್ಮನೇ! ಸಾಮಾನ್ಯಪ್ರಜೆಗಳನ್ನು ರಕ್ಷಿಸುವುದಕ್ಕಾಗಿ ಭಗವಂತನು ನಮ್ಮನ್ನು ಸೃಷ್ಟಿಸಿದುದೇನೋ ವಾಸ್ತವವಾಗಿರಬಹುದು. ಆದರೆ ವೇದಮಯನಾದ ಆ ಪರಮಾತ್ಮನು, ತಪಸ್ಸಿನಲ್ಲಿಯೂ ಭಗವದುಪಾಸನಾ ರೂಪವಾದ ವಿದ್ಯೆಯಲ್ಲಿಯೂ, ಜ್ಞಾನಯೋಗದಲ್ಲಿಯೂ ನಿಷ್ಠರಾಗಿ, ವಿಷಯಾಭಿಲಾಷೆಯನ್ನು ಬಿಟ್ಟಿರತಕ್ಕ ನಿಮ್ಮಂತಹ ಮಹಾತ್ಮರನ್ನು, ವೇದವೆಂಬ ತನ್ನ ಸ್ವರೂಪವನ್ನು ರಕ್ಷಿಸುವುದಕ್ಕಾಗಿಯೇ ತನ್ನ ಮುಖದಿಂದ ಸೃಷ್ಟಿಸಿರುವನಲ್ಲವೇ? ವೇದಸ್ವರೂಪರಾದ ನಿಮ್ಮಂತಹ ಬ್ರಾಹ್ಮಣೋತ್ತಮರಿಗೆ ಬೇರೆಯವರಿಂದ ಅಪಾಯವಿಲ್ಲದೆ ರಕ್ಷಿಸುವುದಕ್ಕಾಗಿ, ತನ್ನ ಸಹಸ್ರಭುಜಗಳಿಂದ ಕ್ಷತ್ರಿಯರಾದ ನಮ್ಮನ್ನು ಸೃಷ್ಟಿಸಿರುವನು. ಇದರಿಂದ ಆ ಪರಮಾತ್ಮನಿಗೆ ನಿಮ್ಮ ಬ್ರಾಹ್ಮಣಕುಲವೇ ಹೃದಯವೆಂದೂ, ನಮ್ಮ ಕ್ಷತ್ರಿಯಕುಲವೇ ಅಂಗವೆಂದೂ ಹೇಳುವರು. ಓ, ಮುನೀಂದ್ರಾ! ಹೀಗೆ ವೇದಗಳನ್ನು ರಕ್ಷಿಸುವುದಕ್ಕಾಗಿ ನಿಮ್ಮನ್ನೂ, ನಿಮಗೆ ಅಪಾಯವಿಲ್ಲದಂತೆ ನೋಡಿಕೊಳ್ಳುವುದಕ್ಕಾಗಿ ನಮ್ಮನ್ನೂ, ಆ ಪರಮಾತ್ಮನು ಸೃಷ್ಟಿಸಿರುವುದರಿಂದ, ನಾವು ನಾವು ನಮ ನಮಗೆ ವಿಹಿತವಾದ ಕಾರ್ಯಗಳನ್ನು ನಡೆಸುತ್ತ ಬಂದರಲ್ಲವೇ ನಮ್ಮ ಈ ಉಭಯಕುಲಕ್ಕೂ ಕಾರಣನಾದ ನಾರಾಯಣನು ನಮ್ಮನ್ನು ರಕ್ಷಿಸುತ್ತಿರುವನು! ಓ ಮಹಾತ್ಮಾ! ಈ ನಿನ್ನ ಸಂದರ್ಶನಮಾತ್ರದಿಂದಲೇ ನನ್ನ ಸಮಸ್ತ ಸಂದೇಹಗಳೂ ನಿವೃತ್ತವಾದುವು. ನೀನು ನನ್ನನ್ನು ನೋಡಿದೊಡನೆ, ನನ್ನನ್ನು ಸ್ತೋತ್ರಮಾಡುವ ನೆವದಿಂದ, ಲೋಕರಕ್ಷಣವೇ ಕ್ಷತ್ರಿಯ ಧರ್ಮವೆಂದು ಸೂಚಿಸಿಬಿಟ್ಟೆಯಲ್ಲವೇ? ಇನ್ನು ನಿನ್ನಿಂದ ನಾನು ಪುನಃ ಕೇಳಿ ತಿಳಿಯಬೇಕಾದ ಧರ್ಮವೇನುಂಟು? ಪುಣ್ಯಹೀನರಿಗೆ ದೊರೆಯ

ಲಾರದ ನಿನ್ನ ದರ್ಶನವು ನನ್ನ ಭಾಗ್ಯೋದಯದಿಂದ ಈಗ ನನಗೆ ಲಭಿಸಿತು. ನನ್ನ ಭಾಗ್ಯೋದಯದಿಂದ ನಿನ್ನ ಪಾದರೇಣುವನ್ನು ನಾನು ತಲೆಯಿಂದ ಧರಿಸುವಂತಾಯಿತು! ನಿನ್ನಂತಹ ಮಹಾತ್ಮರ ಬುದ್ಧಿವಾದರೂಪವಾದ ಅನುಗ್ರಹಕ್ಕೆ ಈಗ ನಾನು ಪಾತ್ರನಾದುದೂ ನನ್ನ ಭಾಗ್ಯವೇ ಸರಿ! ಮನೋಹರವಾದ ನಿನ್ನ ಮಧುರವಾಕ್ಯವನ್ನು ಕಿವಿಯಿಂದ ಕೇಳುವ ಹಾಗಾದುದೂ ಕೂಡ ನನ್ನ ಭಾಗ್ಯೋದಯವಲ್ಲದೆ ಬೇರೆಯಲ್ಲ! ಓ ಮುನೀಂದ್ರಾ! ಈಗ ನನ್ನದೊಂದು ಪ್ರಾರ್ಥನೆಯುಂಟು. ಇದೋ! ನನಗೆ ಒಬ್ಬ ಕನ್ಯೆಯಿರುವಳು. ಇವಳಲ್ಲಿ ನನಗಿರತಕ್ಕ ಪ್ರೇಮಾತಿಶಯವು, ಇವಳಿಗೆ ತಕ್ಕ ವರನು ಸಿಕ್ಕುವನೋ ಇಲ್ಲವೋ ಎಂದು ಅನವರತವೂ ನನ್ನನ್ನು ಕಳವಳಗೊಳಿಸುತ್ತಿರುವುದು. ಹೀಗೆ ಚಿಂತಾಕುಲನಾದ ನನ್ನ ವಿಜ್ಞಾಪನೆಯೆಲ್ಲವನ್ನೂ ಕೃಪೆಯಿಂದ ಲಾಲಿಸಬೇಕು. ಇದೋ! ಇವಳೇ ನನ್ನ ಕುಮಾರಿಯು. ಇವಳಿಗೆ ದೇವಹೂತಿಯೆಂದು ಹೆಸರು! ಇವಳು ಪ್ರಿಯವ್ರತನೆಂದೂ, ಉತ್ತಾನಪಾದನೆಂದೂ ಕರೆಯಲ್ಪಡುವ ನನ್ನ ಪುತ್ರರಿಬ್ಬರಿಗೂ ತಂಗಿಯೆನಿಸಿರುವಳು. ಈ ನನ್ನ ಕುಮಾರಿಯು, ವಯಸ್ಸಿನಲ್ಲಿಯೂ, ಗುಣದಲ್ಲಿಯೂ, ಸೌಂದರ್ಯದಲ್ಲಿಯೂ, ತನಗೆ ಸಮಾನನಾದ ಪತಿಯನ್ನು ಪಡೆಯಬೇಕೆಂದು ಕೋರುತ್ತಿರುವಳು. ಈಗ ಕೆಲವು ದಿನಗಳ ಹಿಂದೆ ಈಕೆಯು ನಾರದಮುನಿಯಿಂದ ನಿನ್ನ ಪ್ರಭಾವವನ್ನೂ, ಸೌಂದರ್ಯವನ್ನೂ, ವಿದ್ಯಾತಿಶಯವನ್ನೂ ಕೇಳಿ, ನಿನ್ನನ್ನು ಬಿಟ್ಟು ಬೇರೊಬ್ಬರನ್ನು ತಾನು ವರಿಸುವುದಿಲ್ಲವೆಂದು ನಿಶ್ಚಯಿಸಿರುವಳು. ಎಲೈ ಮಹಾತ್ಮನೇ! ಇವಳು ಗೃಹಸ್ಥಧರ್ಮಗಳಲ್ಲಿ ನಿನಗೆ ಸರ್ವವಿಧದಲ್ಲಿಯೂ ಅನುಕೂಲೆಯಾಗಿರುವಳೆಂಬುದರಲ್ಲಿ ಸಂದೇಹವಿಲ್ಲ. ನಿನಗೆ ಒಪ್ಪಿಸಬೇಕೆಂಬ ಉದ್ದೇಶದಿಂದಲೇ ಕರೆತಂದಿರುವೆನು. ಇವಳನ್ನು ನೀನು ಪತ್ನಿಯನ್ನಾಗಿ ಪರಿಗ್ರಹಿಸಬೇಕು. ದೈವಿಕವಾಗಿ ಲಭಿಸಿದ ವಸ್ತುವನ್ನು ಸರ್ವಸಂಗ ಪರಿತ್ಯಾಗಮಾಡಿದ ಯೋಗಿಯಾದರೂ ಅಂಗೀಕರಿಸದೆ ಬಿಡುವುದು ಯುಕ್ತವಲ್ಲ. ಹೀಗಿರುವಾಗ ಮನಸ್ಸಿನಲ್ಲಿ ಕೋರುತ್ತಿದ್ದ ವಸ್ತುವು ತಾನಾಗಿಯೇ ಬಂದಾಗ ಅದನ್ನು ಯಾರು ತಾನೇ ನಿರಾಕರಿಸುವರು? ಹೀಗೆ ದೈವಿಕವಾಗಿ ಲಭಿಸಿದ ವಸ್ತುವನ್ನು ಮುಂದಾಲೋಚನೆಯಿಲ್ಲದೆ ತಿರಸ್ಕರಿಸಿ, ಆ ಮೇಲೆ ಅದಕ್ಕಾಸೆಪಟ್ಟು, ಅಲ್ಪಮನುಷ್ಯರಲ್ಲಿ

ಹೋಗಿ ಅದನ್ನು ಯಾಚಿಸುವವನ ಕೀರ್ತಿಯು ಎಷ್ಟೋ ದೊಡ್ಡದಾಗಿದ್ದರೂ ಕ್ಷಣಮಾತ್ರದಲ್ಲಿ ಕ್ಷೀಣಿಸುವುದು. ಕೆಲವು ಸಮಯಗಳಲ್ಲಿ ಇತರರ ತಿರಸ್ಕಾರ ದಿಂದ ಅವನ ಗೌರವಕ್ಕೂ ಹಾನಿಯುಂಟಾಗುವುದು. ನೀನು ವಿವಾಹ ಪ್ರಯತ್ನದಲ್ಲಿರುವುದಾಗಿ ಇದಕ್ಕೆ ಮೊದಲೇ ನಾನು ಕೇಳಿದ್ದೆನು. ಆದಕ್ಕಾ ಗಿಯೇ ಈ ನನ್ನ ಮಗಳನ್ನು ನಿನಗೆ ವಿವಾಹಮಾಡಿಕೊಡಬೇಕೆಂದು ಕರೆ ತಂದಿರುವೆನು. ಇವಳನ್ನು ನಿನ್ನ ಧರ್ಮಪತ್ನಿಯನ್ನಾಗಿ ಸ್ವೀಕರಿಸಬೇಕು" ಎಂದನು. ಈ ಮಾತನ್ನು ಕೇಳಿ ಕರ್ದಮನು, ಸಂತೋಷಪೂರ್ವಕವಾಗಿ "ಓ ರಾಜೇಂದ್ರಾ! ಇದುವರೆಗೆ ನೀನು ಬೇರೊಬ್ಬರಿಗೆ ವಾಗ್ದಾನಮಾಡದೆ, ಈ ನಿನ್ನ ಮಗಳನ್ನು ನನಗೇ ಕೊಡಬೇಕೆಂದು ಕರೆತಂದಿರುವುದರಿಂದ, ಇವಳನ್ನು ವರಿಸುವ ವಿಷಯದಲ್ಲಿ ನನಗೇನೂ ಅಭ್ಯಂತರವಿಲ್ಲ. ಅವಶ್ಯವಾಗಿ ವರಿಸುವೆನು. ನೀನು ಹೇಳಿದಂತೆ ನಮ್ಮಿಬ್ಬರ ದಾಂಪತ್ಯವು ಬಹಳ ಅನು ರೂಪವಾಗಿಯೇ ಇರುವುದು. ಸೃಷ್ಟಿಯಲ್ಲಿ ಮೊದಲನೆಯದೆನಿಸಿಕೊಳ್ಳುವ ಬ್ರಾಹ್ಮಣ ವಿವಾಹವಿಧಿಯು ಈಗಲೇ ಆರಂಭಿಸಲಿ! ಎಲೆ ರಾಜೇಂದ್ರಾ! ನಿನ್ನ ಮಗಳಿಗೆ ವೇದೋಕ್ತವಿಧಿಯಿಂದಲೇ ವಿವಾಹವನ್ನು ನಡೆಸು. ನಿನ್ನ ನಿರ್ಬಂಧಕ್ಕಾಗಿ ನಾನು ಈಕೆಯನ್ನು ವರಿಸುವೆನೆಂದೆಣಿಸಬೇಡ. ಲಕ್ಷ್ಮೀ ದೇವಿಯನ್ನೇ ತಿರಸ್ಕರಿಸುವಷ್ಟು ದಿವ್ಯಸೌಂದರ್ಯವುಳ್ಳ ಈ ನಿನ್ನ ಕುಮಾರಿ ಯನ್ನು ಯಾರು ತಾನೇ ಆಸೆಪಟ್ಟು ವರಿಸದೆ ಬಿಡುವರು? ಈಕೆಯು ಹಿಂದೊಮ್ಮೆ ತನ್ನ ಕಾಲಂದುಗೆಗಳ ಘಲ್ಘಲ ಧ್ವನಿಯೊಡನೆ ಉಪ್ಪರಿಗೆಯಲ್ಲಿ ತನ್ನ ಸಖೀಜನಗಳೊಡಗೂಡಿ ಚೆಂಡಾಟವನ್ನಾಡುತ್ತಿರುವಾಗ, ಮಿಂಚಿನಂತೆ ಚಂಚಲವಾದ ಇವಳ ಕಡೆಗಣ್ಣಿನ ಸೌಂದರ್ಯವಿಶೇಷವನ್ನು ನೋಡಿ, ಆಕಾಶ ದಲ್ಲಿ ವಿಮಾನಾರೂಢನಾಗಿ ಬರುತ್ತಿದ್ದ ವಿಶ್ವಾವಸುವೆಂಬ ಗಂಧರ್ವರಾಜನು ಹಾಗೆಯೇ ಮೋಹಪರವಶನಾಗಿ ಮೂರ್ಛೆಬಿದ್ದುದಾಗಿ ಕೇಳಿರುವೆನು. ಹೀಗೆ ದೇವತೆಗಳಿಗೂ ಇವಳ ಸೌಂದರ್ಯವು ಮೋಹಕರವಾಗಿರುವಾಗ, ಲಕ್ಷ್ಮೀ ಕಟಾಕ್ಷವಿಲ್ಲದವರಿಗೆ ಇವಳ ದರ್ಶನವೇ ದುರ್ಲಭವೆಂದು ಹೇಳಬಹುದು. ಸ್ತ್ರೀಯರಿಗೆ ಶಿರೋಮಣಿಪ್ರಾಯಳಾಗಿ, ಮಹಾತ್ಮನಾದ ಉತ್ತಾನಪಾದ ನಿಗೆ ಒಡಹುಟ್ಟಿದವಳಾಗಿರುವ ಈ ಕನ್ಯಾರತ್ನವು ತಾನಾಗಿಯೇ ಅಪೇಕ್ಷಿಸಿ ಬಂದಾಗ, ಬುದ್ಧಿಶಾಲಿಯಾದ ಯಾವನು ತಾನೇ ವರಿಸದಿರುವನು? ಅವಶ್ಯ

ವಾಗಿ ನಾನು ವರಿಸುವೆನು. ಆದರೆ ಈ ವಿಷಯದಲ್ಲಿ ನಾವು ನಾವು ನಿರ್ಣಯಿಸಿಕೊಳ್ಳಬೇಕಾದ ಭರವಸೆಯೊಂದುಂಟು. ಅದಕ್ಕೆ ನೀನೂ ಸಮ್ಮತಿಸಬೇಕು. ಅದೇನೆಂದು ಕೇಳುವೆಯಾ ? ಈಕೆಯಲ್ಲಿ ಸಂತಾನವುಂಟಾಗುವವರೆಗೆ ಮಾತ್ರವೇ ಇವಳೊಡನೆ ನಾನು ಗೃಹಸ್ಥಧರ್ಮವನ್ನು ನಡೆಸುತ್ತಿರುವೆನು. ಇವಳಿಗೆ ಸಂತಾನವುಂಟಾದ ಕೂಡಲೇ, ನಾನು ಇವಳನ್ನು ಬಿಟ್ಟು, ನಿವೃತ್ತಿಧರ್ಮವನ್ನು ಹಿಡಿದು ಭಗವಂತನಿಂದ ವಿಧಿಸಲ್ಪಟ್ಟ ಸಾತ್ವಿಕಮಾರ್ಗದಲ್ಲಿ ನಿಲ್ಲುವೆನು. ಈ ನನ್ನ ಉದ್ದೇಶವು ನನ್ನ ಬುದ್ಧಿಪೂರ್ವಕವಾಗಿ ಹುಟ್ಟಿದುದೆಂದು ತಿಳಿಯಬೇಡ ! ದೇವಮನುಷ್ಯಾದಿ ಭೇದಗಳುಳ್ಳ ಚಿತ್ರವಿಚಿತ್ರವಾದ ಈ ಪ್ರಪಂಚವೆಲ್ಲವೂ ಯಾವನಿಂದ ಉತ್ಪನ್ನವಾಗುವುದೋ, ಯಾವನು ಅದರೊಳಗೆ ತಾನೂ ಸೇರಿ, ಅದಕ್ಕೆ ನಿಯಾಮಕನಾಗಿಯೂ, ಧಾರಕನಾಗಿಯೂ ಇರುವನೋ, ಕೊನೆಗೆ ಯಾವನಲ್ಲಿಯೇ ಆ ಪ್ರಪಂಚವು ಲಯಹೊಂದುವುದೋ, ಅಂತಹ ಭಗವಂತನ ಸಂಕಲ್ಪದಿಂದಲೇ ಏರ್ಪಟ್ಟುದೆಂದು ತಿಳಿ ! ಆದುದರಿಂದ ಈ ಒಪ್ಪಂದವು ನಮ್ಮಿಬ್ಬರಿಗೂ ಈಗಲೇ ನಡೆಯಬೇಕಾಗಿರುವುದು" ಎಂದನು. ಕರ್ದಮನು ಹೀಗೆಂದು ಹೇಳಿ ಮನಸ್ಸಿನಲ್ಲಿ ಆ ಭಗವಂತನನ್ನು ಧ್ಯಾನಿಸುತ್ತ, ತನ್ನ ಮುಗುಳ್ನಗೆಯ ಸೊಗಸಿನಿಂದಲೇ ದೇವಹೂತಿಯ ಮನಸ್ಸನ್ನು ಮೋಹಪಡಿಸುತ್ತಿದ್ದನು. ಮನುಚಕ್ರವರ್ತಿಯೂ ಕೂಡ ಕರ್ದಮನ ನಿಯಮಕ್ಕೆ ಸಮ್ಮತಿಸಿ, ಪತ್ನೀಸಮೇತನಾಗಿ ತನ್ನ ಕುಮಾರಿಯನ್ನು ಕರ್ದಮನಿಗೆ ಕೊಟ್ಟು ವಿವಾಹಮಾಡಿದನು. ಮನುಪತ್ನಿಯಾದ ಶತರೂಪೆಯೂ ಕೂಡ ಸಂತೋಷಪೂರ್ವಕವಾಗಿ ಮಗಳಿಗೂ, ಅಳಿಯನಿಗೂ ಬೇಕುಬೇಕಾದ ವಸ್ತ್ರಾಭರಣಗಳನ್ನೂ, ಕ್ರೀಡಾಸಾಮಗ್ರಿಗಳನ್ನೂ ಬಳುವಳಿಯಾಗಿ ಕೊಟ್ಟು ಸಂತೋಷಪಡಿಸಿದಳು. ಮನುಚಕ್ರವರ್ತಿಯು ತನ್ನ ಮಗಳಿಗೆ ತಕ್ಕ ವರನು ಸಿಕ್ಕಿದುದಕ್ಕಾಗಿ ಪರಮಸಂತೋಷಹೊಂದಿ, ಅಳಿಯನನ್ನು ಪ್ರೀತಿಯಿಂದಾಲಿಂಗಿಸಿಕೊಂಡು, ತನ್ನ ಮಗಳನ್ನು ಬಿಟ್ಟು ಹೋಗಲಾರದೆ ವ್ಯಸನದಿಂದ ಆಗಾಗ ಕಣ್ಣೀರನ್ನು ಸುರಿಸಿ, "ಅಮ್ಮಾ ! ಕುಮಾರೀ !" ಎಂದು ಬಾರಿಬಾರಿಗೂ ಮುದ್ದಿಸಿ ಕರೆಯುತ್ತ ದುಃಖಿಸುತ್ತಿದ್ದನು. ಕೊನೆಗೆ ಮನಸ್ಸನ್ನು ದೃಢಪಡಿಸಿಕೊಂಡು, ಮಗಳಿಗೆ ಬುದ್ಧಿವಾದವನ್ನು ಹೇಳಿ, ಕರ್ದಮನಿಂದ ಅನುಮತಿಯನ್ನು ಪಡೆದು, ರಥವನ್ನೇರಿ

ಪರಿವಾರಸಮೇತನಾಗಿ ತನ್ನ ಪಟ್ಟಣಕ್ಕೆ ಹೊರಟನು. ದಾರಿಯಲ್ಲಿ ಅನೇಕ ಮಹರ್ಷಿಗಳಿಂದ ತುಂಬಿದ ಸರಸ್ವತೀನದಿಯ ಉಭಯತೀರಗಳಲ್ಲಿಯೂ, ಸಾಲಾಗಿರುವ ಪುಣ್ಯಾಶ್ರಮಗಳ ಸಮೃದ್ಧಿಯನ್ನು ನೋಡುತ್ತ ಹೋದನು. ಇಷ್ಟರಲ್ಲಿಯೇ ಪಟ್ಟಣದ ಪ್ರಜೆಗಳೆಲ್ಲರೂ, ತಮ್ಮ ರಾಜನು ಬ್ರಹ್ಮಾವರ್ತ ದಿಂದ ಹಿಂತಿರುಗಿ ಬರುತ್ತಿರುವ ವೃತ್ತಾಂತವನ್ನು ತಿಳಿದು, ಗೀತವಾದ್ಯಧ್ವನಿ ಗಳೊಡನೆ ಸಂತೋಷದಿಂದ ಇದಿರುಗೊಂಡು ಬಂದರು. ರಾಜನು ತನ್ನ ಪ್ರಜೆಗಳು ತನಗೆ ಮಾಡಿದ ಈ ಸತ್ಕಾರಗಳನ್ನೆಲ್ಲಾ ಪ್ರೀತಿಯಿಂದಾದರಿಸಿ, ಪುರಪ್ರವೇಶವನ್ನು ಮಾಡಿದನು. ವಿದುರಾ! ಆ ಚಕ್ರವರ್ತಿಯು ಪಾಲಿಸು ತ್ತಿದ್ದ ರಾಜಧಾನಿಗೆ ಬರ್ಹಿಷ್ಮತಿಯೆಂದು ಹೆಸರು! ಪೂರ್ವದಲ್ಲಿ ವರಾಹ ರೂಪಿಯಾದ ಭಗವಂತನು, ಭೂಮ್ಯುದ್ಧರಣಕಾಲದಲ್ಲಿ, ತನ್ನ ಮೈಯನ್ನು ಜಾಡಿಸಿದಾಗ, ಅವನ ದೇಹದಿಂದ ಕೆಲವು ರೋಮಗಳು ಕೆಳಕ್ಕುದಿರಿ, ಆ ನೆಲದಲ್ಲಿ ಬಿದ್ದು, ಹಸುರುದರ್ಭೆಗಳಾಗಿಯೂ, ನೊದೆಹುಲ್ಲಾಗಿಯೂ ಬೆಳೆ ದುವು. ಇವುಗಳಿಂದಲೇ ಅನೇಕ ಮಹರ್ಷಿಗಳು, ಅಲ್ಲಿ ಯಜ್ಞವಿರೋಧಿ ಗಳಾದ ರಾಕ್ಷಸರನ್ನು ನಿರಾಕರಿಸಿ, ವಿಷ್ಣುಪ್ರೀತ್ಯರ್ಥವಾಗಿ ಯಾಗಗಳನ್ನು ನಡೆಸಿದರು. ಮನುಚಕ್ರವರ್ತಿಯು ಕೂಡ ಅಲ್ಲಿ ಹುಟ್ಟಿದ ದರ್ಭೆಗಳಿಂದ ಅದೇ ಸ್ಥಳದಲ್ಲಿ ನಾರಾಯಣಪ್ರೀತ್ಯರ್ಥವಾಗಿ ಯಾಗಗಳನ್ನು ಮಾಡಿದನು. ಹೀಗೆ ದರ್ಭೆಗಳಿಂದ ಸಮೃದ್ಧವಾಗಿ, ಯಾಗಗಳಿಗೆ ಅನುಕೂಲವಾದ ಆ ಸ್ಥಳವು ಕೊನೆಗೆ ಒಂದು ದೊಡ್ಡ ಪಟ್ಟಣವಾಯಿತು. ಈ ಕಾರಣದಿಂದಲೇ ಅದಕ್ಕೆ ಬರ್ಹಿಷ್ಮತಿಯೆಂಬ ಹೆಸರು ಪ್ರಸಿದ್ಧವಾಗಿರುವುದು. ಸ್ವಾಯಂಭುವ ಮನುವು ಸಕಲ ಸಂಪತ್ಸಮೃದ್ಧವಾದ ಆ ಪುರವನ್ನು ಪ್ರವೇಶಿಸಿ, ಭಾರ್ಯಾ ಪುತ್ರರೊಡಗೂಡಿ, ತನ್ನ ವರ್ಣಾಶ್ರಮಗಳಿಗೂ, ಧರ್ಮಕ್ಕೂ ವಿರೋಧ ವಿಲ್ಲದಂತೆ, ಸಮಸ್ತ ಭೋಗಗಳನ್ನೂ ಅನುಭವಿಸುತ್ತ ದೇವತೆಗಳಿಂದಲೂ ಸ್ತುತಿಸಲ್ಪಡುವ ಪುಣ್ಯಕೀರ್ತಿಯುಳ್ಳವನಾಗಿದ್ದನು. ಭೂಮಂಡಲಕ್ಕೆ ತಾನೇ ಅಧಿರಾಜನಾಗಿದ್ದರೂ, ಹರಿಭಕ್ತಿಯನ್ನು ಬಿಡದೆ, ಪ್ರತಿದಿನವೂ ಬೆಳಿಗ್ಗೆ ಹರಿಕಥೆಗಳನ್ನು ಕೀರ್ತಿಸುತ್ತ, ಯಾವಾಗಲೂ ಹರಿಧ್ಯಾನಪರನಾಗಿ ತನ್ನ ಮನ್ವಂತರ ಕಾಲವೆಲ್ಲವನ್ನೂ ಈ ವಿಧವಾದ ಸತ್ಕಾಲಕ್ಷೇಪದಿಂದಲೇ ಕಳೆಯು ತ್ತಿದ್ದನು. ಅವನಿಗೆ ಭೋಗಸಾಮಗ್ರಿಗಳು ಯಥೇಚ್ಛವಾಗಿದ್ದರೂ ಅವನ

ಮನಸ್ಸನ್ನು ವಶಪಡಿಸಿಕೊಳ್ಳಲಾರದೆ ಹೋದವು. ಅವನು ತನ್ನ ಆಳ್ವಿಕೆಗೆ ನಿರ್ಣಯಿಸಲ್ಪಟ್ಟ ಎಪ್ಪತ್ತೊಂದು ಯುಗಗಳಲ್ಲಿ (ಎಂದರೆ ಸ್ವಾಯಂಭುವ ಮನ್ವಂತರದಲ್ಲಿ) ಒಂದು ಕ್ಷಣಮಾತ್ರವನ್ನೂ ವ್ಯರ್ಥಮಾಡದೆ, ಭಗವದ್ವಿಷಯದಲ್ಲಿಯೇ ಆಸಕ್ತನಾಗಿ, ರಾಜಕಾರ್ಯವನ್ನು ನಿರ್ವಹಿಸುತ್ತಿದ್ದನು. ಅವನ ಆಳ್ವಿಕೆಯಲ್ಲಿ ಪ್ರಜೆಗಳೆಲ್ಲರೂ, ದೇಹಸಂಬಂಧವಾದ ರೋಗಗಳಾಗಲೀ, ಮನೋವ್ಯಾಧಿಗಳಾಗಲೀ, ಶೀತೋಷ್ಣಾದಿ ಬಾಧೆಗಳಾಗಲೀ, ಶತ್ರುಚೋರಭಯಗಳಾಗಲೀ, ಬೇರೆ ಯಾವ ಈತಿಬಾಧೆಯಾಗಲೀ ಇಲ್ಲದೆ, ಸುಖದಿಂದ ಕಾಲವನ್ನು ಕಳೆಯುತ್ತಿದ್ದರು. ವಿದುರಾ! ಸರ್ವಕಾಲದಲ್ಲಿಯೂ ಶ್ರೀಹರಿಯನ್ನೇ ನಂಬಿದ ಹರಿಭಕ್ತಿಪರಾಯಣರಾದವರಿಗೆ ಯಾವ ವಿಧವಾದ ಕ್ಲೇಶವೂ ಉಂಟಾಗದು. ಆ ಸ್ವಾಯಂಭುವಮನುವು ಕ್ಷತ್ರಿಯನೆನಿಸಿಕೊಂಡಿದ್ದರೂ ಯೋಗೀಶ್ವರರಿಗಿಂತಲೂ ಮೇಲಾದ ಜ್ಞಾನಾತಿಶಯವುಳ್ಳವನಾಗಿ, ಆಗಾಗ ತನ್ನಲ್ಲಿಗೆ ಸಂದೇಹಪರಿಹಾರಾರ್ಥವಾಗಿ ಬಂದ ಸಾಮಾನ್ಯಜನರಿಗೂ, ಮಹರ್ಷಿಗಳಿಗೂ, ವರ್ಣಾಶ್ರಮಧರ್ಮಗಳನ್ನೂ, ಮೋಕ್ಷಧರ್ಮವನ್ನೂ ಉಪದೇಶಿಸುತ್ತಿದ್ದನು. ವಿದುರಾ! ಆದಿರಾಜನೆನಿಸಿದ ಆ ಮನುವಿನ ಚರಿತ್ರವನ್ನು ನಿನಗೆ ವಿವರಿಸಿ ತಿಳಿಸಿದೆನು. ಇನ್ನು ಅವನ ಮಗಳಾದ ದೇವಹೂತಿಯ ಚರಿತ್ರವನ್ನೂ ತಿಳಿಸುವೆನು ಕೇಳು" ಎಂದನು. ಇಲ್ಲಿಗೆ ಇಪ್ಪತ್ತೆರಡನೆಯ ಅಧ್ಯಾಯವು.

---

ಕರ್ದಮನು ತನ್ನ ಯೋಗಬಲದಿಂದ ವಿಮಾನವನ್ನು ಕಲ್ಪಿಸಿಕೊಂಡು, ಭಾರ್ಯಾಸಮೇತನಾಗಿ ಸುಖದಿಂದ ವಿಹರಿಸುತ್ತಿದ್ದುದು.

"ವಿದುರಾ ಕೇಳು! ಸ್ವಾಯಂಭುವನು, ಕರ್ದಮಾಶ್ರಮವನ್ನು ಬಿಟ್ಟು ತನ್ನ ರಾಜಧಾನಿಗೆ ಹಿಂತಿರುಗಿದ ಕೂಡಲೇ, ಇತ್ತಲಾಗಿ ಅವನ ಕುಮಾರಿಯಾದ ದೇವಹೂತಿಯು, ತನ್ನ ಸೌಶೀಲ್ಯಕ್ಕೂ, ಚಾತುರ್ಯಕ್ಕೂ ತಕ್ಕಂತೆ, ಕರ್ದಮನ ಮನೋಭಿಪ್ರಾಯವನ್ನು ಅವನ ಮುಖಭಾವದಿಂದ ತಾನಾಗಿಯೇ ತಿಳಿದುಕೊಂಡು ಪಾರ್ವತೀದೇವಿಯು ಪರಮೇಶ್ವರನನ್ನು ಹೇಗೋ ಹಾಗೆ

ಪತಿಯನ್ನು ಪಚರಿಸುತ್ತಿದ್ದಳು. ನಂಬಿಕೆ, ನಡತ್ತೆ ಮರ್ಯಾದೆ, ತಾಳ್ಮೆ, ಇಂದ್ರಿಯನಿಗ್ರಹಶಕ್ತಿ, ಪತಿಯು ಬುದ್ಧಿವಾದವನ್ನು ಕೇಳುವುದರಲ್ಲಿ ವಿಶೇಷ ವಾದ ಶ್ರದ್ಧೆ, ಪತಿಯಲ್ಲಿ ಬೇಕಾದ ಪ್ರೀತಿ, ಮೃದುವಾದ ಮಾತು, ಈ ಸಮಸ್ತ ಗುಣಗಳಲ್ಲಿಯೂ ಪತಿಗೆ ಸಂತೋಷವನ್ನುಂಟುಮಾಡುತ್ತಿದ್ದಳು. ಮತ್ತು ಆಕೆಯು ಸ್ತ್ರೀಜಾತಿಗೆ ಸಹಜವಾದ ಕಾಮಾತುರವನ್ನಾಗಲೀ, ಹೆಮ್ಮೆಯನ್ನಾಗಲೀ, ಅಸೂಯೆಯನ್ನಾಗಲೀ, ಅತ್ಯಾಸೆಯನ್ನಾಗಲೀ, ದುರಾ ಚಾರವನ್ನಾಗಲೀ, ಮದವನ್ನಾಗಲೀ ತೋರಿಸದೆ, ಬಹಳ ಎಚ್ಚರಿಕೆಯಿಂದ ಪತಿಯ ಮನಸ್ಸನ್ನನುವರ್ತಿಸಿಕೊಂಡು, ಅವನನ್ನು ಸಂತೋಷಪಡಿಸುತ್ತಿ ದ್ದಳು. ಹೀಗೆ ಪತಿಯನ್ನೇ ಪರದೈವಕ್ಕಿಂತಲೂ ಹೆಚ್ಚಾಗಿ ಭಾವಿಸಿ, ತನ್ನ ಪೂರ್ಣಾನುಗ್ರಹಕ್ಕಾಗಿ ಇದಿರುನೋಡುತ್ತಿರುವ ಆ ಮನುಪುತ್ರಿಯನ್ನು ನೋಡಿ ಕರ್ದಮನು, ಅವಳ ಶುಶ್ರೂಷೆಗಾಗಿ ಬಹಳ ಸಂತೋಷಗೊಂಡು, ಬಹುಕಾಲದಿಂದ ತನ್ನ ಶುಶ್ರೂಷೆಯಲ್ಲಿ ಆಕೆಯ ದೇಹವು ಬಹಳವಾಗಿ ಕಂದಿರುವುದನ್ನು ನೋಡಿ, ಅವಳಲ್ಲಿ ಕನಿಕರಗೊಂಡು, ಪ್ರೇಮಪೂರ್ವಕವಾದ ಗದ್ಗದಸ್ವರದೊಡನೆ ಹೀಗೆಂದು ಹೇಳುವನು. "ಪ್ರಿಯೇ! ನೀನು ನನ್ನಲ್ಲಿ ತೋರಿಸುತ್ತಿರುವ ಗೌರವಕ್ಕೂ, ನಿನ್ನ ಭಕ್ತಿಗೂ, ನೀನು ಮಾಡಿದ ಉಪ ಚಾರಕ್ಕೂ ನಾನು ಬಹಳ ಸಂತೋಷಪಟ್ಟೆನು. ಎಲೆ ದೇವಿ! ಲೋಕದಲ್ಲಿ ಪ್ರಾಣಿಗಳಿಗೆ ತಮ್ಮ ದೇಹಕ್ಕಿಂತಲೂ ಪ್ರಿಯವಾದ ವಸ್ತುವಿಲ್ಲ! ಅಂತಹ ಕೋಮಲವಾದ ನಿನ್ನ ಶರೀರವನ್ನೂ ಕೂಡ, ನೀನು ನನ್ನ ನಿಮಿತ್ತವಾಗಿ ಕಂದಿಸುತ್ತಿರುವೆಯಲ್ಲಾ! ಇಂತಹ ಪತಿಪರಾಯಣೆಯಾದ ಸ್ತ್ರೀಯನ್ನು ಇದುವರೆಗೂ ನಾನು ಕಂಡು ಕೇಳಿದುದಿಲ್ಲ. ನಿನ್ನ ವಿಷಯದಲ್ಲಿ ನಾನು ಬಹಳ ಸಂತೋಷಪಟ್ಟೆನು! ಎಲೆ ಮಾನಿನಿ! ನಾನೂ ನನ್ನ ವರ್ಣಾಶ್ರಮ ಧರ್ಮಗಳಿಗೆ ವಿಧಿಸಲ್ಪಟ್ಟ ಕರ್ಮಗಳಲ್ಲಿಯೇ ನಿರತನಾಗಿ, ತಪಸ್ಸಿನಿಂದಲೂ, ಮನೋದಾರ್ಢ್ಯದಿಂದಲೂ, ಭಗವದುಪಾಸನದಿಂದಲೂ, ಆತ್ಮಜ್ಞಾನದಿಂ ದಲೂ ಭಗವಂತನ ಪೂರ್ಣಾನುಗ್ರಹವನ್ನು ಸಂಪಾದಿಸಿರುವೆನು. ಇದರಿಂದ ನನಗೆ ಸಮಸ್ತ ಭೋಗ್ಯಪದಾರ್ಥಗಳೂ, ದುಃಖಭಯಗಳೊಂದೂ ಇಲ್ಲದ ಭೋಗ್ಯಸ್ಥಾನಗಳೂ ಸುಲಭವಾಗಿ ಕೈಗೂಡಬಲ್ಲುವು. ನೀನು ಮನಃ ಪೂರ್ವಕವಾದ ಪರಿಚರ್ಯೆಯಿಂದ ನನ್ನನ್ನು ಇದುವರೆಗೆ ಸಂತೋಷಪಡಿಸಿದೆ.

ನನಗೆ ಲಭಿಸಬಹುದಾದ ಸಮಸ್ತ ಲೋಕಗಳೂ ನಿನಗೆ ಲಭಿಸುವುದರಲ್ಲಿ ಸಂದೇಹವಿಲ್ಲ. ಆದರೆ ಅವೆಲ್ಲವನ್ನೂ ಅನುಭವಿಸುವುದಕ್ಕೆ ತಕ್ಕಂತೆ ನಿನಗೆ ದಿವ್ಯದೃಷ್ಟಿಯನ್ನು ಕೊಡುವೆನು. ಭಗವಂತನ ಪೂರ್ಣಾನುಗ್ರಹವು ನಮ್ಮಲ್ಲಿ ರುವಾಗ, ನಮಗೆ ಯಾವ ಪುರುಷಾರ್ಥಗಳಿಗೂ ಕಡಿಮೆಯಿಲ್ಲ. ಆದರೆ, ಎಲೆ ಪ್ರಿಯೇ! ಇಂತಹ ಸಂದರ್ಭದಲ್ಲಿ ನಾವು ಅಲ್ಪಫಲಗಳಿಗಾಗಿ ಆಸೆಪಡ ಬಾರದು. ಆ ಭಗವಂತನ ಹುಬ್ಬಿನಾಟಗಳಿಂದಲೇ ತಲೆಕೆಳಗಾಗತಕ್ಕ ತುಚ್ಛಭೋಗಗಳನ್ನು ಬಯಸುವುದರಲ್ಲಿ ಫಲವಿಲ್ಲ! ನಿನಗೆ ಈ ನಿನ್ನ ಪಾತಿ ವ್ರತ್ಯದ ಫಲದಿಂದಲೇ ಸಮಸ್ತಸಿದ್ಧಿಗಳೂ ಕೈಗೂಡಿರುವುವು. ಇವು ಸಾಮಾನ್ಯಜನರಿಗೆ ಲಭಿಸಲಾರವು. ಚಕ್ರವರ್ತಿಗಳಿಗೂ ಆಶೆಯನ್ನು ಹುಟ್ಟಿಸತಕ್ಕ ಉತ್ತಮಭೋಗಗಳನ್ನು ನೀನು ಅನುಭವಿಸಬಹುದು" ಎಂದನು. ಇದನ್ನು ಕೇಳಿ ದೇವಹೂತಿಯು, ತನ್ನ ಪತಿಯ ತಪಃಪ್ರಭಾವಕ್ಕೂ, ಆತನ ಜ್ಞಾನಾತಿಶಯಕ್ಕೂ ಆಶ್ಚರ್ಯಪಡುತ್ತ, ತನ್ನ ಮನೋವ್ಯಥೆಯನ್ನೂ ಬಿಟ್ಟು, ನಾಚಿಕೆಯಿಂದುಂಟಾದ ಮಂದಹಾಸದೊಡನೆ, ವಿನಯಪೂರ್ವಕವಾಗಿ ತನ್ನ ಪತಿಗೆ ಹೀಗೆಂದು ವಿಜ್ಞಾಪಿಸುವಳು. "ನಾಥಾ! ಅಮೋಘವಾದ ತಪೋ ಮಹಿಮೆಯುಳ್ಳ ನೀನು ಪತಿಯಾಗಿರುವಾಗ, ಲೋಕದಲ್ಲಿ ನನಗೆ ದುರ್ಲಭ ವಾದ ಕೋರಿಕೆಯು ಯಾವುದುಂಟು? ಇದನ್ನು ನಾನು ಮೊದಲೇ ಚೆನ್ನಾಗಿ ಬಲ್ಲೆನು! ಆದರೆ ಈಗ ನನ್ನದೊಂದು ಪ್ರಾರ್ಥನೆಯುಂಟು. ನಮ್ಮ ವಿವಾಹಕಾಲದಲ್ಲಿ ನೀನು, ನನಗೆ ಸಂತಾನವಾಗುವವರೆಗೆ ನನ್ನೊಡನೆ ಕೂಡಿರುವುದಾಗಿ ಭರವಸೆಯನ್ನು ಕೊಟ್ಟಿದ್ದೆಯಲ್ಲವೇ? ಸ್ತ್ರೀಯರಿಗೆ ತಮ್ಮ ಪತಿಯಿಂದ ಲಭಿಸತಕ್ಕ ಸಂತಾನಕ್ಕಿಂತಲೂ ಮೇಲಾದ ಲಾಭವು ಬೇರೊಂ ದಿಲ್ಲವು. ಇದಲ್ಲದೆ ಮತ್ತೊಂದು ವಿಷಯವನ್ನು ನಿನ್ನಲ್ಲಿ ತಿಳಿಸುವುದಕ್ಕೆ ನಾನು ನಾಚಿಕೆಪಡುತ್ತಿರುವೆನು. ನಾನು ಕಾಮಬಾಧೆಯಿಂದಲೇ ಹೀಗೆ ದಿನದಿನಕ್ಕೆ ಕೃಶಳಾಗುತ್ತಿರುವೆನು. ಈ ನಿನ್ನ ದೇಹಸೌಂದರ್ಯವೇ ನನಗೆ ಆ ಕಾಮವನ್ನು ಮೇಲೆ ಮೇಲೆ ಹೆಚ್ಚಿಸುತ್ತಿರುವುದು. ನಿನ್ನಿಂದಲೇ ನನಗೆ ಹುಟ್ಟಿರುವ ಈ ಕಾಮಾಭಿಲಾಷೆಯನ್ನು ನೀನೇ ತೀರಿಸಬೇಕಲ್ಲವೇ? ಆದುದ ರಿಂದ ಮೊದಲು ನೀನು ನಮಗೆ ಬೇಕಾದ ಭೋಗಸಾಮಗ್ರಿಗಳನ್ನೂ, ಭೋಗ ಮಂದಿರವನ್ನೂ ಕಲ್ಪಿಸಿಕೊಟ್ಟು, ನನಗೆ ಮಾಡಿದ ವಾಗ್ದಾನವನ್ನು ನೆರವೇ

ರಿಸಬೇಕಲ್ಲವೇ ?" ಎಂದಳು. ಇದನ್ನು ಕೇಳಿದ ಕರ್ದಮನು, ಆ ಕ್ಷಣವೇ ತನ್ನ ಯೋಗಸಾಮರ್ಥ್ಯದಿಂದ ಮಹಾದ್ಭುತವಾದ ಒಂದು ವಿಮಾನವನ್ನು ಕಲ್ಪಿಸಿದನು. ತಪಃಪ್ರಭಾವದಿಂದ ನಿರ್ಮಿತವಾದ ಆ ದಿವ್ಯವಿಮಾನದ ಅತಿ ಶಯವನ್ನು ಕೇಳಬೇಕೇ? ನವವಿಧರತ್ನಗಳಿಂದಲೂ ತುಂಬಿ, ಕೋರಿದಾಗ ಕೋರಿದ ವಸ್ತುಗಳೆಲ್ಲವನ್ನೂ ಆಗಾಗಲೇ ಹುಟ್ಟಿಸುತ್ತ, ಕ್ಷಣಕ್ಷಣಕ್ಕೂ ಅದರ ಭಾಗ್ಯವು ಮೇಲೆ ಮೇಲೆ ಹೆಚ್ಚುತ್ತಿರುವಂತೆ ಕಾಣುವುದು. ಸುತ್ತಲೂ ರತ್ನದ ಕಂಬಗಳು! ಎಲ್ಲಿನೋಡಿದರೂ ದೇವಯೋಗ್ಯವಾದ ಭೋಗಸಾಮಗ್ರಿ ಗಳು! ಅಲ್ಲಲ್ಲಿ ಕಟ್ಟಿದ ಚಿತ್ರವಿಚಿತ್ರಗಳಾದ ಧ್ವಜಪತಾಕೆಗಳು! ಚಿತ್ರಕಾರ್ಯ ವುಳ್ಳ ದುಕೂಲದ ಪಟ್ಟಿಗಳು! ಭ್ರಮರಝುಂಕಾರಗಳೊಡನೆ ತೂಗಾಡುತ್ತಿ ರುವ ಹೂವಿನ ದಂಡೆಗಳು! ನಾನಾಬಣ್ಣದ ಪಟ್ಟೆಮಡಿಯ ಕುಚ್ಚುಗಳು! ಮೇಲೆ ಮೇಲೆ ಎತ್ತರಿಸಿ ಕಟ್ಟಿದ ಬೇರೆ ಅಂತಸ್ತುಗಳು! ಅಲ್ಲಲ್ಲಿ ಮನೋಹರ ಗಳಾದ ಶಯನಗೃಹಗಳು! ಅವುಗಳ ನಡುನಡುವೆ ಚಿನ್ನದ ಮಂಚಗಳು! ತಾನಾಗಿಯೇ ಆಡುತ್ತಿರುವ ಬೀಸಣಿಗೆಗಳು! ಅದರ ಮೇಲೆ ಪಟ್ಟೆಮಡಿಯ ಹಾಸಿಗೆಗಳು! ಎಲ್ಲಿ ನೋಡಿದರೂ ಚಿತ್ರವಿಚಿತ್ರಗಳಾದ ಶಿಲ್ಪಕಾರ್ಯಗಳು! ಅಲ್ಲಲ್ಲಿ ಇಂದ್ರನೀಲದ ನೆಲಗಟ್ಟುಗಳು, ಅವುಗಳ ಮೇಲೆ ಹವಳದ ಜಗುಲಿಗಳು! ಪ್ರತಿಬಾಗಿಲಿಗೂ ಹವಳದ ಕುಡಿಗಳಿಂದ ಮಾಡಿದ ಹೊಸ್ತಿಲುಗಳು! ವಜ್ರದ ಕದಗಳು! ಒಂದೊಂದು ಮನೆಯ ಮೇಲೆಯೂ ಇಂದ್ರನೀಲದ ಗೋಪುರ ಗಳು, ಅದರ ಮೇಲೆ ಸುವರ್ಣಕಲಶಗಳು! ಒಂದೊಂದು ಮನೆಗೂ ವಜ್ರದ ಗೋಡೆಗಳು! ಚಿತ್ರವಿಚಿತ್ರಗಳಾದ ಮೇಲು ಕಟ್ಟುಗಳು! ಒಂದೊಂದು ಬಾಗಿಲಿಗೂ ಚಿನ್ನದ ತೋರಣಗಳು! ಇದಲ್ಲದೆ ಅದರಲ್ಲಿ ರತ್ನದ ಕೆಲಸಗ ಳಿಂದ ಮಾಡಿದ ಹಂಸಪಕ್ಷಿಗಳನ್ನೂ, ಪಾರಿವಾಳಗಳನ್ನೂ ನೋಡಿ, ಲೀಲಾರ್ಥ ವಾಗಿ ಸಾಕಿದ ಹಂಸಗಳೂ, ಪಾರಿವಾಳಗಳೂ ಅವುಗಳನ್ನು ತಮ್ಮ ಜಾತಿಯ ಹಕ್ಕಿಗಳನ್ನಾಗಿ ಭ್ರಮಿಸಿ, ಪ್ರೀತಿಯಿಂದ ಕರೆಯುವಂತೆ ಧ್ವನಿಮಾಡುತ್ತ, ಅವುಗಳನ್ನು ಮುದ್ದಿಕ್ಕುವಂತೆ ಹಾರಿಹಾರಿ ಬೀಳುತ್ತಿರುವುವು. ಮತ್ತು ಅದರಲ್ಲಿ ವಿಹಾರಸ್ಥಾನಗಳೂ, ವಿಶ್ರಮಸ್ಥಾನಗಳೂ, ಶಯನಗೃಹ ಗಳೂ, ಅಂಗಳಗಳೂ, ಪಡಸಾಲೆಗಳೂ, ಪ್ರಾಕಾರದ ಹೊರಭಾಗಗಳೂ ಕಾಲೋಚಿತವಾದ ಸುಖಕ್ಕೆ ತಕ್ಕಂತೆ ಹೇರಳವಾಗಿ ಕಂಗೊಳಿಸುತ್ತಿ

ರುವುವು. ಇನ್ನು ಹೆಚ್ಚು ಮಾತಿನಿಂದೇನು? ಆ ಕರ್ದಮನು ತನ್ನ ಶಕ್ತಿಯಿಂದಲೇ ಅದನ್ನು ಸೃಷ್ಟಿಸಿದ್ದರೂ, ನೋಡಿದ ಹಾಗೆಲ್ಲಾ ಆ ವಿಮಾನವು, ಅವನ ಮನಸ್ಸಿಗೇ ಆಶ್ಚರ್ಯವನ್ನುಂಟುಮಾಡುತ್ತಿತ್ತು. ಹೀಗೆ ಸಮಸ್ತ ಸೌಖ್ಯಗಳಿಗೂ ನೆಲೆಯಾಗಿದ್ದ ಆ ವಿಮಾನವನ್ನು ನೋಡಿದಾಗಲೂ ಕೂಡ, ದೇವಹೂತಿಯು ಮನಸ್ಸಿನಲ್ಲಿ ಅಷ್ಟಾಗಿ ಸಂತೋಷವಿಲ್ಲದಿರುವುದನ್ನು ನೋಡಿ, ಸಮಸ್ತಭೂತಗಳ ಅಭಿಪ್ರಾಯವನ್ನೂ ತನ್ನ ಧ್ಯಾನದೃಷ್ಟಿಯಿಂದಲೇ ತಿಳಿಯಬಲ್ಲವನಾದ ಆ ಕರ್ದಮನು, ತಾನಾಗಿಯೇ ಅವಳನ್ನು ಕರೆದು ಹೀಗೆಂದು ಹೇಳುವನು. "ಪ್ರಿಯೇ! ಚಿಂತಿಸಬೇಡ! ನಿನ್ನ ಅಭಿಪ್ರಾಯವು ನನಗೆ ತಿಳಿಯಿತು. ನೀನು ಮೊದಲು, ಇದೋ! ಈ ಕೊಳದಲ್ಲಿ ಸ್ನಾನ ಮಾಡಿ ಬಂದು, ಈ ವಿಮಾನವನ್ನೇರಿ ಕುಳ್ಳಿರು! ಭಗವಂತನ ಆನಂದ ಬಾಷ್ಪದಿಂದ ಕಲ್ಪಿತವಾದ ಈ ಕೊಳವು, ಕೋರಿದ ಕೋರಿಕೆಗಳೆಲ್ಲವನ್ನೂ ಈಡೇರಿಸಬಲ್ಲುದು. ನೀನು ಇದರಲ್ಲಿ ಸ್ನಾನಮಾಡಿ, ಈ ವಿಮಾನವನ್ನೇರಿದೊಡನೆ, ನಿನ್ನ ಕೋರಿಕೆಯು ಈಡೇರುವುದರಲ್ಲಿ ಸಂದೇಹವಿಲ್ಲ" ಎಂದನು. ಈ ಮಾತನ್ನು ಕೇಳಿದೊಡನೆ, ನೈದಿಲೆಯಂತೆ ಕಣ್ಣುಳ್ಳ ಆ ದೇವಹೂತಿಯು, ಕೊಳೆಮುಚ್ಚಿದ ಮೈ, ಹೆಣೆದ ತುರುಬು, ಮೈಲಿಗೆಯ ಪಟ್ಟೆ, ಇವುಗಳೊಡನೆಯೇ ಹೋಗಿ ಸರಸ್ವತೀನದಿಯಿಂದಾವೃತವಾದ ಆ ಬಿಂದುಸರೋವರದಲ್ಲಿಳಿದು ಮುಳುಗಿದಳು. ವಿದುರಾ! ಆಗಿನ ಆಶ್ಚರ್ಯವನ್ನೇನೆಂದು ಹೇಳಲಿ! ಅವಳು ಆ ಕೊಳದಲ್ಲಿ ಮುಳುಗಿದೊಡನೆ, ಆ ಜಲಮಧ್ಯದಲ್ಲಿ ಒಂದಾನೊಂದು ದಿವ್ಯಭವನವೂ, ಅದರಲ್ಲಿ ಎಳವಯಸ್ಸುಳ್ಳ ಸಾವಿರಮಂದಿ ಪದ್ಮಿನೀಜಾತಿಯ ಕನ್ಯೆಯರೂ ಕಾಣಿಸಿದರು. ಅವರೆಲ್ಲರೂ ದೇವಹೂತಿಯನ್ನು ಕಂಡೊಡನೆಯೇ ಆ ಮನೆಯಿಂದ ಹೊರಗೆ ಬಂದು, ಇವಳ ಮುಂದೆ ಕೈಜೋಡಿಸಿ ನಿಂತು "ಎಲೆ ದೇವಿ! ನಾವು ನಿನ್ನ ಸೇವಕಿಯರು. ಮಾಡಬೇಕಾದ ಕಾರ್ಯವನ್ನು ಆಜ್ಞಾಪಿಸಬೇಕು. ಹೇಳಿದ ಕಾರ್ಯವನ್ನು ಮಾಡುವುದಕ್ಕೆ ಸಿದ್ಧರಾಗಿರುವೆವು" ಎಂದು ಹೇಳಿ, ಒಡನೆಯೇ ಆಕೆಯನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ, ಉತ್ತಮವಾದ ಸುಗಂಧದೆಣ್ಣೆಯಿಂದ ಅಭ್ಯಂಗಮಾಡಿಸಿ, ಮೇಲಾದ ಎರಡು ದುಕೂಲಗಳನ್ನುಡಿಸಿ, ಅವಳಿಗೆ ಇಷ್ಟವಾದ ಆಭರಣಗಳಿಂದಲಂಕರಿಸಿ, ಮೃಷ್ಟಾನ್ನ ಭೋಜನವನ್ನೂ, ಪಾನೀಯ

ಗಳನ್ನೂ ಕೊಟ್ಟು ಉಪಚರಿಸಿದರು. ಹೀಗೆ ವಸ್ತ್ರಾಲಂಕಾರಗಳೆಲ್ಲವನ್ನೂ ತೊಡಿಸಿ ಭೋಜನ ಮಾಡಿಸಿದ ಮೇಲೆ, ಅವಳ ಮುಂದೆ ಒಂದು ನಿಲುಗನ್ನಡಿಯನ್ನು ತಂದು ತೋರಿಸಲು, ಅವಳು ತನ್ನ ದೇಹಸೌಂದರ್ಯವನ್ನು ನೋಡುತ್ತ ಬಂದಳು. ದಿವ್ಯವಾದ ಮಾಲಿಕೆ! ಶುದ್ಧವಾದ ಪಟ್ಟೆಮಡಿ! ಶುಭ್ರವಾದ ಮೈ! ಸುತ್ತಲೂ ಗೌರವಿಸಿ ಪೂಜಿಸತಕ್ಕ ಪರಿಚಾರಿಕೆಯರು! ಮಂಗಳಾರ್ಥವಾದ ದೇಹಸಂಸ್ಕಾರಗಳು! ಸ್ನಾನದಿಂದ ಹೊಳೆಯುತ್ತಿರುವ ತಲೆಕೂದಲು! ಕಾಲಿಂದ ತಲೆಯವರೆಗೆ ಸರ್ವಾವಯವಗಳಲ್ಲಿಯೂ ದಿವ್ಯಾಭರಣಗಳು! ಕಂಠದಲ್ಲಿ ಥಳಥಳಿಸುವ ಸುವರ್ಣ ಪದಕಗಳು! ಘಲಘಲನೆ ಧ್ವನಿಮಾಡುತ್ತಿರುವ ಚಿನ್ನದ ಕಾಲಂದುಗೆಗಳು! ಮಧ್ಯಭಾಗದಲ್ಲಿ ನವರತ್ನಗಳಿಂದ ಖಚಿತವಾದ ಚಿನ್ನದ ಡಾಬು! ಉತ್ತಮವಾದ ಮುತ್ತಿನ ಹಾರಗಳು! ಕುಂಕುಮವೇ ಮೊದಲಾದ ಮಂಗಳದ್ರವ್ಯದಿಂದ ಮಾಡಿದ ಅನುಲೇಪನಗಳು! ಕಾಮನ ಬಿಲ್ಲಿನಂತೆ ತಿದ್ದಿದ ಹುಬ್ಬು! ಮೊಲ್ಲೆಯ ಮೊಗ್ಗಿನಂತೆ ಅಂದವಾದ ದಂತಪಙ್ಕ್ತಿ! ಸ್ನೇಹಸೂಚಕವಾಗಿ ಕಮಲದ ಮೊಗ್ಗಿನಂತಿರುವ ಕಡೆಗಣ್ಣಿನ ಸೊಗಸು! ಮುಖವನ್ನು ಮತ್ತಷ್ಟು ಅಂದಗೊಳಿಸುವುದಕ್ಕಾಗಿ ಜೀವರೇಖೆಯನ್ನು ಕಟ್ಟಿದಂತಿರುವ ಮುಂಗುರುಳು! ಹೀಗೆ ತನಗೇ ಆಶ್ಚರ್ಯವನ್ನುಂಟುಮಾಡತಕ್ಕ ತನ್ನ ಸೌಂದರ್ಯವನ್ನು ನೋಡಿ ಈಕೆಯು, ಕೂಡಲೇ ತನ್ನ ಮನಸ್ಸಿನಲ್ಲಿ ಪತಿಯಾದ ಕರ್ದಮನನ್ನು ಸ್ಮರಿಸಿಕೊಂಡಳು. ಇವಳು ತನ್ನ ಪತಿಯನ್ನು ಸ್ಮರಿಸುತ್ತಿರುವಾಗಲೇ, ಆ ಸಮಸ್ತ ಸ್ತ್ರೀಸಮೂಹದೊಡನೆ ಕರ್ದಮನ ಬಳಿಯಲ್ಲಿ ತಾನಿರುವುದನ್ನು ಕಂಡಳು. ಹೀಗೆ ದೇವಹೂತಿಯು, ತಾನು ಮನಸ್ಸಿನಲ್ಲಿ ಯಾವುದನ್ನು ಯೋಚಿಸಿದರೂ, ಆಯಾಕ್ಷಣವೇ ಅದು ಕೈಗೂಡಿಬರುತ್ತಿರುವುದನ್ನೂ, ಆ ಬಿಂದುಸರಸ್ಸಿಗೆ ಸ್ನಾನಕ್ಕಾಗಿ ಹೋದ ತಾನು ಸ್ವಪ್ರಯತ್ನವಿಲ್ಲದೆ ಈಗ ತನ್ನ ಪತಿಯ ಮುಂದೆ ಅನೇಕ ಸ್ತ್ರೀಯರೊಡಗೂಡಿ ನಿಂತಿರುವುದನ್ನೂ ನೋಡಿ, ಪತಿಯಾದ ಆ ಕರ್ದಮನ ತಪಃಪ್ರಭಾವವನ್ನು ಹೀಗೆಂದು ನಿಶ್ಚಯಿಸಲಾರದೆ, ಆಶ್ಚರ್ಯದಿಂದ ಸ್ತಬ್ಧಳಾಗಿದ್ದಳು. ಆಗ ಕರ್ದಮನೂ ಕೂಡ, ಇದಕ್ಕೆ ಮೊದಲು, ದೇಹಸಂಸ್ಕಾರವೊಂದೂ ಇಲ್ಲದೆ, ತನ್ನ ಶುಶ್ರೂಷೆಯಲ್ಲಿ ಕೃಶಳಾಗಿದ್ದ ದೇವಹೂತಿಯು, ಈಗ ಸ್ನಾನಾದಿ ದೇಹಸಂಸ್ಕಾರಗಳಿಂದ ವಿನಾ

ಹಕ್ಕೆ ಮೊದಲಿದ್ದ ರಾಜಕುಮಾರಿಯ ರೂಪದಿಂದಿರುವುದನ್ನೂ, ನವಯೌವನ ವನ್ನು ಸೂಚಿಸತಕ್ಕ ಆಕೆಯ ಎದೆಯಕಟ್ಟನ್ನೂ, ಅನೇಕ ವಿದ್ಯಾಧರಸ್ತ್ರೀ ಯರಿಂದ ಆಕೆಯು ಉಪಚರಿಸಲ್ಪಡುವುದನ್ನೂ, ಅವಳು ಧರಿಸಿದ ವಸ್ತ್ರಾ ಭರಣಗಳ ಸೊಗಸನ್ನೂ ನೋಡಿ ಪರಮಸಂತೋಷಭರಿತನಾಗಿ, ಅವಳನ್ನು ಕರೆದು ವಿಮಾನದ ಮೇಲೆ ಕುಳ್ಳಿರಿಸಿಕೊಂಡನು. ವಿದುರಾ! ಕರ್ದಮನು ಸಾವಿರಾರು ಮಂದಿ ವಿಧ್ಯಾಧರಸ್ತ್ರೀಯರಿಂದ ಉಪಚರಿಸಲ್ಪಡುತ್ತಿದ್ದ ಆಕೆ ಯನ್ನು ತನ್ನೊಡನೆ ವಿಮಾನದಲ್ಲಿ ಕುಳ್ಳಿರಿಸಿಕೊಂಡಾಗ, ಆಕಾಶದಲ್ಲಿ ಅನೇಕ ತಾರೆಗಳ ಸಮೂಹದಿಂದ ಪರಿವೃತನಾದ ಚಂದ್ರನಂತೆ ಪ್ರಕಾಶಿಸುತ್ತಿದ್ದನು. ಹೀಗೆ ಕರ್ದಮನು ತನ್ನ ಪತ್ನಿಯಾದ ಆ ದೇವಹೂತಿಯೊಡನೆ ವಿಮಾನಾ ರೂಢನಾಗಿ, ಆಕಾಶದಲ್ಲಿ ಸಂಚರಿಸುತ್ತ, ಅಷ್ಟದಿಕ್ಪಾಲಕರಿಗೆ ಕ್ರೀಡಾಸ್ಥಾನ ವಾಗಿಯೂ, ಮಲಯಮಾರುತದ ಸಂಚಾರದಿಂದ ಕಾಮೋದ್ದೀಪಕವಾ ಗಿಯೂ, ಗಂಗಾನದಿಯ ಜಲಪಾತದಿಂದ ಕರ್ಣಾನಂದಕರವಾದ ಧ್ವನಿ ಯುಳ್ಳುದಾಗಿಯೂ ಇರುವ ಮೇರುಪರ್ವತದ ಗುಹೆಗಳಲ್ಲಿಯೂ, ಮತ್ತು ಮಾನಸಸರೋವರದಲ್ಲಿಯೂ, ವೈಸ್ರಂಭಕ, ಸ್ವರಸನ, ನಂದಕ, ಪುಷ್ಪಭದ್ರ, ಚೈತ್ರರಥ, ಮುಂತಾದ ದೇವೋದ್ಯಾನಗಳಲ್ಲಿಯೂ ಪ್ರವೇಶಿಸಿ, ಅಲ್ಲಲ್ಲಿ ಸಿದ್ಧ ರಿಂದ ಸ್ತುತಿಸಲ್ಪಡುತ್ತ ಕುಬೇರನಂತೆ ಪರಮಾನಂದದಿಂದ ಕ್ರೀಡಿಸುತ್ತಿದ್ದನು. ಕೋರಿದ ಸ್ಥಳಕ್ಕೆ ಆಯಾಕ್ಷಣವೇ ತಂದು ಸೇರಿಸತಕ್ಕ ಆ ಮಹಾವಿಮಾನದಲ್ಲಿ ಕುಳಿತು, ಸಮಸ್ತ ಪ್ರದೇಶಗಳಲ್ಲಿಯೂ ತಡೆಯಿಲ್ಲದ ಸಂಚಾರವುಳ್ಳವನಾಗಿ, ಸಮಸ್ತ ದೇವಲೋಕಗಳನ್ನೂ ತಿರುಗುತ್ತಿದ್ದನು. ವಿದುರಾ! ತಾಪತ್ರಯ ನಿವಾರಕರವಾದ ಭಗವಂತನ ಪಾದಗಳನ್ನು ನಂಬಿ, ಪವಿತ್ರವಾದ ಮನಸ್ಸು ಳ್ಳವರಿಗೆ ಲೋಕದಲ್ಲಿ ದುರ್ಲಭವಾದ ವಸ್ತುವಾವುದುಂಟು? ಹೀಗೆ ಆಶ್ಚರ್ಯ ಪ್ರಭಾವವುಳ್ಳ ಆ ಮಹರ್ಷಿಯು, ಎಲ್ಲೆಲ್ಲಿಯೂ ನಿರಂಕುಶವಾದ ಸಂಚಾರ ವುಳ್ಳವನಾಗಿ, ಒಂದೊಂದು ಸ್ಥಲವಿಶೇಷಗಳನ್ನೂ ತನ್ನ ಪತ್ನಿಗೆ ತೋರಿ ಸುತ್ತ ಬಂದು, ತನ್ನಾಶ್ರಮಕ್ಕೆ ಹಿಂತಿರುಗಿ ಅಲ್ಲಿಯೂ ತನ್ನ ಪತ್ನಿಯಾದ ದೇವಹೂತಿಯ ಮನಸ್ಸನ್ನು ಸರ್ವವಿಧದಲ್ಲಿಯೂ ಸಂತೋಷಪಡಿಸುತ್ತ, ಅನೇಕ ಸಂವತ್ಸರಗಳನ್ನು ನಿಮಿಷಪ್ರಾಯವಾಗಿ ಕಳೆಯುತ್ತಿದ್ದನು. ಆ ಮನುಪುತ್ರಿಯೂ ಕೂಡ ವಿಮಾನದಲ್ಲಿ ತನ್ನ ಪತಿಸಮಾಗಮದಿಂದುಂಟಾ

ಸುಖವನ್ನನುಭವಿಸುತ್ತ, ತಾನು ಇದುವರೆಗೆ ಕಳೆದ ಅನೇಕವರುಷಗಳ ಕಾಲವನ್ನೂ ತಿಳಿಯದಂತೆ ಆನಂದರಸದಲ್ಲಿ ಮುಳುಗಿದ್ದಳು. ಈ ದಾಂಪತ್ಯ ಸುಖವನ್ನನುಭವಿಸುವಾಗಲೇ ಕರ್ದಮನು, ತನ್ನ ತೇಜಸ್ಸನ್ನು ಒಂಭತ್ತು ಭಾಗವಾಗಿ ಮಾಡಿ, ತನ್ನ ಭಾರ್ಯೆಯ ಗರ್ಭದಲ್ಲಿಟ್ಟನು. ಆಕೆಯೂ ಕೂಡ ಪತಿಯ ತೇಜಸ್ಸನ್ನು ಗರ್ಭದಲ್ಲಿ ಧರಿಸಿ, ಒಂಭತ್ತು ಮಂದಿ ಕನ್ಯೆಯ ರನ್ನು ಹಡೆದಳು. ಆ ಕನ್ಯೆಯರೆಲ್ಲರೂ ಸರ್ವಾಂಗ ಸೌಂದರ್ಯವುಳ್ಳವ ರಾಗಿ, ಕೆನ್ನೈದಿಲೆಯಂತೆ ಸುವಾಸನೆಯುಳ್ಳ ದೇಹದಿಂದ ಶೋಭಿಸುತ್ತಿ ದ್ದರು. ಹೀಗೆ ಸಂತಾನಪ್ರಾಪ್ತಿಯಾದ ಮೇಲೆ ದೇವಹೂತಿಯು, ತನ್ನನ್ನು ಬಿಟ್ಟು ಹೋಗುವುದಕ್ಕಾಗಿ ಯತ್ನಿಸುತ್ತಿರುವ ಪತಿಯನ್ನು ನೋಡಿ, ಆತನ ವಿರಹದುಃಖದಿಂದ ಕೊರಗುತ್ತ, ದುಃಖವನ್ನು ತಡೆಯಲಾರದೆ ಕಣ್ಣೀರು ಬಿಡುತ್ತಿದ್ದಳು. ಈ ವಿರಹವ್ಯಸನದಿಂದ ತಲೆಯನ್ನು ಬಗ್ಗಿಸಿ, ತನ್ನ ಮನೋವ್ಯಥೆಯನ್ನು ಹೊರಗೆ ಕಾಣಿಸಲಾರದೆ, ತನ್ನ ಕಾಲಿನ ಹೆಬ್ಬೆರಳಿ ನಿಂದ ನೆಲವನ್ನು ಕೀರುತ್ತ, ಪ್ರಯತ್ನಪೂರ್ವಕವಾಗಿ ಕಣ್ಣೀರನ್ನು ತಡೆದಿಟ್ಟು ಕೊಂಡು, ಮುಖದಲ್ಲಿ ಮುಗುಳ್ನಗೆಯನ್ನು ನಟಿಸುತ್ತ, ಮೃದುವಾಕ್ಯದಿಂದ ತನ್ನ ಪತಿಯನ್ನು ಕುರಿತು ಹೀಗೆಂದು ಹೇಳುವಳು. "ಹೇ ನಾಥಾ! ನೀನು ನನಗೆ ಪ್ರತಿಜ್ಞೆಮಾಡಿಕೊಟ್ಟಂತೆ, ನನ್ನ ಕೋರಿಕೆಗಳೆಲ್ಲವನ್ನೂ ನೆರವೇರಿಸಿದೆ! ಆದರೆ ನಿನಗೆ ನನ್ನಲ್ಲಿ ಪ್ರೀತಿಯಿದ್ದ ಪಕ್ಷದಲ್ಲಿ, ನನಗೆ ಮತ್ತೊಂದು ವಿಷಯ ದಲ್ಲಿ ಅಭಯಪ್ರದಾನವನ್ನು ಮಾಡಬೇಕು. ಈ ನನ್ನ ಗರ್ಭದಲ್ಲಿ ಹುಟ್ಟಿದ ಕನ್ಯೆಯರನ್ನು ತಕ್ಕ ವರರಿಗೆ ಕೊಟ್ಟು ವಿವಾಹವನ್ನು ಮಾಡಿ, ಇವರನ್ನು ಅವರವರ ಗಂಡಂದಿರ ಮನೆಗೆ ಕಳುಹಿಸಿಕೊಟ್ಟಮೇಲೆ ನೀನು ನಿನಗಿಷ್ಟಬಂದ ಸ್ಥಳಕ್ಕೆ ಹೋಗಬಹುದು. ಈ ಸ್ಥಿತಿಯಲ್ಲಿಯೇ ನೀನು ಬಿಟ್ಟುಹೋದರೆ, ನನ್ನನ್ನು ಬಹಳ ದುಃಖದಲ್ಲಿ ನಿಲ್ಲಿಸಿದಂತಾಗುವುದು. ಅದಲ್ಲದೆ ನಿನ್ನ ವಿರಹ ದುಃಖವನ್ನು ಮರೆಸುವಂತೆ, ನನಗೆ ಒಂದು ಪುತ್ರಸಂತಾನವನ್ನೂ ಅನು ಗ್ರಹಿಸಬೇಕು. ಇದುವರೆಗೆ ಸಂಸಾರಸುಖದಲ್ಲಿಯೇ ನಾನು ಕಾಲವನ್ನು ಕಳೆದುದಾಯಿತು. ಇನ್ನು ನನಗೆ ಆ ಸುಖವನ್ನನುಭವಿಸಬೇಕೆಂಬ ಆಸೆ ಯಿಲ್ಲ. ಇದುವರೆಗೆ ನಾನು ಸ್ವಲ್ಪಮಾತ್ರವೂ ಪರಮಾತ್ಮನನ್ನುಪಾಸಿಸು ವುದರಲ್ಲಿ ಮನಸ್ಸಿಟ್ಟವಳಲ್ಲ. ಇಷ್ಟು ವರುಷಗಳವರೆಗೆ ಮಹಾತ್ಮನಾದ

ನಿನ್ನ ಸೇವೆಯಲ್ಲಿದ್ದರೂ, ಸಂಸಾರಸುಖದಲ್ಲಿ ಕಾಲವನ್ನು ಕಳೆಯುತ್ತಿದ್ದೆನೇ ಹೊರತು, ನಿನ್ನಿಂದ ಆತ್ಮಜ್ಞಾನವನ್ನು ಪಡೆಯುವುದಕ್ಕೂ ಪ್ರಯತ್ನಿಸಲಿಲ್ಲ! ಇದಕ್ಕಾಗಿ ನಾನು ಈಗ ಬಹಳ ವಿಷಾದಪಡುತ್ತಿರುವೆನು. ಈ ವಿಷಯದಲ್ಲಿ ನನಗಿರುವ ಭಯವನ್ನು ನಿವೃತ್ತಿಮಾಡುವುದಕ್ಕೆ ತಕ್ಕ ಉಪಾಯವನ್ನು ನೀನೇ ಯೋಚಿಸಬೇಕು. ನನ್ನನ್ನು ಕೃತಾರ್ಥಳನ್ನಾಗಿ ಮಾಡುವ ವಿಷಯದಲ್ಲಿ ನಿನ್ನ ಅಭಯಪ್ರದಾನವನ್ನು ಬೇಡುವೆನು. ನಾಥಾ! ನಿನ್ನೊಡನೆ ನಾನು ಇಂದ್ರಿಯಚಾಪಲ್ಯದಲ್ಲಿಯೇ ಇದುವರೆಗೆ ಕಾಲವನ್ನು ಕಳೆಯುತ್ತಿದ್ದರೂ, ಅದೂ ನನಗೆ ಶ್ರೇಯಸ್ಕರವೇ ಆದುದರಿಂದ, ಭಯಪಡಬೇಕಾದುದಿಲ್ಲ. ಏಕೆಂದರೆ ಬುದ್ಧಿಪೂರ್ವಕವಾಗಿ ಮಾಡಿದರೂ, ಅಬುದ್ಧಿಪೂರ್ವಕವಾಗಿ ಮಾಡಿದರೂ, ದುರ್ಜನರ ಸಹವಾಸವು ದುರ್ಗತಿಗೆ ಕಾರಣವಾಗುವುದು. ಸಜ್ಜನರ ಸಹವಾಸವು ಸದ್ಗತಿಗೆ ಕಾರಣವು. ಪುಣ್ಯಪಾಪಗಳೆರಡಕ್ಕೂ ಸಹವಾಸವೇ ಕಾರಣವಾಗಿರುವುದು. ಸತ್ಪುರುಷಶ್ರೇಷ್ಠನಾದ ನಿನ್ನೊಡನೆ ನಾನು ಇದುವರೆಗೆ ವ್ಯರ್ಥಕಾಲಕ್ಷೇಪವನ್ನು ಮಾಡಿದರೂ, ನಿನ್ನ ಸಹವಾಸವೇ ನನಗೆ ಮೇಲ್ಮೆಯುಂಟುಮಾಡುವುದರಲ್ಲಿ ಸಂದೇಹವಿಲ್ಲ. ಆದರೆ ಈ ಲೋಕದಲ್ಲಿ ಮನುಷ್ಯನು ನಡೆಸತಕ್ಕ ಯಾವ ಕರ್ಮಕಲಾಪಗಳು, ಧರ್ಮಕ್ಕಾಗಲೀ ಜ್ಞಾನಕ್ಕಾಗಲೀ ಭಗವದ್ಭಕ್ತಿಗಾಗಲೀ ಸಹಕಾರಿಗಳಾಗುವುದಿಲ್ಲವೋ, ಅಂತಹ ಮನುಷ್ಯನು ಬದುಕಿದ್ದರೂ ಸತ್ತವನೆಂದೇ ಎಣಿಸಬೇಕು. ಮುಖ್ಯವಾಗಿ ನನ್ನ ಜನ್ಮವು ನಿರರ್ಥಕವಾಯಿತು. ನಾನು ಇದುವರೆಗೂ ನಡೆಸಿದ ಕೃತ್ಯಗಳೆಲ್ಲವೂ ನಿಷ್ಪ್ರಯೋಜನಗಳಾದುವು. ತತ್ವೋಪದೇಶದಿಂದ ಮೋಕ್ಷಪ್ರದನಾಗಿಯೂ, ಮಹಾತ್ಮನಾಗಿಯೂ ಇರುವ ನಿನ್ನೊಡನೆ ನಾನು ಇದುವರೆಗೆ ಸಹವಾಸವನ್ನು ಮಾಡಿದರೂ, ಮುಕ್ತಿಯನ್ನು ಕೈಗೂಡಿಸತಕ್ಕ ಧರ್ಮಜ್ಞಾನವನ್ನು ಸಂಪಾದಿಸಲಾರದೆ ಹೋದೆನು. ಭಗವನ್ಮಾಯೆಯಿಂದ ನಾನು ವಂಚಿತಳಾದೆನು. ಹಾಗಿಲ್ಲದ ಪಕ್ಷದಲ್ಲಿ, ಮೋಕ್ಷಪ್ರದನಾದ ನಿನ್ನನ್ನು ಸೇರಿಯೂ ನಾನು ಮುಕ್ತಿಮಾರ್ಗಕ್ಕೆ ಪ್ರಯತ್ನಿಸದೆ, ಹೀಗೆ ವ್ಯರ್ಥವಾಗಿ ಕಾಲವನ್ನು ಕಳೆಯುತ್ತಿದ್ದೆನೇ!" ಎಂದಳು. ಇಲ್ಲಿಗೆ ಇಪ್ಪತ್ತಮೂರನೆಯ ಅಧ್ಯಾಯವು.

---

## ಕಪಿಲಾವತಾರದ ಕಥೆ

ವಿದುರಾ ಕೇಳು! ಹೀಗೆ ಪಶ್ಚಾತ್ತಾಪಪಟ್ಟು, ಅತಿ ದೈನ್ಯದಿಂದ ಪ್ರಾರ್ಥಿಸುತ್ತಿರುವ ದೇವಹೂತಿಯ ಮಾತನ್ನು ಕೇಳಿ ಕರ್ದಮನು, ಅವಳಲ್ಲಿ ಬಹಳ ಕನಿಕರಗೊಂಡು, ಹಿಂದೆ ಭಗವಂತನು ತನಗೆ ಹೇಳಿದ್ದ ವಾಕ್ಯವನ್ನೂ ಸ್ಮರಿಸಿಕೊಂಡು, ಅವಳಿಗೆ ಹೀಗೆಂದು ದುಃಖಸಮಾಧಾನವನ್ನು ಮಾಡುವನು. "ಸಾಧ್ವೀಮಣೀ! ನಿನ್ನ ಸೌಶೀಲ್ಯಕ್ಕಾಗಿ ನಾನು ಬಹಳ ಸಂತೋಷಪಟ್ಟೆನು. ರಾಜಪುತ್ರೀ! ಇದಕ್ಕಾಗಿ ಈಗ ನೀನು ಸ್ವಲ್ಪಮಾತ್ರವೂ ಚಿಂತಿಸಬೇಕಾದುದಿಲ್ಲ! ಪ್ರಾಕೃತಗುಣಸಂಬಂಧವಿಲ್ಲದ ಆ ಪರಮಪುರುಷನೇ ಇನ್ನು ಸ್ವಲ್ಪ ಕಾಲದೊಳಗಾಗಿ ಗರ್ಭದಲ್ಲಿ ಬೆಳೆದು, ನಿನಗೆ ಪುತ್ರನಾಗಿ ಅವತರಿಸುವನು. ನಿನಗೆ ಮಂಗಳವಾಗಲಿ! ಇದುಮೊದಲು ನೀನು ಇಂದ್ರಿಯಗಳನ್ನೂ, ಮನಸ್ಸನ್ನೂ ತಡೆದು, ಭಗವದುಪಾಸನವೆಂಬ ಒಂದೇ ವ್ರತವನ್ನು ಹಿಡಿದು, ಪಾತಿವ್ರತ್ಯವೆಂಬ ತಪಸ್ಸಿನಲ್ಲಿ ನೆಲೆಗೊಂಡು, ದಾನಾದಿ ಸತ್ಕರ್ಮಗಳನ್ನು ಶ್ರದ್ಧೆಯಿಂದ ನಡೆಸುತ್ತ, ಆ ಈಶ್ವರನನ್ನು ಎಡೆಬಿಡದೆ ಭಜಿಸುತ್ತಿರು! ಇದರಿಂದ ಕರುಣಾಸಮುದ್ರನಾದ ಭಗವಂತನು ಸಂತೋಷಿಸಿ, ನಿನ್ನ ಗರ್ಭದಲ್ಲಿ ಜನಿಸಿ, ಲೋಕದಲ್ಲಿ ನಮ್ಮಿಬ್ಬರ ಕೀರ್ತಿಯನ್ನೂ ವಿಸ್ತರಿಸುವುದಲ್ಲದೆ, ನಿನಗೂ ತತ್ತ್ವಜ್ಞಾನವನ್ನುಪದೇಶಿಸಿ, ನಿನ್ನ ಮನಸ್ಸಿನ ಸಂದೇಹಗಳೆಲ್ಲವನ್ನೂ ಪರಿಹರಿಸುವನು" ಎಂದನು. ವಿದುರಾ! ಈ ಮಾತನ್ನು ಕೇಳಿ ದೇವಹೂತಿಗೆ ಅತ್ಯಂತ ಸಂತೋಷವುಂಟಾಯಿತು. ಆಕೆಯು ತನ್ನ ಪತಿಯ ಆಜ್ಞೆಯನ್ನು ಭಕ್ತಿಯಿಂದಲೂ ಶ್ರದ್ಧೆಯಿಂದಲೂ ಗೌರವಿಸುತ್ತ, ವಿಕಾರರಹಿತನಾಗಿಯೂ, ಅಜ್ಞಾನನಿವರ್ತಕನಾಗಿಯೂ ಇರುವ ಪರಮಪುರುಷನನ್ನು ಸರ್ವಕಾಲದಲ್ಲಿಯೂ ಭಕ್ತಿಯಿಂದ ಭಜಿಸುತ್ತಿದ್ದಳು. ಹೀಗೆ ಬಹುದಿನಗಳು ಕಳೆದಮೇಲೆ, ಭಗವಂತನು ಕರ್ದಮನ ತೇಜಸ್ಸಿನ ಮೂಲಕವಾಗಿ ದೇವಹೂತಿಯ ಗರ್ಭದಲ್ಲಿ ಪ್ರವೇಶಿಸಿ, ದಾರುವಿನಿಂದ ಅಗ್ನಿಯಂತೆ ಕಪಿಲರೂಪದಿಂದ ಹುಟ್ಟಿದನು. ಈ ಶಿಶುವಿನ ಜನನಕಾಲದಲ್ಲಿಯೇ ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದುವು. ಮೇಘಗಳು ಸುವೃಷ್ಟಿಯನ್ನು ಕರೆದುವು. ಗಂಧರ್ವಗಾನದೊಡನೆ ಅಪ್ಸರಸ್ಸುಗಳು ಆಕಾಶದಲ್ಲಿ ನರ್ತನಮಾಡುತ್ತಿದ್ದರು. ದೇವತೆಗಳು

ಜಯಜಯಧ್ವನಿಗಳನ್ನು ಮಾಡುತ್ತ ಪುಷ್ಪವೃಷ್ಟಿಯನ್ನು ಸುರಿಸಿದರು. ಸಮಸ್ತ ದಿಕ್ಕುಗಳೂ, ಸಮಸ್ತ ಜಲಾಶಯಗಳೂ, ಸಮಸ್ತಜನರ ಮನಸ್ಸೂ ಪ್ರಸನ್ನವಾಗಿದ್ದುವು. ಇಷ್ಟರಲ್ಲಿ ಬ್ರಹ್ಮದೇವನೂ, ತನ್ನ ಪುತ್ರರಾದ ಮರೀಚಿ ಮೊದಲಾದ ಮಹರ್ಷಿಗಳೊಡಗೂಡಿ, ಸತ್ಯಲೋಕದಿಂದ ಹೊರಟು, ಸರಸ್ವತೀ ನದಿಯಿಂದ ಸುತ್ತಲ್ಪಟ್ಟ ಈ ಕರ್ದಮಾಶ್ರಮಕ್ಕೆ ಬಂದು ಸೇರಿದನು. ಸರ್ವಜ್ಞನಾಗಿಯೂ, ಭಗವದಂಶವುಳ್ಳವನಾಗಿಯೂ ಇರುವ ಆ ಚತುರ್ಮುಖ ಬ್ರಹ್ಮನು, ಪ್ರಕೃತಿ, ಪುರುಷ, ಈಶ್ವರರೆಂಬ ಈ ಮೂರು ತತ್ತ್ವಗಳ ನಿಜಸ್ಥಿತಿಯನ್ನು ಲೋಕಕ್ಕೆ ತಿಳಿಸುವುದಕ್ಕಾಗಿ, ಪರಮಪುರುಷನೇ ನಿಜಾಂಶಭೂತವಾದ ಸತ್ವಗುಣದೊಡನೆ, ಪುತ್ರರೂಪದಿಂದವತರಿಸಿರುವನೆಂಬುದನ್ನು ತಿಳಿದು, ಆ ಭಗವಂತನ ವಿಚಿತ್ರವ್ಯಾಪಾರಗಳನ್ನು ಕೊಂಡಾಡುತ್ತ, ಸಂತೋಷಸಂಭ್ರಮಗಳೊಡನೆ ಕರ್ದಮಮಹರ್ಷಿಯ ಬಳಿಗೆ ಬಂದು, ಹೀಗೆಂದು ಹೇಳುವನು. “ಕುಮಾರಾ! ನಿಷ್ಕಪಟವಾದ ಪ್ರೇಮದಿಂದ ನೀನು ನನ್ನ ಮಾತನ್ನು ಗೌರವಿಸಿ, ನಡೆಸಿದುದಕ್ಕಾಗಿ ಬಹಳ ಸಂತೋಷಪಟ್ಟೆನು. ನನ್ನ ಮಾತಿನಂತೆ ನೀನು ಪ್ರಜಾಸೃಷ್ಟಿಯನ್ನು ನಡೆಸಿದುದರಿಂದ, ನನ್ನನ್ನು ನೀನು ಸರ್ವವಿಧದಿಂದಲೂ ಆರಾಧಿಸಿದಂತಾಯಿತು. ತಂದೆಯ ಮಾತನ್ನು ಗೌರವಿಸಿ ನಡೆಸುವುದೇ ಮಕ್ಕಳು ತಂದೆಗೆ ಮಾಡಬೇಕಾದ ಮುಖ್ಯಶುಶ್ರೂಷೆಯೆಂದು ತಿಳಿ! ಕರ್ದಮಾ! ಈ ನಿನ್ನ ಕುಮಾರಿಯರೆಲ್ಲರೂ ಬಹಳ ಸುಸ್ವಭಾವವುಳ್ಳವರು. ಎಣೆಯಿಲ್ಲದ ಸೌಂದರ್ಯವುಳ್ಳವರು. ಇವರೆಲ್ಲರೂ ತಮ್ಮ ತಮ್ಮ ಅಂಶದಿಂದ, ಮುಂದೆ ಪುತ್ರಪೌತ್ರಪರಂಪರೆಯಾಗಿ ಪ್ರಜಾಭಿವೃದ್ಧಿಯನ್ನು ಹೆಚ್ಚಿಸುವುದಕ್ಕೆ ಕಾರಣವೆನಿಸಿರುವರು. ಆದುದರಿಂದ ನೀನು ಈ ಒಂಬತ್ತು ಕನ್ಯೆಯರನ್ನೂ, ಅವರವರ ಇಷ್ಟಕ್ಕೂ, ಸ್ವಭಾವಕ್ಕೂ ತಕ್ಕಂತೆ, ಮರೀಚಿ ಮೊದಲಾದ ಈ ಮಹರ್ಷಿಗಳಿಗೆ ಕೊಟ್ಟು ವಿವಾಹವನ್ನು ನಡೆಸು. ಇದರಿಂದ ನಿನಗೆ ಬಹಳವಾದ ಕೀರ್ತಿಯುಂಟು! ವತ್ಸ ಕರ್ದಮಾ! ಆದಿಪುರುಷನಾದ ಭಗವಂತನು, ತನ್ನ ಸಂಕಲ್ಪದಿಂದ, ಸಮಸ್ತಭೂತಗಳಿಗೂ ಅವರ ಕೋರಿಕೆಗಳನ್ನು ಕೈಗೂಡಿಸುವುದರಲ್ಲಿ ನಿಧಿಯಂತಿರುವ ದೇಹವನ್ನವಲಂಬಿಸಿ, ಕಪಿಲರೂಪದಿಂದ ನಿನ್ನ ಗರ್ಭದಲ್ಲಿ ಜನಿಸಿರುವುದಾಗಿ ತಿಳಿದೇ ನಾನೂ ಇಲ್ಲಿಗೆ ಬಂದೆನು” ಎಂದು ಹೇಳಿ, ದೇವಹೂತಿಯ ಕಡೆಗೆ

ತಿರುಗಿ, "ಎಲೈ ಮನುಪುತ್ರಿ! ಲೋಕದ ಜನಗಳಿಗೆ ಜೀವಾತ್ಮ ಪರಮಾತ್ಮರ ವಿಷಯವಾದ ಜ್ಞಾನೋಪದೇಶದಿಂದ, ಅವರವರ ಪುಣ್ಯಪಾಪರೂಪವಾದ ಕರ್ಮಬಂಧವನ್ನು ಬಿಡಿಸುವುದಕ್ಕಾಗಿ, ಸಾಕ್ಷಾದ್ಭಗವಂತನೇ ನಿನ್ನ ಗರ್ಭದಲ್ಲಿ ಪ್ರವೇಶಿಸಿ, ನಿನಗೆ ಪುತ್ರನಾಗಿ ಹುಟ್ಟಿರುವನು. ಪುಂಡರೀಕಾಕ್ಷನಾದ ಆ ಭಗವಂತನೇ ನಿನಗೂ ದೇಹಾತ್ಮಭ್ರಮರೂಪವಾದ ಅಜ್ಞಾನವನ್ನು ನೀಗಿಸಿ, ಲೋಕೋದ್ಧರಣಾರ್ಥವಾಗಿಯೂ ಅಲ್ಲಲ್ಲಿ ಸಂಚರಿಸುತ್ತ, ಸಮಸ್ತ ಯೋಗಿಗಳಿಗೂ ತಾನೇ ಮೇಲೆನಿಸಿಕೊಳ್ಳುವನು. ಲೋಕದಲ್ಲಿ ಆತ್ಮತತ್ವವನ್ನುಪದೇಶಿಸತಕ್ಕವರೆಲ್ಲರಿಗೂ ತಾನೇ ಗುರುವೆನಿಸಿಕೊಂಡು, ಕಪಿಲಮಹಾಮುನಿಯೆಂಬ ಖ್ಯಾತಿಯನ್ನು ಪಡೆದು, ನಿನಗೂ ಕೀರ್ತಿಯನ್ನು ತರುವನು" ಎಂದನು. ವಿದುರಾ! ಹೀಗೆ ಲೋಕಕರ್ತನಾದ ಬ್ರಹ್ಮನು, ಆ ಮುನಿದಂಪತಿಗಳನ್ನು ತನ್ನ ಪ್ರಿಯವಾಕ್ಯಗಳಿಂದ ಸಂತೋಷಪಡಿಸಿ, ತನ್ನ ವಾಹನವಾದ ಹಂಸವನ್ನೇರಿ, ಸನಕಾದಿಕುಮಾರರೊಡನೆಯೂ, ನಾರದನೊಡನೆಯೂ ಸೇರಿ, ತನ್ನ ಲೋಕಕ್ಕೆ ಹಿಂತಿರುಗಿದೊಡನೆ, ಇತ್ತಲಾಗಿ ಕರ್ದಮನು, ಆ ಬ್ರಹ್ಮನ ಆಜ್ಞೆಯಂತೆ ತನ್ನ ಒಂಭತ್ತು ಮಂದಿ ಕುಮಾರಿಯರನ್ನೂ, ಅವರವರ ಅಭಿಪ್ರಾಯಕ್ಕೂ, ಗುಣಕ್ಕೂ ತಕ್ಕಂತೆ ಪ್ರಜಾಧಿಪತಿಗಳೆನಿಸಿಕೊಂಡ ಮರೀಚಿ ಮೊದಲಾದವರಿಗೆ ಕೊಟ್ಟು ವಿವಾಹಮಾಡಿದನು. ತನ್ನ ಒಂಭತ್ತುಮಂದಿ ಕನ್ಯೆಯರಲ್ಲಿ, ಕಲೆಯೆಂಬವಳನ್ನು ಮರೀಚಿಗೂ, ಅನಸೂಯೆಯನ್ನು ಅತ್ರಿಮುನಿಗೂ, ಶ್ರದ್ಧೆಯೆಂಬವಳನ್ನು ಅಂಗಿರಸ್ಸಿಗೂ, ಕ್ರಿಯೆಯೆಂಬವಳನ್ನು ಕ್ರತುವಿಗೂ, ಖ್ಯಾತಿಯನ್ನು ಭೃಗುಮಹರ್ಷಿಗೂ, ಅರುಂಧತಿಯನ್ನು ವಸಿಷ್ಠನಿಗೂ, ಶಾಂತಿಯೆಂಬವಳನ್ನು ಅಥರ್ವನಿಗೂ ವಿವಾಹಮಾಡಿ ಕೊಟ್ಟನು. ಈ ಅಥರ್ವಶಾಂತಿಯರಿಬ್ಬರೂ ಲೋಕದಲ್ಲಿ ಅನೇಕ ಯಾಗಗಳನ್ನು ವಿಸ್ತರಿಸುವವರಾದರು. ಹೀಗೆ ವಿವಾಹಕಾರ್ಯವನ್ನು ನಡೆಸಿದಮೇಲೆ ಕರ್ದಮನು ಪತ್ನೀಸಮೇತರಾದ ಆ ಮಹರ್ಷಿಗಳೆಲ್ಲರನ್ನೂ ಅನೇಕ ವಿಧದಿಂದ ಸತ್ಕರಿಸಿ, ಬೇಕಾದ ಬಳುವಳಿಗಳನ್ನು ಕೊಟ್ಟು ಸಂತೋಷಗೊಳಿಸಿದನು. ವಿವಾಹಿತರಾದ ಆ ದಂಪತಿಗಳೆಲ್ಲರೂ, ಕರ್ದಮನ ಅನುಜ್ಞೆಯನ್ನು ಪಡೆದು, ಸಂತೋಷದಿಂದ ತಮ್ಮ ತಮ್ಮ ಆಶ್ರಮಗಳಿಗೆ ಹಿಂತಿರುಗಿದರು. ಆಮೇಲೆ ಇತ್ತಲಾಗಿ ಕರ್ದಮನು, ಷಡ್ಗುಣಪರಿಪೂರ್ಣನಾದ ಭಗವಂತನೇ

ಕಪಿಲರೂಪದಿಂದ ತನಗೆ ಕುಮಾರನಾಗಿ ಹುಟ್ಟಿರುವುದನ್ನು ತಿಳಿದು, ಆ ಪುತ್ರನನ್ನು ಏಕಾಂತಸ್ಥಳಕ್ಕೆ ಎತ್ತಿಕೊಂಡು ಹೋಗಿ, ಭಕ್ತಿಯಿಂದ ನಮ ಸ್ಕರಿಸಿ ವಿಜ್ಞಾಪಿಸುವನು. "ಆಹಾ! ಲೋಕದಲ್ಲಿ ನಾನಲ್ಲವೇ ಮಹಾ ಭಾಗ್ಯಶಾಲಿಯು! ತಮ್ಮ ತಮ್ಮ ಪಾಪಕರ್ಮಗಳಿಂದ ನರಕದಲ್ಲಿ ಬಿದ್ದು ಬೇಯುತ್ತ ಸಂಸಾರ ಸಮುದ್ರದಲ್ಲಿ ಮುಳುಗಿ ತೇಲುತ್ತಿರುವ ಮನುಷ್ಯರಿಗೆ, ಬಹುಕಾಲಕ್ಕಲ್ಲದೆ ದೈವಾನುಗ್ರಹವು ಲಭಿಸಲಾರದು! ಇದು ನಿಶ್ಚಯವು! ಮತ್ತು ಮಹಾಯೋಗಿಗಳೂಕೂಡ, ಅನೇಕ ಜನ್ಮಗಳವರೆಗೆ ಬಹಳ ಪ್ರಯತ್ನಪಟ್ಟು ಸಾಧಿಸಿದ ಯೋಗಬಲದಿಂದಲ್ಲದೆ ನಿನ್ನ ಸ್ವರೂಪವನ್ನು ಕಾಣಲಾರರು. ಯೋಗಿಗಳೆಲ್ಲರೂ, ರಾಗದ್ವೇಷಾದಿ ದೋಷಗಳೊಂದೂ ಇಲ್ಲ ದಂತೆ, ತಮ್ಮ ಮನಸ್ಸನ್ನು ಶುದ್ಧಪಡಿಸಿಕೊಂಡು, ನಿನ್ನ ಪಾದದರ್ಶನಕ್ಕಾಗಿ ಎಷ್ಟೋ ಪ್ರಯತ್ನಪಡುವರು. ಹೀಗೆ ಯೋಗಿಗಳಿಗೂ ದುರ್ಲಭವಾದ ನೀನು, ಭಕ್ತಪರಿಪಾಲನವೆಂಬ ಉದ್ದೇಶವೊಂದನ್ನೇ ಪ್ರಧಾನವಾಗಿಟ್ಟುಕೊಂಡು, ನಮ್ಮಂತಹ ಗ್ರಾಮ್ಯಜನರ ಯೋನಿಯಲ್ಲಿ ಹುಟ್ಟುವುದರಿಂದಾಗುವ ಅಗೌರ ವನ್ನೂ ಲಕ್ಷ್ಯಮಾಡದೆ, ಈ ನಮ್ಮ ಗುಡಿಸಲಿನಲ್ಲಿ ಜನಿಸಿದೆಯಲ್ಲವೇ! ಇದು ನಮ್ಮ ಭಾಗ್ಯವಲ್ಲದೆ ಬೇರೆಯೇನು? ಹಿಂದೆ ನೀನು ನನಗೆ ವಾಗ್ದಾನಮಾಡಿ ದಂತೆ, ಸಾಧುಗಳನ್ನು ರಕ್ಷಿಸಿ, ಜ್ಞಾನೋಪದೇಶದಿಂದ ಲೋಕೋಜ್ಜೀವನ ವನ್ನು ಮಾಡುವುದಕ್ಕಾಗಿಯೇ ನೀನು ಈ ಅವತಾರವನ್ನೆತ್ತಿ ನಮ್ಮ ಮನೆ ಯಲ್ಲಿ ಜನಿಸಿದೆ! ಕರ್ಮರಹಿತನಾದ ನಿನಗೆ ಈ ಕರ್ಮಸಂಬಂಧದಿಂದುಂಟಾಗ ತಕ್ಕ ರೂಪಭೇದಗಳೊಂದೂ ಇಲ್ಲದಿದ್ದರೂ, ನಿನ್ನ ಭಕ್ತರನ್ನುದ್ಧರಿಸುವುದ ಕ್ಕಾಗಿಯೇ, ಆಯಾ ಭಕ್ತರ ಇಷ್ಟಕ್ಕೆ ತಕ್ಕಂತೆ ನೀನೂ ಬೇರೆ ಬೇರೆ ರೂಪ ಗಳನ್ನು ಕೈಕೊಂಡು ಲೋಕದಲ್ಲಿ ಅವತರಿಸುವೆ! ನೀನು ಸರ್ವವಿಧದಲ್ಲಿಯೂ ಸ್ವತಂತ್ರನಾಗಿದ್ದರೂ, ಭಕ್ತರ ಇಷ್ಟವನ್ನೇ ತನ್ನ ಇಷ್ಟವನ್ನಾಗಿ ತಿಳಿದು, ಈ ವಿಧವಾದ ರೂಪಾಂತರಗಳನ್ನು ಧರಿಸುವುದನ್ನು ನೋಡಿದರೆ, ಭಕ್ತರಲ್ಲಿ ನಿನಗಿರುವ ವಾತ್ಸಲ್ಯವು ಇಷ್ಟೆಂಬುದನ್ನು ಯಾರು ತಾನೇ ನಿರ್ಣಯಿಸ ಬಲ್ಲರು? ಲೋಕದಲ್ಲಿ ಪ್ರಕೃತಿಪುರುಷರ ನಿಜಸ್ವರೂಪವನ್ನು ತಿಳಿಯಬೇಕೆಂಬ ಉದ್ದೇಶವುಳ್ಳ ಪಂಡಿತರೆಲ್ಲರೂ ನಿನ್ನ ಪಾದಗಳನ್ನು ಸೇವಿಸುವರು. ಹೀಗೆ ಮಹಾತ್ಮರಿಗೂ ಸೇವ್ಯನಾಗಿ, ಷಡ್ಗುಣೈಶ್ವರ್ಯ ಪರಿಪೂರ್ಣನಾಗಿರುವ ನಿನ್ನ

ಪಾದಾರವಿಂದಗಳನ್ನು ನಾನು ಮರೆಹೊಗುವೆನು. ಓ ದೇವಾ! ನೀನು ಪ್ರಕೃತಿಪುರುಷರಿಗಿಂತಲೂ ವಿಲಕ್ಷಣನು! ಆ ಪ್ರಕೃತಿಪುರುಷರಿಬ್ಬರನ್ನೂ ಶರೀರವಾಗಿ ಉಳ್ಳವನು! ನೀನೇ ಕಾಲಸ್ವರೂಪನು! ಕಾರ್ಯಾವಸ್ಥೆಯನ್ನು ಹೊಂದಿದ ಮಹತ್ತತ್ವವನ್ನೂ ಶರೀರವಾಗಿ ಹೊಂದಿದವನು! ಸರ್ವಜ್ಞನು! ಸತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳಿಗೂ ನೆಲೆಯಾದ ಜೀವಶರೀರಕನೂ ನೀನೇ! ಚಿದಚಿದಾತ್ಮಕವಾದ ಸಮಸ್ತ ಪ್ರಪಂಚಕ್ಕೂ ನೀನೇ ರಕ್ಷಕನು! ಕೊನೆಗೆ ನಿಜಸಂಕಲ್ಪಶಕ್ತಿಯಿಂದ ಸಮಸ್ತಲೋಕಗಳನ್ನೂ ತನ್ನಲ್ಲಿ ಅಡಗಿಸಿಕೊಳ್ಳತಕ್ಕವನೂ ನೀನೇ! ಮತ್ತು ನೀನು ಸ್ವತಂತ್ರಶಕ್ತಿಯುಳ್ಳವನು! ಕಪಿಲರೂಪದಿಂದವತರಿಸಿರುವ ಭಗವಂತನಾದ ನಿನ್ನನ್ನು ಮರೆಹೊಗುವೆನು. ಲೋಕನಾಥನಾದ ನಿನ್ನಲ್ಲಿ ನನ್ನದೊಂದು ಮುಖ್ಯ ಪ್ರಾರ್ಥನೆಯುಂಟು! ನೀನು ನನಗೆ ಪುತ್ರನಾಗಿ ಹುಟ್ಟಿದುದರಿಂದ. ನಾನು ಪಿತೃಋಣವೇ ಮೊದಲಾದ ಮೂರು ಬಗೆಯ ಋಣಗಳನ್ನೂ ತೀರಿಸಿಕೊಂಡಂತಾಯಿತು! ಹೀಗೆ ನಿನ್ನಿಂದ ಲೌಕಿಕಸುಖಗಳೆಲ್ಲವನ್ನೂ ಅನುಭವಿಸಿದ ನಾನು, ಇನ್ನುಮೇಲೆ ನಿನ್ನನ್ನೇ ಧ್ಯಾನಿಸುತ್ತ, ಸಂಸಾರ ತಾಪತ್ರಯಗಳಿಂದುಂಟಾಗಬಹುದಾದ ದುಃಖಗಳೊಂದೂ ಮೇಲೆ ಬೀಳದಂತೆ, ಕೊನೆಯ ಆಶ್ರಮವಾದ ಸನ್ಯಾಸವನ್ನು ಪರಿಗ್ರಹಿಸಿ, ವಿರಕ್ತನಾಗಿರಬೇಕೆಂದು ಕೋರುವೆನು. ನನಗೆ ಅನುಮತಿಯನ್ನು ಕೊಡಬೇಕು” ಎಂದನು. ಆಗ ಭಗವಂತನು ಕರ್ದಮನನ್ನು ನೋಡಿ “ಓ ಮುನೀಂದ್ರಾ! ಲೋಕದಲ್ಲಿರುವವರೆಲ್ಲರಿಗೂ, ವೈದಿಕ ವಿಷಯಗಳಲ್ಲಿಯಾಗಲೀ, ಲೌಕಿಕ ವಿಷಯಗಳಲ್ಲಿಯಾಗಲೀ, ನಾನು ಹೇಳಿದುದೇ ಪ್ರಮಾಣವು! ನಾನು ಹೇಳಿದುದೆಲ್ಲವೂ ಸತ್ಯವಾಗಿಯೇ ಇರುವುದು. ಇದಕ್ಕೆ ಮೊದಲೇ ನಾನು ನಿನಗೆ ಪುತ್ರನಾಗಿ ಹುಟ್ಟುವೆನೆಂದು ಹೇಳಿದ್ದೆನಲ್ಲವೇ? ಆದನ್ನು ಸತ್ಯವಾಗಿ ಮಾಡಬೇಕೆಂಬುದಕ್ಕಾಗಿಯೇ ಈ ರೂಪದಿಂದ ನಾನು ಹುಟ್ಟಿರುವೆನು. ಲೋಕದಲ್ಲಿ ಅನೇಕರು ದೇಹವನ್ನೇ ಆತ್ಮವೆಂದು ಭ್ರಮಿಸಿ ಮೋಸಹೋಗುವರು. ಅಂತವರಿಗೆ ಆ ಭ್ರಮವನ್ನು ತಪ್ಪಿಸಿ, ಪ್ರಕೃತಿಗೂ, ಪುರುಷನಿಗೂ, ಪರಮಾತ್ಮನಿಗೂ ಇರುವ ಪರಸ್ಪರ ಭೇದವನ್ನು ತಿಳಿಸಿ, ಅವುಗಳ ನಿಜವಾದ ಸ್ವರೂಪವನ್ನು ತೋರಿಸಬೇಕೆಂಬುದಕ್ಕಾಗಿಯೇ ನಾನು ಈ ಜನ್ಮವನ್ನೆತ್ತಿರುವೆನು. ಮೋಕ್ಷಾಭಿಲಾಷೆಯುಳ್ಳ

ಸಾಧುಗಳಿಗೆ ಪರಮಾತ್ಮ ಸ್ವರೂಪವನ್ನು ತಿಳಿಸಿ, ಅವರನ್ನುದ್ಧರಿಸಬೇಕೆಂಬುದೇ ನನ್ನ ಉದ್ದೇಶವು. ಇದೇ ನಾನು ಈ ಅವತಾರವನ್ನೆತ್ತಿದುದಕ್ಕೆ ಪ್ರಯೋಜನವು. ಆತ್ಮತತ್ವವೆಂಬುದು ಬಹಳ ಸೂಕ್ಷ್ಮವಾದುದು. ಜನರಿಗೆ ಸುಲಭವಾಗಿ ತಿಳಿಯತಕ್ಕುದಲ್ಲ! ಈ ತತ್ವವನ್ನು ನಾನು ಹಿಂದೆಯೇ ತಿಳಿಸಿದ್ದರೂ, ಬಹುಕಾಲವು ಕಳೆದುಹೋದುದರಿಂದ, ಆ ಜ್ಞಾನಮಾರ್ಗವು ಲೋಕದಲ್ಲಿ ನಷ್ಟವಾಗುತ್ತ ಬಂದಿರುವುದು. ತಿರುಗಿ ಅದನ್ನು ದೃಢವಾಗಿ ನೆಲೆಗೊಳಿಸಬೇಕೆಂಬುದಕ್ಕಾಗಿ ನಾನು ಈ ದೇಹವನ್ನೆತ್ತಿರುವೆನೆಂದು ತಿಳಿ! ಇನ್ನು ನೀನು ನಿನ್ನ ಇಷ್ಟಾನುಸಾರವಾಗಿ ಹೊರಡಬಹುದು. ನಾನು ಅನುಜ್ಞೆಯನ್ನು ಕೊಟ್ಟಿರುವೆನು. ಇನ್ನುಮೇಲೆ ನೀನು ನಡೆಸತಕ್ಕ ಒಂದೊಂದು ಕರ್ಮವನ್ನೂ ನನ್ನಲ್ಲಿಯೇ ಅರ್ಪಿತವಾಗಿ ಮಾಡಿ, ಸಾಮಾನ್ಯಜನರಿಗೆ ಜಯಿಸಲಸಾಧ್ಯವಾದ ಮೃತ್ಯುವನ್ನು ಜಯಿಸಿ, ಮೋಕ್ಷವೊಂದರಲ್ಲಿಯೇ ಮನಸ್ಸಿಟ್ಟು, ನನ್ನನ್ನು ಭಜಿಸುತ್ತಿರು! ಹೀಗೆ ಮಾಡುವುದರಿಂದ, ನೀನು ಈ ನನ್ನ ರೂಪವನ್ನು ನಿನ್ನ ಮನಸ್ಸಿನಲ್ಲಿಯೇ ನೋಡಬಹುದು. ಮೋಕ್ಷಕ್ಕೆ ವಿರೋಧಿಗಳಾದ ನಿನ್ನ ಪ್ರಾಚೀನಕರ್ಮಗಳೆಲ್ಲವೂ ನಶಿಸುವುವು. ಆದರ ಮೇಲೆ ನೀನು ಸಮಸ್ತಜೀವಾಂತರ್ಯಾಮಿಯಾಗಿಯೂ, ಸ್ವಯಂಪ್ರಕಾಶವುಳ್ಳವನಾಗಿಯೂ, ಸಮಸ್ತಭೂತಗಳ ಹೃದಯದಲ್ಲಿಯೂ ಅಡಗಿರತಕ್ಕವನಾಗಿಯೂ, ಯಾವ ವಿಧದಲ್ಲಿಯೂ ಯಾವ ಭಯಕ್ಕೂ ಈಡಾಗದವನಾಗಿಯೂ ಇರುವ ನನ್ನನ್ನು ಸೇರಬಹುದು. ಇನ್ನುಮೇಲೆ ನಾನು, ನನ್ನ ತಾಯಿಯಾದ ಈ ದೇವಹೂತಿಗೂ ಎಲ್ಲಾಬಗೆಯ ಕರ್ಮಬಂಧಗಳನ್ನೂ ಬಿಡಿಸತಕ್ಕ ಬ್ರಹ್ಮವಿದ್ಯೆಯನ್ನುಪದೇಶಿಸುವೆನು. ಆ ಉಪದೇಶದಿಂದ ಆಕೆಯೂ ಕೂಡ ನಿನ್ನಂತೆಯೇ ಮೃತ್ಯುವನ್ನು ದಾಟಿ ಮೋಕ್ಷವನ್ನು ಸೇರುವಳು" ಎಂದನು ಇದನ್ನು ಕೇಳಿ ಕರ್ದಮನು, ಪರಮಾನಂದಭರಿತನಾಗಿ ಆ ಕಪಿಲಾಚಾರ್ಯನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಆಗಲೇ ವನಪ್ರಯಾಣಕ್ಕಾಗಿ ಹೊರಟನು! ಆಹಾ! ಏನಾಶ್ಚರ್ಯವು! ಆ ಕ್ಷಣವೇ ಕರ್ದಮನು ಅನೇಕ ಭೋಗಸಾಮಗ್ರಿಗಳಿಂದ ತುಂಬಿದ ತನ್ನ ಗೃಹವನ್ನೂ ಬಿಟ್ಟನು! ಬೇರೆ ಯಾರೊಡನೆಯೂ ಮಾತಾಡದೆ ಮೌನವ್ರತವನ್ನು ಹಿಡಿದು. ಪರಮಾತ್ಮನೊಬ್ಬನಲ್ಲಿಯೇ ಮನಸ್ಸಿಟ್ಟನು! ಮನಸ್ಸನ್ನು ಎಳೆಯತಕ್ಕ ಶಬ್ದಾದಿ

ವಿಷಯಗಳಲ್ಲಿ ಪೂರ್ಣವಾದ ಜಿಹಾಸೆಯನ್ನು ಹೊಂದಿದನು. ಸಂಸಾರಿಗಳ ಸಹವಾಸವನ್ನೇ ಬಿಟ್ಟನು! ಅದುವರೆಗೆ ತಾನು ಕಾಪಾಡುತ್ತಿದ್ದ ಗೃಹಸ್ಥರಿಗೆ ಯೋಗ್ಯವಾದ ಹೋಮಾಗ್ನಿಯನ್ನೂ ತ್ಯಜಿಸಿದನು. ಹೀಗೆ ಸಮಸ್ತವನ್ನೂ ತೊರೆದು, ನಿಲ್ಲುವುದಕ್ಕೆ ನೆಲೆಯನ್ನೂ ಅಪೇಕ್ಷಿಸದೆ, ಭೂಪ್ರದಕ್ಷಿಣವನ್ನು ಮಾಡುತ್ತಿದ್ದನು. ಚೇತನಾಚೇತನಗಳಿಗಿಂತಲೂ ವಿಲಕ್ಷಣನಾಗಿ, ಮಂಗಳ ಗುಣಗಳಿಗೆ ನೆಲೆಯಾಗಿ, ಹೇಯಗುಣ ಸಂಬಂಧವೇ ಇಲ್ಲದ ಪರಬ್ರಹ್ಮ ಸ್ವರೂಪವೊಂದರಲ್ಲಿಯೇ ಮನಸ್ಸನ್ನು ನಿಲ್ಲಿಸಿಬಿಟ್ಟನು. ಮತ್ತು ತನ್ನ ದೇಹ ದಲ್ಲಿಯೂ, ತನ್ನ ಹೆಂಡಿರುಮಕ್ಕಳೆಂಬ ಪರಿವಾರಗಳಲ್ಲಿಯೂ ಮಮತೆಯನ್ನು ತೊರೆದು, ಚಳಿ, ಗಾಳಿ, ಸೆಕೆಯೆಂಬ ದೇಹಧರ್ಮಗಳಿಗೂ ಹೆದರದೆ, ಸಮಸ್ತ ವಸ್ತುಗಳಲ್ಲಿಯೂ ಆತ್ಮಬುದ್ಧಿಯಿಂದ ಸಮವಾಗಿ ವರ್ತಿಸುತ್ತಿದ್ದನು. ಮತ್ತು ಪ್ರಕೃತಿಗಿಂತಲೂ ವಿಲಕ್ಷಣನಾದ ಪರಮಾತ್ಮಸ್ವರೂಪವನ್ನೂ ಚೆನ್ನಾಗಿ ತಿಳಿದು, ಬ್ರಹ್ಮಸ್ವರೂಪವಾದ ಜೀವಾತ್ಮನಲ್ಲಿ ಮನಸ್ಸನ್ನು ನಿಲ್ಲಿಸಿ, ಆ ಆತ್ಮಾನುಭವಸುಖದಿಂದ ಹಸಿವು, ಬಾಯಾರಿಕೆ, ದುಃಖ, ಮೋಹ, ಮುಪ್ಪು, ಸಾವು, ಎಂಬ ವಿಕಾರಗಳೊಂದಕ್ಕೂ ಈಡಾಗದೆ, ಅಲೆಯಿಲ್ಲದ ಸಮುದ್ರದಂತೆ ಶಾಂತನಾಗಿದ್ದನು. ಸರ್ವಜ್ಞನಾಗಿಯೂ, ಸಮಸ್ತ ಜೀವಗಳಲ್ಲಿಯೂ ಪ್ರವೇ ಶಿಸಿ ಅವುಗಳನ್ನು ಧರಿಸತಕ್ಕವನಾಗಿಯೂ, ಅವುಗಳಿಗೆ ನಿಯಾಮಕನಾಗಿಯೂ ಇರುವ ಭಗವಂತನಲ್ಲಿ ದೃಢವಾದ ಭಕ್ತಿಯೋಗವನ್ನು ಹಿಡಿದನು. ಸಮಸ್ತ ಭೂತಗಳೂ ಆ ಪರಮಪುರುಷನಲ್ಲಿಯೇ ಅಡಗಿರುವುವೆಂಬುದನ್ನೂ ಕಂಡು ಕೊಂಡನು. ಪ್ರಕೃತಿ ಸಂಬಂಧದಿಂದುಂಟಾಗುವ ರಾಗದ್ವೇಷಾದಿಗಳೆಲ್ಲವನ್ನೂ ತೊರೆದನು. ದೇವಮನುಷ್ಯಾದಿ ಶರೀರಭೇದಗಳೆಲ್ಲವೂ, ಅವರವರ ಕರ್ಮಾ ನುಸಾರವಾಗಿಯೇ ಉಂಟಾಗುವುವೆಂಬುದನ್ನೂ, ಪ್ರಕೃತಿಯು ಒಂದೇ ಆಗಿ ದ್ದರೂ ಸತ್ವಾದಿಗುಣಭೇದದಿಂದ ಚಿತ್ರವಿಚಿತ್ರವಾಗಿ ಕಾಣುವುವೆಂದೂ, ಶರೀರ ಗಳಲ್ಲಿ ಅಡಗಿರುವ ಜೀವಾತ್ಮಗಳು ಬೇರೆಬೇರೆಯಾಗಿ ತೋರಿದರೂ, ಅವೆಲ್ಲವೂ ಜ್ಞಾನ ಸ್ವರೂಪವುಳ್ಳವುಗಳಾದುದರಿಂದ ಒಂದೇ ಲಕ್ಷಣವುಳ್ಳವುಗಳೆಂದೂ, ಇವೆಲ್ಲಕ್ಕೂ ಅಂತರಾತ್ಮನಾದ ಸರ್ವೇಶ್ವರನೇ ಎಲ್ಲವುಗಳಲ್ಲಿಯೂ ಸರ್ವಸಮ ನಾಗಿ ವರ್ತಿಸುವನೆಂದೂ ತಿಳಿದುಕೊಂಡನು. ಹೀಗೆ ಕರ್ದಮನು ಸಮಸ್ತ ಭೂತಗಳಲ್ಲಿಯೂ ಸಮದೃಷ್ಟಿಯುಳ್ಳವನಾಗಿ, ಭಗವಂತನಲ್ಲಿ ಭಕ್ತಿಯನ್ನು

ಹಿಡಿದು ಕೊನೆಗೆ ಮೋಕ್ಷವನ್ನೂ ಹೊಂದಿದನು. ಇಲ್ಲಿಗೆ ಇಪ್ಪತ್ತನಾಲ್ಕ ನೆಯ ಅಧ್ಯಾಯವು.

---

## ಕಪಿಲನಿಗೂ ದೇವಹೂತಿಗೂ ನಡೆದ ಸಂವಾದಗಳು

ವಿದುರ ಮೈತ್ರೇಯರಿಗೆ ನಡೆದ ಈ ಸಂವಾದವನ್ನು, ಶುಕಮುನಿಯು ಪರೀಕ್ಷಿದ್ರಾಜನಿಗೆ ತಿಳಿಸಿದುದಾಗಿ, ಸೂತಪೌರಾಣಿಕನು ಶೌನಕಾದಿಮಹರ್ಷಿ ಗಳಿಗೆ ಹೇಳುತ್ತಿರುವಲ್ಲಿ, ನಡುವೆ ಶೌನಕನು ಸೂತನನ್ನು ಪ್ರಶ್ನೆಮಾಡು ವನು. "ಓ ಮಹಾತ್ಮಾ! ಸೂತಾ! ಕರ್ಮಸಂಬಂಧವಾದ ಉತ್ಪತ್ತಿವಿನಾಶ ಗಳಿಲ್ಲದವನಾದ ಸರ್ವೇಶ್ವರನು, ಮನುಷ್ಯರಿಗೆ ಜೀವಾತ್ಮಪರಮಾತ್ಮರ ನಿಜ ಸ್ವರೂಪವನ್ನು ವಿವರಿಸುವುದಕ್ಕಾಗಿ ಈ ಕಪಿಲಾವತಾರವನ್ನೆತ್ತಿದನಲ್ಲವೇ! ಈ ಕಪಿಲಾಚಾರ್ಯನ ಮಹಾಮಹಿಮೆಯನ್ನು ಕೇಳುತಿದ್ದ ಹಾಗೆಲ್ಲಾ, ಸಂತೋ ಷದಿಂದಲೂ, ಆಶ್ಚರ್ಯದಿಂದಲೂ ನನ್ನ ಸರ್ವೇಂದ್ರಿಯಗಳೂ ಉತ್ಸಾಹಗೊಳ್ಳು ತ್ತಿರುವುವು. ಅವನ ಚರಿತ್ರೆಗಳನ್ನು ಎಷ್ಟೆಷ್ಟು ಕೇಳಿದರೂ ಮನಸ್ಸಿಗೆ ತೃಪ್ತಿಯುಂಟಾಗದಿರುವುದು. ಆದುದರಿಂದ ಭಗವಂತನು ಈ ಕಪಿಲಾವ ತಾರದಲ್ಲಿ ನಡೆಸಿದ ಚರಿತ್ರೆಗಳೆಲ್ಲವನ್ನೂ ವಿವರವಾಗಿ ತಿಳಿಸಬೇಕು" ಎಂದನು. ಅದಕ್ಕಾ ಸೂತನು, "ಶೌನಕಾದಿಗಳೇ ಕೇಳಿರಿ! ಹಿಂದೆ ವಿದುರನೂ ಮೈತ್ರೇ ಯನನ್ನು ಕುರಿತು ಇದೇ ಪ್ರಶ್ನೆಯನ್ನು ಕೇಳಿದುದಕ್ಕೆ, ಮೈತ್ರೇಯಮಹಾ ಮುನಿಯು ಹೇಳಿದ ಉತ್ತರವನ್ನೇ ಹೇಳುವೆನು. ವಿದುರನು ಈ ಪ್ರಶ್ನೆ ಯನ್ನು ಮಾಡಿದಮೇಲೆ ಮೈತ್ರೇಯನು ಅವನನ್ನು ಕುರಿತು, "ವಿದುರಾ! ಕೇಳು! ಕರ್ದಮನು ಅರಣ್ಯಕ್ಕೆ ಹೋದಮೇಲೆ, ಇತ್ತಲಾಗಿ ಕಪಿಲ ಮುನಿಯು, ತನ್ನ ತಾಯಿಯಾದ ದೇವಹೂತಿಯ ಕೋರಿಕೆಯನ್ನು ಕೈಗೂ ಡಿಸಬೇಕೆಂಬುದಕ್ಕಾಗಿ, ಆ ಬಿಂದುಸರೋವರದ ತೀರದಲ್ಲಿ ಆಕೆಯ ಸಂಗಡಲೇ ಇರುತ್ತಿದ್ದನು. ತತ್ವಜ್ಞನಾಗಿಯೂ, ಕರ್ಮಸಂಬಂಧವನ್ನು ನೀಗಿದವ

ನಾಗಿಯೂ ಇದ್ದ ಕಪಿಲಾಚಾರ್ಯನು, ಒಮ್ಮೆ ಸುಖಾಸೀನನಾಗಿ ಕುಳಿತಿದ್ದಾಗ, ದೇವಹೂತಿಯು ತನಗೆ ಹಿಂದೆ ಬ್ರಹ್ಮದೇವನು ಹೇಳಿದ್ದ ಮಾತನ್ನು ನೆನೆಸಿಕೊಂಡು, ಸಾಕ್ಷಾತ್ಪರಮಪುರುಷನೇ ತನಗೆ ಜ್ಞಾನೋಪದೇಶವನ್ನು ಮಾಡುವುದಕ್ಕಾಗಿ ತನ್ನ ಗರ್ಭದಲ್ಲಿ ಕಪಿಲರೂಪದಿಂದ ಹುಟ್ಟಿರುವನೆಂಬುದನ್ನೂ ತಿಳಿದು, ತನ್ನ ಪುತ್ರನ ಬಳಿಗೆ ಬಂದು ಹೀಗೆಂದು ಪ್ರಾರ್ಥಿಸುವಳು. "ಓ ಮಹಾತ್ಮಾ! ನಾನು ಇದುವರೆಗೂ ಇಂದ್ರಿಯಸುಸುಖದಲ್ಲಿಯೇ ಕಾಲವನ್ನು ಕಳೆದುಬಿಟ್ಟೆನು. ಇದಕ್ಕಾಗಿ ಈಗ ಪಶ್ಚಾತ್ತಾಪಪಟ್ಟು ಕೊರಗುತ್ತಿರುವೆನು. ಹೀಗೆ ನಾನು ಇಂದ್ರಿಯತೃಪ್ತಿಯಲ್ಲಿಯೇ ಕಾಲವನ್ನು ವ್ಯರ್ಥವಾಗಿ ಕಳೆದುಬಿಟ್ಟುದರಿಂದ, ಅಜ್ಞಾನವೆಂಬ ಅಂಧಕಾರದಲ್ಲಿ ಮುಳುಗಿಹೋಗಿರುವೆನು. ಕೊನೆಮೊದಲಿಲ್ಲದ ಅಜ್ಞಾನಾಂಧಕಾರದಲ್ಲಿ ಮುಳುಗಿ ಹೋಗಿರುವ ನನ್ನನ್ನು ಉದ್ಧರಿಸಬೇಕಾದ ಭಾರವು ನಿನ್ನದು. ಎಷ್ಟೋ ಜನ್ಮಾಂತರಗಳಳನ್ನು ಕಳೆದ ಮೇಲೆ, ನಿನ್ನ ಅನುಗ್ರಹದಿಂದ ನನಗೆ ಈ ವಿವೇಕವೆಂಬ ಕಣ್ಣು ಲಭಿಸಿರುವುದು. ಮನುಷ್ಯರಿಗೆ ಇಂದ್ರಿಯತೃಪ್ತಿಯೇ ಪುರುಷಾರ್ಥವೆಂದು ತಿಳಿದು ಮೋಸಹೋಗಿದ್ದ ನನಗೆ, ಈಗ ಆ ವಿಷಯದಲ್ಲಿ ಪಶ್ಚಾತ್ತಾಪವು ಹುಟ್ಟಿರುವುದಕ್ಕೂ ನಿನ್ನ ಅನುಗ್ರಹವೇ ಹೊರತು ಬೇರೆ ಕಾರಣವಿಲ್ಲ. ಓ ಪ್ರಭೂ! ನೀನು ನನಗೆ ಪುತ್ರನಲ್ಲ! ಸರ್ವಜಗತ್ಕಾರಣನಾಗಿ, ಸರ್ವನಿಯಾಮಕನಾಗಿ, ಷಡ್ಗುಣಪರಿಪೂರ್ಣನಾದ ಭಗವಂತನೇ ನೀನು! ಅಜ್ಞಾನವೆಂಬ ಕತ್ತಲೆಯಲ್ಲಿ ಕಣ್ಣುಕಾಣದೆ ತಡವರಿಸುತ್ತಿರುವ ಲೋಕಕ್ಕೆ ಕ್ಷೇಮವನ್ನು ಕೋರಿ, ಪ್ರಪಂಚಕ್ಕೆ ಬೆಳಕನ್ನು ಕೊಡುವ ಸೂರ್ಯನಂತೆ, ನೀನು ಈಗ ನನ್ನ ಗರ್ಭದಲ್ಲಿ ಉದಿಸಿರುವೆ. ಹೇ ಜಗದೀಶಾ! ಲೋಕದಲ್ಲಿ ಜನರಿಗೆ ಅಹಂಕಾರಮಮಕಾರಗಳೆಲ್ಲವೂ ನಿನ್ನಿಂದಲೇ ಏರ್ಪಟ್ಟಿರುವುವು! ಅದನ್ನು ನೀಗಿಸುವುದಕ್ಕೂ ನೀನಲ್ಲದೆ ಬೇರೆ ಸಮರ್ಥರಿಲ್ಲ! ಮತ್ತು ನೀನು, ನಿನ್ನಲ್ಲಿ ಭಕ್ತಿಯೋಗವನ್ನು ಹಿಡಿದವರಿಗೆ, ಸಂಸಾರದ ಕಟ್ಟನ್ನು ಕತ್ತರಿಸುವುದರಲ್ಲಿ ದೀಕ್ಷೆಯನ್ನು ವಹಿಸಿದವನು. ಸರ್ವರಕ್ಷಕನು! ಸರ್ವಸಮರ್ಥನು! ಉತ್ತಮಧರ್ಮವೆನಿಸಿಕೊಂಡ ನಿವೃತ್ತಿ ಮಾರ್ಗವನ್ನು ಹಿಡಿದ ಯೋಗೀಶ್ವರರಿಗೂ ನೀನೇ ಪ್ರಧಾನಗುರುವೆನಿಸಿಕೊಂಡವನು. ಆದುದರಿಂದ ನಿನ್ನ ಪಾದಗಳನ್ನು ಮರೆಹೊಕ್ಕಿರುವೆನು. ತತ್ವಜ್ಞನಾದ ನೀನು, ಪ್ರಕೃತಿಯೆಂದೂ, ಪುರುಷ

ನೆಂದೂ; ಈಶ್ವರನೆಂದೂ ಕರೆಯಲ್ಪಡುವ ಮೂರು ತತ್ವಗಳ ನಿಜಸ್ಥಿತಿಯನ್ನು ನನಗೆ ತಿಳಿಸಿ ರಕ್ಷಿಸಬೇಕು" ಎಂದಳು. ವಿದುರಾ! ಇದನ್ನು ಕೇಳಿ ಕಪಿಲ ಮುನಿಯು, ಪ್ರಾಣಿಗಳಿಗೆ ಮೋಕ್ಷದಲ್ಲಿ ರುಚಿಯನ್ನು ಹೆಚ್ಚಿಸತಕ್ಕುದಾಗಿಯೂ, ನಿರ್ದುಷ್ಟವಾಗಿಯೂ ಇರುವ ದೇವಹೂತಿಯ ಮಾತಿಗಾಗಿ ಬಹಳ ಸಂತೋಷಗೊಂಡು, ಮಂದಹಾಸಪೂರ್ವಕವಾಗಿ ಆಕೆಯನ್ನು ಕುರಿತು ಹೀಗೆಂದು ಹೇಳುವನು. "ಅಮ್ಮಾ! ಕೇಳು! ಪ್ರಕೃತಿಗಿಂತಲೂ ಬೇರೆಯಾದ ಆತ್ಮಸ್ವರೂಪವನ್ನು ಚೆನ್ನಾಗಿ ತಿಳಿಯತಕ್ಕ ಆ ಜ್ಞಾನಯೋಗವೆಂಬುದೇ ಮೋಕ್ಷಾಪೇಕ್ಷೆಯುಳ್ಳವರಿಗೆ ಮುಕ್ತಿಯನ್ನು ತರುವುದೆಂಬುದು ನನ್ನ ಮತವು! ಈ ಜ್ಞಾನಯೋಗವು ಕೈಗೂಡಿದ ಪಕ್ಷದಲ್ಲಿ, ಶಬ್ದಾದಿವಿಷಯಗಳಿಂದುಂಟಾಗುವ ಸುಖದುಃಖಗಳೆಲ್ಲವೂ ನಿಶ್ಶೇಷವಾಗಿ ತೊಲಗಿ ಹೋಗುವುವು. ಆತ್ಮಯೋಗವನ್ನು ಕೇಳಬೇಕೆಂದು ಪ್ರಾರ್ಥಿಸಿದ ಋಷಿಗಳಿಗೆ, ನಾನು ಮೊದಲೇ ಅದನ್ನು ತಿಳಿಸಿರುವೆನು. ಈಯಾತ್ಮಯೋಗಕ್ಕೆ ಶಮೆ, ದಮೆ, ಮೊದಲಾದ ಹಲವು ಅಂಗಗಳುಂಟು. ಅವೆಲ್ಲವನ್ನೂ ಸಂಪೂರ್ಣವಾಗಿ ಅನುಷ್ಠಿಸಿದಾಗಲೇ, ಈ ಯೋಗಬಲವು ಸಾಧಿಸಲ್ಪಡುವುದು. ಆ ಆತ್ಮಯೋಗವನ್ನೇ ನಿನಗೆ ಹೇಳುವೆನು ಕೇಳು! ಅಮ್ಮಾ! ಈ ಜೀವಾತ್ಮನಿಗೆ ಉಂಟಾಗತಕ್ಕ ಸಂಸಾರ ಬಂಧಕ್ಕಾಗಲೀ, ಅದರಿಂದ ಬಿಡುಗಡೆಯೆನಿಸಿದ ಮೋಕ್ಷಕ್ಕಾಗಲೀ, ಮನಸ್ಸೇ ಕಾರಣವೆಂಬುದು ಸರ್ವಸಮ್ಮತವಾದ ವಿಷಯವು. ಮನಸ್ಸು ಶಬ್ದಾದಿ ವಿಷಯಗಳಲ್ಲಿ ಪ್ರವರ್ತಿಸಿದರೆ, ಅದು ಸಂಸಾರದಲ್ಲಿ ಕಟ್ಟು ಹಾಕುವುದು. ಆ ಮನಸ್ಸೆಂಬುದರ ಶುದ್ಧಸ್ವರೂಪವನ್ನು ತಿಳಿಸುವೆನು ಕೇಳು! ಜೀವಾತ್ಮನು, ತನ್ನ ನಿಜರೂಪವನ್ನು ತಿಳಿಯದೆ, ಆತ್ಮವಲ್ಲದ ಮೇಲಿನ ಶರೀರವನ್ನು ನೋಡಿ, ಅದನ್ನೇ ಆತ್ಮವೆಂದು (ತಾನೆಂದು) ಭಾವಿಸುವುದೇ ಅಹಂಕಾರವೆನಿಸುವುದು. ತನಗೆ ಸಂಬಂಧವಿಲ್ಲದ ವಸ್ತುವಿನಲ್ಲಿ ತನ್ನದೆಂಬ ಅಭಿಮಾನವೇ ಮಮಕಾರವೆನಿಸುವುದು. ಹೀಗೆ ತಾನು, ತನ್ನದು, ಎಂಬೀ ಅಭಿಮಾನಗಳೆರಡೂ ಅಹಂಕಾರಮಮಕಾರಗಳಾಗಿರುವುವು. ಈ ಅಹಂಕಾರ ಮಮಕಾರಗಳಿರುವವರೆಗೆ, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಅರಿಷಡ್ವರ್ಗಗಳೂ ಹೆಚ್ಚುತ್ತ ಬರುವುವು. ಅವುಗಳಿಂದ ಪುಣ್ಯಪಾಪರೂಪಗಳಾದ ಕಶ್ಮಲಗಳೂ ಅಂಟಬರುವುವು. ಮನಸ್ಸಿಗೆ ಇವೊಂ

ದನ್ನೂ ಅಂಟಿಸಿಕೊಳ್ಳದಿದ್ದಾಗಲೇ, ಆ ಮನಸ್ಸು ಶುದ್ಧವೆನಿಸುವುದು. ಅದನ್ನು ಸುಖದುಃಖಗಳೊಂದೂ ಕದಲಿಸಲಾರದು. ಯಾವಾಗಲೂ ಒಂದೇ ವಿಧದಲ್ಲಿ ಶಾಂತವಾಗಿರುವ ಇಂತಹ ಶುದ್ಧಮನಸ್ಸುಳ್ಳ ಪುರುಷನು ಜ್ಞಾನ, ವೈರಾಗ್ಯ, ಭಕ್ತಿಯೆಂಬಿವು ಮೂರನ್ನೂ ಬಲಪಡಿಸಿಕೊಂಡು, ಪ್ರಕೃತಿಯ ಕಾರ್ಯರೂಪಗಳಾದ ಶರೀರ, ಇಂದ್ರಿಯ, ಮನಸ್ಸು, ಪ್ರಾಣ ಮೊದಲಾದುವುಗಳಿಗಿಂತಲೂ ಸ್ವರೂಪದಲ್ಲಿಯೂ, ಸ್ವಭಾವದಲ್ಲಿಯೂ ವಿಲಕ್ಷಣವಾದ ಆತ್ಮಸ್ವರೂಪವನ್ನು ತಿಳಿಯಬಲ್ಲನು ಆ ಆತ್ಮನಿಗೆ ಸತ್ವಾದಿ ಗುಣಗಳ ಸಂಬಂಧವೇನೂ ಇರುವುದಿಲ್ಲ. ದೇವತೆಯೆಂದೂ, ಮನುಷ್ಯನೆಂದೂ ಕರೆಯಲ್ಪಡುವ ಆಕಾರಭೇದಗಳೆಲ್ಲವೂ, ಪ್ರಕೃತಿವಿಕಾರವೆನಿಸಿಕೊಳ್ಳುವ ಶರೀರಕ್ಕೆ ಸೇರಿದುದೇ ಹೊರತು, ಆತ್ಮನಿಗೆ ಆ ಭೇದವಿಲ್ಲ. ಬೇರೆ ಬೇರೆ ಶರೀರಗಳಲ್ಲಿ ಜೀವಾತ್ಮನು ಪ್ರತ್ಯೇಕವಾಗಿ ಸೇರಿದ್ದರೂ, ಜ್ಞಾನವೆಂಬ ಆಕಾರವು ಸರ್ವಜೀವಸಾಧಾರಣವಾದುದರಿಂದ ಜೀವಾತ್ಮಗಳಲ್ಲಿ ಪರಸ್ಪರ ವ್ಯತ್ಯಾಸವಿಲ್ಲ. ಮತ್ತು ಜೀವಾತ್ಮನು ಬಹಳ ಸೂಕ್ಷ್ಮವಾದ ಅಣುವಾದುದರಿಂದ, ಅದನ್ನು ಆಯುಧಗಳಿಂದ ಕಡಿಯುವುದಕ್ಕಾಗಲೀ, ಅಗ್ನಿಯಿಂದ ದಹಿಸುವುದಕ್ಕಾಗಲೀ, ಬೇರೆ ವಿಕಾರ ಹೊಂದಿಸುವುದಕ್ಕಾಗಲೀ ಸಾಧ್ಯವಿಲ್ಲ. ಆ ಆತ್ಮಕ್ಕೆ ಎಂದಿಗೂ ನಾಶವಿಲ್ಲ. ಮತ್ತು ದೀಪವು ತೇಜಸ್ಸ್ವರೂಪವಾಗಿ, ತೇಜೋಗುಣವುಳ್ಳುದಾಗಿ, ತನಗೆ ತಾನೇ ಪ್ರಕಾಶಿಸುವಂತೆ, ಆತ್ಮವೂ ಜ್ಞಾನಸ್ವರೂಪವಾಗಿ ಜ್ಞಾನಗುಣವುಳ್ಳುದಾಗಿ ಸ್ವಯಂಪ್ರಕಾಶವುಳ್ಳುದಾಗಿ ನಿರ್ವ್ಯಾಪಾರವಾಗಿರುವುದೆಂಬೀ ವಿಷಯವೆಲ್ಲವೂ ಅಂತಹ ಶುದ್ಧಮನಸ್ಸಿಗೆ ಚೆನ್ನಾಗಿ ತಿಳಿಯುವುದು. ಜೀವಿಗಳಿಗೆ ಸಂಸಾರಬಂಧವನ್ನುಂಟುಮಾಡತಕ್ಕ ಪ್ರಕೃತಿಯು, ಅಂತಹ ಶುದ್ಧನಾದ ಜೀವಾತ್ಮನಲ್ಲಿ ತನ್ನ ಕೈಸಾಗದೆ ಸುಮ್ಮನಾಗುವುದೆಂದೂ ತಿಳಿಯಬಲ್ಲನು. ಅಮ್ಮಾ! ಸಮಸ್ತ ಪ್ರಾಣಿಗಳಿಗೂ ಅಂತರಾತ್ಮನಾದ ಭಗವಂತನಲ್ಲಿ ದೃಢಭಕ್ತಿಯೇ, ಮೋಕ್ಷಕ್ಕೆ ಸುಲಭಸಾಧನವೇ ಹೊರತು, ಅದರಂತೆ ಉತ್ತಮವಾದ ಬೇರೆ ಯಾವ ಉಪಾಯವೂ ಇಲ್ಲವೆಂದು ಯೋಗಿಗಳು ನಿರ್ಣಯಿಸಿರುವರು. ಜೀವನು ಪ್ರಕೃತಿಗಿಂತಲೂ ವಿಲಕ್ಷಣನೆಂದು ತಿಳಿದಮಾತ್ರಕ್ಕೆ ಆತ್ಮಸ್ವರೂಪವು ಸ್ಪಷ್ಟವಾಯಿತೆಂದು ತಿಳಿಯಬೇಡ! ಜೀವಾತ್ಮನ ಸಹಜವಾದ ಸ್ವರೂಪವೂ ಪರಮಾತ್ಮನಿಗೆ ಶರೀರವಾಗಿರುವುದರಿಂದ, ಆ ಪರಮಾತ್ಮನ ಸ್ವರೂಪವನ್ನು

ತಿಳಿಯಬೇಕಾದುದೂ ಅವಶ್ಯವು. ಆದುದರಿಂದ ಜೀವಾತ್ಮನ ಸ್ವರೂಪವು, ಅದಕ್ಕಾಶ್ರಯವಾದ ಪರಮಾತ್ಮನೊಡನಲ್ಲದೆ ಪ್ರತ್ಯೇಕವಾಗಿ ಲಭಿಸದು. ಆ ಪರಮಾತ್ಮಸ್ವರೂಪವನ್ನು ತಿಳಿದುಕೊಂಡರೆ ಮಾತ್ರವೇ ಪ್ರತ್ಯಗಾತ್ಮ ಸ್ವರೂಪವೂ ವ್ಯಕ್ತವಾಗುವುದು. ಅಂತಹ ಪರಮಾತ್ಮನನ್ನು ಸಾಕ್ಷಾತ್ಕರಿಸುವುದಕ್ಕೆ ಉಪಾಯವೇನಂದರೆ, ಆ ಭಗವಂತನಲ್ಲಿರುವ ದೃಢಭಕ್ತಿಯೇ ಮುಖ್ಯಸಾಧನವು. ಅಮ್ಮಾ! ಅಂತಹ ಭಕ್ತಿಯು ಹುಟ್ಟುವುದಕ್ಕೂ, ಆ ಭಕ್ತಿಗೆ ಕಾರಣವಾದ ನಿವೃತ್ತಿ ಧರ್ಮದಲ್ಲಿ ಅಭಿರುಚಿ ಹುಟ್ಟುವುದಕ್ಕೂ, ಸತ್ಸಹವಾಸವೇ ಮುಖ್ಯಕಾರಣವೆಂದು ತಿಳಿ! ಜೀವಾತ್ಮನಿಗೆ ದೋಷಾಸ್ಪದವಾದ ಇಂದ್ರಿಯ ವಿಷಯದಲ್ಲಿ ಆಸಕ್ತಿಯಾಗಲೀ, ಆಶೆಯುಳ್ಳವರೊಡನೆ ಸಹವಾಸವಾಗಲೀ, ದೃಢವಾದ ಪಾಶಬಂಧನವೇ ಹೊರತು ಬೇರೆಯಲ್ಲವೆಂದು ಪಂಡಿತರು ಹೇಳುವರು. ಈ ಆಸಕ್ತಿಯೇ ಸಾಧುಗಳ ಸಹವಾಸದಲ್ಲಿರುವುದಾದರೆ, ಅದು ತಡೆಯಿಲ್ಲದೆ ತೆರೆದಿಟ್ಟ ಮೋಕ್ಷದ್ವಾರವೆನಿಸುವುದು. ಅಂತಹ ಸಾಧುಗಳು ಯಾರೆಂದು ಕೇಳುವೆಯಾ? ಅವರ ಗುಣಸ್ವಭಾವಗಳನ್ನು ತಿಳಿಸುವೆನು ಕೇಳು. ಮೂರ್ಖಜನದಲ್ಲಿಯೂ ಕೂಡ ಭೂಮಿಯಂತೆ ತಾಳ್ಮೆಯಿಂದಿರುವುದು, ಇತರರ ದುಃಖವನ್ನು ನೋಡಿದೊಡನೆ ಬಹಳ ಕನಿಕರಗೊಂಡು ಅವರೊಡನೆ ಸಮಾನವಾಗಿ ದುಃಖಿಸುವುದು, ಸಮಸ್ತ ಪ್ರಾಣಿಗಳಲ್ಲಿಯೂ ಮಿತ್ರಭಾವದಿಂದ ವರ್ತಿಸುವುದು. ಬೇರೆ ಯಾರೊಡನೆಯೂ ವಿರೋಧಿಸದಿರುವುದು, ಶಮದಮಾದಿ ಗುಣಗಳಿಂದ ಕೂಡಿರುವುದು, ಇತರರ ಪ್ರಯೋಜನಕ್ಕಾಗಿ ಶ್ರಮಪಡುವುದು, ಇಂದ್ರಿಯಗಳನ್ನು ಜಯಿಸಿಡುವುದು, ಸಚ್ಚರಿತ್ರವೇ ಭೂಷಣವಾಗಿ ಹೊಂದಿರುವುದು, ಈ ಗುಣವುಳ್ಳವರೇ ಸಾಧುಗಳೆನಿಸುವರು. ಮತ್ತು ಯಾರು, ಈಶ್ವರನಾದ ನನ್ನಲ್ಲಿ ದೃಢಮನಸ್ಸನ್ನಿಟ್ಟು ಭಕ್ತಿಯಿಂದ ಸೇವಿಸುತ್ತ, ಆ ಭಕ್ತಿಗೆ ವಿರೋಧಿಗಳಾದ ಇತರ ಧರ್ಮಗಳೆಲ್ಲವನ್ನೂ ಬಿಟ್ಟು ಜ್ಞಾತಿಗಳನ್ನೂ, ಬಂಧುಗಳನ್ನೂ ತೊರೆದು, ನನ್ನನ್ನೇ ಸಕಲವಿಧ ಬಂಧುವನ್ನಾಗಿ ಭಾವಿಸಿ, ನನ್ನ ಕಥಾಶ್ರವಣ ಕೀರ್ತನಗಳಿಂದಲೇ ಸಂತೋಷಿಸುತ್ತ, ನನ್ನನ್ನು ಸೇರುವುದೇ ಮೋಕ್ಷವೆಂದೂ, ನಾನೇ ಮೋಕ್ಷವನ್ನು ಕೊಡತಕ್ಕವನೆಂದೂ ನಂಬಿರುವರೋ, ಅಂತವರೇ ಸಾಧುಗಳು. ಹೀಗೆ ಸರ್ವಸಂಗಪರಿತ್ಯಾಗಮಾಡಿ, ನನ್ನನ್ನೇ

ನಂಬಿದವರ ಸಹವಾಸವನ್ನು ನೀನು ಮೊದಲು ಬಯಸಬೇಕು. ಅದರಿಂದ ಸಮಸ್ತ ದೋಷಗಳೂ ನೀಗುವುವು. ಅಂತಹ ಸಾಧುಗಳನ್ನು ಸಂಸಾರ ಸಂಬಂಧವಾದ ತಾಪಗಳೊಂದೂ ಪೀಡಿಸಲಾರವು. ಯಾವುದಕ್ಕೂ ಅವರು ಭಯಪಡಲಾರರು. ಎಲೆ ಸಾಧ್ವಿ! ನೀನು ಅಂತಹ ಸಾಧುಗಳ ಸಹವಾಸ ವನ್ನು ಮಾಡಿದರೆ, ಮನಸ್ಸಿಗೂ, ಕಿವಿಗಳಿಗೂ ಅಮೃತಪ್ರಾಯಗಳಾದ ನನ್ನ ವೀರ್ಯಕಾರ್ಯಗಳೆಲ್ಲವೂ ಆಗಾಗ ನಿನ್ನ ಕಿವಿಗೆ ಬೀಳುತ್ತಿರುವುವು. ಅವುಗಳನ್ನು ಕೇಳುವುದರಿಂದ ಶೀಘ್ರದಲ್ಲಿಯೇ ನಿನಗೆ ಕ್ರಮಕ್ರಮವಾಗಿ ನಿನ್ನಲ್ಲಿ ಭಕ್ತಿಯೂ, ಮೋಕ್ಷದಲ್ಲಿ ಅಭಿರುಚಿಯೂ ಹೆಚ್ಚುತ್ತ ಬರುವುದು. ನನ್ನ ವ್ಯಾಪಾರಗಳನ್ನು ಚಿಂತಿಸುವಂತೆ ಮಾಡುವ ಆ ಭಕ್ತಿಯು ಹುಟ್ಟಿ ದೊಡನೆ, ಮನುಷ್ಯನು, ಕಣ್ಣಿಗೆ ಕಾಣಬಹುದಾದ ಇಹಲೋಕ ಫಲಗಳ ಲ್ಲಿಯೂ, ಶ್ರುತಿಗಳಿಂದ ಕೇಳಿರುವ ಸ್ವರ್ಗಾದಿ ಪಾರಲೌಕಿಕ ಫಲಗಳಲ್ಲಿಯೂ ವಿರಕ್ತಿಹೊಂದಿ, ಫಲಾಪೇಕ್ಷೆಯಿಲ್ಲದ ಕರ್ಮಯೋಗ ಜ್ಞಾನಯೋಗಗಳನ್ನು ಹಿಡಿದು, ಮನಸ್ಸನ್ನು ವಿವೇಕಾದಿಗಳಿಂದ ತಡೆದು, ಆ ಭಕ್ತಿಯೊಂದರಲ್ಲಿಯೇ ನೆಲೆಗೊಳಿಸುವುದಕ್ಕೆ ಯತ್ನಿಸುವನು. ನಿಷಿದ್ಧವಾದ ಅನ್ನಾದಿಗಳನ್ನು ಭುಜಿ ಸದೆ, ವೈರಾಗ್ಯ ಬಲದಿಂದ ಹೆಚ್ಚಿಸಿದ ಜ್ಞಾನಯೋಗದಿಂದಲೂ, ಫಲಾ ಪೇಕ್ಷೆಯಿಲ್ಲದ ಕರ್ಮಯೋಗದಿಂದಲೂ, ಭಕ್ತಿಯೋಗವನ್ನು ಸಂಪಾದಿಸಿದ ಮನುಷ್ಯನು, ಜೀವಾತ್ಮಶರೀರಕನಾದ ನನ್ನ ಸ್ವರೂಪವನ್ನು ಚೆನ್ನಾಗಿ ತಿಳಿಯಬಲ್ಲನು" ಎಂದನು. ಆಗ ದೇವಹೂತಿಯು "ಮಹಾತ್ಮಾ! ಭಕ್ತಿ ಯೋಗವೆಂಬುದಾವುದು? ಅದರ ಸ್ವರೂಪವೇನು? ನಾನು ಯಾವ ವಿಧ ದಿಂದ ಆ ಭಕ್ತಿಯನ್ನವಲಂಬಿಸಬೇಕು? ಸಂಸಾರತಾಪದಲ್ಲಿ ಸಿಕ್ಕಿ ಬೇಯು ತ್ತಿರುವವರು, ನಿರತಿಶಯಾನಂದರೂಪವಾದ ನಿನ್ನ ಪಾದಾರವಿಂದವನ್ನು ಯಾವ ಸುಲಭೋಪಾಯದಿಂದ ಪಡೆಯಬಹುದು? ಎಲೈ ಆನಂದಸ್ವರೂ ಪನೇ! ಗುರಿಯಿಟ್ಟ ಬಾಣದಂತೆ ಭಗವಂತನಾದ ನಿನ್ನನ್ನು ವಶೀಕರಿಸತಕ್ಕ ಭಕ್ತಿಯೋಗವೆಂಬುದಾವುದು? ಅದಕ್ಕೆ ಅಂಗಗಳೆಷ್ಟು? ಪರಮಾತ್ಮ ತತ್ವ ವನ್ನು ತಿಳಿಯುವಂತೆ ಮಾಡುವ ಆ ಅಂಗಗಳೆಲ್ಲವನ್ನೂ ನನಗೆ ತಿಳಿಸಬೇಕು. ಹೇ ದೇವಾ! ನೀನು ಹೇಳಿದ ಭಕ್ತಿಯೋಗದ ಸ್ವರೂಪವು ಜ್ಞಾನಿಗಳಿಗೂ ತಿಳಿಯಲಸಾಧ್ಯವಾದುದು. ಕೇವಲ ಮೂಢಬುದ್ಧಿಯುಳ್ಳ ಹೆಣ್ಣು ಹೆಂಗ

ಸಾದ ನನಗೆ, ಅದರ ತತ್ವವು ಸುಖವಾಗಿ ಅವಗಾಹನೆಗೆ ಬರುವಂತೆ ಅನುಗ್ರಹಿಸಬೇಕು" ಎಂದಳು. ಇದನ್ನು ಕೇಳಿ ಕಪಿಲರೂಪಿಯಾದ ಭಗವಂತನು, ತನ್ನ ತಾಯಿಯ ದೈನ್ಯಕ್ಕಾಗಿ ಮರುಕಗೊಂಡು, ಅವಳಿಗೆ ತತ್ವಬೋಧಕವಾಗಿಯೂ, ಭಕ್ತಿಯನ್ನು ಹೆಚ್ಚಿಸತಕ್ಕ ಜ್ಞಾನಯೋಗವನ್ನು ವಿವರಿಸತಕ್ಕುದಾಗಿಯೂ ಇರುವ ಶಾಸ್ತ್ರವನ್ನುಪದೇಶಿಸತೊಡಗಿದನು. "ಅಮ್ಮಾ! ಭಕ್ತಿಯೆಂಬುದು ಎಂತಹುದೆಂದು ಕೇಳಿದೆಯಲ್ಲವೆ? ಅದರ ಸ್ವರೂಪವನ್ನು ಹೇಳುವೆನು ಕೇಳು. ಮನುಷ್ಯನಿಗೆ ಶಬ್ದಾದಿ ವಿಷಯಗಳನ್ನು ತಿಳಿಸುವುದಕ್ಕಾಗಿ ಐದು ಜ್ಞಾನೇಂದ್ರಿಯಗಳೂ, ಶಾಸ್ತ್ರೋಕ್ತವಾದ ಕರ್ಮಗಳನ್ನು ನಡೆಸುವುದಕ್ಕಾಗಿ ಐದು ಕರ್ಮೇಂದ್ರಿಯಗಳೂ ಏರ್ಪಟ್ಟಿರುವುವು. ಈ ಜ್ಞಾನಕರ್ಮೇಂದ್ರಿಯಗಳೆಲ್ಲವನ್ನೂ ಯಾವ ಫಲಾಪೇಕ್ಷೆಯೂ, ಇಲ್ಲದೆ, ಭಗವಂತನ ವಿಷಯದಲ್ಲಿಯೇ ಉಪಯೋಗಪಡಿಸಿ, ಏಕಾಗ್ರತೆಯಿಂದ ನಡೆಸುವ ಮನಸ್ಸಿನ ವ್ಯಾಪಾರಕ್ಕೆ ಭಕ್ತಿಯೆಂದು ಹೆಸರು. ಈ ಭಕ್ತಿಯೆಂಬುದು ಐಶ್ವರ್ಯ ಕೈವಲ್ಯಾದಿ ಸಿದ್ಧಿಗಳಿಗಿಂತಲೂ ಬಹಳ ಮೇಲಾದುದು! ಹೊಟ್ಟೆಯೊಳಗಿನ ಜಾಠರಾಗ್ನಿಯು ಆಹಾರ ಪದಾರ್ಥಗಳನ್ನು ಜೀರ್ಣಮಾಡುವಂತೆ, ಈ ಭಕ್ತಿಯೆಂಬುದು ಅನಾದಿಯಾಗಿ ಅನುಸರಿಸಿ ಬಂದ ಕರ್ಮವಾಸನೆಯನ್ನು ನಾಶಮಾಡಿಬಿಡುವುದು. ನನ್ನ ಪಾದಸೇವೆಯಲ್ಲಿ ವಿಶೇಷ ಶ್ರದ್ಧೆಯುಳ್ಳವರಾಗಿ, ತಮ್ಮ ಸರ್ವೇಂದ್ರಿಯ ವ್ಯಾಪಾರಗಳನ್ನೂ ತನ್ನಲ್ಲಿಯೇ ನೆಲೆಗೊಳಿಸಿ, ಈ ಭಕ್ತಿಯನ್ನು ಸಾಧಿಸಿದ ಕೆಲವು ಮಹಾತ್ಮರು, ನಮ್ಮಲ್ಲಿ ಒಬ್ಬರಿಗೊಬ್ಬರು ಸೇರಿ ನನ್ನ ಸಚ್ಚರಿತ್ರೆಗಳನ್ನು ಸರ್ವಕಾಲದಲ್ಲಿಯೂ ಕೊಂಡಾಡುತ್ತಿರುವರು. ಆ ಆನಂದದಲ್ಲಿ ರುಚಿಹೊಂದಿದವರು, ನನ್ನ ಸಾರೂಪ್ಯರೂಪವಾದ ಮುಕ್ತಿಯನ್ನೂ ಅಪೇಕ್ಷಿಸಲಾರರು! ಇದರಿಂದಲೇ ನೀನು ಭಕ್ತಿಯೆಂಬುದು ಎಷ್ಟು ಸರ್ವೋತ್ತಮವಾದುದೆಂಬುದನ್ನು ತಿಳಿಯಬಹುದು. ಮತ್ತೆ ಕೆಲವು ಸತ್ಪುರುಷರು, ನಾನು ಬೇರೆ ಬೇರೆ ಅವತಾರಗಳನ್ನೆತ್ತಿ ಭೂಮಿಯಲ್ಲಿ ಅವತರಿಸಿದಾಗ, ಪ್ರಸನ್ನಮುಖದಿಂದಲೂ, ರಕ್ತಾಂತಲೋಚನದಿಂದಲೂ ಕೂಡಿದ ನನ್ನ ದಿವ್ಯಮಂಗಳ ವಿಗ್ರಹವನ್ನು ನೋಡಿ ಅದನ್ನೇ ಧ್ಯಾನಿಸುತ್ತ, ಆಯಾ ರೂಪಗಳಲ್ಲಿ ನಾನು ನುಡಿದ ಮಾತುಗಳನ್ನೇ ಆಗಾಗ ಅನುವಾದಮಾಡುತ್ತ, ಅದರಿಂದ ಅಮಿತಾನಂದ

ವನ್ನು ಹೊಂದುವರು. ಅಂತವರು ನನ್ನ ಅಂದವಾದ ಅವಯವಗಳು! ನನ್ನ ಲೀಲೆಗಳು! ನನ್ನ ಮುಗುಳ್ನಗೆ! ನನ್ನ ಪ್ರಸನ್ನದೃಷ್ಟಿ! ನನ್ನ ಅಮೃತಸಮಾನವಾದ ಮಧುರವಾಕ್ಯಗಳು! ಇವುಗಳಲ್ಲಿಯೇ ನಟ್ಟ ಮನಸ್ಸುಳ್ಳವರಾಗುವರು. ಇಂತವರೆಲ್ಲರೂ ಈ ಆನಂದಾನುಭವದಿಂದ ಪರವಶವಾದ ಸರ್ವೇಂದ್ರಿಯವುಳ್ಳವರಾಗಿ, ಮೋಕ್ಷವನ್ನೇ ಅಪೇಕ್ಷಿಸ ದಿದ್ದರೂ, ನನ್ನಲ್ಲಿ ಅವರಿಗಿರತಕ್ಕ ಭಕ್ತಿಯೇ ಅವರನ್ನು ಮೋಕ್ಷಮಾರ್ಗ ವಾದ ಅರ್ಚಿರಾದಿಗತಿಗೆ ತಾನಾಗಿ ತಂದು ಸೇರಿಸುವುದು. ಎಲ್ಲರಿಗೂ ಸುಲಭ ವಲ್ಲದ ಈ ಅರ್ಚಿರಾದಿ ಮಾರ್ಗವನ್ನು ಸೇರಿದೊಡನೆ, ಅವರು ದಾರಿಯಿಂದ ಹೋಗುವಾಗ, ನನ್ನ ಮಾಯೆಯಿಂದ ಸೃಷ್ಟಿಸಲ್ಪಟ್ಟ ಬ್ರಹ್ಮಲೋಕದ ವರೆಗಿನ ಪುಣ್ಯಲೋಕಗಳನ್ನಾಗಲೀ, ಭಕ್ತಿಬಲದಿಂದ ಲಭಿಸಬಹುದಾದ ಅಣಿ ಮಾದ್ಯಷ್ಟೈಶ್ವರ್ಯಗಳನ್ನಾಗಲೀ, ಕಣ್ಣೆತ್ತಿಯೂ ನೋಡಲಾರರು. ಇಂತ ವರು ಮುಕ್ತಿಯನ್ನುದ್ದೇಶಿಸಿ ಹೋಗುವಾಗ, ದಾರಿಯಲ್ಲಿ ಬ್ರಹ್ಮೇಂದ್ರಾದಿ ದೇವತೆಗಳು ತಮ್ಮ ತಮ್ಮ ಲೋಕಾಧಿಪತ್ಯವನ್ನೇ ಕೊಡುವುದಾಗಿ ಪ್ರಾರ್ಥಿಸಿ ಕೇಳಿಕೊಂಡರೂ, ಅವರ ಮಾತನ್ನೂ ನಿರಾಕರಿಸಿ, ಅವರಿಗೆ ಸಮಾಧಾನ ವನ್ನು ಹೇಳಿ ಮುಂದೆ ಸಾಗುವರು. ಜನನೀ! ಭಗವದ್ಗುಣಾನುಭವವೆಂಬ ಮಹಾನಂದನಿಂದ ಮೋಕ್ಷವನ್ನೇ ಅಪೇಕ್ಷಿಸದಿರುವ ಇಂತಹ ಭಕ್ತೋತ್ತ ಮರು, ಬ್ರಹ್ಮಾದಿ ಲೋಕಗಳಲ್ಲಿಯಾಗಲೀ, ಅಣಿಮಾದ್ಯೈಶ್ವರ್ಯಗಳಲ್ಲಿ ಯಾಗಲೀ ಆಸೆಪಡದಿರುವರೆಂಬುದೇನಾಶ್ಚರ್ಯವು? ಇವರು ಬೇರೊಂದ ರಲ್ಲಿಯೂ ದೃಷ್ಟಿಯಿಡದೆ ನನ್ನ ನಿವಾಸಸ್ಥಾನವಾದ ನಿತ್ಯವಿಭೂತಿಯನ್ನು ಸೇರುವರು. ಎಲೈ ಶಾಂತಾತ್ಮಳೆ! ಅವರು ನನ್ನ ಲೋಕವನ್ನು ಸೇರಿ, ನನ್ನನ್ನು ಅನುಭವಿಸುವುದರಲ್ಲಿಯೇ ಅಕ್ಕರೆಯುಳ್ಳವರಾದಮೇಲೆ, ಅವರಿಗೆ ಆ ಅನುಭವವು ಎಂದಿಗೂ ತಪ್ಪಿಹೋಗಲಾರದು! ನನ್ನ ಸ್ಥಾನವಾದ ನಿತ್ಯ ವಿಭೂತಿಗೆ ಎಂದಿಗೂ ಚ್ಯುತಿಯಿಲ್ಲ. ಇದನ್ನು ಬಿಟ್ಟು ಇತರ ಲೋಕಗಳೆ ಲ್ಲಕ್ಕೂ ನಾಶವುಂಟು! ಅದಕ್ಕಾಗಿಯೇ ನನ್ನ ಸ್ಥಾನವು ನಿತ್ಯವಿಭೂತಿಯೆನಿ ಸುವುದು. ಅಲ್ಲಿನ ಆನಂದಕ್ಕೂ ಯಾವಾಗಲೂ ನ್ಯೂನತೆಯಿಲ್ಲ! ನನ್ನ ಸ್ಥಾನವಾದ ಪರಮಪದದಲ್ಲಿ ಕಾಲಶಕ್ತಿಯೂ ನಡೆಯದುದರಿಂದ, ಇಲ್ಲಿ ಸೇರಿದವರನ್ನು ನನ್ನ ಸಂಕಲ್ಪರೂಪವಾದ ಕಾಲಚಕ್ರವೂ ಮುಟ್ಟಲಾರದು!

ಇದಕ್ಕೆ ಕಾರಣವೇನೆಂದು ಕೇಳುವೆಯಾ! ನನ್ನ ಕಡೆಗೆ ಸೇರಿದವರು ನನಗೆ ಸರ್ವವಿಧದಲ್ಲಿಯೂ ಪ್ರೀತಿವಿಷಯರಾಗುವರು! ಅಂತವರಿಗೆ ನಾನು ಮಗನಂತೆ ನಂಬಿಕೆಗೆ ಪಾತ್ರನು, ಗುರುವಿನಂತೆ ಹಿತವನ್ನುಪದೇಶಿಸತಕ್ಕವನು. ಸುಹೃತ್ತು ಗಳಂತೆ ಕ್ಷೇಮವನ್ನುಂಟುಮಾಡುವೆನು. ಇಷ್ಟದೈವನಂತೆ ಪೂಜ್ಯನು. ಹೀಗೆ ಸರ್ವವಿಧದಿಂದಲೂ ನನಗೆ ಪ್ರಿಯರಾದ ಅಂತಹ ಭಕ್ತರನ್ನು ಎಂದಿಗೂ ನಾನು ಬಿಟ್ಟುಕೊಡಲಾರೆನು. ಜನನೀ! ಇಹಲೋಕಸುಖಗಳನ್ನೂ, ಸ್ವರ್ಗಾದಿ ಪಾರಲೌಕಿಕಸುಖಗಳನ್ನೂ ಅಶಾಶ್ವತಗಳೆಂದು ತಿಳಿದು, ಅವೆಲ್ಲವನ್ನೂ ತೊರೆದು ಈ ಸುಖಗಳನ್ನು ಸಾಧಿಸುವುದಕ್ಕೆ ಮುಖ್ಯಕಾರಣವಾದ ತಮ್ಮ ದೇಹದಲ್ಲಿಯೂ ಅಭಿಮಾನವನ್ನು ಬಿಟ್ಟು, ಆ ದೇಹಾನುಬಂಧಿಗಳಾದ ಹೆಂಡಿರು ಮಕ್ಕಳನ್ನೂ ತ್ಯಜಿಸಿ, ಮನೆಮಠಗಳನ್ನೂ, ಆಸ್ತಿಪಾಸ್ತಿಗಳನ್ನೂ ನಿರಾಕರಿಸಿ, ನನ್ನನ್ನೇ ಮರೆಹೊಕ್ಕು ಬಂದವರಿಗೆ, ನಾನು ಯಾವ ವಿಧ ವಾದ ಪ್ರಿಯವನ್ನು ಮಾಡಿದರೆ ತಾನೇ ತೀರುವುದು? ಸರ್ವಜ್ಞನಾದ ನನ್ನನ್ನು ನಿಶ್ಚಲವಾದ ಭಕ್ತಿಯಿಂದ ಭಜಿಸತಕ್ಕವರಿಗೆ, ನಾನು ಆ ಕ್ಷಣವೇ ಸಂಸಾರಪಾಶವನ್ನು ತಪ್ಪಿಸುವುದಲ್ಲದೆ, ಅವರಿಗೆ ತಿರುಗಿ ಸಂಸಾರಸಂಬಂಧವೇ ಇಲ್ಲದಂತೆಯೂ ಮಾಡುವೆನು. ಸರ್ವಜೀವಾಂತರ್ಯಾಮಿಯಾಗಿ, ಚಿದಚಿದ್ರೂಪ ವಾದ ಸಮಸ್ತಪ್ರಪಂಚವನ್ನೂ ಧರಿಸಿರತಕ್ಕ ನನಗಿಂತಲೂ ಲೋಕದಲ್ಲಿ ಬೇರೆ ದೈವವಿಲ್ಲ! ಬ್ರಹ್ಮರುದ್ರಾದಿ ಮೊದಲಾದ ಬೇರೆ ಯಾವ ದೇವತೆಗಳೂ ಆ ಸಂಸಾರಭಯವನ್ನು ನೀಗಿಸಲಾರರು. ಬೇರೆ ಎಲ್ಲಾ ದೇವತೆಗಳೂ ನನ್ನ ಆಜ್ಞಾನುವರ್ತಿಗಳು. ಎಲೈ ಜನನಿ! ಇನ್ನು ಹೆಚ್ಚು ಮಾತಿನಿಂದೇನು? ನನಗಾಗಿ ಭಯಪಟ್ಟು ಈ ಗಾಳಿಯು ಬೀಸುತ್ತಿರುವುದು. ನನ್ನ ಭಯ ಕ್ಕಾಗಿಯೇ ಸೂರ್ಯನು ತಪಿಸುತ್ತಿರುವನು. ನನ್ನ ಭಯದಿಂದಲೇ ಇಂದ್ರನು ಮಳೆಯನ್ನು ಕರೆಯುವನು. ನನ್ನ ಭಯಕ್ಕಾಗಿಯೇ ಅಗ್ನಿಯು ದಹಿಸು ವನು. ನನಗೆ ಭಯಪಟ್ಟೇ ಮೃತ್ಯುವು ತನ್ನ ಅಧಿಕಾರವನ್ನು ನಡೆಸುವನು. ಹೀಗೆ ಸಮಸ್ತ ದೇವತೆಗಳೂ ನನ್ನ ನಿಯಮಕ್ಕೊಳಪಟ್ಟು, ನನಗೆ ಭೀತ ರಾಗಿಯೇ ತಮ್ಮ ತಮ್ಮ ಅಧಿಕಾರಗಳನ್ನು ತಪ್ಪದೆ ನಡೆಸುತ್ತಿರುವರು. ಇದಕ್ಕಾಗಿಯೇ ಯೋಗಿಗಳು ತಮ್ಮ ಶ್ರೇಯಸ್ಸಿಗಾಗಿ ಜ್ಞಾನವೈರಾಗ್ಯ ಗಳೊಡಗೂಡಿದ ಭಕ್ತಿಯೋಗವನ್ನು ಹಿಡಿದು, ಸಮಸ್ತ ಭಯವನ್ನೂ

ನೀಗಿಸತಕ್ಕ ನನ್ನ ಪಾದಮೂಲವನ್ನು ಸೇವಿಸುವರು. ಜನನೀ! ನಾನು ಹೇಳತಕ್ಕ ಶಾಸ್ತ್ರಾರ್ಥದ ಸಾರವನ್ನು ಸಂಗ್ರಹಿಸಿ ಹೇಳುವೆನು ಕೇಳು! ಯಾವ ಕಾರಣಾಂತರದಿಂದಲೂ ಕುಂದದ ತೀವ್ರವಾದ ಭಕ್ತಿಯೋಗದಿಂದ ಮನಸ್ಸನ್ನು ನನ್ನಲ್ಲಿ ಸ್ಥಿರವಾಗಿ ನಿಲ್ಲಿಸಿಡುವುದೊಂದೇ, ಈ ಪ್ರಕೃತಿಮಂಡಲದಲ್ಲಿ ಸಂಸಾರಕ್ಕೆ ಕಟ್ಟುಬಿದ್ದಿರುವ ಜೀವನಿಗೆ ಮೋಕ್ಷೋಪಾಯವೆಂದು ತಿಳಿ!" ಎಂದನು. ಇಲ್ಲಿಗೆ ಇಪ್ಪತ್ತೈದನೆಯ ಅಧ್ಯಾಯವು.

---

## ಕಪಿಲನು ದೇವಹೂತಿಗೆ ಪ್ರಕೃತಿ ಪುರುಷರ ಸ್ವರೂಪವನ್ನು ತಿಳಿಸಿದುದು.

ಅಮ್ಮಾ! ಮೋಕ್ಷಕ್ಕೆ ಬೇಕಾದ ಪ್ರಧಾನ ಮಾರ್ಗವನ್ನು ನಿನಗೆ ತಿಳಿಸಿದೆನಷ್ಟೆ? ಪ್ರಕೃತಿ, ಪುರುಷ, ಕಾಲವೆಂಬೀ ಮೂರು ತತ್ವಗಳ ಸ್ವರೂಪವನ್ನು ನಿನಗೆ ಬೇರೆ ಬೇರೆಯಾಗಿ ವಿವರಿಸಿ ತಿಳಿಸುವೆನು ಕೇಳು. ಈ ತತ್ವಗಳ ಸ್ವರೂಪವನ್ನು ತಿಳಿದಾಗಲೇ, ಮೋಕ್ಷಾಭಿಲಾಷೆಯುಳ್ಳ ಮನುಷ್ಯನಿಗೆ ಪ್ರಕೃತಿಗುಣಗಳಾದ ಸತ್ವರಜಸ್ತಮಸ್ಸುಗಳು ಬಿಟ್ಟುಹೋಗುವುವು. ಪರಬ್ರಹ್ಮನನ್ನು ಸಾಕ್ಷಾತ್ಕರಿಸುವುದಕ್ಕೆ ಬೇಕಾದ ಯಾವ ಜ್ಞಾನವನ್ನು ಮೋಕ್ಷಕಾರಣವೆಂದು ವೇದಾಂತಿಗಳು ಹೇಳಿರುವರೋ, ಯಾವ ಜ್ಞಾನದಿಂದ ಅಜ್ಞಾನವು ನೀಗುವುದೋ ಅಂತಹ ಜ್ಞಾನವನ್ನು ನಿನಗೆ ವಿವರಿಸುವೆನು. ಮೊದಲು ಜೀವಾತ್ಮದ ಸ್ವರೂಪವು ಎಂತಹುದೆಂಬುದನ್ನು ಕೇಳು. ಜೀವನೇ ತನಗೆ ತಾನೇ ತೋರುವ ಸ್ವರೂಪವುಳ್ಳವನು ಎಂದರೆ, ದೀಪದಂತೆ ಸ್ವಯಂಪ್ರಕಾಶವುಳ್ಳವನು. ಜ್ಞಾನವೇ ಅವನ ಸ್ವರೂಪವೂ, ಜ್ಞಾನವೇ ಅವನ ಗುಣವಾಗಿಯೂ ಇರುವುದು. ದೀಪವು ತನ್ನ ಪ್ರಭೆಯಿಂದ ಇತರ ವಸ್ತುಗಳನ್ನು ಪ್ರಕಾಶಗೊಳಿಸುತ್ತ, ಸ್ವಧರ್ಮವಾದ ಪ್ರಭೆಯನ್ನಪೇಕ್ಷಿಸದೆ ತನಗೆ ತಾನೇ ಬೆಳಗುವಂತೆ, ಜೀವನೂ ತನ್ನೊಳಗೆ ತಾನೇ ತಿಳಿಯತಕ್ಕ ನಿಜಸ್ವರೂಪವುಳ್ಳವನಾಗಿ, ಇತರ ವಸ್ತುಗಳನ್ನೂ ತಿಳಿಯುವನು. ಪ್ರಕೃತಿಯ

ವಿಕಾರರೂಪವಾದ ಶರೀರ, ಇಂದ್ರಿಯಗಳು, ಮನಸ್ಸು, ಇವೆಲ್ಲಕ್ಕಿಂತಲೂ ವಿಲಕ್ಷಣನಾಗಿರುವನು. ಸಹಜವಾಗಿ ಅವನಿಗೆ ಪ್ರಕೃತಿಗುಣಗಳಾದ ಸತ್ವಾದಿಗಳ ಸಂಬಂಧವಿಲ್ಲ. ಇವನು ಶರೀರದಲ್ಲಿ ಪ್ರವೇಶಿಸಿ, ಅದನ್ನು ಧರಿಸಿಕೊಂಡಿರುವನು. ಈ ಜೀವಾತ್ಮಸ್ವರೂಪವು, ಬ್ರಹ್ಮನು ಮೊದಲಾಗಿ ಸಣ್ಣ ಕ್ರಿಮಿಯವರೆಗೆ ಎಲ್ಲಾ ಶರೀರದಲ್ಲಿಯೂ ವ್ಯಾಪಿಸಿರುವುದು. ಹುಟ್ಟು, ಸಾವು ಮುಂತಾದ ವಿಕಾರಗಳು ಆ ದೇಹಕ್ಕಲ್ಲದೆ ಜೀವನಿಗಿಲ್ಲ. ಆದರೆ "ನಾನು ದೇವನೆಂದೂ, ನಾನು ಮನುಷ್ಯನೆಂದೂ, ನನ್ನ ಆಕಾರವು ದೊಡ್ಡದೆಂದೂ, ಅವನ ಆಕಾರವು ಸಣ್ಣದೆಂದೂ, ಜೀವಾತ್ಮರಲ್ಲಿ ಒಬ್ಬರಿಗೊಬ್ಬರಿಗೆ ವ್ಯತ್ಯಾಸವೇಕೆ? ಆಯಾ ದೇಹಗಳೊಡನೆ ಜೀವಾತ್ಮವು ಒಂದಾಗಿರುವಂತೆಯೇ ತೋರುವಾಗ, ಆಯಾ ದೇಹಗಳೊಡನೆ ಆಯಾ ಜೀವನಿಗೂ ಜನನಮರಣಾದಿಗಳಿಲ್ಲವೆಂಬುದು ಹೇಗೆ?" ಎಂದು ನೀನು ಶಂಕಿಸಬಹುದು. ಜೀವನು ಪುಣ್ಯಪಾಪರೂಪಗಳಾದ ಕರ್ಮಗಳ ವ್ಯತ್ಯಾಸದಿಂದಲೇ ದೇವಮನುಷ್ಯಾದಿ ಭೇದಗಳನ್ನು ತನ್ನಲ್ಲಿ ಆರೋಪಿಸಿಕೊಳ್ಳುವನೇ ಹೊರತು, ಆ ದೇಹಾದಿಗಳೊಡನೆ ಜೀವನಿಗೆ ಜನನಮರಣಾದಿಗಳೊಂದೂ ಇರುವುದಿಲ್ಲ. ಕನಸನ್ನು ಕಾಣುವವನು ಎಚ್ಚರಗೊಂಡಾಗ, ತಾನು ಕನಸಿನಲ್ಲಿ ಕಂಡ ವಸ್ತುಗಳು ನಾಶಹೊಂದಿದರೂ, ತಾನು ಹೇಗೆ ನಾಶಹೊಂದುವುದಿಲ್ಲವೋ, ಹಾಗೆಯೇ ಜೀವನೂ ಕೂಡ, ಪ್ರಕೃತಿ ಸಂಬಂಧದಿಂದ ತನಗುಂಟಾದ ದೇಹಾದಿಗಳು ಬಿಟ್ಟು ಹೋದರೂ, ತಾನು ನಾಶವಿಲ್ಲದಂತಿರುವನು. ಇಂತಹ ಜೀವನು ಬಹಳ ಸೂಕ್ಷ್ಮಸ್ವರೂಪವುಳ್ಳವನಾದುದರಿಂದ, ಅನೇಕ ವಸ್ತುಗಳಲ್ಲಿ ಒಳಹೊಕ್ಕು ವ್ಯಾಪಿಸಿರತಕ್ಕ ಸ್ವಭಾವವುಳ್ಳವನು. ಪ್ರಕೃತಿಯೆಂಬುದು ಜಗತ್ಸೃಷ್ಟಿಗೆ ಮೊದಲು, ಭೂಮಿ ಮೊದಲಾದ ಹೆಸರು, ಆಕಾರವೆಂಬೀ ವ್ಯತ್ಯಾಸಗಳೊಂದೂ ಇಲ್ಲದೆ, ಸೂಕ್ಷ್ಮದಶೆಯಲ್ಲಿ, ಪರಮಪುರುಷನ ಕ್ರೀಡಾಸಾಮಗ್ರಿಯೆನಿಸಿಕೊಂಡಿರುವುದು. ಈ ಪ್ರಕೃತಿಯೇ ಸತ್ವಾದಿ ಗುಣಗಳಿಗೆ ನೆಲೆಯಾಗಿರುವುದು, ಜೀವಾತ್ಮನು ಒಂದೊಂದು ಕಾಲದಲ್ಲಿ ಈ ಪ್ರಕೃತಿಯ ಸಂಬಂಧವನ್ನು ಹೊಂದುವನೇ ಹೊರತು, ಇದು ಅವನಿಗೆ ಸಹಜವಾಗಿ ಹುಟ್ಟಿದ ಸಂಬಂಧವಲ್ಲ. ಆ ಪ್ರಕೃತಿಯು ಭಗವಂತನ ಸಂಕಲ್ಪದಿಂದ ಪ್ರೇರಿತವಾಗಿ, ಒಂದೇ ಬಗೆಯಾದ ಜೀವನನ್ನು ಚಿತ್ರವಿಚಿತ್ರವಾಗಿ ಕಾಣಿಸು

ತ್ತಿರುವುದು. ಈ ಪ್ರಕೃತಿಯು ಜ್ಞಾನವನ್ನು ಮರೆಸತಕ್ಕ ಸ್ವಭಾವವು ಳ್ಳದು. ಜೀವನು ಈ ಪ್ರಕೃತಿ ಸಂಬಂಧವನ್ನು ಹೊಂದಿದಾಗ ಅದರ ಸ್ವರೂಪವನ್ನು ಕಾಣುತ್ತಿದ್ದಹಾಗೆಲ್ಲಾ ಬುದ್ಧಿಮೋಹವನ್ನು ಹೊಂದಿ, ತನ್ನ ಸ್ವರೂಪವನ್ನು ಮರೆತು, ಅದನ್ನೇ ತಾನೆಂದು (ಆತ್ಮವೆಂದು) ಭ್ರಮಿಸು ವನು. ಆ ಪ್ರಕೃತಿಯ ಗುಣಗಳ ಪ್ರಾಬಲ್ಯದಿಂದ ಕರ್ಮದಲ್ಲಿಯೂ ಪ್ರವ ರ್ತಿಸಿ, ಅದನ್ನು ತಾನೇ ನಡೆಸುವುದಾಗಿಯೂ ಆರೋಪಿಸಿಕೊಳ್ಳುವನು. ಸಂಸಾರಸಂಬಂಧವಾದ ಕಾರ್ಯಗಳಲ್ಲಿ ಜೀವನಿಗುಂಟಾಗುವ ಪ್ರಯತ್ನವು ಆ ಪ್ರಕೃತಿಗುಣಗಳ ಮೂಲಕವಾಗಿ ಬಂದುದೇ ಹೊರತು, ಅವನಿಗೆ ಸಹಜ ವಾದುದಲ್ಲ. ಹೀಗೆ ಪ್ರಕೃತಿ ಸಂಬಂಧದಿಂದುಂಟಾದ ಕರ್ತೃತ್ವವನ್ನು ಜೀವನು ತನ್ನಲ್ಲಿ ಆರೋಪಿಸಿಕೊಳ್ಳುವುದರಿಂದಲೇ ಅವನಿಗೆ ಸಂಸಾರ ಬಂಧವೂ ಉಂಟಾಗುವುದು. ಅದರಿಂದಲೇ ಇವನು ಕರ್ಮಗಳಲ್ಲಿಯೂ ಕಟ್ಟುಬೀಳುವನು. ಜೀವನು ಸಹಜವಾಗಿ ಸಂಚಾರಾದಿ ವ್ಯಾಪಾರವಿಲ್ಲದವ ನಾಗಿದ್ದರೂ ಅವನಿಗೆ ಅದರಲ್ಲಿ ಪ್ರವರ್ತನವು ಪುಣ್ಯಪಾಪಸಂಬಂಧದಿಂದಲೇ ಉಂಟಾಗುವುದು. ಮತ್ತು ಜೀವಾತ್ಮನ ಗುಣಸ್ವರೂಪಗಳೆರಡೂ ಜ್ಞಾನವೇ ಆದುದರಿಂದ, ಅವನ ಜ್ಞಾನವು ಸಹಜವಾಗಿ ಶುದ್ಧವಾಗಿರುವುದು. ಅಂತಹ ಜೀವಾತ್ಮಗಳಿಗೆ, ಅವಿದ್ಯೆಯ ಸಂಬಂಧವುಂಟಾದಾಗ, ಆ ಜ್ಞಾನಕ್ಕೆ ಹೆಚ್ಚು ಕಡಿಮೆಗಳು ಏರ್ಪಡುವುವು. ಇದರಿಂದಲೇ ಜೀವಾತ್ಮರು, ಕರ್ಮಾನುಸಾರ ವಾಗಿ ಬ್ರಹ್ಮನಿಂದ ಹಿಡಿದು, ಸಣ್ಣ ಹುಳುವಿನವರೆಗೆ ಬೇರೆ ಬೇರೆ ವಿಚಿತ್ರ ಗಳಾದ ದೇಹಗಳಲ್ಲಿ ಪ್ರವೇಶಿಸಿ, ಆಯಾ ದೇಹಗಳಿಗೆ ತಕ್ಕಂತೆ ಜ್ಞಾನ ದಲ್ಲಿಯೂ ಹೆಚ್ಚುಕಡಿಮೆಗಳನ್ನು ಹೊಂದಿ, ಆ ದೇಹವನ್ನೇ ಆತ್ಮವೆಂದು ಭ್ರಮಿಸುವರು. ಆಯಾ ದೇಹಾಭಿಮಾನಕ್ಕೆ ತಕ್ಕಂತೆ ಕರ್ಮಗಳಲ್ಲಿಯೂ ಪ್ರವರ್ತಿಸುವರು. ಅವುಗಳಿಗೆ ತಕ್ಕಂತೆ ಸುಖದುಃಖಗಳಿಗೂ ಭಾಗಿಯಾಗು ವರು. ಇದೇ ಸಂಸಾರವೆನಿಸುವುದು. ಅಮ್ಮಾ! ಆದುದರಿಂದ ಹಿರಿಯರು, ಆ ಶರೀರಚೇಷ್ಟೆಗಳಲ್ಲಿಯೂ, ಇಂದ್ರಿಯ ವ್ಯಾಪಾರಗಳಲ್ಲಿಯೂ, ಶರೀರ ರೂಪದಿಂದಿರುವ ಆ ಪ್ರಕೃತಿಯನ್ನೇ ಕಾರಣವಾಗಿ ಹೇಳುವರು. ಮನು ಷ್ಯನು ನಡೆಸತಕ್ಕ ಭೋಗಸಾಧನಗಳಾದ ಕಾರ್ಯಗಳೆಲ್ಲವೂ, ಜೀವನನ್ನು ತನ್ನೊಳಗೆ ಮುಚ್ಚಿಕೊಂಡು ಶರೀರರೂಪದಿಂದಿರುವ ಪ್ರಕೃತಿ ಮೂಲಕ

ವಾದುದೆಂದೇ ನಿಶ್ಚಯಿಸಿರುವರು. ಇದರಿಂದುಂಟಾಗುವ ಸುಖದುಃಖಗಳ ನ್ನನುಭವಿಸುವುದಕ್ಕೆ ಮಾತ್ರ ಜೀವಾತ್ಮನು ಭಾಗಿಯಾಗುವನು. ಹೀಗೆ ಜೀವನು ಆ ಶರೀರವನ್ನು ಧರಿಸುವುಕ್ಕೆ ಪ್ರಯತ್ನಮಾಡುತ್ತಿರುವುದರಿಂದ, ಕರ್ತೃತ್ವಕ್ಕೂ, ಆ ಪ್ರಕೃತಿ ಸಂಬಂಧದಿಂದುಂಟಾಗುವ ಸುಖದುಃಖಗಳನ್ನ ನುಭವಿಸುವುದರಿಂದ ಭೋಕ್ತೃತ್ವಕ್ಕೂ ಭಾಗಿಯಾಗುವನು" ಎಂದನು. ಇದನ್ನು ಕೇಳಿ ದೇವಹೂತಿಯು "ಎಲೈ ಪುರುಷೋತ್ತಮನೇ! ಕಾರ್ಯರೂಪ ವಾದ ಈ ಪ್ರಪಂಚಕ್ಕೆ ಪ್ರಕೃತಿಪುರುಷರಿಬ್ಬರೂ ಕಾರಣರಷ್ಟೇ? ಈ ಕಾರ್ಯ ದಶೆಯನ್ನು ಹೊಂದುವುದಕ್ಕೆ ಮೊದಲು, ಇವೆರಡೂ ನಾಮರೂಪ ವಿಭಾಗ ಗಳೊಂದೂ ಇಲ್ಲದೆ, ಭಗವಂತನಿಗೆ ಶರೀರವಾಗಿ, ಸೂಕ್ಷ್ಮದಶೆಯಲ್ಲಿದ್ದು ವಷ್ಟೇ? ಆ ಪ್ರಕೃತಿಪುರುಷರಿಬ್ಬರಿಂದ ನಡೆಯುವ ಕಾರ್ಯಭೇದವೇನು? ಲೋಕದಲ್ಲಿ ತಂದೆ, ಮೊದಲಾದಂತೆ ಕಾರಣರೂಪದಿಂದಲೂ, ಮಗನಂತೆ ಕಾರ್ಯರೂಪದಿಂದಲೂ ತೋರುವ ವಸ್ತುಗಳೆಲ್ಲವೂ ಈ ಪ್ರಕೃತಿಸಂಬಂಧ ದಿಂದುಂಟಾದ ಭೇದಗಳೇ! ಈ ತಂದೆಮಕ್ಕಳೆಂಬ ವ್ಯವಹಾರಗಳೆಲ್ಲವೂ ಕೇವಲ ಪ್ರಕೃತಿಯಿಂದಲಾಗಲೀ, ಕೇವಲ ಪುರುಷನಿಂದಲಾಗಲೀ ಉಂಟಾಗ ಲಾರವು. ಆದುದರಿಂದ ಅವೆರಡೂ ಸೇರಿಯೇ ಕಾರ್ಯರೂಪ ಪ್ರಪಂಚ ವೆನಿಸಬೇಕು. ಇವುಗಳೆರಡರ ಸ್ವರೂಪವನ್ನು ನನಗೆ ಇನ್ನೂ ವಿಶದವಾಗಿ ತಿಳಿಸು" ಎಂದಳು. ಆಗ ಕಪಿಲನು ದೇವಹೂತಿಯನ್ನು ಕುರಿತು "ಅಮ್ಮಾ ಕೇಳು! ಯಾವುದು ಲೊಕಸೃಷ್ಟಿಗೆ ಪ್ರಧಾನವಸ್ತುವೋ ಅದನ್ನೇ ಪ್ರಕೃತಿ ಯೆಂದು ಹೇಳುವರು. ಈ ಪ್ರಧಾನವೆಂಬುದು ಕಾರಣದಶೆಯಲ್ಲಿ ಭೂಮಿ ಮೊದಲಾದ ವಿಶೇಷಾಕಾರಗಳೊಂದೂ ಇಲ್ಲದಂತಿರುವುದು. ಆಗ ಇದಕ್ಕೆ ಆಕಾರವೊಂದೂ ಇಲ್ಲದುದರಿಂದಲೇ ಅವ್ಯಕ್ತವೆಂದೂ ಕರೆಯಲ್ಪಡುವುದು. ಇದು ನಿತ್ಯವಾದುದು. ಈ ಪ್ರಕೃತಿಗೆ ಸತ್ವವೆಂದೂ, ರಜಸ್ಸೆಂದೂ, ತಮಸ್ಸೆಂದೂ ಮೂರು ಗುಣಗಳುಂಟು. ಇದು ಈ ಗುಣಗಳ ಹೆಚ್ಚು ಕಡಿಮೆಯಿಂದ ಕಾರ್ಯದಶೆಯನ್ನು ಹೊಂದಿ, ಭೂಮಿ ಮೊದಲಾದ ಆಕಾರ ಭೇದಗಳನ್ನೂ ಹೊಂದುವುದು. ಮಹತ್ತು ಮೊದಲಾಗಿ ಪೃಥಿವಿಯ ವರೆಗೆ ಕಾರಣರೂಪದಿಂದಲೂ, ಬ್ರಹ್ಮನಿಂದ ಸಣ್ಣ ಕ್ರಿಮಿಕೀಟಗಳವರೆಗೆ ಕಾರ್ಯರೂಪದಿಂದಲೂ ಕಾಣುವುದರಿಂದ, ಇದಕ್ಕೆ ಕಾರ್ಯಕಾರಣಗಳೆಂಬ

ಎರಡು ರೂಪಗಳೂ ಏರ್ಪಟ್ಟಿರುವುವು. ಭೂಮಿ ಮೊದಲಾದ ಐದು ಭೂತ ಗಳು, ಅದರ ಗುಣಗಳೆನಿಸಿಕೊಂಡ ಗಂಧವೇ ಮೊದಲಾದ ಐದು ತನ್ಮಾತ್ರ ಗಳು, ಮನಸ್ಸು, ಅಹಂಕಾರ, ಮಹತ್ತು, ಅವ್ಯಕ್ತವೆಂಬಿವು ನಾಲ್ಕು, ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆಂಬಿವು ಹತ್ತು, ಇವಿಷ್ಟೂ ಸೇರಿ, ಇಪ್ಪತ್ತನಾಲ್ಕು ತತ್ವಗಳ ಸಮುದಾಯವನ್ನು ಪ್ರಕೃತಿಯ ಕಾರ್ಯವೆಂದು ಹಿರಿಯರು ನಿರ್ಣಯಿಸಿರುವರು. ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಎಂಬಿವೈದೂ ಪಂಚಮಹಾಭೂತಗಳು! ಈ ಭೂತಗುಣಗಳಾದ ಗಂಧ, ರಸ, ರೂಪ, ಸ್ಪರ್ಶ, ಶಬ್ದವೆಂಬಿವೈದೂ ಪಂಚತನ್ಮಾತ್ರಗಳು. ಭೂತ ಸಂಖ್ಯೆಯನ್ನು ಅನೇಕರು ಅನೇಕ ವಿಧವಾಗಿ ಹೇಳುವುದುಂಟು. ಆದರೆ ಇದೇ ನನ್ನ ಮತವು. ಕಣ್ಣು, ಕಿವಿ, ಮೂಗು, ನಾಲಗೆ, ತೊಗಲು, ಇವೈದು ಜ್ಞಾನೇಂದ್ರಿಯಗಳೂ, ವಾಕ್ಕು, ಕೈ, ಕಾಲು, ಜಲದ್ವಾರ, ಮಲ ದ್ವಾರವೆಂಬೀ ಐದು ಕರ್ಮೇಂದ್ರಿಯಗಳೂ ಸೇರಿ ಇಂದ್ರಿಯಗಳು ಹತ್ತಾಗಿ ರುವುವು. ಅಂತಃಕರಣವೆಂಬ ಒಳಗಿನ ಇಂದ್ರಿಯವೊಂದೇ ತನಗೆ ಲಕ್ಷಣ ಗಳಾದ, ಸಂಕಲ್ಪ, ಅಧ್ಯವಸಾಯ, ಅಭಿಮಾನ, ಚಿಂತೆಯೆಂಬ ಬೇರೆ ಬೇರೆ ನಾಲ್ಕು ಬಗೆಯ ವ್ಯಾಪಾರಗಳಿಂದ, ಮನಸ್ಸೆಂದೂ, ಬುದ್ಧಿಯೆಂದೂ, ಅಹಂ ಕಾರವೆಂದೂ, ಚಿತ್ತವೆಂದೂ, ನಾಲ್ಕು ಬಗೆಯಾಗುವುದು. ಸತ್ವ, ರಜಸ್ಸು, ತಮಸ್ಸು ಎಂಬ ಈ ಮೂರು ಗುಣಗಳೊಡಗೂಡಿದ ಪ್ರಕೃತಿತತ್ವದ ಅವಸ್ಥಾ ಭೇದಗಳೆಲ್ಲವೂ ಇಷ್ಟೇ! ತತ್ವಜ್ಞರಾದ ಹಿರಿಯರು ಹೀಗೆ ಇಪ್ಪತ್ತನಾಲ್ಕು ತತ್ವಗಳೆಂದೇ ನಿರ್ಣಯಿಸಿರುವರು. ಕೆಲವರು ಕಾಲವೆಂಬ ಮತ್ತೊಂದು ತತ್ವವನ್ನೂ ಸೇರಿಸಿ, ಇಪ್ಪತ್ತೈದು ತತ್ವಗಳೆನ್ನುವರು. ಕೆಲವರು ಕಾಲ ವೆಂಬುದನ್ನು ಬೇರೆ ತತ್ವವಲ್ಲವೆಂದೂ, ಅದು ಪರಮಪುರುಷನ ಶಕ್ತಿಯೆಂದೂ, ಈ ಶಕ್ತಿಯಿಂದಲೇ ಜಗತ್ತಿಗೆ ಉತ್ಪತ್ತಿ ವಿನಾಶಾದಿ ರೂಪವಾದ ಸಂಸಾರ ಭಯವು ಏರ್ಪಟ್ಟಿರುವುದೆಂದೂ ಹೇಳುವರು. ಆದರೆ ಈ ವಿಷಯವಾಗಿ ನನ್ನ ಅಭಿಪ್ರಾಯವನ್ನು ತಿಳಿಸುವೆನು ಕೇಳು! ದೇಹಾಭಿಮಾನವೆಂಬ ಅಹಂಕಾರ ದಿಂದ ಬುದ್ಧಿ ಮೋಹಗೊಂಡಿದ್ದು, ಕೊನೆಗೆ ಪ್ರಳಯದಶೆಯಲ್ಲಿ ತಮಸ್ಸೆಂದು ಕರೆಯಲ್ಪಡುವ ಸೂಕ್ಷ್ಮಪ್ರಕೃತಿಯೊಡನೆ ಸೇರಿರುವ ಜೀವನಿಗೂ, ಸತ್ವಾದಿ ಗುಣಗಳಲ್ಲಿ ಹೆಚ್ಚುಕಡಿಮೆಯಿಲ್ಲದೆ ಸಮಸ್ಥಿತಿಯನ್ನು ಹೊಂದಿ, ನಾಮರೂಪ

ವಿಶೇಷಗಳೊಂದೂ ಇಲ್ಲದ ಪ್ರಕೃತಿಗೂ, ಈ ಪ್ರಪಂಚರೂಪವಾಗಿ ಮಾಡ ತಕ್ಕ ಕಾರ್ಯಕ್ಕೆ ಯಾವುದು ಪ್ರೇರಕವೋ, ಅದೇ ಕಾಲವೆಂದೂ, ಅದು ಭಗವಂತನ ಶರೀರವಾಗಿರುವುದೆಂದೂ ನನ್ನ ಮತವು. ಮೇಲೆ ಹೇಳಿದ ವಿಷಯಗಳಿಂದ ಪ್ರಕೃತಿ, ಪುರುಷ, ಕಾಲವೆಂಬಿವು ಮೂರೂ ಭಗವಂತನ ಸ್ವರೂಪಗಳಲ್ಲದೆ ಬೇರೆಯಲ್ಲವೆಂಬುದು ಸಿದ್ಧವಾಗುವುದಷ್ಟೇ? ಅವುಗಳಲ್ಲಿ ಪ್ರಕೃತಿಯೆಂಬುದು ಭೂಮಿ ಮೊದಲಾದ ಸ್ಥೂಲರೂಪಕ್ಕೆ ಮಾರ್ಪಡುವುದ ರಿಂದ, ಅದರ ಸ್ವರೂಪವನ್ನು ನಾವು ಸ್ಪಷ್ಟವಾಗಿ ತಿಳಿಯಬಹುದು. ಪುರುಷ ನಿಗೂ, ಕಾಲಕ್ಕೂ ಆ ಸ್ಥೂಲರೂಪವಿಲ್ಲದುದರಿಂದ, ಅವುಗಳನ್ನು ಯುಕ್ತಿ ಯಿಂದಲೇ ಕಂಡುಕೊಳ್ಳಬೇಕು. ಶಾಸ್ತ್ರದಿಂದಲ್ಲದೆ ಅವುಗಳ ಸ್ವರೂಪ ವನ್ನು ತಿಳಿಯುವುದಕ್ಕೆ ಬೇರೆ ಉಪಾಯವಿಲ್ಲ. ಈ ನಮ್ಮ ದೇಹವೆಂಬುದು, ಭೂಮಿ ಮೊದಲಾದ ಐದು ಭೂತಗಳಿಂದ ಏರ್ಪಟ್ಟಿರುವುದು. ಈ ದೇಹ ದೊಳಗೆ ಸೇರಿಕೊಂಡು, ಒಂದನ್ನು ದ್ವೇಷಿಸುವುದು, ಒಂದನ್ನು ಪ್ರೀತಿಸು ವುದು, ಒಂದನ್ನು ಸುಖವೆಂದು ಭಾವಿಸಿ ಸಂತೋಷಪಡುವುದು, ಮತ್ತೊಂ ದನ್ನು ದುಃಖವೆಂದು ಭಾವಿಸಿ ಕೊರಗುವುದು, ಈ ರೀತಿಯಾಗಿ ಯಾವನು ಆಗಾಗ ಜ್ಞಾನವಿಕಾರಗಳನ್ನು ಹೊಂದುವನೋ, ಅವನೇ ಪುರುಷನೆಂದೂ, ಜೀವನೆಂದೂ, ಆತ್ಮವೆಂದೂ, ಜೀವಾತ್ಮನೆಂದೂ, ಕ್ಷೇತ್ರಜ್ಞನೆಂದೂ, ಪ್ರತ್ಯಗಾತ್ಮನೆಂದೂ ಬೇರೆ ಬೇರೆ ಹೆಸರಿನಿಂದ ಕರೆಯಲ್ಪಡುವನು. ಸುಖ, ದುಃಖ, ಪ್ರೀತಿ, ದ್ವೇಷ, ಮೊದಲಾದುವೆಲ್ಲವೂ ಜ್ಞಾನವಿಕಾರಗಳಾದುದ ರಿಂದ, ಅವು ಅಚೇತನವಾದ ಪ್ರಕೃತಿಯ ಧರ್ಮಗಳಲ್ಲ. ಇದರಿಂದ ಶರೀರ ದೊಳಗೆ ಜೀವನೆಂಬ ಬೇರೆ ವಸ್ತುವು ಅಡಗಿರಬೇಕೆಂದು ಗೊತ್ತಾಗುವುದಷ್ಟೇ! ಮತ್ತು ಆ ದೇಹಾದಿಗಳ ವಿಷಯವಾಗಿ, ಹಿಂದೆ ಇದ್ದುದೆಂದೂ, ಈಗ ಇರ ತಕ್ಕುದೆಂದೂ, ಮುಂದೆ ಹುಟ್ಟತಕ್ಕುದೆಂದೂ ಹೇಳುವ ವ್ಯವಹಾರವೆಲ್ಲವೂ ಕಾಲಕ್ಕೆ ಸಂಬಂಧಪಟ್ಟುದು. ಈ ವ್ಯವಹಾರಗಳಿಂದಲೇ ಕಾಲವೆಂಬುದೊಂದು ವಸ್ತುವನ್ನೂ ನಾವು ಗ್ರಹಿಸಬೇಕಲ್ಲವೇ? ಹೀಗೆ ಪಂಚಭೂತಗಳ ಸಮು ದಾಯದಿಂದ ಏರ್ಪಟ್ಟ ಶರೀರದಲ್ಲಿ, ಸುಖದುಃಖಾದಿಗಳನ್ನನುಭವಿಸತಕ್ಕ ಜೀವಾತ್ಮಸ್ವರೂಪದಿಂದ ಒಳಭಾಗದಲ್ಲಿಯೂ, ಕಾಲಸ್ವರೂಪದಿಂದ ಆ ಶರೀರದ ಹೊರಗೂ ಯಾವನು ತೋರುತ್ತಿರುವನೋ, ಅವನೇ ಪರಮಪುರುಷನು.

ಆದರೆ ಜೀವಾತ್ಮಕಾಲಗಳೆರಡೂ ಪರಮಾತ್ಮನಿಗಿಂತಲೂ ಬೇರ್ಪಟ್ಟವುಗಳಾಗಿದ್ದರೂ, ಪರಮಪುರುಷನು ತನ್ನ ಸಂಕಲ್ಪದಿಂದ ಶರೀರದೊಳಗಿನ ಜೀವಾತ್ಮಗಳಿಗೂ, ಹೊರಗಿನ ಕಾಲಕ್ಕೂ ನಿಯಾಮಕನಾಗಿರುವುದರಿಂದ ಪ್ರಕೃತಿ, ಪುರುಷ, ಕಾಲವೆಂಬಿವು ಮೂರೂ, ಪರಮಪುರುಷನ ಶರೀರವೆಂದೇ ಗ್ರಾಹ್ಯವು. ಇನ್ನು ಸೃಷ್ಟಿಕ್ರಮವನ್ನು ಕೇಳು! ಪ್ರಕೃತಿಯೆಂಬುದು ತನ್ನೊಳಗಿನ ಸತ್ವಾದಿಗುಣಗಳು ಸಮವಾಗಿದ್ದಾಗ, ತಾನೂ ಶಾಂತವಾಗಿರುವುದು. ಆಗ ಪರಮಪುರುಷನು ತನಗೆ ಶರೀರಭೂತವಾಗಿದ್ದ ಪ್ರಕೃತಿಯಲ್ಲಿ, ಮಹತ್ತು ಮೊದಲಾದ ಪ್ರಪಂಚವನ್ನು ಸೃಷ್ಟಿಸಬೇಕೆಂದುದ್ದೇಶಿಸಿ, ತನ್ನ ಸಂಕಲ್ಪದಿಂದ ಅದಕ್ಕಿದ್ದ ಗುಣಸಾಮ್ಯವನ್ನು ಕದಲಿಸಿ, ಸೃಷ್ಟಿಕಾರ್ಯಕ್ಕಾಗಿ ಪ್ರೇರಿಸುವನು. ನಿರ್ವಿಕಾರನಾಗಿಯೂ, ಜಗತ್ಕಾರಣನಾಗಿಯೂ ಇರುವ ಭಗವಂತನು, ಹೀಗೆ ತನಗೆ ಶರೀರವಾದ ಪ್ರಕೃತಿಯಲ್ಲಿ ಮರೆಸಿಹೋಗಿದ್ದ ಜಗತ್ತನ್ನು ಹೊರಕ್ಕೆ ಕಾಣಿಸಬೇಕೆಂದೆಣಿಸಿ, ಜೀವಾತ್ಮಗಳಿಗೆ ಜ್ಞಾನವನ್ನು ತಗ್ಗಿಸತಕ್ಕುದಾದ ತಮೋಗುಣವನ್ನು ತನ್ನ ಸಂಕಲ್ಪದಿಂದ ಅಡಗಿಸಿಡುವನು. * ಈ ತಮೋಗುಣದ ಶಕ್ತಿಯು ತಗ್ಗಿದ ಮೇಲೆ, ಆ ಮೂಲಪ್ರಕೃತಿಯಲ್ಲಿ ಪ್ರಕಾಶಸ್ವಭಾವವುಳ್ಳ ಸತ್ವಗುಣವು ತಲೆಯೆತ್ತುವುದರಿಂದ, ಅದು ನಿರ್ಮಲವಾಗಿ, ಕಾಂತಿವಿಶಿಷ್ಟವಾಗಿ ತೋರುವುದು. ಭಗವಂತನನ್ನು ಸಾಕ್ಷಾತ್ಕರಿಸುವುದಕ್ಕೆ ಕಾರಣವಾದ, ಅಂತಹ ಸತ್ವಗುಣದೊಡನೆ ಬೆಳಗುತ್ತಿದ್ದ ಮೂಲಪ್ರಕೃತಿಯು, ಅದೇ ಪ್ರಕಾರದಿಂದ ಮಹತ್ತತ್ವರೂಪವಾಗಿ ಮಾರ್ಪಡುವುದು. ಈ ಮೂಲಪ್ರಕೃತಿ ಮಹತ್ತತ್ವಗಳೆರಡಕ್ಕೂ, ವಾಸುದೇವನೇ ಅಧಿಷ್ಠಾನದೇವತೆಯಾದುದರಿಂದ ಆ ಮಹತ್ತತ್ವವು ವಾಸುದೇವವ್ಯೂಹವೆಂದು ಕರೆಯಲ್ಪಟ್ಟಿತು. ಈ ಸತ್ವಗುಣವು ತಲೆಯೆತ್ತಿದಾಗ ಆ ಅವ್ಯಕ್ತವು, ಅಂತಃಕರಣದ ಒಂದು ಭೇದವೆನಿಸಿಕೊಂಡ ಚಿತ್ತವೆಂಬುದಕ್ಕೆ

---

* ಪ್ರಳಯದಲ್ಲಿ ಪ್ರಕೃತಿಯು ಸತ್ವ ಮೊದಲಾದ ಮೂರು ಗುಣಗಳೂ ಹೆಚ್ಚು ಕಡಿಮೆಯಿಲ್ಲದೆ ಸಮಸ್ಥಿತಿಯಲ್ಲಿ ಶಾಂತವಾಗಿರುವುವು. ಪರಮಪುರುಷನು ಜಗತ್ತನ್ನು ಸೃಷ್ಟಿಸಬೇಕೆಂದು ಸಂಕಲ್ಪಿಸಿದೊಡನೆ, ತನಗೆ ಶರೀರಭೂತವಾಗಿದ್ದ ಆ ಪ್ರಕೃತಿಯ ಮೂರು ಗುಣಗಳಲ್ಲಿ, ತಮೋಗುಣವನ್ನು ತಗ್ಗಿಸಲು, ಸತ್ವಗುಣವು ತಲೆಯೆತ್ತುವುದೆಂದು ಭಾವವು.

ಸಹಾಯಕವಾಗುವುದು. ಅಮ್ಮಾ! ಇದರ ಸಹಾಯದಿಂದ ಅಂತಃಕರಣಕ್ಕೆ ಒದಗಿ ಬರುವ ವ್ಯತ್ಯಾಸವೆಂತಹುದೆಂಬುದನ್ನು ತಿಳಿಸುವೆನು ಕೇಳು, ಸಹಜವಾಗಿಯೇ ಸ್ವಚ್ಛವಾಗಿರುವ ಜಲವು, ಪಾಚಿ, ಕೊಳೆ, ನೊರೆ, ಮುಂತಾದುವುಗಳೊಂದೂ ಇಲ್ಲದೆ ನಿರ್ಮಲವಾಗಿದ್ದಾಗ, ಪ್ರತಿಬಿಂಬವನ್ನು ಗ್ರಹಿಸುವುದಕ್ಕೆ ಹೇಗೆ ಸಮರ್ಥವಾಗುವುದೋ ಹಾಗೆಯೇ ಮನಸ್ಸು, ಯಾವ ವಿಕಾರಗಳೂ ಇಲ್ಲದೆ ಶಾಂತವಾಗಿ, ಭಗವಂತನ ರೂಪವನ್ನು ಗ್ರಹಿಸುವುದಕ್ಕೆ ತಕ್ಕಷ್ಟು ಸ್ವಚ್ಛತೆಯನ್ನು ಹೊಂದಿದಾಗ, ಆ ಮನಸ್ಸಿಗೆ ಅವ್ಯಕ್ತದ ಸಹಾಯವುಂಟಾಯಿತೆಂದು ತಿಳಿಯಬೇಕು. ಅಂತಃಕರಣಕ್ಕೆ ಸಂಭವಿಸುವ ಈ ಸ್ಥಿತಿಯೇ ಚಿತ್ತವೆಂದು ಕರೆಯಲ್ಪಡುವುದು. ಹೀಗೆ ಮಹತ್ತತ್ವವುಂಟಾದ ಮೇಲೆ, ಅದು ಭಗವಂತನ ಸಂಕಲ್ಪದಿಂದ ವಿಕಾರ ಹೊಂದುತ್ತ ಬಂದು, ಅಹಂಕಾರರೂಪವಾಗಿ ಮಾರ್ಪಡುವುದು. ಈ ಅಹಂಕಾರ ತತ್ವವು ವೈಕಾರಿಕವೆಂದೂ, ತೈಜಸವೆಂದೂ, ತಾಮಸವೆಂದೂ ಮೂರು ವಿಧವಾಗಿ ಬೇರ್ಪಡುವುದು. ಆದರೆ ಅಹಂಕಾರವೆಂಬುದರಲ್ಲಿ, ಕಾರ್ಯಪ್ರವೃತ್ತಿಯನ್ನುಂಟು ಮಾಡುವ ರಜೋಗುಣವೇ ಹೆಚ್ಚಾಗಿರುವುದರಿಂದ, ಈ ಅಹಂಕಾರ ತತ್ವದಿಂದಲೇ ಮನಸ್ಸೂ, ಐದು ಜ್ಞಾನೇಂದ್ರಿಯಗಳೂ, ಐದು ಕರ್ಮೇಂದ್ರಿಯಗಳೂ, ಆಕಾಶವೇ ಮೊದಲಾದ ಐದು ತನ್ಮಾತ್ರೆಗಳೂ, ಇವೆಲ್ಲವೂ ಹುಟ್ಟುವುವು. ಸಹಸ್ರ ಶಿರಸ್ಸುಳ್ಳವನಾಗಿ, ಅನಂತನೆಂದು ಕರೆಯಲ್ಪಡುವ ಸಂಕರ್ಷಣ ಭಗವಂತನು, ಈ ಅಹಂಕಾರ ತತ್ವಕ್ಕೆ ಅಧಿಷ್ಠಾನ ದೇವತೆಯಾದುದರಿಂದ, ಇದು ಸಂಕರ್ಷಣವ್ಯೂಹವೆನಿಸುವುದು. ಆತ್ಮನಲ್ಲಿ ತಾನೇ ಕೆಲಸಮಾಡತಕ್ಕವನೆಂಬ ಅಭಿಮಾನವೂ, ಇಂದ್ರಿಯಾಭಿಮಾನವೂ, ದೇಹಾಭಿಮಾನವೂ, ಯಾವಾಗ ಹುಟ್ಟುವವೋ, ಆಗ ಅಂತಃಕರಣಕ್ಕೆ ಅಹಂಕಾರ ತತ್ವದ ಪ್ರೇರಣೆಯುಂಟಾಯಿತೆಂದು ತಿಳಿಯಬೇಕು. ಅಂತಃಕರಣಕ್ಕೆ ಸಂಭವಿಸುವ ಈ ಸ್ಥಿತಿಯೇ ಅಹಂಕಾರವೆನಿಸುವುದು. ಅಥವಾ ಮನಸ್ಸಿಗೆ ಉಲ್ಲಾಸ, ಚಿಂತೆ, ಮೋಹ, ಇವು ಮೂರನ್ನೂ ಅಹಂಕಾರಲಕ್ಷಣಗಳೆನ್ನಬಹುದು. ಮೇಲೆ ಹೇಳಿದ ಉಲ್ಲಾಸವೆಂಬುದು ಸಾತ್ವಿಕಾಹಂಕಾರಕ್ಕೂ, ಚಿಂತೆಯೆಂಬುದು ರಾಜಸಾಹಂಕಾರಕ್ಕೂ, ಮೋಹವೆಂಬುದು ತಾಮಸಾಹಂಕಾರಕ್ಕೂ ಲಕ್ಷಣಗಳಾದುದರಿಂದ, ಅಹಂಕಾರವೆಂಬುದು, ಈ ಮೂರು

ಗುಣಗಳಿಂದಲೂ ಕಲೆತಿರುವವೆಂದು ತಿಳಿಯಬೇಕು. ಹೀಗೆ ಮೂರು ವಿಧವಾದ ಅಹಂಕಾರಗಳಲ್ಲಿ ಸಾತ್ವಿಕವೆಂಬುದು ಭಗವಂತನ ಸಂಕಲ್ಪದಿಂದ ಪ್ರೇರಿತವಾದಾಗ ವಿಕಾರಹೊಂದುತ್ತ, ಮನಸ್ಸೆಂಬ ತತ್ವವನ್ನು ಹುಟ್ಟಿಸುವುದು. ದೇಹವೂ ಆತ್ಮವೂ ಒಂದೇ ಎಂಬ ಬುದ್ಧಿಯೂ, ಇನ್ನೂ ಬೇರೆ ಬೇರೆ ವಿಕಲ್ಪಗಳೂ ಯಾವಾಗ ತೋರುವುವೋ, ಆಗ ಆ ಅಂತಃಕರಣವು ತೈಜಸವೆಂಬ ಅಹಂಕಾರದಿಂದ ಪ್ರೇರಿತವಾಯಿತೆಂದೂ ತಿಳಿಯಬೇಕು. ಈ ಮನಸ್ತತ್ವಕ್ಕೆ ಕಾರಣವೆನಿಸಿದ ಸಾತ್ವಿಕಾಹಂಕಾರಕ್ಕೆ ಪ್ರದ್ಯುಮ್ನನು ಅಧಿಷ್ಠಾನದೇವತೆಯಾದುದರಿಂದ, ಆ ಸಾತ್ವಿಕಾಹಂಕಾರವು ಪ್ರದ್ಯುಮ್ನವ್ಯೂಹವೆಂದು ಕರೆಯಲ್ಪಡುವುದು. ಶರತ್ಕಾಲದ ಕನ್ನೈದಿಲೆಯಂತೆ ಶ್ಯಾಮಲವಾದ ದೇಹಕಾಂತಿಯುಳ್ಳವನಾಗಿಯೂ, ಯೋಗಿಗಳಿಂದ ಶ್ರಮಪಟ್ಟು ಧ್ಯಾನಿಸಲ್ಪಡತಕ್ಕವನಾಗಿಯೂ ಇರುವ ಅನಿರುದ್ಧನು, ತೈಜಸಾಹಂಕಾರದಲ್ಲಿ ನೆಲೆಗೊಂಡಿರುವುದರಿಂದ, ಅದು ಅನಿರುದ್ಧವ್ಯೂಹವೆಂದು ಕರೆಯಲ್ಪಡುವುದು. ತೈಜಸಾಹಂಕಾರದ ಪ್ರೇರಣೆಯಿಂದುಂಟಾದ ಇಂದ್ರಿಯಗಳಿಗೂ ಅನಿರುದ್ಧನೇ ಅಧಿಪತಿಯು. ವಿಕಾರವನ್ನು ಹೊಂದುತ್ತಿರುವ ಈ ತೈಜಸಾಹಂಕಾರದಿಂದಲೇ ಇಂದ್ರಿಯಗಳಿಗೆ ಸಾಮರ್ಥ್ಯವೂ ಹುಟ್ಟುವುದು. ಇದೇ ತೈಜಸಾಹಂಕಾರವು ಭಗವಂತನ ಸಂಕಲ್ಪದಿಂದ ಪ್ರೇರಿತವಾಗಿ, ಸೃಷ್ಟಿಕಾರ್ಯಕ್ಕೆ ತೊಡಗಿದಾಗ, ಅದರಿಂದ ಬುದ್ಧಿಯೆಂಬ ತತ್ವವು ಹುಟ್ಟುವುದು. ಈ ಬುದ್ಧಿತತ್ವವೂ ಇಂದ್ರಿಯಗಳಿಗೆ ಸಹಾಯಮಾಡತಕ್ಕ ಸ್ವಭಾವವುಳ್ಳುದು. ಸಾಮಾನ್ಯವಾದ ವಸ್ತುಜ್ಞಾನವೂ, ಸಂಶಯವೂ ಅನ್ಯಥಾಜ್ಞಾನ ವಿಪರೀತಜ್ಞಾನಗಳೂ, ನಿಶ್ಚಯವೂ, ಸ್ಮರಣವೂ, ನಿದ್ರೆಯೂ ಇವೆಲ್ಲವೂ, ಪ್ರತ್ಯೇಕ ಪ್ರತ್ಯೇಕವಾಗಿ ಬುದ್ಧಿವ್ಯಾಪಾರಗಳೆನಿಸುವುವು. ಬುದ್ಧಿಯ ಸಹಾಯದಿಂದಲೇ ಇಂದ್ರಿಯಗಳು ಮೇಲೆ ಹೇಳಿದ ಬಗೆಬಗೆಯ ಜ್ಞಾನಗಳನ್ನು ಪಡೆಯುವುವು. ಬುದ್ಧಿತತ್ವದ ಸಹಾಯವು ಇಂದ್ರಿಯಗಳಿಗೆ ಉಂಟಾದುದಕ್ಕೆ ಇವೇ ಗುರುತುಗಳು. ಕರ್ಮೇಂದ್ರಿಯ, ಜ್ಞಾನೇಂದ್ರಿಯಗಳೆರಡೂ ತೈಜಸಾಹಂಕಾರದಿಂದ ಸಹಕರಿಸಲ್ಪಟ್ಟ ವೈಕಾರಿಕಾಹಂಕಾರದಿಂದಲೇ ಹುಟ್ಟಿದವುಗಳು. ಇವು ಕೇವಲ ವೈಕಾರಿಕದಿಂದಲೇ ಹುಟ್ಟಿದವುಗಳಾಗಿದ್ದಪಕ್ಷದಲ್ಲಿ, ಕರ್ಮೇಂದ್ರಿಯಗಳಿಗೆ ಬೇಕಾದ ಕ್ರಿಯಾಶಕ್ತಿಯೂ ಜ್ಞಾನೇಂದ್ರಿಯಗಳಿಗೆ ಬೇಕಾದ ಜ್ಞಾನ

ಶಕ್ತಿಯೂ ಇರಲಾರವು. ಆದುದರಿಂದ ಈ ಎರಡು ಬಗೆಯ ಇಂದ್ರಿಯಗಳೂ ತೈಜಸಾಹಂಕಾರದಿಂದ ಸಹಕರಿಸಲ್ಪಟ್ಟ ವೈಕಾರಿಕ ಸಾತ್ವಿಕದಿಂದಲೇ ಉಂಟಾಗುವುವು. ಆದರೆ ಆ ಎರಡು ಬಗೆಯ ಇಂದ್ರಿಯಗಳಿಗೂ, ಎರಡು ಬಗೆಯ ಶಕ್ತಿಯೂ ಇರಬೇಕಲ್ಲವೇ ? ಎಂದರೆ ಜ್ಞಾನೇಂದ್ರಿಯವುಂಟಾಗುವಾಗ ವೈಕಾರಿಕದಲ್ಲಿ ಸತ್ವಗುಣವು ತಲೆಯೆತ್ತಿ, ರಜೋಗುಣವು ಮರೆಸಿಕೊಳ್ಳುವುದು. ಕರ್ಮೇಂದ್ರಿಯಗಳು ಹುಟ್ಟುವಾಗ ರಜೋಗುಣವು ತಲೆಯೆತ್ತಿ ಸತ್ವಗುಣವು ಮರೆಸಿಕೊಳ್ಳುವುದು. ಆದುದರಿಂದಲೇ ಕರ್ಮೇಂದ್ರಿಯಗಳಲ್ಲಿ ರಜೋಗುಣದ ಪ್ರಾಬಲ್ಯದಿಂದ ಕರ್ಮಶಕ್ತಿಯೂ, ಜ್ಞಾನೇಂದ್ರಿಯಗಳಲ್ಲಿ ಸತ್ವಗುಣದ ಬಲದಿಂದ ಕ್ರಿಯಾಶಕ್ತಿಯೂ ನಿಯತವಾಗಿರುವುದು. ಇದಾದಮೇಲೆ ತಾಮಸಾಹಂಕಾರವು ಭಗವಂತನ ಸಂಕಲ್ಪದಿಂದ ಪ್ರೇರಿತವಾದಾಗ, ಅದರಿಂದ ಶಬ್ದತನ್ಮಾತ್ರವು ಹುಟ್ಟಿ, ಅದರಿಂದ ಆಕಾಶವೆಂಬ ಮಹಾಭೂತವು ಜನಿಸಿತು. ಆ ಶಬ್ದವನ್ನು ತಿಳಿಸತಕ್ಕುದು ಶ್ರೋತ್ರೇಂದ್ರಿಯವು. ಅರ್ಥವನ್ನು ಬೋಧಿಸುವುದು, ಸರ್ವಜ್ಞನಾದ ಪರಮಪುರುಷನನ್ನು ತಿಳಿಸುವುದಕ್ಕೆ ಪ್ರಮಾಣವೆನಿಸಿರುವುದು, (ಎಂದರೆ, ಶಾಸ್ತ್ರಗಳಿಂದಲ್ಲದೆ ಭಗವಂತನನ್ನು ತಿಳಿಯುವುದು ಸಾಧ್ಯವಲ್ಲದುದರಿಂದಲೂ ಆ ಶಾಸ್ತ್ರಗಳೆಲ್ಲವೂ ಶಬ್ದಮಯವಾಗಿರುವುದರಿಂದಲೂ ಭಗವತ್ಸ್ವರೂಪವನ್ನು ತಿಳಿಯಬೇಕಾದುದು ಶಬ್ದ ಪ್ರಮಾಣದಿಂದಲೇ!) ಆಕಾಶವೆಂಬ ಭೂತಕ್ಕೆ ಸೂಕ್ಷ್ಮಸ್ವರೂಪವೆನಿಸಿಕೊಳ್ಳುವುದು, ಇವೇ ಶಬ್ದ ತನ್ಮಾತ್ರಲಕ್ಷಣಗಳು. ಸಮಸ್ತಭೂತಗಳಿಗೂ ಒಳಗೂ, ಹೊರಗೂ ಅವಕಾಶವನ್ನು ಕೊಡುವುದು, ಇಂದ್ರಿಯಗಳಿಗೂ, ಪ್ರಾಣಗಳಿಗೂ, ಆತ್ಮನಿಗೂ ಸ್ಥಾನವೆನಿಸಿಕೊಳ್ಳುವುದು, ಇವೇ ಆಕಾಶವೆಂಬ ಭೂತದ ಲಕ್ಷಣಗಳು. ಹೀಗೆ ಶಬ್ದಗುಣವುಳ್ಳ ಆಕಾಶವೆಂಬ ಭೂತವು ಕಾಲಶರೀರನಾದ ಭಗವಂತನ ಸಂಕಲ್ಪದಿಂದ ಪ್ರೇರಿತವಾದಾಗ, ಅದರಿಂದ ಸ್ಪರ್ಶವೆಂಬ ತನ್ಮಾತ್ರವು ಹುಟ್ಟಿತು. ಅದರಿಂದ ವಾಯುವೆಂಬ ಭೂತವು ಏರ್ಪಟ್ಟಿತು. ಈ ಸ್ಪರ್ಶಗುಣವನ್ನು ತಿಳಿಸತಕ್ಕುದು ತ್ವಗಿಂದ್ರಿಯವು. ಮೃದುತ್ವ, ಕಠಿನತ್ವ ಶೀತೋಷ್ಣತ್ವಗಳೂ, ವಾಯುವಿಗೆ ಅಸಾಧಾರಣ ಗುಣವೆನಿಸುವುದೂ, ಸ್ಪರ್ಶತನ್ಮಾತ್ರಲಕ್ಷಣಗಳು. ಇತರ ವಸ್ತುಗಳನ್ನು ಆಡಿಸುವುದು, ಚದರಿಸುವುದು, ಒಂದುಗೂಡಿಸುವುದು, ಗಂಧಗುಣ

ವುಳ್ಳ ವಸ್ತುವನ್ನು ಘ್ರಾಣೇಂದ್ರಿಯಕ್ಕೂ, ಶಬ್ದವನ್ನು ಶ್ರೋತ್ರೇಂದ್ರಿಯಕ್ಕೂ ತಂದು ಸೇರಿಸುವುದು, ಸರ್ವೇಂದ್ರಿಯಗಳಿಗೂ ಧಾರಕವಾಗಿರುವುದು, ಇವೆಲ್ಲವೂ ವಾಯುವಿನ ಲಕ್ಷಣವನ್ನು ತೋರಿಸತಕ್ಕ ಕಾರ್ಯಗಳು. ಸ್ಪರ್ಶಗುಣವುಳ್ಳ ಈ ವಾಯುವು, ಸೃಷ್ಟಿಕಾರ್ಯಕ್ಕಾಗಿ ದೈವಸಂಕಲ್ಪದಿಂದ ಪ್ರೇರಿಸಲ್ಪಟ್ಟು, ಅದರಿಂದ ರೂಪವೆಂಬ ತನ್ಮಾತ್ರವು ಹುಟ್ಟಿ, ಅದರಿಂದ ತೇಜಸ್ಸೆಂಬ ಭೂತವು ಏರ್ಪಟ್ಟಿತು. ಆ ರೂಪವನ್ನು ತಿಳಿಯತಕ್ಕುದು ಚಕ್ಷುರಿಂದ್ರಿಯವು. ರೂಪಗುಣವುಳ್ಳ ತೇಜಸ್ಸು ವೊದಲಾದ ಭೂತಗಳನ್ನು ಇತರ ಭೂತಗಳಿಗೂ ಬೇರೆಯಾಗಿ ತಿಳಿಸುವುದೂ, ದ್ರವ್ಯವನ್ನಾಶ್ರಯಿಸಿರುವುದೂ, ಒಂದು ವ್ಯಕ್ತಿಯಿಂದ ಮತ್ತೊಂದು ವ್ಯಕ್ತಿಯನ್ನು ಬೇರೆಯಾಗಿ ಕಾಣಿಸುವುದೂ, ತೇಜಸ್ಸಿಗೆ ಅಸಾಧಾರಣಗುಣವೆನಿಸುವುದೂ ರೂಪತನ್ಮಾತ್ರದ ಲಕ್ಷಣಗಳು. ಬೆಳಗುವುದು, ಕಾವೇರಿಸುವುದು, ಹಸಿವು ಬಾಯಾರಿಕೆಗಳ ಮೂಲಕವಾಗಿ ಅನ್ನಪಾನಗಳನ್ನು ಗ್ರಹಿಸುವ ಹಾಗೆ ಮಾಡುವುದು, ಶೈತ್ಯವನ್ನು ನೀಗಿಸಿ ಒಣಗಿಸುವುದು, ಇವೆಲ್ಲವೂ ತೇಜಸ್ಸಿನ ಲಕ್ಷಣಗಳು. ರೂಪಗುಣವುಳ್ಳ ತೇಜಸ್ಸು ದೈವಪ್ರೇರಣೆಯಿಂದ ವಿಕಾರಹೊಂದಿ, ರಸತನ್ಮಾತ್ರವನ್ನು ಹುಟ್ಟಿಸಿತು. ಅದರಿಂದ ಜಲವೆಂಬ ಮಹಾಭೂತವು ಏರ್ಪಟ್ಟಿತು. ಈ ರಸವನ್ನು ಗ್ರಹಿಸತಕ್ಕುದು ಜಿಹ್ವೇಂದ್ರಿಯವು. ಈ ರಸವೆಂಬುದು ಒಂದೇ ಆಗಿದ್ದರೂ ಇತರ ದ್ರವ್ಯಗಳ ಸಂಬಂಧದಿಂದ, ಕಹಿ, ಸಿಹಿ, ಒಗರು, ಕಾರ, ಉಪ್ಪು, ಹುಳಿ, ಎಂಬಿವೇ ವೊದಲಾದ ನಾನಾಭೇದವನ್ನು ಹೊಂದುವುದು. ಇತರ ದ್ರವ್ಯಗಳನ್ನು ನೆನೆಸುವುದು, ಅಂಟಿಸುವುದು, ತೃಪ್ತಿಯನ್ನುಂಟುಮಾಡುವುದು, ಬದುಕಿಸುವುದು, ಹಸಿವುಬಾಯಾರಿಕೆಗಳ ಶ್ರಮವನ್ನು ನೀಗಿಸುವುದು, ಇತರ ದ್ರವ್ಯಗಳನ್ನು ಮೃದುವಾಗಿ ಮಾಡುವುದು, ಬಾವಿ ವೊದಲಾದ ಜಲಾಶ್ರಯಗಳಲ್ಲಿ ಮೇಲೆ ಮೇಲೆ ಬತ್ತಿದ ಹಾಗೆಲ್ಲಾ ತಿರುಗಿ ತುಂಬಿಕೊಳ್ಳುವುದು, ಇವೆಲ್ಲವೂ ಜಲದ ಕಾರ್ಯಗಳು. ಈ ರಸಗುಣವುಳ್ಳ ಜಲವು ದೈವಪ್ರೇರಣೆಯಿಂದ ವಿಕಾರಹೊಂದುತ್ತ ಬಂದು, ಗಂಧವೆಂಬ ತನ್ಮಾತ್ರವು ಹುಟ್ಟಿ, ಅದರಿಂದ ಭೂಮಿಯು ಏರ್ಪಟ್ಟಿತು. ಗಂಧಗುಣವನ್ನು ತಿಳಿಸತಕ್ಕುದು ಘ್ರಾಣೇಂದ್ರಿಯವು. ಈ ಗಂಧವೆಂಬುದೂ ರಸದಂತೆ ಒಂದೇ ಆಗಿದ್ದರೂ, ತನಗಾಶ್ರಯವಾದ ದ್ರವ್ಯಗಳ ಭೇದವನ್ನನುಸರಿಸಿ, ಮಿಶ್ರ

ಗಂಧವೆಂದೂ, ದುರ್ಗಂಧವೆಂದೂ, ಸುಗಂಧವೆಂದೂ, ಕಮಲಾದಿಗಳಲ್ಲಿರುವಂತೆ ಮೃದುಗಂಧವೆಂದೂ, ಈರುಳ್ಳಿ ಮುಂತಾದುವುಗಳಲ್ಲಿರುವಂತೆ ಕ್ರೂರಗಂಧ (ಘಾಟು) ವೆಂದೂ, ಹುಳಿವಾಸನೆಯೆಂದೂ, ನಾನಾಭೇದವನ್ನು ಹೊಂದುವುದು. ಘಟಪಟಾದಿ ದ್ರವ್ಯಗಳನ್ನು ಹುಟ್ಟಿಸುವುದು, ಚರಾಚರಗಳಿಗೆ ಆಧಾರವಾಗಿರುವುದು, ಧಾನ್ಯಾದಿಗಳನ್ನು ಹುಟ್ಟಿಸುವುದು, ಸ್ಥಾನಭೇದದಿಂದ ವಸ್ತುಗುಣಗಳಲ್ಲಿಯೂ, ಪ್ರಾಣಿಗಳ ಆಕಾರದಲ್ಲಿಯೂ ವಿಶೇಷವನ್ನು ಕಾಣಿಸುವುದು, ಇವೆಲ್ಲವೂ ಭೂಮಿಯ ಕಾರ್ಯಗಳು. ಅಮ್ಮಾ! ಇಂದ್ರಿಯ ಲಕ್ಷಣಗಳೆಲ್ಲವನ್ನೂ ಸಂಗ್ರಹಿಸಿ ತಿಳಿಸುವೆನು ಕೇಳು! ಆಕಾಶಗುಣವಾದ ಶಬ್ದವನ್ನು ಗ್ರಹಿಸತಕ್ಕುದು ಶ್ರೋತ್ರೇಂದ್ರಿಯವು. ವಾಯುಗುಣವಾದ ಸ್ಪರ್ಶವನ್ನು ಗ್ರಹಿಸತಕ್ಕುದು ತ್ವಗಿಂದ್ರಿಯವು. ತೇಜೋಗುಣವಾದ ರೂಪವನ್ನು ಗೃಹಿಸತಕ್ಕುದು ಚಕ್ಷುರಿಂದ್ರಿಯವು ಜಲಗುಣವಾದ ರಸವನ್ನು ಗ್ರಹಿಸತಕ್ಕುದು ರಸನೇಂದ್ರಿಯವು. ಭೂಗುಣವಾದ ಗಂಧವನ್ನು ಗ್ರಹಿಸತಕ್ಕುದು ಘ್ರಾಣೇಂದ್ರಿಯವು. ಹಿಂದಿನ ಭೂತದಲ್ಲಿರುವ ಶಬ್ದಾದಿ ಗುಣಗಳಲ್ಲಿ ಕೆಲಕೆಲವು ಭಾಗಗಳು ಅದರಿಂದ ಹುಟ್ಟುವ ಮುಂದಿನ ಭೂತಗಳಲ್ಲಿಯೂ ಸಂಬಂಧಿಸಿ ಬರುವುವು. ಆದುದರಿಂದ ಆಕಾಶವೇ ಮೊದಲಾದ ನಾಲ್ಕು ಭೂತಗಳ ಗುಣಗಳೂ, ಭೂಮಿಯಲ್ಲಿ ಸೇರಿರುವುವು. ಹೀಗೆ ಮಹತ್ತು ಮೊದಲಾಗಿ ಭೂಮಿಯವರೆಗೆ ಕ್ರಮಕ್ರಮವಾಗಿ ಹುಟ್ಟಿ ಬರುವ ಏಳು ತತ್ವಗಳೂ (ಎಂದರೆ ಮಹತ್ತೆಂಬುದೊಂದು, ಇಂದ್ರಿಯ ಸಹಿತವಾದ ಅಹಂಕಾರವೆಂಬುದೊಂದು, ಪಂಚತನ್ಮಾತ್ರಗಳೊಡಗೂಡಿದ ಐದು ಮಹಾಭೂತಗಳು, ಇವೆಲ್ಲವೂ) ಒಂದಕ್ಕೊಂದು ಸಂಬಂಧವಿಲ್ಲದೆ ಬೇರೆ ಬೇರೆಯಾಗಿ, ಮುಂದಿನ ಸೃಷ್ಟಿಯನ್ನು ಮಾಡುವುದಕ್ಕೆ ಅಸಮರ್ಥಗಳಾಗಿದ್ದಾಗ, ಭಗವಂತನು ಕಾಲವನ್ನೂ, ಅದೃಷ್ಟವನ್ನೂ, ಸತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳನ್ನೂ ಮುಂದಿಟ್ಟುಕೊಂಡು, ಆ ಒಂದೊಂದು ತತ್ವದಲ್ಲಿಯೂ ಪ್ರವೇಶಿಸಿದನು. ಹೀಗೆ ಭಗವಂತನು ಅವುಗಳೊಳಗೆ ಪ್ರವೇಶಿಸಿ, ತನ್ನ ಸಂಕಲ್ಪದಿಂದ ಪ್ರೇರಿಸಿದೊಡನೆ, ಆ ಏಳು ತತ್ವಗಳೂ, ಒಂದಕ್ಕೊಂದಕ್ಕೆ ಪರಸ್ಪರಭೇದವೇ ತಿಳಿಯದಂತೆಯೂ, ತಿರುಗಿ ಬಿಚ್ಚಿಡುವುದಕ್ಕೆ ಸಾಧ್ಯವಿಲ್ಲದಂತೆಯೂ ಒಂದಾಗಿ ಸೇರಿಕೊಂಡುವು. ಹೀಗೆ ಒಂದಾಗಿ ಸೇರಿದ ತತ್ವಸಮುದಾಯದಿಂದ, ಅಚೇತನ

ವಾದ ಒಂದು ಅಂಡವು ಏರ್ಪಟ್ಟಿತು. ಈ ಅಂಡವೇ ಸಮಷ್ಟಿಪುರುಷನೆನಿಸಿದ ಬ್ರಹ್ಮದೇವನ ಉತ್ಪತ್ತಿಗೆ ಕಾರಣವಾಯಿತು. ಈ ಅಂಡವನ್ನೇ ವಿಶೇಷ ವೆಂಬ ಬೇರೆ ಹೆಸರಿನಿಂದಲೂ ಕರೆಯುವರು. ಈ ಅಂಡವೆಂಬುದು, ಹೊರಗೆ ಪ್ರಕೃತಿಯಿಂದ ಮುಚ್ಚಲ್ಪಟ್ಟು, ಒಂದಕ್ಕಿಂತಲೂ ಮತ್ತೊಂದು ಹತ್ತು ಪಾಲು ದೊಡ್ಡದಾದ ನೀರು ಮೊದಲಾದ ಎಲ್ಲಾ ತತ್ವಗಳ ಸಮುದಾಯ ದಿಂದ ಆವೃತವಾಗಿದ್ದಿತು. ದೇವಮನುಷ್ಯಾದಿ ಭೇದಗಳುಳ್ಳ ಸಮಸ್ತ ಜಗತ್ತನ್ನೂ ಒಳಗೊಂಡಿದ್ದ ಈ ಅಂಡವೂ ಆ ಭಗವಂತನಿಗೆ ಶರೀರವಾಗಿಯೇ ಇದ್ದಿತು. ಹೀಗೆ ಮಹತ್ತು ಮೊದಲಾದ ತತ್ವಸಮೂಹಗಳಿಂದ ಏರ್ಪಟ್ಟು, ಭಗವಂತನಿಗೆ ಶರೀರವಾಗಿ, ಸುವರ್ಣದಂತೆ ಕಾಂತಿವಿಶಿಷ್ಟವಾಗಿದ್ದ ಈ ಅಂಡವು, ಬಹುಕಾಲದವರೆಗೆ ಆವರಣಜಲಮಧ್ಯದಲ್ಲಿ ಮುಳುಗಿದ್ದಿತು. ಕೊನೆಗೆ ಆ ಅಂಡದಲ್ಲಿ ಅನುಪ್ರವೇಶಮಾಡಿದ ಅನಿರುದ್ಧರೂಪಿಯಾದ ಭಗ ವಂತನು, ಸೃಷ್ಟಿಕಾರ್ಯಕ್ಕಾಗಿ ಸಂಕಲ್ಪಿಸಿ, ಆದರಿಂದ ಮೇಲಕ್ಕೆದ್ದು, ಸಮಷ್ಟಿ ಪುರುಷನೆನಿಸಿದ ಬ್ರಹ್ಮಶರೀರದಲ್ಲಿ ಪ್ರವೇಶಿಸಿ, ಆ ಶರೀರದಲ್ಲಿ ಒಟ್ಟಾಗಿ ಕೂಡಿದ್ದ ಇಂದ್ರಿಯ ಸಮೂಹಗಳನ್ನು ಅನೇಕ ವಿಧವಾಗಿ ಬೇರ್ಪಡಿಸಿಡುವು ದಕ್ಕೆ ತೊಡಗಿದನು. ಮೊದಲು ಈ ಬ್ರಹ್ಮಶರೀರದಿಂದ ಮುಖವೆಂಬ ಅವ ಯವವು ಹೊರಪಟ್ಟಿತು. (ಎಂದರೆ, ಸಮಷ್ಟಿಪುರುಷನೆನಿಸಿದ ಈ ಬ್ರಹ್ಮ ಶರೀರದ ಮುಖವೆಂಬ ಭಾಗದಿಂದ, ದೇವಾದಿ ಭೂತಗಳ ವಾಗಿಂದ್ರಿಯಸ್ಥಾನ ವಾದ ಮುಖವೆಂಬ ಅವಯವಗಳು ಏರ್ಪಟ್ಟುವು.) ಈ ವ್ಯಷ್ಟಿಮುಖದಿಂದ ವಾಗಿಂದ್ರಿಯವು ಹುಟ್ಟಿ, ಅದರಿಂದ ಆ ಇಂದ್ರಿಯಾಧಿಷ್ಠಾನದೇವತೆಯಾದ ಅಗ್ನಿಯು ಹುಟ್ಟಿದನು. ಆ ಮೇಲೆ ಆ ಸಮಷ್ಟಿಪುರುಷನ ಮೂಗಿನ ಸ್ಥಾನ ದಿಂದ ವ್ಯಷ್ಟಿದೇವತೆಗಳ ಮೂಗಿನ ಸ್ಥಾನವು ಬೇರ್ಪಟ್ಟು, ಅದರಿಂದ ಘ್ರಾಣೇಂದ್ರಿಯವು ಹುಟ್ಟಿತು. ಆ ಇಂದ್ರಿಯದಿಂದ ಅದಕ್ಕಧಿದೇವತೆಯಾದ ವಾಯುವು ಜನಿಸಿದನು. ಹಾಗೆಯೇ ಸಮಷ್ಟಿಪುರುಷನ ನೇತ್ರಗೋಳದಿಂದ ವ್ಯಷ್ಟಿನೇತ್ರಗೋಳವೂ, ಅದರಿಂದ ಅದಕ್ಕಧಿಷ್ಠಾನದೇವತೆಯಾದ ಸೂರ್ಯನೂ, ಆ ಮೇಲೆ ಸಮಷ್ಟಿಪುರುಷನ ಕರ್ಣದಿಂದ ವ್ಯಷ್ಟಿಕರ್ಣಗಳೂ, ಅದರಲ್ಲಿ ಕರ್ಣೇಂದ್ರಿಯವೂ, ಅದರಿಂದ ಅದಕ್ಕಧಿದೇವತೆಯಾದ ದಿಕ್ಕುಗಳೂ, ವಿರಾಟ್ಪುರುಷನ ಚರ್ಮಸ್ಥಾನದಿಂದ ವ್ಯಷ್ಟಿಚರ್ಮಗಳೂ, ಅದರಲ್ಲಿ ತ್ವಗಿಂದ್ರಿ

ಯವೂ, ಅದರಿಂದ ಆ ಇಂದ್ರಿಯಾಧಿದೇವತೆಗಳಾದ ಓಷಧಿಗಳೂ ಉಂಟಾದುವು. ಆ ಮೇಲೆ ಸಮಷ್ಟಿಪುರುಷನ ಪುರುಷಲಿಂಗವೂ, ಅದರಲ್ಲಿ ಉಪಸ್ಥೇಂದ್ರಿಯವೂ, ಅದರಿಂದ ಆ ಇಂದ್ರಿಯಾಧಿದೇವತೆಯಾದ ಜಲವೂ ಏರ್ಪಟ್ಟಿತು. ಆ ಮೇಲೆ ಸಮಷ್ಟಿಪುರುಷನ ಗುದಸ್ಥಾನದಿಂದ ವ್ಯಷ್ಟಿಪುರುಷನ ಗುದಸ್ಥಾನವೂ, ಅದರಲ್ಲಿ ಪಾಯುವೆಂಬ ಇಂದ್ರಿಯವೂ ಏರ್ಪಟ್ಟಿತು. ಆ ಇಂದ್ರಿಯದಿಂದ ಅದಕ್ಕಧಿದೇವತೆಯಾದ ಮೃತ್ಯುವು ಉತ್ಪನ್ನನಾದನು. ಆ ಮೇಲೆ ಸಮಷ್ಟಿಪುರುಷನ ಹಸ್ತಸ್ಥಾನದಿಂದ ವ್ಯಷ್ಟಿಹಸ್ತಗಳೂ, ಅದರಲ್ಲಿ ಬಲವೆಂಬ ಹೆಸರುಳ್ಳ ಹಸ್ತೇಂದ್ರಿಯವೂ ಏರ್ಪಟ್ಟು, ಅದರಿಂದ ಇಂದ್ರನು ಹುಟ್ಟಿ, ಅದಕ್ಕೆ ಅಧಿಷ್ಠಾನ ದೇವತೆಯಾದನು. ಆ ಮೇಲೆ ಪಾದಸ್ಥಾನದಲ್ಲಿ ಪಾದಗಳು ಹುಟ್ಟಿ, ಅದರಲ್ಲಿ ಗತಿಯೆಂಬ ಪಾದೇಂದ್ರಿಯವು ಜನಿಸಿತು. ಆ ಇಂದ್ರಿಯದಿಂದ ಉಪೇಂದ್ರನು ಹುಟ್ಟಿ, ಅದಕ್ಕೆ ಅಧಿಷ್ಠಾನದೇವತೆಯಾದನು. ಆ ಮೇಲೆ ಬ್ರಹ್ಮನ ನಾಡೀಸ್ಥಾನಗಳಿಂದ ವ್ಯಷ್ಟಿನಾಡಿಗಳು ಹುಟ್ಟಿ, ಅದರಲ್ಲಿ ರಕ್ತವೂ, ಆ ರಕ್ತದಿಂದ ಅದಕ್ಕಧಿಷ್ಠಾನದೇವತೆಗಳಾದ ನದಿಗಳೂ ಉತ್ಪನವಾದುವು. ಅದರಿಂದಾಚೆಗೆ ಉದರವೆಂಬ ಸ್ಥಾನದಿಂದ ವ್ಯಷ್ಟಿಭೂತಗಳ ಉದರಸ್ಥಾನವೂ, ಅದರಲ್ಲಿ ಹಸಿವುಬಾಯಾರಿಕೆಗಳೂ ಉಂಟಾಗಿ, ಅವುಗಳಿಂದ ಅದಕ್ಕಧಿಷ್ಠಾನದೇವತೆಯಾದ ಸಮುದ್ರವು ಹುಟ್ಟಿತು. ಆ ಮೇಲೆ ವಿರಾಟ್ಪುರುಷನ ಹೃದಯಸ್ಥಾನದಲ್ಲಿ ನೈದಿಲೆಯ ಆಕಾರವುಳ್ಳ ಹೃದಯಸ್ಥಾನವು ಏರ್ಪಟ್ಟಿತು. ಅದರಿಂದ ಮನಸ್ಸೆಂಬ ಇಂದ್ರಿಯವು ಹುಟ್ಟಿ, ಅದಕ್ಕೆ ಚಂದ್ರನು ಅಧಿಷ್ಠಾನದೇವತೆಯಾಗಿ ಜನಿಸಿದನು. ಆ ಹೃದಯದಿಂದಲೇ ಬುದ್ಧಿರೂಪವಾದ ಇಂದ್ರಿಯವು ಏರ್ಪಟ್ಟು, ಅದಕ್ಕೆ ಬ್ರಹ್ಮನು ಅಧಿಪತಿಯಾದನು. ಅದರಿಂದಾಚೆಗೆ ಅದೇ ಹೃದಯದಿಂದ ಅಹಂಕಾರವು ಹುಟ್ಟಿ, ಅದಕ್ಕೆ ರುದ್ರನು ಅಧಿದೇವತೆಯಾದನು. ಅದೇ ಹೃದಯದಿಂದ ಚಿತ್ತವೆಂಬ ಇಂದ್ರಿಯವು ಏರ್ಪಟ್ಟು ಅದರಲ್ಲಿ ಚೈತ್ಯನೆಂಬ ಕ್ಷೇತ್ರಜ್ಞನು ಹುಟ್ಟಿ, ಅದಕ್ಕೆ ಅಧಿದೇವತೆಯಾಗಿ ನಿಂತನು. ಮೊದಲು ವಿರಾಟ್ಪುರುಷನಿಂದ ಇಂದ್ರಿಯಸಮೂಹಗಳೂ, ಅವುಗಳಿಗೆ ಆಯಾ ಅಧಿಷ್ಠಾನದೇವತೆಗಳೂ ಹುಟ್ಟಿದೊಡನೆ, ಆಯಾ ದೇವತೆಗಳಿಂದಧಿಷ್ಠಿತಗಳಾದ ಇಂದ್ರಿಯಗಳೆಲ್ಲವೂ ಆಯಾ ಶರೀರಗಳಿಗೆ ಕಾರ್ಯಸಾಮರ್ಥ್ಯವನ್ನುಂಟುಮಾಡುವುದಕ್ಕಾಗಿ ಪ್ರೇರಿತವಾದುವು.

ಅಗ್ನಿಯು ವಾಗಿಂದ್ರಿಯದೊಡನೆ ಮುಖದಲ್ಲಿ ಪ್ರವೇಶಿಸಿ, ಬಹಳವಾಗಿ ಪ್ರೇರಿಸುತ್ತಿದ್ದಾಗಲೂ, ವ್ಯಷ್ಟಿಶರೀರಗಳು ಕಾರ್ಯಸಮರ್ಥಗಳಾಗಲಿಲ್ಲ. ವಾಯುದೇವತೆಯು ಘ್ರಾಣೇಂದ್ರಿಯದೊಡನೆ ಮೂಗಿನಲ್ಲಿ ಪ್ರವೇಶಿಸಿದಾಗಲೂ, ಆ ಶರೀರಕ್ಕೆ ಕಾರ್ಯಸಾಮರ್ಥ್ಯವುಂಟಾಗಲಿಲ್ಲ. ಸೂರ್ಯನು ಚಕ್ಷುರಿಂದ್ರಿಯದೊಡನೆ ನೇತ್ರಸ್ಥಾನವನ್ನು ಪ್ರವೇಶಿಸಿದಾಗಲೂ ಆ ಶರೀರಗಳಿಗೆ ಕಾರ್ಯಶಕ್ತಿಯುಂಟಾಗಲಿಲ್ಲ. ದಿಗ್ದೇವತೆಗಳು ಕರ್ಣೇಂದ್ರಿಯದೊಡನೆ ಕಿವಿಯಲ್ಲಿ ಪ್ರವೇಶಿಸಿದಾಗಲೂ ಶರೀರಕ್ಕೆ ಕಾರ್ಯಸಾಮರ್ಥ್ಯವುಂಟಾಗಲಿಲ್ಲ. ಓಷಧಿದೇವತೆಗಳು ತ್ವಗಿಂದ್ರಿಯದೊಡನೆ ಚರ್ಮದಲ್ಲಿ ಪ್ರವೇಶಿಸಿದಾಗಲೂ ಆ ಶರೀರಕ್ಕೆ ಕಾರ್ಯಸಾಮರ್ಥ್ಯವುಂಟಾಗಲಿಲ್ಲ! ಹೀಗೆಯೇ ಜಲದೇವತೆಗಳು ಉಪಸ್ಥೇಂದ್ರಿಯದೊಡನೆ ಪುರುಷಲಿಂಗದಲ್ಲಿಯೂ, ಮೃತ್ಯುದೇವತೆಯು ಪಾಯುವೆಂಬ ಇಂದ್ರಿಯದೊಡನೆ ಗುದಸ್ಥಾನದಲ್ಲಿಯೂ, ವಿಷ್ಣುದೇವತೆಯು ಪಾದೇಂದ್ರಿಯದೊಡನೆ ಕಾಲುಗಳಲ್ಲಿಯೂ, ಇಂದ್ರನು ಬಲವೆಂಬ ಇಂದ್ರಿಯದೊಡನೆ ಹಸ್ತಗಳಲ್ಲಿಯೂ, ಸಮುದ್ರದೇವತೆಯು ಹಸಿವುಬಾಯಾರಿಕೆಗಳೊಡನೆ ಜಠರದಲ್ಲಿಯೂ, ನದಿಗಳು ರಕ್ತಗಳೊಡನೆ ನಾಡಿಗಳಲ್ಲಿಯೂ ಪ್ರವೇಶಿಸಿ, ಬಲವಾಗಿ ಪ್ರೇರಿಸುತ್ತಿದ್ದಾಗಲೂ ಆ ಶರೀರವನ್ನೆಬ್ಬಿಸುವುದಕ್ಕೆ ಸಮರ್ಥರಾಗಲಿಲ್ಲ. ಅದರಂತೆಯೇ ಚಂದ್ರನು ಮನಸ್ಸೆಂಬ ಇಂದ್ರಿಯದೊಡನೆಯೂ, ಬ್ರಹ್ಮನು ಬುದ್ಧೀಂದ್ರಿಯದೊಡನೆಯೂ, ರುದ್ರನು ಅಹಂಕಾರದೊಡನೆಯೂ ಹೃದಯದಲ್ಲಿ ಪ್ರವೇಶಿಸಿದಾಗಲೂ ಆ ಶರೀರವು ಕಾರ್ಯಸಮರ್ಥವಾಗಲಿಲ್ಲ. ಕೊನೆಗೆ ಚೈತ್ಯನೆಂದು ಕರೆಯಲ್ಪಡುವ ಕ್ಷೇತ್ರಜ್ಞನು, ಚಿತ್ತೇಂದ್ರಿಯದೊಡನೆ ಯಾವಾಗ ಹೃದಯದಲ್ಲಿ ಪ್ರವೇಶಿಸಿದನೋ, ಆಗಲೇ ಪುರುಷಶರೀರವು ಜಲದಲ್ಲಿದ್ದ ಆ ಬ್ರಹ್ಮಾಂಡದಿಂದ ಮೇಲಕ್ಕೆದ್ದು ಕಾರ್ಯಪ್ರವೃತ್ತಿಯಲ್ಲಿ ಶಕ್ತಿಯನ್ನು ಹೊಂದಿತು. ಅಮ್ಮಾ! ಸಮಸ್ತೇಂದ್ರಿಯಗಳೂ, ತಮ್ಮ ತಮ್ಮ ಅಧಿಷ್ಠಾನದೇವತೆಗಳೊಡನೆ, ಶರೀರದ ಆಯಾ ಇಂದ್ರಿಯಸ್ಥಾನಗಳಲ್ಲಿ ನೆಲೆಗೊಂಡಿದ್ದರೂ, ಕ್ಷೇತ್ರಜ್ಞನೆಂಬ ಜೀವನು, ಚಿತ್ತೇಂದ್ರಿಯದೊಡನೆ ಹೃದಯದಲ್ಲಿ ಪ್ರವೇಶಿಸಿದ ಹೊರತು, ಯಾವ ಇಂದ್ರಿಯಗಳೂ ಆ ಶರೀರಕ್ಕೆ ಕಾರ್ಯಶಕ್ತಿಯನ್ನುಂಟುಮಾಡಲಾರದೆ ಹೋದುವಷ್ಟೇ? ಇದರಂತೆಯೇ, ನಿದ್ರೆಮಾಡುತ್ತಿರುವ ಪುರುಷನ ಶರೀರವನ್ನು, ಅದಕ್ಕಭಿಮಾನಿಯಾದ ಜೀವನ

ಇಚ್ಛೆಯಿಲ್ಲದಿದ್ದಾಗ, ಅದರೊಳಗಿನ ಪ್ರಾಣಗಳಾಗಲೀ, ಇಂದ್ರಿಯಗಳಾಗಲೀ, ಮನಸ್ಸಾಗಲೀ, ಬುದ್ಧಿಯಾಗಲೀ, ತಮ್ಮ ಶಕ್ತಿಯಿಂದ ಹೇಗೆ ಕೆಲಸ ಮಾಡಿಸಲಾರವೋ, ಹಾಗೆಯೇ ಅಗ್ನಿ ಮೊದಲಾದ ದೇವತೆಗಳೆಲ್ಲರೂ ತಮ್ಮ ಇಂದ್ರಿಯಸ್ಥಾನಗಳೊಡನೆ ಶರೀರದಲ್ಲಿ ಪ್ರವೇಶಿಸಿದ್ದರೂ, ಜೀವಾತ್ಮನ ಪ್ರವೇಶವುಂಟಾಗುವವರೆಗೆ, ಆ ಶರೀರಕ್ಕೆ ಕಾರ್ಯಸಾಮರ್ಥ್ಯವನ್ನುಂಟುಮಾಡಲಾರದಿದ್ದರು. ಆದುದರಿಂದ ಕ್ಷೇತ್ರಜ್ಞನೆಂದೂ, ಚೈತ್ಯನೆಂದೂ, ಪ್ರತ್ಯಗಾತ್ಮನೆಂದೂ, ನಾಮಭೇದಗಳಿಂದ ಕರೆಯಲ್ಪಡುವ ಜೀವನೇ ಶರೀರಗಳಲ್ಲಿ ಪ್ರಮುಖನು. ಇಂದ್ರಿಯಗಳೂ, ಆ ಇಂದ್ರಿಯಾಭಿಮಾನಿ ದೇವತೆಗಳೂ, ಅವನಿಗೆ ಸಹಾಯಕರೇ ಹೊರತು, ಅವರಿಗೆ ಪ್ರಾಧಾನ್ಯವಿಲ್ಲ. ಆ ಶರೀರಗಳ ಮೂಲಕವಾಗಿ ಸುಖದುಃಖಾದಿಗಳನ್ನು ಅನುಭವಿಸತಕ್ಕವನು ಮಾತ್ರ ಜೀವನೇ ಆದುದರಿಂದ ಅವನು ಭೋಕ್ತೃವೆನಿಸುವನು. ಶುದ್ಧಸ್ವರೂಪನಾದ ಜೀವನು, ಶರೀರ, ಇಂದ್ರಿಯ, ಪ್ರಾಣ, ಬುದ್ಧಿ, ಎಂಬಿವೇ ಮೊದಲಾದ ವಸ್ತುಗಳೆಲ್ಲಕ್ಕಿಂತಲೂ ಬೇರ್ಪಟ್ಟವನೆಂಬುದನ್ನು ಈ ವಿಚಾರಗಳಿಂದ ತಿಳಿದು, ಭಕ್ತಿವೈರಾಗ್ಯಗಳಿಂದಲೂ, ಇವನೇ ಬ್ರಹ್ಮಸ್ವರೂಪನೆಂಬ ತತ್ವಜ್ಞಾನದಿಂದಲೂ ಮನಸ್ಸಿನಲ್ಲಿ ದೃಢಗೊಳಿಸಬೇಕು. ಯೋಗಪರಿಪಕ್ವವಾದ ಬುದ್ಧಿಯಿಂದ ಈ ನಿಶ್ಚಯವನ್ನು ತಿಳಿದಮೇಲೆ, ಆ ಜೀವನಿಗೂ ಅಂತರಾತ್ಮನಾಗಿರುವ ಪರಮಾತ್ಮನನ್ನೂ ಕೂಡ, ಅದೇ ಕರ್ಮಜ್ಞಾನ ಭಕ್ತಿಗಳೆಂಬ ಮೂರು ಬಗೆಯ ಯೋಗಗಳಿಂದಲೂ ಉಪಾಸನೆ ಮಾಡುತ್ತಿರಬೇಕು. ಇಲ್ಲಿಗೆ ಇಪ್ಪತ್ತಾರನೆಯ ಅಧ್ಯಾಯವು.

---

ಕಪಿಲನು ದೇವಹೂತಿಗೆ ಪ್ರಕೃತಿಪುರುಷರ ಸ್ವರೂಪ
ಜ್ಞಾನದಿಂದ ಮೋಕ್ಷಪ್ರಾಪ್ತಿಯೆಂಬುದನ್ನು
ನಿರೂಪಿಸಿದುದು.

ಅಮ್ಮಾ! ಕೇಳು! ಜೀವನು ಹೀಗೆ ಪ್ರಕೃತಿಕಲ್ಪಿತವಾದ ದೇಹದಲ್ಲಿ ಒಳಹೊಕ್ಕಿದ್ದರೂ, ಅವನಿಗೆ ಪ್ರಕೃತಿಯ ಧರ್ಮಗಳೊಂದೂ ಅಂಟಲಾರವು.

ಏಕೆಂದರೆ, ಜೀವನಿಗೆ ದೇವಮನುಷ್ಯಾದಿ ವಿಕಾರಗಳಾಗಲೀ, ಸತ್ವಾದಿ ಗುಣಗಳಾಗಲೀ, ಬಾಹ್ಯ ವ್ಯಾಪಾರಗಳಾಗಲೀ ಯಾವುದೂ ಸಂಬಂಧಿಸುವುದಿಲ್ಲ. ಇದಕ್ಕೊಂದು ದೃಷ್ಟಾಂತವನ್ನು ತೋರಿಸುವೆನು ನೋಡು! ಸೂರ್ಯಬಿಂಬವು ನೀರಿನಲ್ಲಿ ಪ್ರತಿಫಲಿಸುವಾಗ, ಆ ನೀರಿನ ಅಲೆದಾಟದಿಂದ ಆ ಬಿಂಬವೂ ಆಡುವಂತೆ ತೋರಿದರೂ, ಅದು ಕೇವಲ ಭ್ರಾಂತಿಯೇ ಹೊರತು, ವಾಸ್ತವದಲ್ಲಿ ಜಲದಲ್ಲಿ ನಡೆಯುವ ವಿಕಾರಕ್ಕಾಗಲೀ ಅದರ ಕಶ್ಮಲಕ್ಕಾಗಲೀ ಆ ಸೂರ್ಯಬಿಂಬವು ಈಡಾಗತಕ್ಕುದಲ್ಲ. ಆದರಂತೆಯೇ ಜೀವನು ಪ್ರಕೃತಿಯೊಡನೆ ಸೇರಿದ್ದರೂ, ಅದರ ಕಾರ್ಯಗಳಿಗೆ ತಾನು ಭಾಗಿಯಾಗಲಾರನು. ಮತ್ತು ಸಣ್ಣ ಕುಡಿಕೆ, ಹರವಿ, ಕೊಡ ಮುಂತಾದ ಪಾತ್ರೆಗಳಲ್ಲಿ ಸೇರಿದ ಮಾತ್ರಕ್ಕೆ ಅವುಗಳಿಂದುಂಟಾಗುವ ಸಣ್ಣ ದೊಡ್ಡ ಆಕೃತಿಗಳು ಆಕಾಶಕ್ಕೆ ಹೇಗೆ ಸಂಬಂಧಿಸುವುದಿಲ್ಲವೋ, ಹಾಗೆಯೇ ಜೀವನಿಗೂ ಪ್ರಕೃತಿಯಿಂದುಂಟಾಗುವ ಆಕಾರ ವ್ಯತ್ಯಾಸವೂ ಅಂಟಲಾರದು. "ಆದರೆ ಜೀವನಿಗೆ ದೇವಮನುಷ್ಯಾದಿ ಶರೀರಗಳೊಡನೆ ಸಂಬಂಧವೂ, ಕಾರ್ಯಗಳಲ್ಲಿ ಕರ್ತೃತ್ವವೂ, ಸುಖದುಃಖಾನುಭವವೂ ಹೇಗೆ ಸಂಭವಿಸುವು" ವೆಂದು ಕೇಳುವೆಯಾ? ಜೀವಾತ್ಮನ ಸ್ವಭಾವವೇ ಇದಕ್ಕೆ ಕಾರಣವು. ಜೀವಾತ್ಮನು ಸಹಜವಾಗಿ ಈ ದೋಷಗಳಿಲ್ಲದವನು. ಆದರೆ ಅವನು "ನಾನು ದೇವತೆ, ನಾನು ಮನುಷ್ಯನು, ನಾನು ಸುಖಿಸುತ್ತಿರುವೆನು, ನಾನು ದುಃಖಿಸುತ್ತಿರುವೆನು" ಎಂದು ತನ್ನ ದೇಹವನ್ನೇ ಆತ್ಮವೆಂದು ತಿಳಿಯುವ ಜ್ಞಾನವೆಲ್ಲವೂ, ಭ್ರಾಂತಿಯೇ ಹೊರತು ನಿಜವಲ್ಲ. ಜೀವನು ಸ್ವರೂಪದಲ್ಲಿಯೂ ಸ್ವಭಾವದಲ್ಲಿಯೂ, ಪ್ರಕೃತಿಗಿಂತಲೂ ಬೇರ್ಪಟ್ಟವನಾಗಿದ್ದರೂ, ಆತ್ಮವಲ್ಲದ ದೇಹವನ್ನು ಆತ್ಮವೆಂದು ನೆನೆಸತಕ್ಕ ಈ ಅಹಂಕಾರದಿಂದ, ತನ್ನ ಸ್ವರೂಪವನ್ನು ಮರೆತು, ಪ್ರಕೃತಿಯ ಗುಣಗಳಾದ ಶಬ್ದಾದಿ ವಿಷಯಗಳಲ್ಲಿ ಆಶೆಪಡುವನು. ಮತ್ತು "ನಾನೇ ಇದನ್ನು ಮಾಡುವೆನು" ಎಂದು ಕಾರ್ಯದಲ್ಲಿ ತನ್ನನ್ನು ಸ್ವತಂತ್ರನಂತೆಯೂ ನೆನೆಸಿಕೊಳ್ಳುವನು. ಮೇಲೆ ಹೇಳಿದ ಅಹಂಕಾರದಿಂದಲೂ, ತಾನೇ ಕರ್ತನೆಂದು ಭಾವಿಸುವ ಅಭಿಮಾನದಿಂದಲೂ ಸಂಸಾರಕ್ಕೆ ಸಿಕ್ಕಿಬೀಳುವನು. ಎಂದರೆ ಈ ಶರೀರಸಂಬಂಧವೇ ಸಂಸಾರವೆಂದು ಹೇಳಲ್ಪಡುವುದು. ಹೀಗೆ ಜೀವನು ಕರ್ಮಗಳಿಗೆ ಒಳಪಟ್ಟು, ಆ ಕರ್ಮಾಧೀನಗಳಾದ ಸುಖದುಃಖ

ಗಳಿಗೂ ಭಾಗಿಯಾಗಿ, ಅದರಲ್ಲಿ ಕೇವಲ ಸುಖವನ್ನೇ ಅನುಭವಿಸುವುದಕ್ಕೂ ಸಾಧ್ಯವಿಲ್ಲದೆ ಹೆಚ್ಚಾಗಿ ದುಃಖವನ್ನೇ ಅನುಭವಿಸುವನು. ಪ್ರಕೃತಿಸಂಬಂಧದಿಂದ ತನಗೆ ಪ್ರಾಪ್ತವಾದ ಪುಣ್ಯಪಾಪಕರ್ಮಗಳ ಮೂಲಕವಾಗಿ, ಉತ್ತಮಾಧಮ ಮಧ್ಯಮಗಳೆಂಬ ಮೂರು ಬಗೆಯಾದ ದೇವಮನುಷ್ಯ ತಿರ್ಯಗ್ಜನ್ಮಗಳಲ್ಲಿಯೂ ಹುಟ್ಟುವನು. ಅಮ್ಮಾ! ಇಂತಹ ಶರೀರದಲ್ಲಿ ಪ್ರವೇಶಿಸುವುದರಿಂದ ಜೀವನಿಗುಂಟಾಗುವ ಅನರ್ಥಗಳೇನೆಂದು ಕೇಳುವೆಯಾ? ಈ ದೇವಮನುಷ್ಯಾದಿ ಶರೀರಗಳು ಜೀವನಿಗೆ ಸಹಜವಾಗಿ ಏರ್ಪಟ್ಟವುಗಳಲ್ಲದಿದ್ದರೂ ಅವನು ಶರೀರಸುಖಕ್ಕಾಗಿ ಶಬ್ದಾದಿವಿಷಯಗಳನ್ನು ಚಿಂತಿಸಿಕೊಂಡಿರುವವರೆಗೆ ಸಂಸಾರದ ಕಟ್ಟು ಬಿಟ್ಟುಹೋಗಲಾರದು. ಸಂಸಾರವೆಂಬುದೇ ದೊಡ್ಡ ಅನರ್ಥವಾದುದರಿಂದ, ಅದನ್ನು ಬಿಡಿಸಿಕೊಳ್ಳಬೇಕಾದರೆ, ವಿಷಯಾಸಕ್ತಿಯಿಲ್ಲದ ಹಾಗೆ ಮನಸ್ಸನ್ನು ತಡೆದಿಡಬೇಕಾದುದು ಮೊದಲನೆಯ ಕೆಲಸವು. ಆತ್ಮನಿಗೆ ಸ್ವಪ್ನದಲ್ಲಿ ಅನುಭವಿಸುವ ಶರೀರಗಳು, ಸಹಜವಾಗಿ ಏರ್ಪಟ್ಟ ಆಕಾರಗಳಲ್ಲದಿದ್ದರೂ, ಅದೇ ಸ್ವಪ್ನದಲ್ಲಿ ಸುಳ್ಳುಸುಳ್ಳಾಗಿ ಕಾಣುವ ವಿಷಯಾನುಭವದ ಮೂಲಕವಾಗಿ ಸುಖದುಃಖರೂಪವಾದ ಅನರ್ಥಗಳಿಗೂ ಹೇಗೆ ಕಾರಣವಾಗುವುವೋ, ಹಾಗೆಯೇ ಎಚ್ಚರಗೊಂಡಿರುವಾಗಲೂ, ಜೀವನಿಗೆ ಶರೀರವೆಂಬುದು ಶಬ್ದಾದಿವಿಷಯಗಳಲ್ಲಿ ಅಪೇಕ್ಷೆಯನ್ನು ಹುಟ್ಟಿಸಿ, ಆ ಮೂಲಕವಾಗಿ ಅನರ್ಥಹೇತುವಾದ ಸಂಸಾರಬಂಧಕ್ಕೂ ಕಾರಣವಾಗುವುದು. ಆದುದರಿಂದ ಮೊದಲು ವಿಷಯಚಿಂತೆಯಿಂದ ಮನಸ್ಸನ್ನು ತಡೆದಿಡಬೇಕು. ವಿವೇಕಿಯಾದವನು, ಯಾವ ವಿಧದಿಂದಲೂ ಕದಲದ ವೈರಾಗ್ಯದಿಂದಲೂ, ಭಕ್ತಿಯೋಗದಿಂದಲೂ, ಮೆಲ್ಲಮೆಲ್ಲಗೆ ಮನಸ್ಸನ್ನು ವಶಪಡಿಸಿಕೊಂಡು, ಶಬ್ದಾದಿ ವಿಷಯಗಳಲ್ಲಿ ಪ್ರವರ್ತಿಸದ ಹಾಗೆ ತಡೆದಿಟ್ಟರೆ, ತನ್ನಷ್ಟಕ್ಕೆ ತಾನೇ ಸಂಸಾರವೆಂಬ ಕಟ್ಟಿನಿಂದ ಬಿಡುಗಡೆಯನ್ನು ಹೊಂದುವನು. ಆ ಸಂಸಾರದ ಬಂಧವನ್ನು ತಪ್ಪಿಸಿಕೊಳ್ಳುವುದೇ ಮೋಕ್ಷವು. ಅಮ್ಮಾ! ಈ ಭಕ್ತಿಯೋಗವನ್ನು ಸಾಧಿಸುವುದಕ್ಕೆ ಬೇಕಾದ ಕಾರ್ಯಗಳು ಅನೇಕವಿಧವಾಗಿರುವುವು. ಮನಸ್ಸನ್ನು ಬೇರೆ ವಿಷಯಗಳಿಗೆ ಪ್ರವರ್ತಿಸದಂತೆ ತಡೆಯುವುದರಲ್ಲಿ ಶ್ರದ್ಧೆಯುಳ್ಳವರಾಗಿ, ಭಕ್ತಿಯೋಗಕ್ಕೆ ಅಂಗಗಳಾದ ಶಮದಮಾದಿ ಗುಣಗಳಿಂದಲೂ, ಸರ್ವೇಶ್ವರನಾದ ನಾನೇ, ತಂದೆ, ತಾಯಿ, ಮೊದಲಾದ ಸರ್ವವಿಧಬಂಧುವೆಂಬ ಮನೋ

ಭಾವದಿಂದಲೂ, ನನ್ನ ಕಥೆಗಳನ್ನೇ ಕೇಳುತ್ತ, ಆ ಭಕ್ತಿಮಾರ್ಗವನ್ನು ಅಭ್ಯಸಿಸಬೇಕು. ಮತ್ತು ಸತ್ಯಸಂಧತೆ, ಸಮಸ್ತ ಭೂತಗಳಲ್ಲಿಯೂ ಸಮಬುದ್ಧಿ, ಭೂತದಯೆ, ಯಾರಲ್ಲಿಯೂ ವೈರಭಾವವಿಲ್ಲದೆ ನಡೆಯುವುದು, ಶಬ್ದಾದಿವಿಷಯಗಳಲ್ಲಿ ವಿರಕ್ತಿ, ಬ್ರಹ್ಮಚರ್ಯೆ, ಮಿತವಾಗಿ ಮಾತನಾಡುವುದು, ಭಕ್ತಿಯೋಗವನ್ನು ಹೆಚ್ಚಿಸುವುದಕ್ಕೆ ಪ್ರಧಾನವೆನಿಸಿದ ತನ್ನ ವರ್ಣಾಶ್ರಮ ಧರ್ಮಾನುಷ್ಠಾನಗಳು, ಇವೆಲ್ಲವನ್ನೂ ಹಿಡಿದು ಆ ಭಕ್ತಿಯನ್ನು ಸಾಧಿಸುತ್ತಿರಬೇಕು. ಮತ್ತು ದೈವಿಕವಾಗಿ ತನಗೆ ತಾನೇ ಲಭಿಸಿದ ಅನ್ನಾದಿಗಳನ್ನು ಮಿತವಾಗಿ ಭುಜಿಸಿ, ಅದರಿಂದಲೇ ತೃಪ್ತಿಹೊಂದಬೇಕು. ಏಕಾಂತಸ್ಥಳವನ್ನು ಹಿಡಿದು, ಮನಸ್ಸಿನಲ್ಲಿ ಭೀತಿ ಮುಂತಾದುವುಗಳನ್ನು ಬಿಟ್ಟು, ವಿರೋಧಿಗಳಲ್ಲಿಯೂ ಮಿತ್ರತ್ವವನ್ನೇ ತೋರಿಸುತ್ತಿರಬೇಕು. ನಿಷ್ಕಲ್ಮಷವಾದ ದೃಢಮನಸ್ಸುಳ್ಳವನಾಗಿ, ಪುತ್ರಮಿತ್ರಕಳತ್ರಾದಿ ಪರಿವಾರಗಳಲ್ಲಿಯೂ, ತನ್ನ ದೇಹದಲ್ಲಿಯೂ ಅಹಂಕಾರ ಮಮಕಾರಗಳನ್ನು ಬಿಟ್ಟುಬಿಡಬೇಕು. ಮತ್ತು ಪ್ರಕೃತಿಗೂ, ಪುರುಷನಿಗೂ ಇರುವ ನಿಜಸ್ವರೂಪವನ್ನು ತಿಳಿಯುವುದರಿಂದ ಪ್ರಕೃತಿ ಸಂಬಂಧವು ತ್ಯಾಜ್ಯವೆಂದೂ, ಆತ್ಮಸ್ವರೂಪವೇ ಪ್ರಾಪ್ಯವೆಂದೂ, ವಿವೇಕಜ್ಞಾನವನ್ನು ಹೊಂದಿ, ಮನಸ್ಸಿಗೆ ತೋರುವ ಸಂಕಲ್ಪವಿಕಲ್ಪಾದಿ ಜ್ಞಾನಗಳನ್ನು ತೊಲಗಿಸಿಕೊಂಡು, ಭಗವಂತನಲ್ಲಿ ಹೊರತು ಬೇರೊಂದರಲ್ಲಿಯೂ ದೃಷ್ಟಿಯಿಡದೆ, ಪ್ರಕೃತಿಗಿಂತಲೂ ವಿಲಕ್ಷಣನಾದ ಆತ್ಮನ ನಿಜವನ್ನು ತಿಳಿದ ಮೇಲೆ, ಆ ಆತ್ಮಧರ್ಮದಿಂದಲೇ ಅದರೊಳಗೆ ಅಂತರ್ಯಾಮಿಯಾಗಿರುವ ಪರಮಾತ್ಮನನ್ನೂ ಸಾಕ್ಷಾತ್ಕರಿಸಬಹುದು. ಜನನಿ! ಇದಕ್ಕೊಂದು ದೃಷ್ಟಾಂತವನ್ನು ಹೇಳುವೆನು ಕೇಳು. ಸೂರ್ಯದೇವನಿಂದ ಅಧಿಷ್ಠಾನಮಾಡಲ್ಪಟ್ಟ ನೇತ್ರೇಂದ್ರಿಯದಿಂದಲೇ ಆ ಸೂರ್ಯನನ್ನು ನೋಡುವಂತೆ, ಪರಮಾತ್ಮನಿಂದ ಅಧಿಷ್ಠಿತವಾದ ಜೀವಾತ್ಮನ ಧರ್ಮದಿಂದಲೇ ಆ ಭಗವಂತನನ್ನೂ ಸಾಕ್ಷಾತ್ಕರಿಸಬೇಕು. ಅದರಿಂದಾಚೆಗೆ ಪ್ರಾರಬ್ಧಕರ್ಮವು ಕಳೆದು, ದೇವಮನುಷ್ಯಾದಿ ರೂಪದಿಂದಿರುವ ಶರೀರವನ್ನು ತೊರೆದು, ಆ ಪರಮಾತ್ಮನನ್ನು ಸೇರುವನು. ಆ ಪರಮಾತ್ಮನು ಕರ್ಮಸಂಬಂಧದಿಂದುಂಟಾದ ಶರೀರಗಳಿಲ್ಲದವನು. ತನ್ನ ಸಂಕಲ್ಪದಿಂದಲೇ ದೇವಮನುಷ್ಯಾದಿ ಶರೀರಗಳನ್ನು ಪರಿಗ್ರಹಿಸತಕ್ಕವನು. ಅವನ ಜ್ಞಾನಕ್ಕೆ ಯಾವಾಗಲೂ ನ್ಯೂನತೆಯಿಲ್ಲ.

ಜ್ಞಾನವೂ, ಆನಂದವೂ ಅವನ ಸ್ವರೂಪವು. ಜೀವಾತ್ಮನಿಗೆ ಅವನು ಸಕಲ ವಿಧದಲ್ಲಿಯೂ ಬಂಧುವೆನಿಸಿದನು. ಅಸತ್ತೆನಿಸಿದ ಈ ದೇಹಾದಿಗಳನ್ನೂ ತನ್ನ ಶಕ್ತಿಯಿಂದಲೇ ಪ್ರಕಾಶಗೊಳಿಸತಕ್ಕವನು. ತನಗಿಂತಲೂ ಉತ್ತಮ ರಾಗಲೀ ಸಮಾನರಾಗಲೀ ಇಲ್ಲದ ಮಹಾಮಹಿಮೆಯುಳ್ಳವನು. ಸರ್ವಾಂತ ರ್ಯಾಮಿಯು. ಇಂತಹ ಪರಮಾತ್ಮನನ್ನು ಸೇರಬಹುದು. "ಆದರೆ ಆತ್ಮ ಸ್ವರೂಪವನ್ನು ಪ್ರಕೃತಿಗಿಂತಲೂ ವಿಲಕ್ಷಣವೆಂದು ತಿಳಿದುಕೊಂಡಹಾಗೆಲ್ಲಾ ಅದರಲ್ಲಿ ಅಂತರ್ಯಾಮಿಯಾದ ಆ ಪರಮಾತ್ಮನನ್ನೂ ತಿಳಿಯುವುದೆಂದರೆ ಹೇಗೆ? ಯಾವ ಇಂದ್ರಿಯಗಳಿಗೂ ಗೋಚರಿಸದಷ್ಟು ಸೂಕ್ಷ್ಮವಾದ ಆ ಆತ್ಮಸ್ವರೂಪವು ಹೇಗೆ ತಾನೇ ದರ್ಶನಯೋಗ್ಯವಾಗುವುದು ?" ಎಂದು ನೀನು ಶಂಕಿಸಬಹುದು. ಜನನೀ! ನಿಜವಾದ ಆತ್ಮಸ್ವರೂಪವಾಗಲೀ, ಆತ್ಮವಲ್ಲದ ದೇಹಾದಿಗಳಲ್ಲಿ ಆತ್ಮವೆಂಬ ಭ್ರಾಂತಿಯಾಗಲೀ ಆ ಆತ್ಮಧರ್ಮವೆನಿಸಿದ ಜ್ಞಾನದಿಂದಲೇ ತಿಳಿಯಬೇಕು. ನೆಲದಲ್ಲಿರುವ ಹುಲ್ಲು, ಕಡ್ಡಿ, ಮೊದಲಾದ ವಸ್ತುಗಳನ್ನು ಪ್ರಕಾಶಪಡಿಸತಕ್ಕ ಸೂರ್ಯಕಿರಣದಿಂದಲೇ ಜಲಾದಿಗಳಲ್ಲಿ ಕಾಣುವ ಸೂರ್ಯನ ಪ್ರತಿಬಿಂಬವನ್ನೂ, ಆ ಬೆಳಕಿನಿಂದಲೇ ಆಕಾಶದಲ್ಲಿರುವ ನಿಜವಾದ ಸೂರ್ಯನನ್ನೂ, ಕಂಡುಕೊಳ್ಳುವೆವಷ್ಟೇ? ಇದರಂತೆ ಪಂಚಭೂತ ಗಳು, ಇಂದ್ರಿಯಗಳು, ಮನಸ್ಸು ಎಂಬೀ ಮೂರು ಬಗೆಯ ಅಹಂಕಾರಗಳ ಪರಿಣಾಮ ರೂಪವಾದ ದೇಹವು, ಆತ್ಮಕ್ಕಿಂತಲೂ ವಿಲಕ್ಷಣವಾಗಿದ್ದರೂ, ಅದನ್ನೇ ಆತ್ಮವೆಂದು ಯಾವ ಜ್ಞಾನದಿಂದ ತಿಳಿಯುವೆವೋ ಆ ಜ್ಞಾನ ದಿಂದಲೇ ನಿಜವಾದ ಆತ್ಮಸ್ವರೂಪವನ್ನೂ ಕಂಡುಕೊಳ್ಳಬೇಕು. ಆದುದ ರಿಂದ ಆತ್ಮಸ್ವರೂಪವಾಗಲೀ, ದೇಹಾದಿಗಳಲ್ಲಿ ಆತ್ಮಭ್ರಾಂತಿಯಾಗಲೀ, ಆ ಆತ್ಮಗುಣವಾದ ಜ್ಞಾನದಿಂದಲೇ ಉಂಟಾಗುವುದು. ಭೂತಸೂಕ್ಷ್ಮಗಳು, ಅಹಂಕಾರ, ಮನಸ್ಸು, ಬುದ್ಧಿ ಮೊದಲಾದುವು ತಮ್ಮ ತಮ್ಮ ಕಾರ್ಯವನ್ನು ನಡೆಸಲಾರದೆ ಎಚ್ಚರ ತಪ್ಪಿದ್ದಾಗಲೂ ಯಾವುದು ಮಾತ್ರ ಎಚ್ಚರ ತಪ್ಪದೆ, ಆ ದೇಹದಲ್ಲಿಯೇ ಸೇರಿಕೊಂಡು ದೇಹಾದಿಗಳಲ್ಲಿ ಅಭಿಮಾನವನ್ನು ಮಾತ್ರ ಬಿಟ್ಟಂತಿರುವುದೋ ಅದೇ ಜೀವಾತ್ಮವೆಂದು ಹೇಳಲ್ಪಡುವುದು. ನಿದ್ರೆಯಿಲ್ಲದೆ ಎಚ್ಚರಗೊಂಡಿದ್ದ ಕಾಲದಲ್ಲಿ, ದೇಹಾದಿಗಳನ್ನು ತನ್ನದೆಂದು ಅಭಿಮಾನ ದಿಂದ ಕಾಣುತ್ತಿರುವ ಜೀವಾತ್ಮನೇ, ಮಲಗಿದಾಗ ಆ ದೇಹಾದಿಗಳನ್ನು

ಮರೆತು, ಅದರಿಂದ ಅಹಂಭಾವವೂ ಬಿಟ್ಟುಹೋಗಿ, ತಾನು ಮಾತ್ರ ನಾಶ ಹೊಂದಿದ್ದರೂ, ಹಣವನ್ನು ಕಳೆದುಕೊಂಡ ಲೋಭಿಯು ತಾನೇ ನಷ್ಟವಾದಂತೆ ತಿಳಿಯುವ ಹಾಗೆ, ಆಗಲೂ, ತನ್ನನ್ನೇ ನಷ್ಟಹೊಂದಿದಂತೆ ಭಾವಿಸಿಕೊಳ್ಳುವುದುಂಟು. ಇದು ಕೇವಲ ಭ್ರಮವಲ್ಲದೆ ಬೇರೆಯಲ್ಲ. ಜನನೀ! ಲೋಕವ್ಯವಹಾರದಲ್ಲಿ, ಮಲಗಿದ ಮನುಷ್ಯನಿಗೆ ನಿದ್ರೆಯಲ್ಲಿ ಯಾವುದೂ ತಿಳಿಯಲಾರದೆಂದು ಅನೇಕರು ನಂಬುವರು. ಅದು ಹಾಗಲ್ಲ! ನಿದ್ರೆಮಾಡುವವನಿಗೆ ದೇಹಾದಿಗಳೊಂದೂ ತೋರದಿದ್ದರೂ, ಜೀವಾತ್ಮವು ಮಾತ್ರ ಎಂದಿಗೂ ಎಚ್ಚರಗೊಂಡೇ ಇರುವುದು. ಇದಕ್ಕೆ ನಿದರ್ಶನವೇನೆಂದು ಕೇಳುವೆಯಾ? ನಿದ್ರೆಯಿಂದೆಚ್ಚರಗೊಂಡವನು ಎದ್ದ ಕೂಡಲೇ "ನಾನು ಸುಖವಾಗಿ ನಿದ್ರಿಸಿದೆನು. ನಿದ್ರೆಯಲ್ಲಿ ನನಗೇನೂ ತಿಳಿಯಲಿಲ್ಲವು." ಎಂದು ಹೇಳುವುದುಂಟಲ್ಲವೇ? ಆ ನಿದ್ರೆಯಲ್ಲಿಯೂ "ನಾನು, ನನ್ನದು" ಎಂದು ತೋರುವವನೇ ಜೀವನೆಂದು ತಿಳಿ! ಆದರೆ ಒಂದೊಂದು ಸಮಯದಲ್ಲಿ ನಿದ್ರೆಯಿಂದೆಚ್ಚತ್ತವನು "ತನ್ನನ್ನೇ ತಾನು ಮರೆತಿದ್ದುದಾಗಿ ಹೇಳುವುದುಂಟಲ್ಲವೇ? ಆಗ ತಾನು ಎಂಬುದರಿಂದ ಜೀವಾತ್ಮನುಂಟೆಂಬುದು ಸಿದ್ಧವಾದರೂ ತನ್ನನ್ನೇ ತಾನು ಕಾಣದಿದ್ದನೆಂಬುದರಿಂದ, ಆ ಜೀವನೂ ಎಚ್ಚರತಪ್ಪಿದ್ದನೆಂದು ಸ್ಪಷ್ಟವಾಗುವುದಲ್ಲವೇ?" ಎಂದು ನೀನು ಆಕ್ಷೇಪಿಸಬಹುದು. ಅದಕ್ಕೂ ಸಮಾಧಾನವನ್ನು ಹೇಳುವೆನು ಕೇಳು. ಮಲಗಿದವನಿಗೆ "ತಾನು ಇಂತವನು. ಈ ಸ್ಥಳದಲ್ಲಿರುವೆನು" ಇವೇ ಮೊದಲಾದ ವಿಷಯಗಳು ಮಾತ್ರ ತಿಳಿಯದಿರಬಹುದೇ ಹೊರತು, ಆ ನಿದ್ರೆಯಲ್ಲಿಯೂ ಕೂಡ "ನಾನು, ನಾನು" ಎಂಬ ಆತ್ಮಜ್ಞಾನವಿರುವುದರಲ್ಲಿ ಸಂದೇಹವಿಲ್ಲ. ಆದುದರಿಂದ ಓ! ಜನನೀ! ಪ್ರಕೃತಿಗಿಂತಲೂ ಜೀವನು ಬೇರ್ಪಟ್ಟವನೆಂಬುದನ್ನು ತಿಳಿಯಲಪೇಕ್ಷೆಯುಳ್ಳವನು, ಈ ಜೀವಾತ್ಮ ಸ್ವರೂಪವನ್ನು ಚೆನ್ನಾಗಿ ಪರಾಮರ್ಶಿಸಿ ತಿಳಿಯಬೇಕು. ಪಂಚಭೂತಗಳಿಂದ ಏರ್ಪಟ್ಟಿರುವ ಈ ಶರೀರವನ್ನು ಧರಿಸಿರತಕ್ಕವನೇ ಜೀವನು. ಆ ಜೀವನ ಸಂಬಂಧವು ಬಿಟ್ಟುಹೋದೊಡನೆ, ಶರೀರವೂ ಬಿದ್ದು ಹೋಗುವುದು. ಆ ಶರೀರಕ್ಕೆ ಉಂಟಾಗುವ ಚಲನಶಕ್ತಿಯೂ ಆ ಜೀವಾತ್ಮನಿಂದಲೇ ಪ್ರಾಪ್ತವಾಗುವುದು. ಜೀವನಿಲ್ಲದ ದೇಹವು ನಿಲ್ಲುವುದಕ್ಕಾಗಲೀ, ನಡೆಯುವುದಕ್ಕಾಗಲೀ, ಶಕ್ತವಾಗಲಾರದು. ದೇಹಕ್ಕಿಂತಲೂ ವಿಲಕ್ಷಣವಾದ

ಈ ಆತ್ಮಸ್ವರೂಪವನ್ನು ತಿಳಿದು, ಈ ಜ್ಞಾನದ ಬಲದಿಂದಲೇ ಅದರೊಳಗೆ ಸೇರಿರುವ ಪರಮಾತ್ಮನನ್ನೂ ಉಪಾಸಿಸಬೇಕು. ಮನುಷ್ಯನಿಗೆ ಎಚ್ಚರದಲ್ಲಿಯಾಗಲೀ, ಕನಸಿನಲ್ಲಿಯಾಗಲೀ, ಸುಷುಪ್ತಿಯೆಂಬ ಗಾಢನಿದ್ರೆಯಲ್ಲಿಯಾಗಲೀ, ಆತ್ಮಸ್ಫುರಣವೆಂಬುದು ಒಂದೇ ವಿಧವಾದುದು" ಎಂದನು. ಈ ನಡುವೆ ದೇವಹೂತಿಯು ಮತ್ತೊಂದು ಪ್ರಶ್ನೆಯನ್ನು ಮಾಡುವಳು. "ಓ ಮಹಾತ್ಮಾ! ನಿನ್ನ ಮಾತಿನಿಂದ, ಪ್ರಕೃತಿಗೂ ಜೀವನಿಗೂ ಇರುವ ಸಂಬಂಧವು ಬಹಳ ಬಲವತ್ತರವಾಗಿ, ಯಾವಾಗಲೂ ಅವು ಒಂದನ್ನೊಂದು ಅಗಲಲಾರವೆಂದೂ ತೋರುವುದು. ಇದಲ್ಲದೆ ಇವೆರಡೂ ನಾಶವಿಲ್ಲದ ನಿತ್ಯವಸ್ತುಗಳಾಗಿರುವುವು. ಭೂಮಿಯೂ, ಅದರ ಗುಣವಾದ ಗಂಧವೂ ಪರಸ್ಪರವಾಗಿ ಒಂದನ್ನೊಂದು ಅಗಲಿರುವುದು ಹೇಗೆ ಅಸಂಭವವೋ, ಅದರಂತೆಯೇ ಪ್ರಕೃತಿಗೂ, ಜೀವನಿಗೂ ಅಗಲಿಕೆಯೆಂಬುದೇ ಅಸಂಭವವೆಂದೂ ಕಾಣುವುದು. ಮತ್ತು ಜೀವನಿಗೆ ಸಂಸಾರ ಸಂಬಂಧವಾದ ಸಂಚಾರಾದಿ ಕ್ರಿಯೆಗಳಲ್ಲಿ ಪ್ರವೃತ್ತಿಯೂ ಕೂಡ, ಆ ಪ್ರಕೃತಿಯ ಸಂಬಂಧದಿಂದ ಬಂದುದೇ ಹೊರತು, ಸಹಜವಲ್ಲ. ಮತ್ತು ಸತ್ವಾದಿ ಗುಣಗಳೂ ಪ್ರಕೃತಿಯ ಸಂಬಂಧದಿಂದಲೇ ಬರುವುವು. ಹೀಗೆ ಆ ಪ್ರಕೃತಿ ಸಂಬಂಧವಾದ ಗುಣಗಳ ಸಹಾಯದಿಂದಲೇ ಇವನಲ್ಲಿ ಕರ್ಮಜ್ಞಾನಾದಿ ಪ್ರವೃತ್ತಿಗಳು ನಡೆಯುತ್ತಿರುವಾಗ, ಆ ಪ್ರಕೃತಿಯು ಮಾತ್ರ ಬಿಟ್ಟುಹೋಗುವುದು ಹೇಗೆ? ಭೂಮಿಯೂ ಗಂಧವೂ, ಜಲವೂ ರಸವೂ, ಒಂದನ್ನೊಂದು ಅಗಲದ ಹಾಗೆ ಜೀವಪ್ರಕೃತಿಗಳು ಒಂದನ್ನೊಂದು ಅಗಲುವುದೇ ಸಮಂಜಸವಲ್ಲ. ಒಂದು ವೇಳೆ ಆತ್ಮಜ್ಞಾನದಿಂದ ಆ ಕಾಲಕ್ಕೆ ಸಂಸಾರ ಭಯವು ಮಾತ್ರ ನೀಗಬಹುದಾಗಿದ್ದರೂ, ಪ್ರಕೃತಿಯು ಮಾತ್ರ ಬಿಟ್ಟು ಹೋಗಲಾರದು. ಯಾವಾಗ ಪ್ರಕೃತಿ ಸಂಬಂಧವು ಅನುವರ್ತಿಸಿ ಬರುವುದೋ, ಆಗ ತಿರುಗಿ ಎಂದಾದರೂ ಒಮ್ಮೆ ಸಂಸಾರ ಭಯವೂ ಉಂಟಾಗದಿರದು. ಆದುದರಿಂದ ಪ್ರಕೃತಿ ಸಂಬಂಧವಿರುವವರೆಗೆ ಸಂಪೂರ್ಣವಾದ ಭಯನಿವೃತ್ತಿಗಾಗಲೀ, ಮೋಕ್ಷಪ್ರಾಪ್ತಿಗಾಗಲೀ ಅವಕಾಶವಿಲ್ಲ. ಹೀಗಿರುವಾಗ ಈ ಆತ್ಮಪರಮಾತ್ಮ ಸ್ವರೂಪಗಳನ್ನು ಉಪಾಸನೆ ಮಾಡುವುದರಿಂದ ಫಲವೇನು? ಈ ನನ್ನ ಸಂದೇಹವನ್ನು ನಿವೃತ್ತಿಮಾಡಬೇಕು" ಎಂದಳು. ಅದಕ್ಕಾ ಕಪಿಲನು, "ಅಮ್ಮಾ! ನೀನು ಕೇಳಿದ ಪ್ರಶ್ನೆ

ಯೇನೋ ಉಚಿತವಾಗಿಯೇ ಇರುವುದು. ಆದರೆ ಪ್ರಕೃತಿಯು ಜೀವಾತ್ಮ ನನ್ನು ಎಂದಿಗೂ ಬಿಟ್ಟು ಹೋಗಲಾರದೆಂಬ ನಿಯಮವಿಲ್ಲ. ತಕ್ಕ ಉಪಾಯ ದಿಂದ ಮೆಲ್ಲಮೆಲ್ಲಗೆ ಅದನ್ನು ಬಿಡಿಸಬಹುದು. ಬೇರೆ ಫಲಾಪೇಕ್ಷೆಯಿಲ್ಲದೆ ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳನ್ನು ನಡೆಸುತ್ತ, ಶುದ್ಧಮನಸ್ಸಿನಿಂದ ನನ್ನ ಕಥಾಶ್ರವಣವನ್ನು ಮಾಡುತ್ತಿದ್ದರೆ, ಈ ಕಥಾಶ್ರವಣದ ಬಲದಿಂದ ನನ್ನಲ್ಲಿ ಭಕ್ತಿಯುಂಟಾಗುವುದು. ಈ ಭಕ್ತಿಯೊಂದೇ ಸಂಸಾರಬಂಧವನ್ನು ನೀಗಿಸಬಲ್ಲುದು. ಮತ್ತು ಪ್ರಕೃತಿಪುರುಷರ ಯಥಾರ್ಥ ಜ್ಞಾನವನ್ನು ಪಡೆಯುವುದು, ವಿರಕ್ತಿಮಾರ್ಗವನ್ನನುಸರಿಸುವುದು, ತಪೋಮಾರ್ಗದಿಂದ ಯೋಗವನ್ನು ಹಿಡಿಯುವುದು, ಮನಸ್ಸನ್ನು ಅತ್ತಿತ್ತ ಕದಲದ ಹಾಗೆ ನನ್ನಲ್ಲಿಯೇ ನಿಲ್ಲಿಸಿ ಭಕ್ತಿಯನ್ನು ಸಾಧಿಸುವುದು, ಈ ಕಾರ್ಯಗಳನ್ನು ನಡೆಸು ತ್ತಿದ್ದರೆ, ಹಗಲು ರಾತ್ರಿಯೂ ಇವುಗಳಿಂದ ದಹಿಸಲ್ಪಡುತ್ತಿರುವ ಪ್ರಕೃತಿಯು ಮೆಲ್ಲಮೆಲ್ಲಗೆ ತನಗೆ ತಾನೇ ಸಡಿಲಿಹೋಗುವುದು. ಜನನೀ! ಬೆಂಕಿಯನ್ನು ತನ್ನೊಳಗೆ ಬಚ್ಚಿಟ್ಟುಕೊಂಡಿರತಕ್ಕ ಅರಣಿಯು, ಕಾಲಾಂತರದಲ್ಲಿ ಆ ಒಳ ಗಿನ ಬೆಂಕಿಯಿಂದಲೇ ದಗ್ಧವಾಗುವಂತೆ, ಆತ್ಮವನ್ನು ಮರೆಸಿಕೊಂಡಿರತಕ್ಕ ಪ್ರಕೃತಿಯೂ ಕೂಡ, ತೀವ್ರವಾದ ಆ ಆತ್ಮಜ್ಞಾನದಿಂದಲೇ ನಿವೃತ್ತವಾಗು ವುದು. ಮತ್ತು ಅಗ್ನಿಯ ಉತ್ಪತ್ತಿಕಾರಣವಾದ ಅರಣಿಯು ಆ ಅಗ್ನಿಯಿಂ ದಲೇ ದಹಿಸಲ್ಪಡುವಂತೆ, ಈ ದೇಹರೂಪವಾದ ಪ್ರಕೃತಿಯೇ, ಮೊದಲು ಸಾತ್ವಿಕಾಹಾರದಿಂದಲೂ, ಸತ್ಕರ್ಮಾದಿ ರೂಪಗಳಿಂದಲೂ, ಜ್ಞಾನೋತ್ಪತ್ತಿಗೆ ಕಾರಣವಾಗಿದ್ದು, ಕೊನೆಗೆ ಆ ಜ್ಞಾನೋದಯದಿಂದಲೇ ನಾಶಹೊಂದು ವುದು. ಈ ವಿಧವಾಗಿ ಬಿಟ್ಟುಹೋದ ಪ್ರಕೃತಿಯು ತಿರುಗಿ ಪುರುಷನಿಗೆ ಸಂಸಾರಬಂಧವನ್ನು ಹುಟ್ಟಿಸಲಾರದು. ಜೀವನು ಪ್ರಕೃತಿಸಂಬಂಧದಿಂದುಂ ಟಾಗುವ ಭೋಗಗಳೆಲ್ಲವನ್ನೂ ಅನುಭವಿಸಿ, ಆಗಾಗಿನ ಅನುಭವದಿಂದ ಅದು ದೋಷಪ್ರಚುರವೆಂಬುದನ್ನು ತಿಳಿದು, ಅದನ್ನು ತೊರೆದುಬಿಟ್ಟಮೇಲೆ, ಆ ಪ್ರಕೃತಿಯು ಕರ್ಮವಶ್ಯನಲ್ಲದೆಯೂ, ಪಾಪರಾಹಿತ್ಯವೇ ಮೊದಲಾದ ಎಂಟು ಬಗೆಯ ಗುಣಗಳೊಡಗೂಡಿಯೂ ಇರುವ ಆ ಜೀವನಿಗೆ ಎಂದಿಗೂ ಸಂಸಾರ ವನ್ನು ಕಟ್ಟಿಡಲಾರದು. ಮತ್ತು ಓ, ಜನನೀ! ಮಲಗಿದ್ದಾಗ ಸ್ವಪ್ನದಲ್ಲಿ ಒಬ್ಬ ಮನುಷ್ಯನು, ಶಿರಚ್ಛೇದನ, ಬಂಧುಮರಣವೇ ಮೊದಲಾದ ಎಷ್ಟೋ

ಮಹಾನರ್ಥಗಳನ್ನನುಭವಿಸಿದಂತೆ ಕಾಣುವನು. ಎಚ್ಚರವಾದ ಮೇಲೆ ಏನೂ ಇಲ್ಲದೆ ಸುಖವಾಗಿರುವನು. ಮಲಗಿದ್ದವನಿಗೆ ಎಷ್ಟೋ ಅನರ್ಥಗಳನ್ನು ತಂದಿಟ್ಟ ಸ್ವಪ್ನವು, ಎಚ್ಚರಗೊಂಡವನನ್ನು ಏನೂ ಮಾಡಲಾರದಷ್ಟೆ? ಹಾಗೆಯೇ ಎಚ್ಚರ ತಪ್ಪಿದವರನ್ನು ಪ್ರಕೃತಿಯು ಸಂಸಾರದಲ್ಲಿ ಕಟ್ಟಿಡಬಹುದೇ ಹೊರತು, ಪ್ರಕೃತಿಪುರುಷೇಶ್ವರರ ನಿಜತತ್ವವನ್ನು ಚೆನ್ನಾಗಿ ಗ್ರಹಿಸಿ, ನನ್ನಲ್ಲಿ ನಟ್ಟ ಮನಸ್ಸುಳ್ಳವರಾಗಿ, ಆತ್ಮಾನುಭವದಲ್ಲಿರುವ ಜ್ಞಾನಿಗಳ ವಿಷಯದಲ್ಲಿ, ಆ ಪ್ರಕೃತಿಯು ಯಾವ ಕೇಡನ್ನೂ ಮಾಡಲಾರದು, ಮತ್ತು ಆತ್ಮಧ್ಯಾನಪರನಾಗಿ ಅನೇಕ ಜನ್ಮಗಳ ಕಾಲದಿಂದ, ತತ್ವಗಳ ಮತ್ತು ಪುರುಷಾರ್ಥಗಳ ಸ್ವರೂಪವನ್ನು ತಿಳಿದು, ಬ್ರಹ್ಮಾದಿ ಲೋಕಗಳೊಂದನ್ನೂ ಅಪೇಕ್ಷಿಸದೆ, ನನ್ನೊಬ್ಬನಲ್ಲಿಯೇ ಭಕ್ತಿಯನ್ನಿಟ್ಟು, ನನ್ನ ಸಾಕ್ಷಾತ್ಕಾರದಿಂದ ಸಮಸ್ತ ಸಂಶಯಗಳನ್ನೂ ನೀಗಿದ ಯೋಗಿಯು, ತನ್ನ ಪ್ರಾರಬ್ಧಕರ್ಮವು ತೀರಿದ ಮೇಲೆ, ಯಾವ ಸ್ಥಾನವನ್ನು ಸೇರಬೇಕೋ ಅದು ನನ್ನ ಅನುಗ್ರಹದಿಂದಲೇ ಲಭಿಸಬೇಕು. ಅದನ್ನು ಸೇರಿದವರಿಗೆ ಪುನರ್ಜನ್ಮವಿಲ್ಲವು. ಆ ಲೋಕವನ್ನು ಸೇರುವುದೇ ನಿರತಿಶಯ ಪುರುಷಾರ್ಥರೂಪವಾದ ಮೋಕ್ಷವೆನಿಸುವುದು, ಅದೇ ನನ್ನ ಸ್ಥಾನವು. ಅಮ್ಮಾ! ಭಕ್ತಿಯೋಗದಲ್ಲಿ ಸಿದ್ಧನಾದ ಪುರುಷನಿಗೆ ಅನೇಕ ಯೋಗಬಲದಿಂದ ಸಾಧ್ಯವಾಗಿಯೂ, ಆಶ್ಚರ್ಯಕರಗಳಾಗಿಯೂ ಇರುವ ಅಣಿಮಾದಿ ಸಿದ್ಧಿಗಳೆಲ್ಲವೂ ಸುಲಭವಾಗಿ ಕೈಗೂಡವ ಹಾಗಿದ್ದರೂ, ಅವು ಸಂಸಾರಬಂಧಕ್ಕೆ ಕಾರಣಗಳೇ ಹೊರತು ಶ್ರೇಯಸ್ಸನ್ನು ಕೈಗೂಡಿಸಲಾರವು. ಆದುದರಿಂದ ಭಕ್ತಿಯೋಗವನ್ನು ಹಿಡಿದವನು, ಆ ಯೋಗಬಲದಿಂದ ತನಗೆ ತಾನೇ ಲಭಿಸುವ ಆ ಅಣಿಮಾದಿ ಸಿದ್ಧಿಗಳಲ್ಲಿಯೂ ಮನಸ್ಸಿಡದಿದ್ದ ಪಕ್ಷದಲ್ಲಿ, ಅವನು ಸಂಸಾರಬಂಧವನ್ನು ಬಿಡಿಸಿಕೊಂಡು, ಶರೀರ ಸಂಬಂಧವನ್ನೂ ನೀಗಿ, ಮಹಾನಂದಸ್ವರೂಪನಾದ ನನ್ನನ್ನು ಸೇರಿ, ಮೃತ್ಯುಭಯವಿಲ್ಲದೆ, ನಿತ್ಯಸುಖವನ್ನನುಭವಿಸುವನು. ಇಲ್ಲಿಗೆ ಇಪ್ಪತ್ತೇಳನೆಯ ಅಧ್ಯಾಯವು.

---

{ ಕಪಿಲನು ಭಕ್ತಿಸಾಧನಾಕ್ರಮವನ್ನೂ ಅದರ ಅಂಗ ಗಳನ್ನೂ ದೇವಹೂತಿಗೆ ವಿವರಿಸಿದುದು. }

ಅಮ್ಮಾ! ಇನ್ನು ಭಕ್ತಿಯೋಗದ ಪ್ರಕಾರವನ್ನೂ, ಅದರ ಅಂಗ ಗಳನ್ನೂ ವಿವರಿಸುವೆನು ಕೇಳು! ಚೇತನನು ಈ ಭಕ್ತಿಯೋಗವನ್ನು ಕ್ರಮ ವಾಗಿ ಅನುಷ್ಠಿಸುತ್ತ ಬಂದ ಪಕ್ಷದಲ್ಲಿ, ಅವನ ಮನಸ್ಸು, ರಾಗದ್ವೇಷಗಳೇ ಮೊದಲಾದ ಕಲ್ಮಷಗಳೆಲ್ಲವನ್ನೂ ನೀಗಿ, ನಿರ್ಮಲವಾಗಿ, ಸನ್ಮಾರ್ಗದಲ್ಲಿ ಪ್ರವರ್ತಿಸಿ, ಶುಭಾಶ್ರಯನಾದ ಭಗವಂತನ ದಿವ್ಯಮಂಗಳ ವಿಗ್ರಹದಲ್ಲಿ ನೆಲೆ ಗೊಳ್ಳುವುದು. ಆ ಭಕ್ತಿಯೋಗಕ್ಕೆ ಎಂಟು ಬಗೆಯ ಯೋಗಗಳು ಅಂಗ ವೆನಿಸಿರುವುವು. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾ ಹಾರ, ಧ್ಯಾನ, ಧಾರಣ, ಸಮಾಧಿಗಳೆಂಬಿವೆಂಟು, ಯೋಗಕ್ಕೆ ಅಷ್ಟಾಂಗ ಗಳೆನಿಸುವುವು. ಇವುಗಳಲ್ಲಿ ಯಮನಿಯಮಗಳೆಂಬ ಮೊದಲನೆಯ ಎರಡು ಯೋಗಾಂಗಗಳೊಳಗೆ, ಏಳು ಬಗೆಯ ಸಾಧನಗಳುಂಟು. ಅವುಗಳನ್ನು ಬೇರೆ ಬೇರೆಯಾಗಿ ತಿಳಿಸುವೆನು ಕೇಳು. ಬೇರೆ ಯಾವ ಫಲವನ್ನೂ ಅಪೇಕ್ಷಿ ಸದೆ ತನ್ನ ಶಕ್ತ್ಯನುಸಾರವಾಗಿ ತನ್ನ ವರ್ಣಾಶ್ರಮಗಳಿಗೆ ವಿಧಿಸಲ್ಪಟ್ಟ ಧರ್ಮಗಳನ್ನಾಚರಿಸುತ್ತಿರುವುದು, ನಿಷಿದ್ಧಕರ್ಮಗಳನ್ನು ಬಿಡುವುದು, ದೈವವಶ ದಿಂದ ತನಗೆ ತಾನೇ ಲಭಿಸಿದ ಅನ್ನಾದಿಗಳಲ್ಲಿಯೇ ತೃಪ್ತಿಪಡುವುದು, ಆತ್ಮ ತತ್ವವನ್ನು ತಿಳಿದ ಮಹಾತ್ಮರನ್ನು ಪೂಜಿಸುವುದು, ಧರ್ಮಾರ್ಥಕಾಮಗಳೆಂಬ ಲೌಕಿಕ ಧರ್ಮಗಳಲ್ಲಿ ಮನಸ್ಸಿಡದಿರುವುದು, ಮೋಕ್ಷದಲ್ಲಿ ಮಾತ್ರ ಅಭಿರುಚಿ ಯನ್ನಿಡುವುದು, ಮತ್ತು ಹೀನಜಾತಿಯವರ ಸಂಪರ್ಕದಿಂದ ಜಾತಿದುಷ್ಟ ವೆಂದೂ, ಕಶ್ಮಲಸಂಬಂಧದಿಂದ ಆಶ್ರಯದುಷ್ಟವೆಂದೂ, ಇತರ ಕಾರಣ ಗಳಿಂದ ನಿಮಿತ್ತದುಷ್ಟವೆಂದೂ ಕರೆಯಲ್ಪಡುವ ಆಹಾರಗಳನ್ನು ತೊರೆದು, ಕೇವಲ ಸಾತ್ವಿಕಾಹಾರಗಳನ್ನೇ ಭುಜಿಸುವುದು, ಆ ಸಾತ್ವಿಕಾಹಾರಗಳನ್ನೂ ಮಿತವಾಗಿ ಭುಜಿಸುವುದು, ವಿಶೇಷವಾಗಿ ಜನರ ಗುಂಪಿಲ್ಲದೆ ಏಕಾಂತವಾ ಗಿಯೂ, ಮುಂದೆ ತನ್ನ ಶ್ರೇಯಸ್ಸಿಗೆ ಎಡೆಯಾಗಿಯೂ ಇರುವ ಸ್ಥಳವನ್ನಾ ಶ್ರಯಿಸುವುದು, ಇತರ ಭೂತಗಳನ್ನು ಹಿಂಸಿಸದಿರುವುದು, ಸತ್ಯವನ್ನೇ ನುಡಿಯುವುದು, ಪರರ ಸ್ವತ್ತನ್ನು ಕದಿಯದಿರುವುದು, ತನ್ನ ದೇಹಯಾತ್ರೆಗೆ ಬೇಕಾದಷ್ಟು ಧನದಲ್ಲಿಯೇ ತೃಪ್ತನಾಗಿರುವುದು, ಇಂದ್ರಿಯಗಳನ್ನು ತಡೆದು

ಬ್ರಹ್ಮಚರ್ಯವನ್ನು ತಪ್ಪದಿರುವುದು, ಚಾಂದ್ರಾಯಣವೇ ಮೊದಲಾದ ವ್ರತ ಗಳನ್ನಾಚರಿಸುವುದು, ಸದಾಚಾರಶೀಲನಾಗಿರುವುದು, ವೇದಾಧ್ಯಯನ ಮಾಡುವುದು, ಭಗವಂತನನ್ನಾರಾಧಿಸುವುದು, ಮಿತವಾಗಿ ಮಾತನಾಡು ವುದು, ಇವೆಲ್ಲವೂ ಯಮನಿಯಮಗಳೆಂಬ ಮೊದಲನೆಯ ಎರಡು ಯೋಗಾಂಗ ಗಳಲ್ಲಿ ಅನುಸರಿಸಬೇಕಾದ ಕ್ರಿಯೆಗಳು. ಇದರ ಮೇಲೆ ಆಸನವೇ ಮೊದ ಲಾದ ಮುಂದಿನ ಯೋಗಾಂಗಗಳ ಸ್ವರೂಪವನ್ನೂ ಹೇಳುವೆನು ಕೇಳು! ಎಷ್ಟುಹೊತ್ತಿನವರೆಗೆ ಕುಳಿತಿದ್ದರೂ ಶ್ರಮವೇ ತೋರದಂತಿರುವುದು ಆಸನ ವೆನಿಸುವುದು. ಮೆಲ್ಲಮೆಲ್ಲಗೆ ಪ್ರಾಣವಾಯುವನ್ನು ಸ್ವಾಧೀನಪಡಿಸುತ್ತ ಬರುವುದು ಪ್ರಾಣಾಯಾಮವು. ಇಂದ್ರಿಯಗಳನ್ನೂ ಮನಸ್ಸನ್ನೂ ಶಬ್ದಾದಿ ವಿಷಯಗಳಲ್ಲಿ ಪ್ರವರ್ತಿಸದಂತೆ ಹಿಂತಿರುಗಿಸಿ, ಹೃದಯದಲ್ಲಿಯೇ ಅಡಗಿಸಿಡು ವುದು ಪ್ರತ್ಯಾಹಾರವೆನಿಸುವುದು. ಪ್ರಾಣವಾಯು, ಅಪಾನವಾಯು, ಮುಂತಾದ ಪಂಚಪ್ರಾಣಗಳನ್ನೂ, ಮನಸ್ಸನ್ನೂ, ಅವುಗಳಿಗೆ ನಿಯತಸ್ಥಾನ ವಾದ ಹೃದಯ, ಗುದ, ಮುಂತಾದ ಸ್ಥಾನಗಳೊಳಗೆ ಯಾವುದಾದರೂ ಒಂದು ಸ್ಥಳದಲ್ಲಿ ತಂದು ನೆಲೆಗೊಳಿಸುವುದು ಧಾರಣವೆನಿಸುವುದು. ಪರಮ ಪುರುಷನ ಸೃಷ್ಟ್ಯಾದಿ ಲೀಲಾಕಾರ್ಯಗಳನ್ನು ಎಡೆಬಿಡದೆ ಧ್ಯಾನಿಸುವುದು ಧ್ಯಾನವೆನಿಸುವುದು. ಮನಸ್ಸನ್ನು ಅತ್ತಿತ್ತ ಕದಲಿಸದೆ ಒಂದೇ ವಿಷಯದಲ್ಲಿ ದೃಢವಾಗಿ ನಿಲ್ಲಿಸಿಡತಕ್ಕ ಶಕ್ತಿಯು ಸಮಾಧಿಯೆನಿಸುವುದು. ಭಕ್ತಿಯೋಗ ವನ್ನನುಷ್ಠಿಸತಕ್ಕವನು, ಮೇಲೆ ಹೇಳಿದ ಉಪಾಯಗಳಿಂದಲೂ, ಇನ್ನೂ ವ್ರತದಾನಾದಿಗಳಿಂದಲೂ, ಶಬ್ದಾದಿ ವಿಷಯಗಳಲ್ಲಿ ಬಿದ್ದು ಕೆಟ್ಟುಹೋಗಿ ರುವ ಮನಸ್ಸನ್ನು ಮೆಲ್ಲಮೆಲ್ಲಗೆ ಬುದ್ಧಿಯ ಸಹಾಯದಿಂದ ಹಿಂತಿರುಗಿಸಿ, ಶುಭಾಶ್ರಯನಾದ ಭಗವಂತನ ದಿವ್ಯಮಂಗಳ ವಿಗ್ರಹದಲ್ಲಿಯೇ ನೆಲೆಗೊಳಿಸ ಬೇಕು. ಯಾವ ವಿಧವಾದ ಶ್ರಮಕ್ಕೂ ಬೇಸರಗೊಳ್ಳದೆ ಮೊದಲು ಪ್ರಾಣ ವಾಯುವನ್ನು ಜಯಿಸಿ ತನ್ನ ವಶಮಾಡಿಕೊಂಡಪಕ್ಷದಲ್ಲಿ, ಮನಸ್ಸನ್ನೂ ಅನಾಯಾಸವಾಗಿ ವಶಪಡಿಸಿಕೊಳ್ಳಬಹುದು. ಅಮ್ಮಾ! ಪ್ರಾಣವಾಯು ವನ್ನು ಸ್ವಾಧೀನಪಡಿಸುವುದು ಹೇಗೆ ಸಾಧ್ಯವೆಂದು ಚಿಂತಿಸಬೇಡ! ಅದನ್ನು ಜಯಿಸುವುದಕ್ಕೂ ಉಪಾಯವುಂಟು! ಎಷ್ಟು ಹೊತ್ತಿನವರೆಗೆ ಕುಳಿತಿದ್ದರೂ ಮನಸ್ಸಿಗೆ ಬೇಸರವಾಗಲೀ, ದೇಹಕ್ಕೆ ಶ್ರಮವಾಗಲೀ ತೋರದಂತೆ ಮೊದಲು

ಆಸನಶಕ್ತಿಯನ್ನು ಸಾಧಿಸಿಕೊಳ್ಳಬೇಕು. ಪರಿಶುದ್ಧವಾದ ಸ್ಥಳದಲ್ಲಿ ಒಂದು ಪೀಠವನ್ನು ಕಲ್ಪಿಸಿಕೊಂಡು. ಅದರ ಮೇಲೆ ದರ್ಭೆಗಳನ್ನೂ, ಅದರ ಮೇಲೆ ಕೃಷ್ಣಾಜಿನವನ್ನೂ, ಅದರ ಮೇಲೆ ವಸ್ತ್ರವನ್ನೂ ಹಾಸಿ, ಅದರ ಮೇಲೆ ಶರೀರವು ನೆಟ್ಟಗೆ ನಿಲ್ಲುವಂತೆ ಸ್ವಸ್ತಿಕಾಸನದಿಂದ ಕುಳಿತು, ಪ್ರಣವಮಂತ್ರವನ್ನು ಬಾರಿಬಾರಿಗೂ ಅಭ್ಯಸಿಸುತ್ತ ಬರಬೇಕು, (ಸ್ವಸ್ತಿಕಾಸನವೆಂದರೆ ಉಭಯಪಾರ್ಶ್ವದ ತೊಡೆ ಮತ್ತು ಮೊಳಕಾಲುಗಳ ನಡುವೆ ಪಾದಗಳನ್ನು ಸಿಕ್ಕಿಸಿ ನೆಟ್ಟಗೆ ಕುಳ್ಳಿರುವುದು.) ಪೂರಕ, ಕುಂಭಕ, ರೇಚಕಗಳೆಂಬ ಪ್ರಾಣಾಯಾಮ ಕಾರ್ಯಗಳಿಂದ ಪ್ರಾಣವಾಯುವಿನ ಮಾರ್ಗವನ್ನು ಶುದ್ಧ ಮಾಡಬೇಕು. ಪೂರಕವೆಂದರೆ ವಾಯುವನ್ನು ಮೂಗಿನ ದ್ವಾರದಿಂದ ಒಳಕ್ಕೆಳೆದು ತುಂಬಿಡುವುದು. ಕುಂಭಕವೆಂದರೆ ಆ ವಾಯುವನ್ನು ಸ್ವಲ್ಪ ಕಾಲದವರೆಗೆ ಒಳಗೆ ತಡೆದಿಡುವುದು. ರೇಚಕವೆಂದರೆ ಒಳಗೆ ತಡೆದಿಟ್ಟ ವಾಯುವನ್ನು ಹೊರಕ್ಕೆ ಬಿಡುವುದು. ಈ ಮೂರು ಬಗೆಯ ಕಾರ್ಯಗಳಲ್ಲಿ, ಹೊರಗಿನ ಗಾಳಿಯನ್ನು ದೇಹದೊಳಗೆ ತುಂಬಿ ಸ್ವಲ್ಪಕಾಲದವರೆಗೆ ಅಲ್ಲಿಯೇ ಅದನ್ನು ತಡೆದಿಟ್ಟು ಹೊರಕ್ಕೆ ಬಿಡುವುದರಿಂದಾಗಲೀ, ಒಳಗಿನ ಗಾಳಿಯನ್ನು ಹೊರಕ್ಕೆ ಬಿಟ್ಟು, ಅದನ್ನು ಸ್ವಲ್ಪಕಾಲದವರೆಗೆ ಹೊರಗೆ ತಡೆದಿರುವುದರಿಂದಾಗಲೀ ಈ ಪ್ರಾಣವಾಯುವಿನ ಮಾರ್ಗವನ್ನು ಶುದ್ಧಿಗೊಳಿಸಬಹುದು. (ಎಂದರೆ, ಪೂರಕ ಕುಂಭಕ ರೇಚಕಗಳೆಂಬೀ ಕಾರ್ಯಗಳನ್ನು ಅನುಲೋಮವಾಗಿಯಾಗಲೀ ವಿಲೋಮವಾಗಿಯಾಗಲೀ ನಡೆಸಿ, ವಾಯುಮಾರ್ಗವನ್ನು ಶುದ್ಧಮಾಡಬಹುದು.) ಪ್ರಾಣವಾಯುವನ್ನು ಹೀಗೆ ಸ್ವಾಧೀನಪಡಿಸಿಕೊಳ್ಳುವುದರಿಂದ ಮನಸ್ಸು ಸ್ವಾಧೀನವಾಗುವುದು. ಇಂತಹ ಯೋಗಿಯ ಮನಸ್ಸು, ಬೆಂಕಿ ಮತ್ತು ಗಾಳಿ, ಇವುಗಳ ಸಹಾಯದಿಂದ ಊದಿದ ಬಂಗಾರದಂತೆ, ಶೀಘ್ರಕಾಲದಲ್ಲಿಯೇ ಸ್ವಚ್ಛವಾಗುವುದು. ಈ ವಿಧವಾದ ಪ್ರಾಣಾಯಾಮ ಕಾರ್ಯಗಳಿಂದ ದೇಹಕ್ಕೆ ವಾತಪಿತ್ತಶ್ಲೇಷ್ಮಾದಿ ಧಾತುದೋಷಗಳಿಂದುಂಟಾಗುವ ಬಾಧೆಯನ್ನೂ ನೀಗಿಸಬಹುದು. ಹಾಗೆಯೇ ಪ್ರತ್ಯಾಹಾರವೆಂಬ ಯೋಗದಿಂದ ವಿಷಯಾಸಕ್ತಿಯನ್ನೂ, ಧಾರಣಾದಿಗಳಿಂದ ಪಾಪವನ್ನೂ, ಧ್ಯಾನದಿಂದ ಕ್ಲೇಶದುಃಖಾದಿಗಳನ್ನೂ ನೀಗಿಸಬಹುದು. ಮನಸ್ಸನ್ನು ಭಗವಂತನ ಸ್ವರೂಪದಲ್ಲಿ ನೆಲೆಗೊಳಿಸುವುದೇ ಧ್ಯಾನವೆನಿಸುವುದು.

ಈ ಧ್ಯಾನವು ಇತರ ವಿಷಯವಾದ ಜ್ಞಾನದಿಂದ ಮರೆಸಿಹೋಗದಿರುವುದೇ ಸಮಾಧಿಯೆನಿಸುವುದು. ಈ ವಿಧವಾಗಿ ಮೇಲೆ ಹೇಳಿದ ಪ್ರಾಣಾಯಾಮವೇ ಮೊದಲಾದ ಯೋಗಾಭ್ಯಾಸದಿಂದ ಮನಸ್ಸು ನಿರ್ಮಲವಾಗಿ, ಶುಭಾಶ್ರಯ ವೆನಿಸಿದ ಭಗವದ್ವಿಗ್ರಹದಲ್ಲಿ ಯಾವಾಗ ನೆಲೆಯಾಗಿ ನಿಲ್ಲುವುದೋ, ಆಗ ಯೋಗಿಯು ತನ್ನ ದೃಷ್ಟಿಯನ್ನು ಮೂಗಿನ ತುದಿಯಲ್ಲಿರಿಸಿ, ಭಗವಂತನ ದಿವ್ಯಮಂಗಳ ವಿಗ್ರಹವನ್ನು ಎಡೆಬಿಡದೆ ಧ್ಯಾನಿಸುತ್ತಿರಬೇಕು. ಹೀಗೆ ಧ್ಯಾನಿಸುವಾಗ, ಪ್ರಸನ್ನವಾದ ಮುಖಕಮಲ, ಕಮಲದಳದಂತಿರುವ ಕೆಂಪಾದ ನೇತ್ರಗಳು, ಕನ್ನೈದಿಲೆಯಂತೆ ಶ್ಯಾಮಲವಾದ ದೇಹಕಾಂತಿ, ಹಸ್ತಗಳಲ್ಲಿ ಶಂಖಚಕ್ರಗದೆಗಳೆಂಬ ದಿವ್ಯಾಯುಧಗಳು, ಕಮಲಕೇಸರದಂತಿ ರುವ ದಿವ್ಯಪೀತಾಂಬರವೆಂಬ ಪಟ್ಟೆಮಡಿ, ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆ, ಕಂಠದಲ್ಲಿ ಕೌಸ್ತುಭಮಣಿ, ಭ್ರಮರಜಂಕಾರದಿಂದ ಕೂಡಿದ ವನಮಾಲಿಕೆ, ಕಾಲಂದುಗೆ, ಕೈಬಳೆ, ತೋಳ್ಬಳೆ, ಕಿರೀಟ, ಕುಂಡಲ, ರತ್ನಹಾರಗಳೇ ಮೊದಲಾದ ದಿವ್ಯಾಭರಣಗಳು, ನಿತಂಬದಲ್ಲಿ ರತ್ನದ ಡಾಬು, ಇಂತಹ ದಿವ್ಯ ಸೌಂದರ್ಯದೊಡನೆ ಭಕ್ತರ ಹೃದಯಕಮಲದಲ್ಲಿ ನಿತ್ಯವಾಸಮಾಡತಕ್ಕವ ನಾಗಿಯೂ, ನೋಡುತ್ತಿದ್ದಹಾಗೆಲ್ಲಾ ತನ್ನ ದಿವ್ಯಸೌಂದರ್ಯದಿಂದ ಆಸೆ ಯನ್ನು ಹೆಚ್ಚಿಸತಕ್ಕವನಾಗಿಯೂ, ಶಾಂತಸ್ವರೂಪನಾಗಿಯೂ, ನೋಡು ವವರ ಮನಸ್ಸನ್ನೂ ಕಣ್ಣುಗಳನ್ನೂ ಉಲ್ಲಾಸಗೊಳಿಸತಕ್ಕವನಾಗಿಯೂ, ಭಕ್ತಿಯನ್ನು ಹೆಚ್ಚಿಸತಕ್ಕ ದಿವ್ಯದರ್ಶನವುಳ್ಳವನಾಗಿಯೂ, ಸರ್ವಲೋಕ ವಂದಿತನಾಗಿಯೂ, ಬಾಲ್ಯವಯಸ್ಸಿನಲ್ಲಿರುವಂತೆ ಮುದ್ದುಬೀರತಕ್ಕವನಾ ಗಿಯೂ, ಭಕ್ತಾನುಗ್ರಹತತ್ಪರನಾಗಿಯೂ, ಪುಣ್ಯಕೀರ್ತಿಯಾಗಿಯೂ, ಸಾಧು ಗಳಿಗೆ ಶ್ರೇಯಸ್ಕರನಾಗಿಯೂ ಇರುವ ಆ ಶ್ರೀಮನ್ನಾರಾಯಣಮೂರ್ತಿಯ ದಿವ್ಯಾಕೃತಿಯನ್ನು ಸಾಕಲ್ಯವಾಗಿ (ಒಟ್ಟಾಗಿ) ಮನಸ್ಸಿನಲ್ಲಿಟ್ಟು ಅದರ ಲ್ಲಿಯೇ ಮನಸ್ಸು ಚೆನ್ನಾಗಿ ನಾಟುವಂತೆ ಸಂತತ ಧ್ಯಾನವನ್ನು ಮಾಡುತ್ತಿರ ಬೇಕು. ಹೀಗೆ ಧ್ಯಾನಮಾಡುವವನು ತನ್ನ ತನ್ನ ಭಾವನೆಗೆ ತಕ್ಕಂತೆ, ಆ ಭಗವಂತನನ್ನು ತನ್ನ ಕಣ್ಣಮುಂದೆ ನಿಂತಿರುವಂತೆಯಾಗಲೀ, ನಡೆಯು ವಂತೆಯಾಗಲೀ, ಸುಮ್ಮನೆ ಕುಳಿತಿರುವಂತೆಯಾಗಲೀ, ಮಲಗಿದಂತೆಯಾ ಗಲೀ, ತನ್ನ ಹೃದಯದಲ್ಲಿ ನೆಲೆಗೊಂಡಂತೆಯಾಗಲೀ, ಯಾವ ವಿಧದಿಂದ

ಲಾದರೂ ಆ ದಿವ್ಯಮೂರ್ತಿಯನ್ನು ನಿಷ್ಕಲ್ಮಷವಾದ ಮನಸ್ಸಿನಿಂದ ಸಾಕ್ಷಾತ್ಕರಿಸುತ್ತ ಬರಬಹುದು. ಹೀಗೆ ದೃಢಧ್ಯಾನದಿಂದ ಭಾವಿಸುತ್ತ ಬಂದರೆ, ಆ ಮನಸ್ಸು ಬೇರೆ ಕಡೆಗೆ ಚಲಿಸಲಾರದು. ಹೀಗೆ ಭಗವಂತನ ಸರ್ವಾವಯವಗಳನ್ನೂ ಏಕಾಕಾರವಾಗಿ ಭಾವಿಸುತ್ತ ಬಂದು, ತಿರುಗಿ ಕಾಲಿನಿಂದ ಶಿರಸ್ಸಿನವರೆಗೆ, ಆ ಭಗವನ್ಮೂರ್ತಿಯ ಒಂದೊಂದವಯವವನ್ನೂ ಬೇರೆ ಬೇರೆಯಾಗಿ ಮನಸ್ಸಿನಲ್ಲಿ ಭಾವಿಸಬೇಕು. ಯಾವ ಪಾದವು, ವಜ್ರ, ಧ್ವಜ, ಅಂಕುಶ, ಕಮಲಗಳೇ ಮೊದಲಾದ ಮಹಾಪುರುಷ ಲಕ್ಷಣಗಳನ್ನು ಸೂಚಿಸತಕ್ಕ ಶುಭರೇಖೆಗಳಿಂದ ಕೂಡಿರುವುದೋ, ಯಾವ ಪಾದಾಗ್ರದಲ್ಲಿರುವ ಉಬ್ಬಿದ ಕೆಂಪಾದ ಉಗುರುಗಳ ಕಾಂತಿಯೆಂಬ ಚಂದ್ರಿಕೆಯು, ಭಕ್ತರ ಮನಸ್ಸಿನಲ್ಲಿರುವ ಅಜ್ಞಾನಾಂಧಕಾರವನ್ನು ನೀಗಿಸಿ ಬೆಳಗುತ್ತಿರುವುದೋ, * ಯಾವ ಪಾದಗಳನ್ನು ತೊಳೆದ ಜಲವಾದ ಗಂಗಾನದಿಯ ತೀರ್ಥವನ್ನು ತಲೆಯಲ್ಲಿ ಧರಿಸಿದ ಮಾತ್ರಕ್ಕೆ ಶಿವನು ಶಿವ (ಮಂಗಳಕರ) ನೆನಿಸಿಕೊಂಡನೋ, ಯಾವ ಪಾದವು ಧ್ಯಾನಮಾಡುವವರ ಮನಸ್ಸಿನಲ್ಲಿರುವ ಕಲ್ಮಷವೆಂಬ ಪರ್ವತಕ್ಕೆ ವಜ್ರಾಯುಧದಂತಿರುವುದೋ ಅಂತಹ ಭಗವಂತನ ಪಾದಾರವಿಂದಗಳನ್ನೇ ಮೊದಲು ಮನಸ್ಸಿನಲ್ಲಿ ಧ್ಯಾನಿಸುತ್ತಿರಬೇಕು. ಸರ್ವಲೋಕಜನನಿಯಾಗಿಯೂ, ಬ್ರಹ್ಮಾದಿ ಸಮಸ್ತ ದೇವತೆಗಳಿಂದ ನಮಸ್ಕರಿಸಲ್ಪಟ್ಟವಳಾಗಿಯೂ, ಕಮಲಲೋಚನೆಯಾಗಿಯೂ ಇರುವ ಮಹಾಲಕ್ಷ್ಮಿಯು, ತನ್ನ ತೊಡೆಯಲ್ಲಿಟ್ಟುಕೊಂಡು ಚಿಗುರಿನಂತೆ ಕೋಮಲವಾದ ತನ್ನ ಕೈಗಳಿಂದ ಅನವರತವೂ ಒತ್ತುತ್ತಿರುವ ಆ ಭಗವಂತನ ಮೊಳಕಾಲುಗಳ ಸೌಂದರ್ಯವನ್ನು ಧ್ಯಾನಿಸಬೇಕು. ಅದರಿಂದಾಚೆಗೆ ಗರುತ್ಮಂತನ ಭುಜಗಳ ಮೇಲೆ ಧರಿಸಲ್ಪಟ್ಟವುಗಳಾಗಿಯೂ, ತೇಜೋನಿಧಿಯಂತೆ ಪ್ರಕಾಶಿಸತಕ್ಕವುಗಳಾಗಿಯೂ, ಅಗಸೆಯ ಹೂಗಳಂತೆ ಶ್ಯಾಮಲವರ್ಣವುಳ್ಳವುಗಳಾಗಿಯೂ ಇರುವ ಆ ಭಗವಂತನ ತೊಡೆಗಳನ್ನು ಹೃದಯದಲ್ಲಿಟ್ಟು ಧ್ಯಾನಿಸಬೇಕು.

---

* ಪೂರ್ವದಲ್ಲಿ ಭಗವಂತನು, ತ್ರಿವಿಕ್ರಮಾವತಾರವನ್ನೆತ್ತಿ ತನ್ನ ಒಂದು ಪಾದವನ್ನು ಮೇಲೆ ನೀಡಿದಾಗ, ಸತ್ಯಲೋಕದ ಕಡೆಗೆ ಬಂದ ಆ ಪಾದವನ್ನು ಬ್ರಹ್ಮನು ತನ್ನ ಕಮಂಡಲು ತೀರ್ಥದಿಂದ ತೊಳೆಯಲು, ಆ ಪಾದತೀರ್ಥವೇ ಗಂಗಾಜಲವಾಗಿ ಹೊರಟಿತೆಂದು ಪೂರ್ವಕಥೆ.

ಅದರಿಂಚಾಚೆಗೆ ಪಾದಾಗ್ರದವರೆಗೆ ತೊಂಗುತ್ತಿರುವ ಪೀತಾಂಬರದಿಂದಲೂ, ಅದರ ಮೇಲೆ ಸುವರ್ಣಮಯವಾದ ಉಡಿದಾರದಿಂದಲೂ ಲೋಕಮೋಹನವಾದ ಆಕಾರವುಳ್ಳ ಆ ಭಗವಂತನ ನಿತಂಬಪ್ರದೇಶವನ್ನು ಹೃದಯದಲ್ಲಿಟ್ಟು ಧ್ಯಾನಿಸಬೇಕು. ಆ ಮೇಲೆ ಕ್ರಮವಾಗಿ ಸಮಸ್ತ ಲೋಕಗಳಿಗೂ ಭಂಡಾರದಂತೆ ನಿವಾಸಸ್ಥಾನವಾದ ಆ ಭಗವಂತನ ಉದರಪ್ರದೇಶವನ್ನೂ, ಅದರಲ್ಲಿ ಬ್ರಹ್ಮದೇವನಿಗೆ ನಿವಾಸಸ್ಥಾನವಾಗಿಯೂ, ಜಗದ್ರೂಪವಾದ ತಾವರೆಹೂವಿಗೆ ಜನ್ಮಸ್ಥಾನವಾಗಿಯೂ ಇರುವ ಆ ಭಗವಂತನ ನಾಭಿಯನ್ನೂ, ಅದರ ಮೇಲ್ಭಾಗದಲ್ಲಿ ಮುತ್ತಿನ ಸರಗಳ ಕಾಂತಿಯಿಂದ ಬಿಳುಪಾಗಿಯೂ, ಮರಕತ ಮಣಿಗಳಂತೆ ಶ್ಯಾಮಲವಾಗಿಯೂ ಇರುವ ಆ ಭಗವಂತನ ಸ್ತನಾಗ್ರಗಳ ಸೌಂದರ್ಯವನ್ನೂ ಧ್ಯಾನಿಸುತ್ತ ಬರಬೇಕು. ಅದರಮೇಲೆ ಶ್ರೀಮಹಾಲಕ್ಷ್ಮಿಗೆ ನಿತ್ಯನಿವಾಸಸ್ಥಾನವಾಗಿಯೂ, ಧ್ಯಾನಿಸತಕ್ಕವರ ಮನಸ್ಸಿಗೂ, ಕಣ್ಣಿಗೂ ಅತ್ಯಾನಂದವನ್ನುಂಟುಮಾಡತಕ್ಕುದಾಗಿಯೂ ಇರುವ ಆ ಭಗವಂತನ ವಕ್ಷಃಸ್ಥಳವನ್ನು ಧ್ಯಾನಿಸಬೇಕು. ಅದರಿಂದಾಚೆಗೆ ತನಗೆ ಭೂಷಣವಾದ ಕೌಸ್ತುಭ ಮಣಿಯನ್ನೇ ತನ್ನ ಕಾಂತಿಯಿಂದ ಅಲಂಕರಿಸುವಂತೆ ಅದ್ಭುತ ಸೌಂದರ್ಯ ವಿಶಿಷ್ಟವಾದ ಆ ಭಗವಂತನ ಕಂಠವನ್ನು ಧ್ಯಾನಿಸಬೇಕು. ಪೂರ್ವದಲ್ಲಿ ಮಂದರಪರ್ವತದಿಂದ ಕ್ಷೀರಸಮುದ್ರವನ್ನು ಕಡೆಯುವಾಗ, ಅದರ ಸಂಘರ್ಷಣದಿಂದ ಸಾಣೆಹಿಡಿದಂತೆ ಅತ್ಯಂತ ಪ್ರಕಾಶವಿಶಿಷ್ಟವಾದ ದೋಳ್ಬಳೆಗಳಿಂದ ಶೋಭಿತಗಳಾಗಿಯೂ, ಸಮಸ್ತ ಲೋಕಪಾಲಕರಿಗೂ ಆಶ್ರಯವಾಗಿಯೂ ಇರುವ ಆತನ ತೋಳುಗಳ ಸೌಂದರ್ಯವನ್ನು ಧ್ಯಾನಿಸಬೇಕು. ಅದರಿಂದಾಚೆಗೆ ಆ ಭಗವಂತನ ಹಸ್ತಾಗ್ರದಲ್ಲಿ ತೇಜಸ್ಸಿನಿಂದ ಜ್ವಲಿಸುತ್ತಿರುವ ಸುದರ್ಶನ ಚಕ್ರವನ್ನೂ, ಕಮಲದಲ್ಲಿ ಕುಳಿತಿರುವ ರಾಜಹಂಸದಂತೆ ಆತನ ಮತ್ತೊಂದು ಹಸ್ತದಲ್ಲಿ ಧರಿಸಲ್ಪಟ್ಟ ಪಾಂಚಜನ್ಯವೆಂಬ ಶಂಖವನ್ನೂ ಧ್ಯಾನಿಸಬೇಕು. ಆಮೇಲೆ ಆ ಭಗವಂತನಿಗೆ ಅತ್ಯಂತ ಪ್ರೀತಿಪಾತ್ರವಾಗಿಯೂ, ಅನೇಕ ಶತ್ರುಗಳ ರಕ್ತದ ಕೆಸರಿನಿಂದ ತೊಯ್ದುದಾಗಿಯೂ ಇರುವ ಕೌಮೋದಕಿಯೆಂಬ ಗದೆಯನ್ನು ಮನಸ್ಸಿನಲ್ಲಿ ಧ್ಯಾನಿಸಬೇಕು. ಆಮೇಲೆ ಆ ಭಗವಂತನ ಕಂಠದಲ್ಲಿ ಭ್ರಮರಜಂಕಾರಗಳಿಂದ ಕೂಡಿದ ವನಮಾಲಿಕೆಯನ್ನೂ, ಸಮಸ್ತ ಜೀವಗಳಿಗೂ ಅಧಿಷ್ಠಾನದೇವತಾಸ್ವರೂಪವಾದ ಕೌಸ್ತುಭಮಣಿಯನ್ನೂ

ಧ್ಯಾನಿಸಬೇಕು. ಭಕ್ತಾನುಗ್ರಹಕ್ಕಾಗಿಯೇ ತನ್ನ ಸಂಕಲ್ಪದಿಂದ ಬೇರೆ ಬೇರೆ ಅವತಾರಗಳನ್ನೆತ್ತುವ ಆ ಭಗವಂತನ ಮಂದಹಾಸಸುಂದರವಾದ ಮುಖಕಮಲವನ್ನೂ, ಕುಂಡಲಕಾಂತಿಯಿಂದ ಥಳಥಳಿಸುತ್ತಿರುವ ಆತನ ಕಪೋಲಗಳನ್ನೂ, ಎಸಳಾಗಿ ಉಬ್ಬಿದ ಆತನ ಮೂಗಿನ ಸೌಂದರ್ಯವನ್ನೂ ಹೃದಯದಲ್ಲಿ ಧ್ಯಾನಿಸಬೇಕು. ಯಾವ ಮುಖಾರವಿಂದವು ಕಮಲದಂತಿರುವ ಕಣ್ಣುಗಳಿಂದಲೂ, ಮುಂದೆ ತೂಗಾಡುತ್ತಿರುವ ಕಪ್ಪಾದ ಮುಂಗುರುಳುಗಳಿಂದಲೂ ಶೋಭಿತವಾದ, ಸುತ್ತಲೂ ಭ್ರಮರಪಙ್ಕ್ತಿಯಿಂದಲೂ ನಡುವೆ ಎರಡು ಮೀನುಗಳಿಂದಲೂ ಕೂಡಿದ, ಕಮಲವನ್ನು ತಿರಸ್ಕರಿಸುತ್ತ, ಅಂದವಾದ ಹುಬ್ಬುಗಳಿಂದ ಲೋಕಮೋಹಕವಾಗಿರುವ ಆ ಮುಖಸೌಂದರ್ಯವನ್ನು ಒಂದೇ ಮನಸ್ಸಿನಿಂದ ಸಾವಧಾನವಾಗಿ ಧ್ಯಾನಿಸಬೇಕು. ಆಶ್ರಿತರ ಸಂಸಾರತಾಪತ್ರಯವನ್ನು ನೀಗಿಸುವುದಕ್ಕಾಗಿ ಸುತ್ತಲೂ ವ್ಯಾಪಿಸುತ್ತಿರುವ ಉಲ್ಲಾಸವಿಶಿಷ್ಟವಾದ ಆತನ ದೃಷ್ಟಿಪ್ರಸರಣವನ್ನು ಚಿರಕಾಲದವರೆಗೆ ಭಾವಿಸುತ್ತಿರಬೇಕು, ಮತ್ತು ತನ್ನಲ್ಲಿ ಮರೆಹೊಕ್ಕವರ ದುಃಖಬಾಷ್ಪವೆಂಬ ಸಮುದ್ರವನ್ನು ಶೋಷಿಸತಕ್ಕುದಾದ ಆ ಭಗವಂತನ ಮಂದಹಾಸವನ್ನು ಮನಸ್ಸಿನಲ್ಲಿ ಧ್ಯಾನಿಸಬೇಕು. ಯೋಗಿಗಳ ಮನಸ್ಸನ್ನು ಮೋಹಪಡಿಸುವುದಕ್ಕಾಗಿ ಪ್ರಯತ್ನಿಸುತ್ತಿರುವ ಮನ್ಮಥನೂ ಮರುಳಾಗಿ ನಿಲ್ಲುವಂತೆ, ಜಗನ್ಮೋಹನಸೌಂದರ್ಯವುಳ್ಳ ಆ ಭಗವಂತನ ಹುಬ್ಬುಗಳನ್ನು ಹೃದಯದಲ್ಲಿಟ್ಟು ಧ್ಯಾನಿಸಬೇಕು. ಮತ್ತು ಯೋಗಿಗಳಿಗೂ ಎಡೆಬಿಡದೆ ಧ್ಯಾನಿಸತಕ್ಕುದಾಗಿಯೂ, ತುಟಿಯ ಕಾಂತಿಯಿಂದ ಕೆಂಪೇರಿ, ಮೊಲ್ಲೆಯ ಮೊಗ್ಗಿನಂತಿರುವ ದಂತಪಙ್ಕ್ತಿಯಿಂದ ಶೋಭಿತವಾಗಿಯೂ ಇರುವ ಆ ಭಗವಂತನ ಅಟ್ಟಹಾಸವನ್ನು ಎಡೆಬಿಡದೆ ಹೃದಯದಲ್ಲಿಟ್ಟು ಭಕ್ತಿಯಿಂದ ಧ್ಯಾನಿಸುತ್ತಿರಬೇಕು. ಹೀಗೆ ಭಗವಂತನ ದೇಹಸೌಂದರ್ಯದಲ್ಲಿ ನಟ್ಟ ಮನಸ್ಸುಳ್ಳವನಾಗಿ, ಬೇರೊಂದನ್ನು ಕಣ್ಣೆತ್ತಿಯೂ ನೋಡದೆ, ಪ್ರೇಮಪೂರ್ವಕವಾದ ಭಕ್ತಿಯಿಂದ ಎಡೆಬಿಡದೆ ಧ್ಯಾನಿಸುತ್ತ ಬಂದರೆ, ಇವೇ ಸಮಾಧಿಯೆನಿಸುವುದು. ಕಣ್ಣುಗಳಲ್ಲಿ ಆನಂದಬಾಷ್ಪವು ತುಳುಕುವುದು. ಆನಂದಸಾಗರದಲ್ಲಿ ಮುಳುಗಿದಂತಾಗುವುದು. ಆದರೆ ಭಗವಂತನ ರೂಪವನ್ನು ಗ್ರಹಿಸುವುದರಲ್ಲಿ ಗಾಳದಂತೆ ಬೀಸಿದ ಇಂತಹ ದೃಢಮನಸ್ಸೂ ಕೂಡ, ಅದನ್ನು

ಗ್ರಹಿಸಲಾರದೆ ಹಿಂಜರಿಯುವುದು. ಇಂತಹ ಸ್ಥಿತಿಯಲ್ಲಿ ಭಗವಂತನ ಸೌಂದ ರ್ಯವು ಗಾಳವನ್ನೇ ಎಳೆದುಕೊಂಡು ಹೋಗುವ ಮೀನಿನಂತೆ ಆ ಮನ ಸ್ಸನ್ನು ತನ್ನ ಕಡೆಗೇ ಎಳೆಯುತ್ತಿರುವುದು. ಆಗ ಮನಸ್ಸು ಇತ್ತಲಾಗಿ ಶಬ್ದಾದಿ ವಿಷಯಗಳಲ್ಲಿ ಆಸೆಯನ್ನು ಬಿಟ್ಟುದರಿಂದ, ಹೊಗೆಯಿಲ್ಲದ ಅಗ್ನಿ ಜ್ವಾಲೆಯಂತೆ ನಿಷ್ಕಲ್ಮಷವಾಗಿ, ಅತ್ತಲಾಗಿ ಭಗವಂತನನ್ನೂ ಗ್ರಹಿಸಲಾರದೆ ಹಿಂತಿರುಗಿ ನಿರಾಶ್ರಯವಾಗುವುದು. ಹೊರಗಿನ ವ್ಯಾಪಾರಗಳಿಂದ ವಿಮುಖ ವಾದ ಅಂತಹ ಮನಸ್ಸಿಗೆ, ತಾನು ಅದುವರೆಗೆ ಧ್ಯಾನಿಸುತ್ತಿದ್ದ ಪರಮಾತ್ಮ ನೊಡನೆ [ಸಾಕ್ಷಾತ್ಸಂಬಂಧವುಳ್ಳುದಾಗಿಯೂ, ಪರಿಶುದ್ಧವಾಗಿಯೂ ಇರುವ ಆತ್ಮಸ್ವರೂಪವು ಆಗ ತನಗೆ ತಾನೇ ಗೋಚರಿಸುವುದು. ಈ ನಿಜಸ್ವರೂಪವು ತಿಳಿದೊಡನೆ ಜೀವನಿಗೆ ದೇಹದಲ್ಲಿ ತಾನೆಂಬ ಅಭಿಮಾನವೂ ಕಾರ್ಯದಲ್ಲಿ ತಾನೇ ಸ್ವತಂತ್ರನೆಂಬ ಅಭಿಮಾನವೂ ತೊಲಗಿ, ಆತ್ಮಾನಂದಾನುಭವವುಂ ಟಾಗುವುದು. ಹೀಗೆ ಭಗವಂತನ ಅವಯವಗಳನ್ನು ಧ್ಯಾನಿಸುವುದರಿಂದ ಕೊನೆಗೆ ನೆಲೆಯಾಗಿ ನಿಲ್ಲುವ ಭಕ್ತಿರೂಪವಾದ ಈ ಮನಸ್ಸಿನ ವ್ಯಾಪಾರವು, ಶರೀರಾವಸಾನದವರೆಗೂ ಕದಲದೆ ಅನುಸರಿಸಿ ಬರುವುದು. ಈ ಭಕ್ತಿಯಿಂದ ಶಬ್ದಾದಿ ವಿಷಯಗಳಲ್ಲಿ ವಿರಕ್ತಿಹೊಂದಿ, ಪರಮಾತ್ಮ ಸ್ವರೂಪವನ್ನು ಯಥಾ ಸ್ಥಿತವಾಗಿ ತಿಳಿದು, ಕರ್ಮಸಂಬಂಧದಿಂದುಂಟಾಗುವ ಸುಖ, ದುಃಖ, ಜರೆ, ಮರಣ, ಮುಂತಾದುವೆಲ್ಲವನ್ನೂ ಅತಿಕ್ರಮಿಸಿದ ಆತ್ಮನು ಪಾಪನಿವೃತ್ತಿಯೇ ಮೊದಲಾದ ಅಷ್ಟಗುಣಗಳಿಂದ ಕೂಡಿದ ತನ್ನ ನಿಜವಾದ ಮಹಿಮೆಯಲ್ಲಿ ನೆಲೆಗೊಳ್ಳುವನು. ಸುಖದುಃಖಗಳಿಗೆ ಕಾರಣವಾದ ದೇಹಾಭಿಮಾನವೂ, ಕರ್ಮಗಳಲ್ಲಿ ತಾನೇ ಸ್ವತಂತ್ರನೆಂಬ ಅಭಿಮಾನವೂ, ಆ ದೇಹಸಂಬಂಧ ದಿಂದಲೇ ಉಂಟಾದುವುವೆಂದೂ ತಿಳಿದುಕೊಳ್ಳುವನು. ಮತ್ತು ಸಾಂಸಾರಿಕ ಪ್ರವರ್ತನಗಳೆಲ್ಲವೂ ಆ ದೇಹಕ್ಕೆ ಸೇರಿದುವೆಂದೂ, ಆ ದೇಹವೆಂಬುದು ಸ್ಥಿರ ವಲ್ಲದೆ ಜನ್ಮಜನ್ಮಕ್ಕೆ ಬೇರೆಬೇರೆಯಾಗಿ ಮಾರ್ಪಡುವ ಪ್ರಕೃತಿಯ ಪರಿಣಾಮ ವೆಂದೂ, ಆತ್ಮಸ್ವರೂಪವು ಎಂದಿಗೂ ಬದಲಾಯಿಸದೆ ಜ್ಞಾನಾತ್ಮಕವಾದು ದೆಂದೂ ತಿಳಿಯುವನು. ಹೆಚ್ಚೇಕೆ? ಮದ್ಯವನ್ನು ಕುಡಿದು ಮದವೇರಿ ದವನು, ತಾನು ಉಟ್ಟ ಬಟ್ಟೆಯನ್ನೇ ಅರಿಯದಿರುವಂತೆ, ಈ ಭಕ್ತಿಯೋಗ ದಿಂದ ಆತ್ಮಸ್ವರೂಪವನ್ನು ತಿಳಿದ ಯೋಗಿಯು, ತಾನು ಪಡೆದಿರುವ ಶರೀರ

ವನ್ನೇ ತಾನು ಮರೆತುಬಿಡುವನು. ಈಶ್ವರಸಂಕಲ್ಪದಿಂದ ತನಗೆ ಆ ಶರೀರ ಸಂಬಂಧವುಂಟಾದುದನ್ನಾಗಲೀ, ಆತ್ಮವು ಬಿಟ್ಟು ಹೋದಮೇಲೆ ಶರೀರವು ಕೆಳಗೆ ಬಿದ್ದು ಬಂಧುಗಳಿಂದ ಸುತ್ತಲ್ಪಡುವುದನ್ನಾಗಲೀ, ಕೊನೆಗೆ ಅದು ದಗ್ಧವಾಗುವುದನ್ನಾಗಲೀ ಯಾವುದನ್ನೂ ಗಮನಿಸಲಾರನು. ಈಶ್ವರಸಂಕಲ್ಪದಿಂದುಂಟಾದ ಆ ದೇಹವೂ ಕೂಡ, ತನ್ನ ಪ್ರಾರಬ್ಧಕರ್ಮವು ನಶಿಸುವವರೆಗೆ ಮಾತ್ರವೇ ಭೂತೇಂದ್ರಿಯ ಪ್ರಾಣಗಳೊಡಗೂಡಿ ತನಗೆ ತಗುಲುಕಟ್ಟಿರುವುದೆಂದೂ, ಆ ಶರೀರವು ತನ್ನನ್ನು ಬಿಟ್ಟು ತೊಲಗುವುದಕ್ಕೆ ಪ್ರಾರಬ್ಧಕರ್ಮವು ನಶಿಸುವುದನ್ನೇ ನಿರೀಕ್ಷಿಸುತ್ತಿರುವುದೆಂದೂ ತಿಳಿಯುವನು. ಈ ಸಮಾಧಿಯೋಗವನ್ನು ಸಾಧಿಸಿದವನು ಪಾಪನಿವೃತ್ತಿಯೇ ಮೊದಲಾದ ಅಷ್ಟಗುಣಗಳಿಂದ ಕೂಡಿದ ತನ್ನ ಮಹಿಮೆಯನ್ನು ತಾನು ತಿಳಿದೊಡನೆ, ಕನಸಿನಲ್ಲಿ ಕಂಡ ಪದಾರ್ಥಗಳಂತೆ, ತನ್ನ ಶರೀರದಿಂದ ಬಿಡುಗಡೆ ಹೊಂದಿದಮೇಲೆ, ಅಶಾಶ್ವತಗಳೆನಿಸಿದ ಪತ್ನೀಪುತ್ರಾದಿಗಳೊಡಗೂಡಿದ ಆ ದೇಹವನ್ನು ತಿರುಗಿ ಹೊಂದಲಾರನು. ಅಮ್ಮಾ! ಲೋಕದಲ್ಲಿ ಮನುಷ್ಯನು, ತನ್ನ ಹೆಂಡಿರು, ಮಕ್ಕಳು, ಮಿತ್ರರು, ಮೊದಲಾದ ಇಷ್ಟಜನರೆಲ್ಲರೂ ತನಗೆ ಅತ್ಯಂತ ಪ್ರೀತಿಪಾತ್ರರಾಗಿದ್ದರೂ ಅವನೂ, ಅವರೂ, ಹೇಗೆ ಪ್ರತ್ಯೇಕವಾಗಿ ತೋರುವರೋ, ದೇಹಕ್ಕೂ, ಆತ್ಮಕ್ಕೂ ಇರುವ ಸಂಬಂಧವೂ ಇದರಂತೆಯೇ ಹೊರತು, ಇದಕ್ಕಿಂತಲೂ ಹೆಚ್ಚಲ್ಲ. ಇದನ್ನು ನೋಡಿದರೆ, ಜೀವಾತ್ಮನಿಗೂ, ದೇಹಕ್ಕೂ ಇರುವ ಸಂಬಂಧವು ವ್ಯಕ್ತವಾಗುವುದು. ಇನ್ನು ಈ ಪ್ರಕೃತಿಪುರುಷರಿಗೂ, ಪರಮಾತ್ಮನಿಗೂ ಇರುವ ಸಂಬಂಧವೆಂತಹುದೆಂಬುದನ್ನು ಹೇಳುವೆನು ಕೇಳು! ಬೆಂಕಿಯಿಂದುಂಟಾಗುವ ಹೊಗೆ, ಕೊಳ್ಳಿ, ಕಿಡಿ, ಮುಂತಾದುವೆಲ್ಲವೂ ವಿವೇಕಜ್ಞಾನವಿಲ್ಲದವರಿಗೆ ಅಗ್ನಿಯಂತೆಯೇ ಕಾಣುವುದು ಸಹಜವಷ್ಟೆ? ವಾಸ್ತವದಲ್ಲಿ ಅಗ್ನಿಯು ಇವುಗಳಿಗಿಂತಲೂ ಹೇಗೆ ಬೇರ್ಪಟ್ಟಿರುವುದೋ, ಹಾಗೆಯೇ ಭೂತೇಂದ್ರಿಯಗಳಿಂದ ಶರೀರರೂಪವಾಗಿ ಪರಿಣಮಿಸುವ ಪ್ರಕೃತಿಯೂ, ಆ ಶರೀರದೊಳಗೆ ಸೇರಿರುವ ಆತ್ಮವೂ ಕೂಡ ಪರಬ್ರಹ್ಮವೆಂದು ಹೇಳಲ್ಪಡುವ ಷಡ್ಗುಣಪರಿಪೂರ್ಣನಾದ ಪರಮಾತ್ಮನಿಗಿಂತಲೂ ಬೇರ್ಪಟ್ಟವುಗಳು. ಆ ಪರಮಾತ್ಮನು, ಈ ಪ್ರಕೃತಿಪುರುಷರಲ್ಲಿ ಪ್ರವೇಶಿಸಿ, ಅವೆರಡಕ್ಕೂ ಧಾರಕನಾಗಿಯೂ, ಪೋಷಕನಾಗಿಯೂ ಇರುವನು. ದೇವ ತಿರ್ಯಜ್ಮನುಷ್ಯರೇ

ಮೊದಲಾದ ಬೇರೆ ಬೇರೆ ಶರೀರಗಳಲ್ಲಿ ಒಳಹೊಕ್ಕು, ಅವುಗಳನ್ನು ಧರಿಸತಕ್ಕ ಜೀವಗಳೆಲ್ಲವೂ, ಜ್ಞಾನಸ್ವರೂಪವಾದುದರಿಂದ, ಸಮಾನಾಕಾರವುಳ್ಳವರೆಂದೂ, ಅವರವರು ಧರಿಸತಕ್ಕ ಮೇಲಿನ ಶರೀರಗಳು, ಕರ್ಮಾಧೀನವಾಗಿ ಬೇರೆ ಬೇರೆ ಆಕಾರಗಳಿಂದ ತೋರಿದರೂ, ಅವೆಲ್ಲವೂ ಒಂದೇ ಪ್ರಕೃತಿಯ ಆಕಾರಭೇದವಾದುದರಿಂದ ವಾಸ್ತವದಲ್ಲಿ ಏಕರೂಪವಾದುದೆಂದೂ ತಿಳಿಯಬೇಕು. ಓ ಜನನೀ! ಬೆಂಕಿಯು ತನಗೆ ಆಶ್ರಯವಾದ ಹುಲ್ಲು, ಕಡ್ಡಿ ಮೊದಲಾದುವುಗಳಲ್ಲಿ ಸೇರಿದಾಗ, ಆಯಾ ಆಶ್ರಯವಸ್ತುಗಳ ಆಕಾರಕ್ಕೆ ತಕ್ಕಂತೆ ಉದ್ದವಾಗಿಯೂ, ಸಣ್ಣನಾಗಿಯೂ, ವಕ್ರವಾಗಿಯೂ, ನಾನಾವಿಧವಾಗಿ ಕಾಣುವುದುಂಟು. ಅಗ್ನಿಯೆಂಬುದು ಒಂದೇ ಆಗಿದ್ದರೂ, ಆಶ್ರಯವಸ್ತುಗಳ ಆಕಾರಭೇದದಿಂದ, ತಾನೂ ಬೇರೆ ಬೇರೆ ಆಕಾರದಲ್ಲಿ ಕಾಣುವಂತೆ, ದೇವಾದಿ ಶರೀರಗಳಲ್ಲಿ ಒಳಹೊಕ್ಕಿರುವ ಜೀವಾತ್ಮವೂ ಕೂಡ, ಆ ಶರೀರಭೇದಕ್ಕೆ ತಕ್ಕಂತೆ ನಾನಾವಿಧವಾಗಿ ತೋರುವುದು. ಜ್ಞಾನವೆಂಬ ಒಂದೇ ಆಕಾರವನ್ನು ಹಿಡಿದು ನೋಡಿದರೆ, ಜೀವಾತ್ಮಗಳೆಲ್ಲವೂ ಒಂದೇ ರೂಪವೆಂದು ಸ್ಪಷ್ಟವಾಗುವುದು. ಆದುದರಿಂದ ಓ ಜನನೀ! ಭಗವಂತನ ಸಂಕಲ್ಪದಿಂದ ಪ್ರೇರಿತವಾಗಿಯೂ, ಪ್ರಪಂಚದಲ್ಲಿ ಕಾರ್ಯಕಾರಣರೂಪದಿಂದ ವಿಸ್ತರಿಸಿದುದಾಗಿಯೂ, ಸುಲಭವಾಗಿ ಬಿಟ್ಟು ಹೋಗದುದಾಗಿಯೂ ಇರುವ ಈ ಪ್ರಕೃತಿಯನ್ನು, ಭಕ್ತಿಯೋಗದಿಂದ ಅಡಗಿಸಿ, ಅಷ್ಟಗುಣಗಳಿಂದ ಕೂಡಿದ ತನ್ನ ನಿಜಸ್ವರೂಪವನ್ನು ಹೊಂದಿದವನು ತಿರುಗಿ ಸಂಸಾರವೆಂಬ ಕಟ್ಟಿನಲ್ಲಿ ಸಿಕ್ಕಿಬೀಳಲಾರನು" ಎಂದನು. ಇದು ಇಪ್ಪತ್ತೆಂಟನೆಯ ಅಧ್ಯಾಯವು.

---

{ ಕಪಿಲನು ದೇವಹೂತಿಗೆ ಭಕ್ತಿಯೋಗದ ವಿಭಾಗಗಳನ್ನೂ, ಕಾಲಸ್ವರೂಪವನ್ನೂ ತಿಳಿಸಿದುದು. }

ಕಪಿಲನು ಹೇಳಿದ ಈ ಭಕ್ತಿಯೋಗದ ಮಹಿಮೆಯನ್ನು ಕೇಳಿದಮೇಲೆ ದೇವಹೂತಿಯು "ಓ ಮಹಾತ್ಮಾ! ಮಹತ್ತು ಮೊದಲಾದ ತತ್ವಗಳಿಗೂ, ಪ್ರಕೃತಿಗೂ ಪುರುಷನಿಗೂ ಇರುವ ಪರಸ್ಪರ ವೈಲಕ್ಷಣ್ಯವನ್ನೂ ಅವುಗಳ

ಸ್ವರೂಪವನ್ನೂ, ಪರಮಾತ್ಮನ ಸ್ವರೂಪವನ್ನೂ ತಿಳಿದುಕೊಂಡೆನು. ಸಿದ್ಧಾಂತಗಳಲ್ಲಿ ಈ ಪ್ರಕೃತಿ ಮೊದಲಾದುವುಗಳ ನಿಜಸ್ಥಿತಿಯನ್ನು ತಿಳಿಯುವುದಕ್ಕೆ ಯಾವ ವಿಧವಾದ ಭಕ್ತಿಯನ್ನು ಮುಖ್ಯವೆಂದು ಹೇಳುವರೋ, ಆ ಭಕ್ತಿಯೋಗದ ನಾನಾಮಾರ್ಗಗಳನ್ನೂ ನನಗೆ ವಿವರಿಸಿ ತಿಳಿಸಬೇಕು. ಮೋಕ್ಷಾಪೇಕ್ಷೆಯುಳ್ಳವರಿಗೆ ವಿರಕ್ತಿಯನ್ನು ಹುಟ್ಟಿಸತಕ್ಕ ಸಂಸಾರದ ವಿಚಿತ್ರಗತಿಗಳೆಲ್ಲವನ್ನೂ ತಿಳಿಸಬೇಕು. ಮತ್ತು ಕಾಲವೆಂಬುದು ಭಗವಂತನಿಗೆ ಶರೀರವಾಗಿಯೂ, ಬ್ರಹ್ಮಾದಿದೇವತೆಗಳನ್ನು ತನ್ನ ವಶಮಾಡಿಕೊಳ್ಳಬಲ್ಲುದಾಗಿಯೂ ಇರುವುದೆಂದೂ, ಈ ಕಾಲದಿಂದ ಬಂದೊದಗುವ ಜರಾಮರಣಗಳೇ ಮೊದಲಾದ ಸಂಸಾರಿಕ ಧರ್ಮಗಳನ್ನು ದಾಟುವುದಕ್ಕಾಗಿಯೇ ಹಿರಿಯರು ನಿವೃತ್ತಿಧರ್ಮವನ್ನಾಚರಿಸುವರೆಂದೂ ಹೇಳಿದೆಯಲ್ಲವೇ? ಅಂತಹ ಕಾಲಸ್ವರೂಪವನ್ನು ವಿವರವಾಗಿ ತಿಳಿಸಬೇಕು. ದೇಹವನ್ನೇ ಆತ್ಮವೆಂದೂ, ತಾನೇ ಸ್ವತಂತ್ರನೆಂದೂ ಭ್ರಮಿಸಿ, ಆತ್ಮ ಪರಮಾತ್ಮ ಸ್ವರೂಪವನ್ನು ತಿಳಿಯದೆ, ಸ್ವರ್ಗನರಕಾದಿಗಳಿಗೆ ತಂದು ಸೇರಿಸತಕ್ಕ ಕರ್ಮಗಳನ್ನಾಚರಿಸಿ, ಆ ಮೂಲಕವಾಗಿ ಸಂಸಾರವೆಂಬ ಗಾಢಾಂಧಕಾರದಲ್ಲಿ ಬಿದ್ದು ನರಳುವ ಪ್ರಪಂಚಕ್ಕೆ ಜ್ಞಾನಪ್ರಕಾಶವನ್ನುಂಟುಮಾಡುವುದಕ್ಕಾಗಿಯೇ ನೀನು ಸೂರ್ಯನಂತೆ ಉದಿಸಿದವನಲ್ಲವೇ? ಆದುದರಿಂದ ಈ ನನ್ನ ಅಜ್ಞಾನಾಂಧಕಾರವನ್ನು ನೀಗಿಸಬೇಕು" ಎಂದಳು. ಇದನ್ನು ಕೇಳಿ ಕಪಿಲಮಹಾಮುನಿಯು ಸಂತೋಷಗೊಂಡು, ತನ್ನ ತಾಯಿಯಾದ ದೇವಹೂತಿಯನ್ನು ಕುರಿತು, "ಅಮ್ಮಾ! ಕೇಳು! ಭಕ್ತಿಯನ್ನು ಸಾಧಿಸುವುದಕ್ಕೆ ಅನೇಕ ಮಾರ್ಗಗಳುಂಟು. ಅದಕ್ಕೆ ತಕ್ಕಂತೆ ಭಕ್ತಿಯೋಗವೆಂಬುದೂ ಹಲವು ಬಗೆಯಾಗಿರುವುದು. ಮನುಷ್ಯನ ಗುಣಸ್ವಭಾವಗಳಿಗೆ ತಕ್ಕಂತೆ ಅವನ ಮನೋಧರ್ಮವೂ ಭೇದಿಸುವುದರಿಂದ, ಆ ಮನಸ್ಸಿನ ವ್ಯಾಪಾರವಾದ ಭಕ್ತಿಯಲ್ಲಿಯೂ, ಸಾತ್ವಿಕವೆಂದೂ, ರಾಜಸವೆಂದೂ, ತಾಮಸವೆಂದೂ ಮೂರು ಬಗೆಯುಂಟು. ದ್ವೇಷದಿಂದಾಗಲೀ, ಡಂಭದಿಂದಾಗಲೀ, ಮಾತ್ಸರ್ಯದಿಂದಾಗಲೀ ನಡೆಸತಕ್ಕ ಭಕ್ತಿಯು ತಾಮಸಭಕ್ತಿಯೆನಿಸುವುದು. ಈ ತಾಮಸಭಕ್ತಿಯಲ್ಲಿಯೂ ಕೂಡ ಉತ್ತಮಾಧಮಮಧ್ಯಮಗಳೆಂಬ ಮೂರು ಒಳಭೇದಗಳುಂಟು. ಕೋಪಸ್ವಭಾವವುಳ್ಳವನಾಗಿಯೂ, ಇತರ ಭೂತಗಳಲ್ಲಿ ಭೇದಬುದ್ಧಿಯುಳ್ಳವನಾಗಿಯೂ ಇರುವವನು,

ಮೇಲೆ ಹೇಳಿದ ಯಾವುದೋ ಒಂದು ಕಾರಣವನ್ನಿಟ್ಟುಕೊಂಡು, ನನ್ನಲ್ಲಿ ಭಕ್ತಿಯನ್ನು ಕಾಣಿಸಿದರೆ ಅವನು ತಾಮಸಭಕ್ತನೆನಿಸುವನು. ಶಬ್ದಾದಿ ವಿಷಯಗಳ ಲಾಭವನ್ನಾಗಲೀ, ಕೀರ್ತಿಯನ್ನಾಗಲೀ, ಐಶ್ವರ್ಯವನ್ನಾಗಲೀ ಅಪೇಕ್ಷಿಸಿ, ನನ್ನನ್ನು ಪೂಜಿಸತಕ್ಕವನು ರಾಜಸಭಕ್ತನೆನಿಸುವನು. ಇಂತವನಿಗೆ ನನ್ನಲ್ಲಿ ಪರಮಾತ್ಮನೆಂಬ ಬುದ್ಧಿಯೂ, ತನ್ನಲ್ಲಿ ನಾನು ಅಂತರ್ಯಾಮಿಯಾಗಿರುವೆನೆಂಬ ಭಾವವೂ ಇರಲಾರದು. ಯಾವುದೋ ಒಂದು ದೇವತೆಯನ್ನಾಗಿ ನೆನೆಸಿ ನನ್ನನ್ನು ಪೂಜಾದಿಗಳಿಂದ ಪುರಸ್ಕರಿಸುತ್ತಿರುವನು. ಇಂತವನ ಭಕ್ತಿಯು ರಾಜಸಭಕ್ತಿಯೆನಿಸುವುದು. ಇವೆರಡನ್ನೂ ಬಿಟ್ಟು, ತನ್ನ ಪಾಪಗಳು ನೀಗಬೇಕೆಂದಾಗಲೀ, ಪರಮಪುರುಷನಾದ ನನ್ನಲ್ಲಿ ಕರ್ಮಸಮರ್ಪಣವನ್ನು ಮಾಡಿ, ಅದರಿಂದ ನನ್ನ ಅನುಗ್ರಹವನ್ನು ಪಡೆಯಬೇಕೆಂದಾಗಲೀ, "ಸರ್ವೇಶ್ವರನ ಆಜ್ಞೆಯಾದುದರಿಂದ ನಾವು ಅವಶ್ಯವಾಗಿ ಇದನ್ನು ನಡೆಸಬೇಕು. ನಡೆಸದಿದ್ದರೆ ಭಗವಂತನ ನಿಗ್ರಹಕ್ಕೆ ಗುರಿಯಾಗುವೆ" ವೆಂಬ ಭಾವದಿಂದಾಗಲಿ, ತಾನು ಈಶ್ವರನಿಗೆ ಶರೀರವೆಂದೂ, ತನಗೆ ಪರಮಾತ್ಮನು ಅಂತರಾತ್ಮನೆಂದೂ, ಅವನನ್ನು ಬಿಟ್ಟು ತನಗೆ ಬೇರೆ ಆಶ್ರಯವಿಲ್ಲವೆಂದೂ ತಿಳಿದಾಗಲೀ, ನನ್ನನ್ನು ಪೂಜಿಸಿದರೆ ಅದು ಸಾತ್ವಿಕಭಕ್ತಿಯೆನಿಸುವುದು. ಈ ಸಾತ್ವಿಕಭಕ್ತಿಯೂ ಉತ್ತಮ ಮಧ್ಯಮಾಧಮಗಳೆಂದು ಮೂರು ವಿಧವಾಗಿ ಬೇರ್ಪಟ್ಟಿರುವುದು. ಭಗವಂತನ ಆಜ್ಞೆಯಾದುದರಿಂದಲೇ ಇದನ್ನು ನಾವು ಅವಶ್ಯವಾಗಿ ನಡೆಸಬೇಕೆಂದು ಸಾಧಿಸತಕ್ಕ ಭಕ್ತಿಯೋಗವು ಉತ್ತಮವೆನಿಸುವುದು. ಭಗವಂತನಲ್ಲಿ ಕರ್ಮಸಮರ್ಪಣವನ್ನು ಮಾಡಿ, ಅವನ ಅನುಗ್ರಹವನ್ನು ಪಡೆಯುವುದಕ್ಕಾಗಿ ಮಾಡುವ ಭಕ್ತಿಯು ಮಧ್ಯಮವೆನಿಸುವುದು. ಓ! ಜನನೀ! ಸಮಸ್ತ ಪ್ರಾಣಿಗಳ, ಹೃದಯದಲ್ಲಿಯೂ ಅಡಗಿರತಕ್ಕ ಪುರುಷೋತ್ತಮನಾದ ನನ್ನ ಗುಣಗಳನ್ನು ಕಿವಿಯಿಂದ ಕೇಳಿದಾಗ ಗಂಗಾಪ್ರವಾಹವು ನಡುದಾರಿಯಲ್ಲಿ ಎಲ್ಲಿಯೂ ನಿಲ್ಲದೆ ಸಮುದ್ರವನ್ನು ಸೇರುವಂತೆ, ಮನಸ್ಸು, ಬೇರೆ ಯಾವ ವಿಷಯದಲ್ಲಿಯೂ ಪ್ರವರ್ತಿಸದೆ, ಬೇರೆ ಯಾವ ಫಲವನ್ನೂ ಅಪೇಕ್ಷಿಸದೆ, ನನ್ನಲ್ಲಿಗೆ ಬಂದು ಸೇರಿ, ನನ್ನನ್ನು ಪ್ರೀತಿಸಿದರೆ ಅದೇ ಭಕ್ತಿಯೆನಿಸುವುದು. ಇದು ಸತ್ವಾದಿಗುಣಗಳಿಂದುಂಟಾದ ದೋಷಗಳೆಲ್ಲವನ್ನೂ ನೀಗಿಸಿ, ಮುಕ್ತಿಯನ್ನು ಕೈಗೂಡಿಸುವುದು.

ಇಂತಹ ಭಕ್ತಿಯೋಗವನ್ನು ಹಿಡಿದವರಿಗೆ, ಸಾಯುಜ್ಯವೆಂದೂ, ಸಾಲೋಕ್ಯವೆಂದೂ, ಸಾಮೀಪ್ಯವೆಂದೂ, ಸಾರೂಪ್ಯವೆಂದೂ, ಬೇರೆಬೇರೆ ವಿಧವಾದ ಮುಕ್ತಿಗಳೆಲ್ಲವೂ ಸುಲಭವಾಗಿ ಕೈಗೂಡುವುವು. ಆದರೆ ಭಕ್ತಿಯೋಗದಿಂದ ಪಕ್ವವಾದ ಮನಸ್ಸುಳ್ಳವರಿಗೆ ನನ್ನ ಸೇವೆಯಲ್ಲಿ ಹೊರತು, ಮೇಲೆ ಹೇಳಿದ ಸಾಲೋಕ್ಯಾದಿಗಳಲ್ಲಿಯೂ ಅಪೇಕ್ಷೆ ಹುಟ್ಟಲಾರದು. ಹೀಗಿರುವಾಗ ಉತ್ತಮ ಭಕ್ತರಾದವರು, ಸಾಂಸಾರಿಕ ಫಲವನ್ನು ಅಪೇಕ್ಷಿಸಲಾರರೆಂಬುದನ್ನು ಹೇಳಬೇಕೇ? ಯಾವ ಮುಕ್ತಿಯಿಂದ ಪ್ರಕೃತಿಸಂಬಂಧವನ್ನು ದಾಟಿ, ನನ್ನ ಸಾನ್ನಿಧ್ಯವಾದ ಮೋಕ್ಷವನ್ನು ಹೊಂದುವನೋ, ಅದನ್ನೇ ಆತ್ಯಂತಿಕ (ಮೇಲಾದ) ಭಕ್ತಿಯೆನ್ನುವರು. ಆ ಭಕ್ತಿಯೋಗಕ್ಕೆ ಬೇಕಾದ ಅಂಗಗಳೆಲ್ಲವನ್ನೂ ತಿಳಿಸುವೆನು ಕೇಳು. ಯಾವ ಫಲವನ್ನೂ ಅಪೇಕ್ಷಿಸದೆ ತನ್ನ ವರ್ಣಾಶ್ರಮಧರ್ಮಗಳನ್ನು ನಡೆಸುತ್ತ ಬರುವುದು. ಪಾಂಚರಾತ್ರಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟ ಕ್ರಮದಂತೆ ನನ್ನ ಅರ್ಚಾವಿಗ್ರಹಗಳನ್ನು ಆರಾಧಿಸುತ್ತಿರುವುದು. ಅರ್ಚಾರೂಪಿಯಾದ ನನ್ನ ನಿವಾಸಸ್ಥಾನಗಳನ್ನು ಆಗಾಗ ದರ್ಶನ ಮಾಡಿ ಬರುವುದು. ನನ್ನ ವಾಸಸ್ಥಾನಗಳನ್ನು ಶುದ್ಧಿಪಡಿಸುವುದು. ನನ್ನ ಮೂರ್ತಿಗಳನ್ನು ಸ್ತೋತ್ರಮಾಡುವುದು. ನಮಸ್ಕರಿಸುವುದು. ಸಮಸ್ತ ಭೂತಗಳನ್ನೂ ನನ್ನ ಸ್ವರೂಪವೆಂದೇ ಭಾವಿಸುವುದು. ಯಾವ ಕಾರಣದಿಂದಲೂ ಕದಲದ ವೈರಾಗ್ಯವನ್ನು ಹಿಡಿಯುವುದು. ತನಗಿಂತಲೂ, ಹಿರಿಯರನ್ನು ಗೌರವಿಸುವುದು. ದುಃಖಿತರಲ್ಲಿ ದಯೆಯನ್ನು ತೋರಿಸುವುದು. ತನಗೆ ಸಮಾನರಾದವರಲ್ಲಿ ಸ್ನೇಹವನ್ನು ಬೆಳೆಸುವುದು. ಯಮನಿಯಮಾದಿ ಯೋಗಗಳನ್ನು ಅಭ್ಯಸಿಸುವುದು. ಯಾವಾಗಲೂ ವೇದಾಂತಶಾಸ್ತ್ರವನ್ನು ಕಿವಿಯಿಂದ ಕೇಳುತ್ತಿರುವುದು. ನನ್ನ ನಾಮಗಳನ್ನು ಸ್ಮರಿಸುವುದು. ತ್ರಿಕರಣಶುದ್ಧಿಯಿಂದ ಸತ್ಪುರುಷರ ಸೇವೆಯನ್ನು ಮಾಡುವುದು. ನಿರಹಂಕಾರನಾಗಿ ವರ್ತಿಸುವುದು. ಇವೆಲ್ಲವೂ ಭಕ್ತಿಯ ಅಂಗಗಳೆನಿಸುವುವು. ಯಾವನು ಈ ಗುಣಗಳೆಲ್ಲವನ್ನೂ ತಪ್ಪದೆ ಅನುಸರಿಸುತ್ತ, ನನ್ನಿಂದ ವಿಧಿಸಲ್ಪಟ್ಟ ಧರ್ಮಗಳನ್ನನುಷ್ಠಿಸುವನೋ, ಅಂತವನ ಮನಸ್ಸು ನಿರ್ಮಲವಾಗುವುದು. ಅಂತವನು ತನ್ನ ಪ್ರಯತ್ನವಿಲ್ಲದೆಯೇ ನನ್ನ ಸ್ಥಾನಕ್ಕೆ ಬಂದು ಸೇರುವನು. ಪುಷ್ಪಗಳಲ್ಲಿರುವ ಪರಿಮಳವು, ವಾಯುವಿನ ಸಹಾಯವಿದ್ದಾಗ, ತನ್ನ

ಪ್ರಯತ್ನವಿಲ್ಲದೆ ಹೊರಟು ಬಂದು ಘ್ರಾಣೇಂದ್ರಿಯದಲ್ಲಿ ಸೇರುವಂತೆ, ಯೋಗಿಯ ಮನಸ್ಸು, ಆ ಭಕ್ತಿಯೋಗದ ಬಲದಿಂದ ಅನಾಯಾಸವಾಗಿ ಪರಬ್ರಹ್ಮವನ್ನು ಸೇರುವುದು. ಇವೆಲ್ಲವೂ ಸಾತ್ವಿಕಭಕ್ತಿಯೋಗಗಳೆನಿಸುವುವು. ಇನ್ನು ತಾಮಸಭಕ್ತಿಯೋಗಗಳನ್ನು ತಿಳಿಸುವೆನು ಕೇಳು. ಕೆಲವರು ಸಮಸ್ತ ಭೂತಗಳಲ್ಲಿಯೂ ಅಂತರಾತ್ಮನಾಗಿರುವ ನನ್ನ ನಿಜವನ್ನು ತಿಳಿಯದೆ, ನಟನೆಗಾಗಿ ನನ್ನ ಅರ್ಚಾವಿಗ್ರಹವನ್ನು ಪೂಜಿಸುವುದುಂಟು. ಹೀಗೆ ನಿಜವನ್ನು ತಿಳಿಯದೆ ನಡೆಸತಕ್ಕ ಪೂಜೆಯು, ಬೂದಿಯಲ್ಲಿ ಮಾಡಿದ ಹೋಮದಂತೆ ವ್ಯರ್ಥವಾಗುವುದೇ ಹೊರತು ಸಫಲವಾಗದು. ಮನೆಮಕ್ಕಳಲ್ಲಿಯೂ, ತನ್ನ ಶರೀರದಲ್ಲಿಯೂ ಅಭಿಮಾನವನ್ನಿಟ್ಟುಕೊಂಡು, ಇತರ ಭೂತಗಳನ್ನು ದ್ವೇಷಿಸುವುದರ ಮೂಲಕವಾಗಿ, ಅವುಗಳಲ್ಲಿ ಅಂತರಾತ್ಮನಾಗಿರುವ ನನ್ನನ್ನೇ ದ್ವೇಷಿಸುತ್ತ, ಅರ್ಚಾವತಾರಗಳನ್ನೂ ನನ್ನಂತೆ ಭಾವಿಸದವನ ಮನಸ್ಸು ಎಂದಿದ್ದರೂ ಶುದ್ಧವೆನಿಸದು. ಅಮ್ಮಾ! ಹೀಗೆ ಇತರ ಭೂತಗಳಲ್ಲಿ ದ್ವೇಷಬುದ್ಧಿಯುಳ್ಳವನು, ಪರ್ವತದಂತೆ ಪೂಜಾಸಾಮಗ್ರಿಗಳನ್ನು ಸಂಗ್ರಹಿಸಿ ನನ್ನನ್ನು ಪೂಜಿಸಿದರೂ ನಾನು ಸಂತೋಷಿಸಲಾರೆನು. ಅವನ ಪೂಜೆಗಳೆಲ್ಲವೂ ವ್ಯರ್ಥವೆಂದೇ ತಿಳಿ. ಆದುದರಿಂದ ಮನುಷ್ಯನು ತನ್ನ ಹೃದಯದಲ್ಲಿಯೂ, ಸಮಸ್ತ ಭೂತಗಳಲ್ಲಿಯೂ ಸಮವಾಗಿ ವರ್ತಿಸುತ್ತಿರುವ ನನ್ನನ್ನು ತಿಳಿಯುವವರೆಗೆ, ತನ್ನ ವರ್ಣಾಶ್ರಮಧರ್ಮಗಳನ್ನು ತಪ್ಪದೆ ನಡೆಸುತ್ತ, ಸರ್ವೇಶ್ವರನಾದ ನನ್ನನ್ನು ತನ್ನ ಹೃದಯಕಮಲದಲ್ಲಿಯೇ ಪೂಜಿಸುತ್ತಿರಬೇಕು. ಸಮಸ್ತ ಭೂತಗಳನ್ನೂ ನನ್ನೊಡನೆ ಸ್ವಲ್ಪಮಾತ್ರವೂ ಭೇದಬುದ್ಧಿಯಿಂದ ನೋಡಬಾರದು. ಹೀಗೆ ಭೇದಬುದ್ಧಿಯಿಂದ ನೋಡುವವನಿಗೆ ಮೃತ್ಯುಭಯವೂ ಮೇಲೆ ಮೇಲೆ ಹೆಚ್ಚುತ್ತಿರುವುದು. ಅಂತವನು ಘೋರವಾದ ನರಕದಲ್ಲಿ ಬೀಳುವನು. ಆದುದರಿಂದ ನನ್ನನ್ನು ಪ್ರೀತಿಸಬೇಕೆಂಬ ಅಪೇಕ್ಷೆಯುಳ್ಳವನು, ಮೊದಲು ಇತರ ಭೂತಗಳಲ್ಲಿ ತನ್ನೊಡನೆ ಸಮಾನಭಾವವನ್ನಿಟ್ಟು, ಮಿತ್ರುತ್ವದಿಂದ ನೋಡುತ್ತ, ದಾನಮಾನಗಳಿಂದ ಇತರರನ್ನು ಪೂಜಿಸುತ್ತಿರಬೇಕು. ಓ ಜನನೀ! ಜೀವರಾಶಿಗಳಲ್ಲಿ ತನಗೆ ಮೇಲಾದವರಲ್ಲಿ ಗೌರವವನ್ನೂ, ತನಗೆ ಸಮಾನರಲ್ಲಿ ಸ್ನೇಹವನ್ನೂ, ತನಗಿಂತಲೂ ಕೀಳಾದವರಲ್ಲಿ ದಾನವನ್ನೂ ಮಾಡಬೇಕು. ಎಲ್ಲರೂ ಜ್ಞಾನಸ್ವರೂಪ

ರಾದುದರಿಂದಲೂ, ಬ್ರಹ್ಮಸ್ವರೂಪರಾದುದರಿಂದಲೂ, ಪರಸ್ಪರಭೇದವಿಲ್ಲದವರೆಂದು ಮನಸ್ಸಿನಲ್ಲಿ ದೃಢಜ್ಞಾನವನ್ನಿಟ್ಟುಕೊಳ್ಳಬೇಕು. ಇತರರನ್ನು ದಾನಮಾನಾದಿಗಳಿಂದ ಗೌರವಿಸುವಾಗ, ಅವರೆಲ್ಲರೂ ಬ್ರಹ್ಮಸ್ವರೂಪರಾದುದರಿಂದ ಅವರಿಗೆ ನಡೆಸತಕ್ಕ ಸತ್ಕಾರಗಳೆಲ್ಲವೂ ಪರಮಾತ್ಮ ತೃಪ್ತಿಗಾಗಿಯೇ ಎಂಬ ಬುದ್ಧಿಯಿಂದ ನಡೆಸಿದಾಗಲೇ ಅವು ಸಾರ್ಥಕವಾಗುವುವು. ಜನನೀ! ಇನ್ನು ಚೇತನಾಚೇತನವಸ್ತುಗಳಲ್ಲಿರುವ ತಾರತಮ್ಯವನ್ನು ತಿಳಿಸುವೆನು ಕೇಳು! ಜೀವವಿಲ್ಲದ ವಸ್ತುಗಳಿಗಿಂತಲೂ ಜೀವವುಳ್ಳ ವಸ್ತುಗಳು ಮೇಲೆನಿಸಿಕೊಳ್ಳುವುವು. ಆ ಜೀವಿಗಳಿಗಿಂತಲೂ ಪ್ರಾಣವುಳ್ಳವು ಮೇಲೆನಿಸುವುವು. ಆ ಪ್ರಾಣವುಳ್ಳವುಗಳಿಗಿಂತಲೂ ಜ್ಞಾನವುಳ್ಳವುಗಳು ಮೇಲೆನಿಸಿಕೊಳ್ಳುವುವು. ಅವಕ್ಕಿಂತಲೂ ಇಂದ್ರಿಯವ್ಯಾಪಾರವುಳ್ಳವುಗಳಲ್ಲಿ ಸಸ್ಯವರ್ಗಗಳಿಗೆ ಸ್ಪರ್ಶಜ್ಞಾನ ಮಾತ್ರ ಇರುವುದರಿಂದ, ಆ ವೃಕ್ಷಾದಿಗಳಿಗಿಂತಲೂ ರಸಜ್ಞಾನ ಸಾಮರ್ಥ್ಯವುಳ್ಳ ಮತ್ಸ್ಯಾದಿಗಳು ಶ್ರೇಷ್ಠವೆನಿಸುವುವು. ಅವಕ್ಕಿಂತಲೂ ಗಂಧಜ್ಞಾನವನ್ನು ಹೊಂದಿರುವ ಭ್ರಮರಾದಿಗಳು ಶ್ರೇಷ್ಠವೆನಿಸುವುವು. ಅವಕ್ಕಿಂತಲೂ ಶಬ್ದಜ್ಞಾನವುಳ್ಳ ಸರ್ಪಾದಿಗಳು ಉತ್ತಮವೆನಿಸಿರುವುವು. ಆ ಸರ್ಪಾದಿಗಳಿಗಿಂತಲೂ ರೂಪವನ್ನು ಗ್ರಹಿಸುವ ಶಕ್ತಿಯುಳ್ಳ ಕಾಗೆ ಮೊದಲಾದ ಜಂತುಗಳು ಮೇಲೆನಿಸುವುವು. ಈ ಕಾಕಾದಿಗಳಿಗಿಂತಲೂ ಎರಡುಸಾಲು ಹಲ್ಲುಗಳುಳ್ಳ ಜಂತುಗಳು ಉತ್ತಮವೆನಿಸುವುವು. ಅವಕ್ಕಿಂತಲೂ ಚತುಷ್ಪಾದ ಜಂತುಗಳು ಮೇಲೆನಿಸುವುವು. ಆ ಚತುಷ್ಪಾದಿಗಳಿಗಿಂತಲೂ ಎರಡು ಕಾಲಿನ ಜಂತುಗಳೆನಿಸಿಕೊಳ್ಳುವ ಮನುಷ್ಯಾದಿಗಳು ಉತ್ತಮರೆನಿಸುವರು. ಈ ಮನುಷ್ಯಜಾತಿಯಲ್ಲಿಯೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕುವರ್ಣದವರು ಮೇಲೆನಿಸುವರು. ಈ ನಾಲ್ಕುವರ್ಣದವರಲ್ಲಿ ಬ್ರಾಹ್ಮಣರು ಮೇಲೆನಿಸುವರು. ಆ ಬ್ರಾಹ್ಮಣರಲ್ಲಿಯೂ ವೇದಾಧ್ಯಯನವನ್ನು ಮಾಡಿದವರು ಉತ್ತಮರೆನಿಸುವರು. ಅವರಲ್ಲಿಯೂ ವೇದಾರ್ಥವನ್ನು ತಿಳಿದವನು ಮೇಲೆನಿಸುವನು. ಆ ವೇದಾರ್ಥವನ್ನು ತಿಳಿದವರಲ್ಲಿಯೂ ಕೂಡ ಊಹಾಪೋಹಗಳಿಂದ ಸಂದೇಹವೆಲ್ಲವೂ ನೀಗುವಂತೆ ಉತ್ತಮಜ್ಞಾನವನ್ನು ಹೊಂದಿದ ಮೀಮಾಂಸಕನು ಮೇಲೆನಿಸುವನು. ಅವನಿಗಿಂತಲೂ ತನಗೆ ವಿಹಿತವಾದ ಕೃತ್ಯಗಳನ್ನು ನಡೆಸುತ್ತ

ಬರುವವನು ಉತ್ತಮನೆನಿಸುವನು. ಅವನಿಗಿಂತಲೂ ನಿಷ್ಕಾಮವಾಗಿ ಸಂಸಾರ. ನಿವೃತಿಯನ್ನು ಹೊಂದಿ ಸರ್ವಸಂಗಪರಿತ್ಯಾಗಮಾಡಿದವನು ಮೇಲೆನಿಸುವನುಸ ಅವನಿಗಿಂತಲೂ ತಾನು ಮಾಡಿದ ಕರ್ಮಕಲಾಪವನ್ನೂ, ಕರ್ಮಫಲವನ್ನೂ, ತನ್ನಲ್ಲಿ ಅಂತರಾತ್ಮನಾಗಿರುವ ನನಗಾಗಿಯೇ ಅರ್ಪಿಸುತ್ತ ಎಲ್ಲವನ್ನೂ ನನ್ನ ಸ್ವರೂಪವನ್ನಾಗಿ ತಿಳಿದು, ಭೇದಬುದ್ಧಿಯಿಲ್ಲದೆ ಸರ್ವಸಮನಾಗಿ ವರ್ತಿಸತಕ್ಕವನು ಮೇಲೆನಿಸುವನು. ಜನನೀ! ಮುಖ್ಯವಾಗಿ ಯಾವನು ಸರ್ವನಿಯಾಮಕನಾಗಿಯೂ, ಸರ್ವರಕ್ಷಕನಾಗಿಯೂ, ಸರ್ವಾಂತರ್ಯಾಮಿಯಾಗಿಯೂ ಇರುವ ನನ್ನಲ್ಲಿ ಆತ್ಮಭರಸಮರ್ಪಣವನ್ನು ಮಾಡಿ, "ಕರ್ಮಗಳನ್ನು ಮಾಡಿಸತಕ್ಕವನೂ, ಆ ಕರ್ಮಗಳಿಗೆ ಫಲವನ್ನು ಕೊಡತಕ್ಕವನೂ ನಾನೇ" ಎಂದು ನಂಬಿ, ಈ ವಿವೇಕಜ್ಞಾನದಿಂದ ತಾನು ಸ್ವತಂತ್ರನೆಂಬ ಅಭಿಮಾನವನ್ನು ಬಿಟ್ಟು, ಚೇತನಾಚೇತನರೂಪವಾದ ಸಮಸ್ತ ಪ್ರಪಂಚವನ್ನೂ ಬ್ರಹ್ಮಸ್ವರೂಪವೆಂದೇ ತಿಳಿದು ಎಲ್ಲವನ್ನೂ ತನ್ನೊಡನೆ ಅಭೇದಬುದ್ಧಿಯಿಂದ ಭಾವಿಸುವನೋ, ಅಂತಹ ಜ್ಞಾನಿಗಿಂತಲೂ ಉತ್ತಮವಾದ ಬೇರೊಂದು ಜಂತುವನ್ನು ನಾನು ಕಾಣಲಿಲ್ಲ. ಸಮಸ್ತ ಭೂತಗಳಲ್ಲಿಯೂ ಭಗವಂತನು, ತನ್ನ ನಿಜಾಂಶದಿಂದ ನೆಲೆಗೊಂಡಿರುವನೆಂಬುದನ್ನು ತಿಳಿದು, ಎಲ್ಲರನ್ನೂ ಗೌರವಿಸಿ ನಮಸ್ಕರಿಸಬೇಕು. ಎಲೆ ಮನುಪುತ್ರೀ! ಇದುವರೆಗೆ ನಾನು ಹೇಳಿದ ಭಗವದುಪಾಸನಾತ್ಮಕವಾದ ಭಕ್ತಿಯೋಗವನ್ನಾಗಲೀ, ಪ್ರಕೃತಿಗಿಂತಲೂ ಬೇರೆಯಾದ ಜೀವಾತ್ಮಸ್ವರೂಪವನ್ನು ತಿಳಿದುಕೊಳ್ಳತಕ್ಕ ಜ್ಞಾನಯೋಗವನ್ನಾಗಲೀ, ಇವೆರಡರಲ್ಲಿ ಯಾವುದೊಂದನ್ನು ಅನುಷ್ಠಿಸಿದರೂ ಜೀವನು ಪರಮಪುರುಷನನ್ನು ಸೇರಬಹುದು. ಇನ್ನು ಕಾಲಸ್ವರೂಪವನ್ನು ತಿಳಿಸುವೆನು ಕೇಳು! ಮೇಲೆ ಹೇಳಿದ ಪ್ರಕೃತಿ ಪುರುಷರಿಗಿಂತಲೂ, ದೈವಸಂಕಲ್ಪರೂಪವಾದ ಅದೃಷ್ಟಕ್ಕಿಂತಲೂ, ಪುಣ್ಯಪಾಪರೂಪವಾದ ಕರ್ಮಗಳಿಗಿಂತಲೂ ವಿಲಕ್ಷಣವಾಗಿ, ಇವೆಲ್ಲಕ್ಕಿಂತಲೂ ಮೇಲ್ಪಟ್ಟ ವಸ್ತುವೇ ಕಾಲವೆನಿಸುವುದು. ಇದು ಭಗವಂತನಿಗೆ ಶರೀರವಾಗಿ, ಅವನ ಆಜ್ಞೆಗೆ ಒಳಪಟ್ಟಿರುವುದು. ಮತ್ತು ಮಹತ್ತು ಮೊದಲಾದ ತತ್ವಗಳಿಗೆ ಮುಂದೆ ಮುಂದೆ ರೂಪಾಂತರಗಳನ್ನು ಹೊಂದಿಸುವುದಕ್ಕೂ ಇದೇ ಕಾರಣವಾಗಿರುವುದು. ಜೀವಾತ್ಮಗಳೆಲ್ಲವೂ ಜ್ಞಾನರೂಪದಿಂದ ಒಂದೇ ವಿಧವಾಗಿದ್ದರೂ, ಆ ಆತ್ಮಗಳನ್ನು ದೇವಮನು

ಷ್ಯಾದಿ ಭೇದಗಳಿಂದ ಬೇರೆಬೇರೆಯಾಗಿ ಭಾವಿಸತಕ್ಕ ಭೇದಬುದ್ಧಿಯುಳ್ಳವರಿಗೆ, ಹುಟ್ಟು, ಮುಪ್ಪು, ಸಾವು, ಮುಂತಾದ ಸಂಸಾರಭಯವನ್ನುಂಟುಮಾಡತಕ್ಕುದೂ ಈ ಕಾಲವೇ! ಈ ಕಾಲಸ್ವರೂಪಿಯಾದ ಭಗವಂತನೇ ಸಮಸ್ತ ಪ್ರಾಣಿಗಳಲ್ಲಿಯೂ ಒಳಹೊಕ್ಕು ಪ್ರಾಣಿಗಳಿಂದಲೇ ಪ್ರಾಣಿಗಳನ್ನು ಕೊಲ್ಲಿಸುವನು. ಈ ಕಾಲರೂಪಿಯಾದ ಭಗವಂತನೇ ಬ್ರಹ್ಮಾದಿದೇವತೆಗಳಿಗೂ ಅಧಿಪತಿಯು! ಕರ್ಮಗಳೆಲ್ಲವೂ ಈ ಕಾಲಸ್ವರೂಪವೇ! ಈ ಕಾಲಕ್ಕೆ ಎಲ್ಲರೂ ಸಮಾನರೇ ಹೊರತು, ಇಂತವರು ಮಿತ್ರರೆಂದೂ, ಇಂತವರು ಶತ್ರುಗಳೆಂದೂ ವ್ಯತ್ಯಾಸವಿಲ್ಲ. ಈ ಕಾಲರೂಪಿಯಾದ ಭಗವಂತನು ಯಾವಾಗಲೂ ಎಚ್ಚರಗೊಂಡಿದ್ದು, ಎಚ್ಚರತಪ್ಪಿದವರನ್ನು ಕೊಲ್ಲುತ್ತಿರುವನು. ಎಚ್ಚರತಪ್ಪಿದವರಲ್ಲಿ ಶೋಕ ಮೋಹಾದಿರೂಪದಿಂದ ಒಳಹೊಕ್ಕು ಬಾಧಿಸುವನು. ಸಮಸ್ತ ಭೂತಗಳೂ ಅವನ ನಿಯಮಕ್ಕೊಳಪಟ್ಟೇ ನಡೆಯುವುವು. ಇವನ ಭಯಕ್ಕಾಗಿಯೇ ಸೂರ್ಯನು ಅನವರತವೂ ಬೆಳಗುತ್ತ, ಲೋಕಕ್ಕೆ ಬೆಳಕನ್ನೂ ಉಷ್ಣವನ್ನೂ ಕೊಡುತ್ತಿರುವನು. ಇವನ ಭಯಕ್ಕಾಗಿಯೇ ನಕ್ಷತ್ರಸಮೂಹಗಳು ಮಿನುಗುತ್ತಿರುವುವು. ಇವನ ಭಯಕ್ಕಾಗಿಯೇ ಎಲ್ಲಾ ಬಗೆಯ ಸಸ್ಯಗಳೂ ಕಾಲಕಾಲಕ್ಕೆ ಪುಷ್ಪಫಲಗಳನ್ನು ಕೊಡುತ್ತಿರುವುವು. ನದಿಗಳು ಪ್ರವಹಿಸುವುದೂ, ಸಮುದ್ರವು ತನ್ನ ಮೇರೆಯನ್ನು ಮೀರದೆ ನಿಂತಿರುವುದೂ, ಅಗ್ನಿಯು ಜ್ವಲಿಸುವುದೂ, ಭೂಮಿಯು ಸಮಸ್ತ ಪರ್ವತಸಮೂಹಗಳೊಡನೆ ಕದಲದೆ ಸ್ಥಿರವಾಗಿರುವುದೂ, ಆಕಾಶವು ಸಮಸ್ತ ಜಂತುಗಳಿಗೂ ಅವಕಾಶವನ್ನು ಕೊಡುವುದೂ, ಮಹತ್ತತ್ವವು ಪೃಥಿವಿ ಮೊದಲಾದ ಆವರಣಗಳಿಂದ ಕೂಡಿದ ತನ್ನ ಸ್ವರೂಪವನ್ನು ಪ್ರಪಂಚರೂಪವಾಗಿ ವಿಸ್ತರಿಸಿರುವುದೂ ಈ ಕಾಲರೂಪಿಯಾದ ಭಗವಂತನ ಭಯದಿಂದಲ್ಲದೆ ಬೇರೆಯಲ್ಲ. ಅಮ್ಮಾ! ರಜಸ್ತಮೋಗುಣ ಪ್ರಧಾನರಾದ ಬ್ರಹ್ಮರುದ್ರಾದಿ ದೇವತೆಗಳೆಲ್ಲರೂ, ಆತನ ಆಜ್ಞಾನುವರ್ತಿಗಳಾಗಿಯೇ ಪ್ರತಿಯುಗದಲ್ಲಿಯೂ ತಮ್ಮ ತಮಗೆ ನಿರ್ಣೀತವಾದ ಸೃಷ್ಟಿಸಂಹಾರಾದಿ ಕಾರ್ಯಗಳನ್ನು ನಡೆಸುತ್ತಿರುವರು. ಮತ್ತು ಕಾಲಸ್ವರೂಪಿಯಾದ ಆ ಭಗವಂತನು, ತಾನು ಮಾತ್ರ ಜನನಮರಣಾದಿಗಳೊಂದೂ ಇಲ್ಲದೆ ವರ್ತಿಸುತ್ತಿರುವನು. ತಂದೆ, ತಾಯಿ, ಮೊದಲಾದ ಕಾರಣಗಳನ್ನು ಮುಂದಿಟ್ಟುಕೊಂಡು, ಮಕ್ಕಳು

ಮೊದಲಾದ ಕಾರ್ಯವಸ್ತುಗಳನ್ನು ಕಲ್ಪಿಸುವವನೂ ಈತನೇ! ಈ ಕಾಲರೂಪಿಯಾದ ಭಗವಂತನೇ ಯಮುನಿಗೂ ಮರಣವನ್ನು ಕಲ್ಪಿಸತಕ್ಕವನಾದುದರಿಂದ, ಮೃತ್ಯುವೆಂದು ಹೇಳಲ್ಪಡುವನು. ಅವನೇ ಆದಿಕರ್ತನು! ತಾನು ಮಾತ್ರ ಆದ್ಯಂತಗಳೊಂದೂ ಇಲ್ಲದವನು" ಎಂದನು. ಇದು ಇಪ್ಪತ್ತೊಂಭತ್ತನೆಯ ಅಧ್ಯಾಯವು.

---

{ ಕಪಿಲನು ದೇವಹೂತಿಗೆ ವೈರಾಗ್ಯಕಾರಣಗಳಾದ ಸಂಸಾರದುಃಖಗಳನ್ನು ವಿವರಿಸಿದುದು. }

ಅಮ್ಮಾ! ಹೀಗೆ ಕಾಲವೆಂಬುದು ಭಗವಂತನ ಸ್ವರೂಪವೆಂದೂ, ಯಾರಿಗೂ ದುರ್ಜಯವಾದುದೆಂದೂ ನಿನಗೆ ತಿಳಿಸಿದೆನಷ್ಟೇ? ಲೋಕವೆಲ್ಲವೂ ಈ ಕಾಲಕ್ಕೆ ವಶವಾಗಿಯೇ ನಡೆಯಬೇಕು! ಚಂಡಮಾರುತವು ಮೇಘಗಳನ್ನು ನಾನಾದಿಕ್ಕಿಗೆ ಚದರಿಸುವಂತೆ ಪ್ರಾಣಿಗಳೂ ಕೂಡ ಈ ಕಾಲದಿಂದ ಪ್ರೇರಿತರಾಗಿಯೇ ಕಾರ್ಯಗಳನ್ನು ನಡೆಸುತ್ತಿದ್ದರೂ, ಆ ಕಾಲದ ಶಕ್ತಿಯನ್ನು ತಾವು ತಿಳಿದುಕೊಳ್ಳಲಾರರು. ಜೀವಾತ್ಮನು ತನ್ನ ದೇಹ ಸುಖಕ್ಕಾಗಿ ಎಷ್ಟೋ ಪ್ರಯಾಸಪಟ್ಟು, ಯಾವ ಯಾವ ವಸ್ತುಗಳನ್ನು ಶೇಖರಿಸುತ್ತಿರುವನೋ, ಅವೆಲ್ಲವೂ ಕಾಲವಶದಿಂದಲೇ ಬಂದುದಲ್ಲದೆ ಬೇರೆಯಲ್ಲ. ಕಾಲಸ್ವರೂಪಿಯಾದ ಭಗವಂತನೇ ಅವನ್ನು ಕ್ಷಣಮಾತ್ರದಲ್ಲಿ ಚದರಿಸಿ ನಾಶಮಾಡಿಬಿಡುವನು. ತಾನು ಪ್ರಯತ್ನಪಟ್ಟು ಸಂಪಾದಿಸಿದ ವಸ್ತುಗಳೆಲ್ಲವೂ ನಾಶವಾದುದನ್ನು ನೋಡಿ ಜೀವನು ದುಃಖಿಸಿ ಸಂಕಟಪಡುತ್ತಿರುವನು. ಹೀಗೆ ಜೀವನು, ಇಲ್ಲದ ದುಃಖವನ್ನು ತಂದುಕೊಳ್ಳುವುದಕ್ಕೆ ಕಾರಣವೇನೆಂಬುದನ್ನು ಕೇಳು! ವಿವೇಕ ಬುದ್ಧಿಯಿಲ್ಲದ ಈ ಜೀವನು, ಹೆಂಡತಿಮಕ್ಕಳೆಂಬ ಅನೇಕ ಪರಿವಾರಗಳೊಡಗೂಡಿದ ಅಸ್ಥಿರವಾದ ಈ ದೇಹವನ್ನೂ, ಆ ದೇಹಕ್ಕೆ ಸಂಬಂಧಪಟ್ಟ ಮನೆಮಠಗಳನ್ನೂ, ಆಸ್ತಿಪಾಸ್ತಿಗಳನ್ನೂ ನಿಜವೆಂದು ನಂಬಿ, ಅವುಗಳಲ್ಲಿ ಮೋಹದಿಂದ ಮರುಳಾಗಿರುವನು.

ಅವನ ಅಜ್ಞಾನವೇ ಇದಕ್ಕೆ ಕಾರಣವಲ್ಲದೆ ಬೇರೆಯಲ್ಲ. ದೈವಸಂಕಲ್ಪ ದಿಂದ ತನಗೆ ತಗುಲುಕಟ್ಟಿದ ಈ ವಸ್ತುಗಳು, ದೈವಾಧೀನವಾಗಿಯೇ ಬಿಟ್ಟು ಹೋದುದನ್ನು ನೋಡಿ ಸಂಕಟಪಡುವನು. ಸಂಸಾರದ ವಿಚಿತ್ರಗಳನ್ನು ತಿಳಿಸಬೇಕೆಂದು ಕೇಳಿದೆಯಲ್ಲವೇ! ಅದನ್ನೂ ವಿವರಿಸುವೆನು ಕೇಳು. ಈ ಸಂಸಾರದಲ್ಲಿ ಜೀವನು ದೇವಜಾತಿ, ಮನುಷ್ಯಜಾತಿ ಮೊದಲಾದ ಯಾವ ಜನ್ಮಗಳನ್ನು ಹೊಂದಿದರೂ, ಅವೊಂದರಲ್ಲಿಯೂ ಸುಖವನ್ನನುಭವಿಸಲಾ ರನು. ಒಂದೊಂದು ಜನ್ಮದಲ್ಲಿಯೂ ಕಷ್ಟವನ್ನನುಭವಿಸುತ್ತಿದ್ದರೂ ಕೂಡ ಅವನಿಗೆ ಈ ಸಂಸಾರದಲ್ಲಿ ವಿರಕ್ತಿಯೂ ಹುಟ್ಟಲಾರದು. ಆಃ! ಅದಲ್ಲವೇ ಆಶ್ಚರ್ಯವು! ಜೀವನು ನರಕದಲ್ಲಿ ಬಿದ್ದಿರುವಾಗಲೂ ಕೂಡ, ಭಗವಂತನ ಮಾಯೆಯಿಂದ ಮರುಳಾಗಿ, ಆ ನರಕದಲ್ಲಿ ಸಿಕ್ಕುವ ಆಹಾರ ಮೊದಲಾ ದುವುಗಳಲ್ಲಿಯೇ ತೃಪ್ತಿಪಡುತ್ತ, ಆ ನರಕಾನುಭವಕ್ಕಾಗಿ ಏರ್ಪಟ್ಟ ಪಾಪಿಷ್ಠ ವಾದ ಆ ಶರೀರವನ್ನೂ ಬಿಡುವುದಕ್ಕೆ ಇಷ್ಟಪಡದೆ, ಕಷ್ಟದಲ್ಲಿಯೇ ನರಳು ವನು. "ತನ್ನ ಹೆಂಡಿರು, ತನ್ನ ಮಕ್ಕಳು, ತನ್ನ ಹಣ, ತನ್ನ ಮನೆ, ಭೂಮಿ, ತನ್ನ ಪಶುಗಳು, ತನ್ನ ಬಂಧುಗಳೆಂಬ ಅಭಿಮಾನದಿಂದ ಮರುಳು ಗೊಂಡು, ಅವುಗಳನ್ನು ನೋಡಿ ನೋಡಿ ತನ್ನ ಭಾಗ್ಯಕ್ಕೆ ಎಣೆಯೇ ಇಲ್ಲ ವೆಂದು ತನ್ನಲ್ಲಿ ತಾನೇ ಹಿಗ್ಗುವನು. ಈ ದೇಹವನ್ನು ಪೋಷಿಸುವುದರ ಲ್ಲಿಯೇ ಬಹಳ ಅಕ್ಕರೆಯುಳ್ಳವನಾಗಿ, ತಾನು ಅದರಿಂದ ಮುಂದೆ ಸಂಪಾದಿಸ ಬಹುದಾದ ಸುಖಕ್ಕಿಂತಲೂ ಹೆಚ್ಚಾಗಿ ಅದನ್ನು ಕಷ್ಟಪಡಿಸುವನು. ಈ ಮನಸ್ಸಿನ ಕಳವಳದಿಂದ ಯುಕ್ತಾಯುಕ್ತ ವಿವೇಚನೆಯೇ ಇಲ್ಲದೆ, ಯಾವಾ ಗಲೂ ಪಾಪಕಾರ್ಯದಲ್ಲಿಯೂ ಪ್ರವರ್ತಿಸುವನು. ನಶ್ವರಗಳಾದ ವಸ್ತು ಗಳನ್ನು ಸಂಪಾದಿಸುವುದಕ್ಕಾಗಿ ಎಷ್ಟೋ ದುಃಖಗಳನ್ನನುಭವಿಸುತ್ತ, ಅನೇಕ ಪಾಪಗಳಿಗೂ ಗುರಿಯಾಗುವನು.

ಯೌವನದಶೆಯಲ್ಲಿ ಮನುಷ್ಯನು ಗೃಹಸ್ಥಧರ್ಮವನ್ನಾಚರಿಸುವ ನೆವ ದಿಂದ ಎಷ್ಟೋ ಪಾಪಕಾರ್ಯಗಳಿಗೊಳಗಾಗುವನು. ಯಾವಾಗಲೂ ಪರ ಪುರುಷನ ಸೌಂದರ್ಯವನ್ನೇ ಮನಸ್ಸಿನಲ್ಲಿ ಭಾವಿಸುತ್ತಿರುವ ಅಸತಿಯರಾದ ಹೆಂಗಸರು, ಏಕಾಂತದಲ್ಲಿ ತನ್ನನ್ನು ವಶಪಡಿಸುಕೊಳ್ಳುವುದಕ್ಕಾಗಿ ಮಾಡುವ ನಲಿದಾಟಗಳನ್ನೂ, ಅವರ ಸಂಭೋಗಚಾತುರ್ಯವನ್ನೂ ನೋಡಿದಾಗ,

ಅವನಿಗೆ ಸರ್ವೇಂದ್ರಿಯಗಳೂ ಪರವಶವಾಗುವುವು. ಅವರ ಮಾಯೆಗೆ ಮರು ಳಾಗುವನು. ತನ್ನ ಮಕ್ಕಳ ಮುದ್ದು ಮಾತುಗಳನ್ನು ಕೇಳಿ ತನ್ನ ಮನಸ್ಸಿ ನಲ್ಲಿ ತಾನೇ ಹಿಗ್ಗುವನು. ಕೇವಲ ದುಃಖಪ್ರಚುರವಾದ ತನ್ನ ಮನೆ, ಮಂದಿ, ಮಕ್ಕಳಲ್ಲಿ ಎಷ್ಟೋ ಅಭಿಮಾನವಿಟ್ಟು, ಸ್ವಲ್ಪಮಾತ್ರವೂ ಎಚ್ಚರ ತಪ್ಪದೆ ಅವುಗಳನ್ನು ನೋಡುತ್ತ, ಆಗಾಗ ಅವುಗಳಿಗೆ ಬಂದೊದಗುವ ದುಃಖ ಗಳನ್ನು ತಾನೇ ನಿವಾರಿಸುವುದಾಗಿ ತಿಳಿದು, ಅದಕ್ಕಾಗಿ ತನ್ನಿಂದಾದಷ್ಟು ಕಷ್ಟಪಡುವನು. ಸ್ವಲ್ಪ ದುಃಖವು ನೀಗಿದಂತೆ ತೋರಿದಮಾತ್ರಕ್ಕೆ ಅದನ್ನೇ ಪರಮಸುಖವೆಂದು ಭಾವಿಸಿಕೊಳ್ಳುವನು. ಹಗಲುರಾತ್ರಿಯೂ ಎಷ್ಟೋ ಕ್ರೂರಕೃತ್ಯಗಳನ್ನು ನಡೆಸಿ, ಅನೇಕ ಪ್ರಾಣಿಗಳನ್ನು ಪೀಡಿಸಿ, ದ್ರವ್ಯವನ್ನು ಸಂಗ್ರಹಿಸಿ ತಂದು ತನ್ನ ಹೆಂಡತಿಮಕ್ಕಳನ್ನು ಪೋಷಿಸುವನು. ಆ ಹೆಂಡಿರು ಮಕ್ಕಳೂ, ಮತ್ತು ಇತರ ಪರಿವಾರಗಳೆಲ್ಲವೂ ತಿಂದು ಮಿಗಿಸಿದ ಅಲ್ಪಸ್ವಲ್ಪ ವನ್ನು ತಾನು ತಿನ್ನುವನು. ಅವರು ಅನುಭವಿಸಿ ಮಿಗಿಸಿದ ಭೋಗವಸ್ತು ಗಳನ್ನೇ ತಾನು ಅನುಭವಿಸುವನು, ಇಷ್ಟು ಕಷ್ಟಪಟ್ಟುದಕ್ಕೆ ಫಲವಾಗಿ ಕೊನೆಗೆ ನರಕದಲ್ಲಿ ಬೀಳುವನು. ಮನುಷ್ಯನು ತನ್ನ ಜೀವನಕ್ಕಾಗಿ ಯಾವುದೋ ಒಂದು ವೃತ್ತಿಯನ್ನು ಹಿಡಿದು, ದುರದೃಷ್ಟವಶದಿಂದ ಅದನ್ನು ನಿರ್ವಹಿಸುವುದಕ್ಕೆ ಶಕ್ತಿಯಿಲ್ಲದಿದ್ದಾಗ, ದುರಾಶೆಯಿಂದ ಪರರಸ್ವತ್ತನ್ನು ಸಂಗ್ರಹಿಸುವುದಕ್ಕೆ ಉದ್ಯೋಗಿಸುವನು. ಕುಟುಂಬವನ್ನು ಪೋಷಿಸುವುದಕ್ಕೆ ಶಕ್ತಿಯಿಲ್ಲದ ಭಾಗ್ಯಹೀನರು ಕೆಲವರು, ತಾವು ಮಾಡತಕ್ಕ ಪ್ರಯತ್ನಗಳೆ ಲ್ಲವೂ ವಿಫಲವಾದುದನ್ನು ನೋಡಿ, ಸಹಿಸಬಾರದ ಸಂಕಟದಲ್ಲಿ ತೊಳಲು ವರು. ಯಾವ ವಿಧವಾದ ಸತ್ಕಾರ್ಯವನ್ನೂ ನಡೆಸದೆ ಕೇವಲ ಕೃಪಣರಾಗಿ, ಇಲ್ಲದ ದುಃಖಕ್ಕೆ ಗುರಿಯಾಗಿ ಕಾಲವನ್ನು ಕಳೆಯುವರು. ಜನನೀ! ಇವೆಲ್ಲವೂ ಯೌವನಕಾರ್ಯಗಳು! ಇನ್ನು ವಾರ್ಧಕಾವಸ್ಥೆಯನ್ನು ತಿಳಿಸು ವೆನು ಕೇಳು! ಬಹುಕಾಲದಿಂದ ಕಷ್ಟಪಟ್ಟು ಕುಟುಂಬಭರಣವನ್ನು ಮಾಡುತ್ತ ಬಂದವನು, -ರೋಗದಿಂದಲೋ, ಮುಪ್ಪಿನಿಂದಲೋ, ತನ್ನ ಹೊಟ್ಟೆ ಹೊರೆಯುವುದಕ್ಕೂ ಶಕ್ತಿಯಿಲ್ಲದೆ ಮಲಗಿದಾಗ, ಅವನ ಅವಸ್ಥೆ ಯನ್ನು ಕೇಳಬೇಕೇ? ಮೊದಲು ತನ್ನನ್ನು ಸುತ್ತಿಮುತ್ತಿ ಕಿತ್ತುತಿಂದ ಹೆಂಡತಿ ಮಕ್ಕಳು ಮುಂತಾದ ಪರಿವಾರಗಳೆಲ್ಲವೂ, ಬಹುಕಾಲದಿಂದುತ್ತು

ಕಷ್ಟಪಟ್ಟು ಮುದಿಯಾದ ಎತ್ತನ್ನು ವ್ಯವಸಾಯಗಾರರು ಹೇಗೋಹಾಗೆ ಮೊದಲಿನಂತೆ ಆದರಿಸದೆ ಉಪೇಕ್ಷಿಸುವರು. ಮೊದಲು ತನ್ನಿಂದ ಪೋಷಿಸಲ್ಪ ಡುತ್ತಿದ್ದವರೇ ಈಗ ತನ್ನನ್ನು ಪೋಷಿಸಬೇಕಾದ ಸ್ಥಿತಿಗೆ ಬಂದು, ಅವರು ತನ್ನನ್ನು ಬಹಳವಾಗಿ ಉಪೇಕ್ಷೆಯಿಂದ ಕಾಣುತ್ತಿದ್ದಾಗಲೂ, ಸ್ವಲ್ಪವಾದರೂ ಮನಸ್ಸಿನಲ್ಲಿ ವಿರಕ್ತಿಯನ್ನು ತಂದುಕೊಳ್ಳಲಾರನು. ದೇಹವೆಲ್ಲವೂ ಮುಪ್ಪಿ ನಿಂದ ಸುಕ್ಕುಬಿದ್ದು, ಈಗಲೋ ನಾಳೆಯೋ ಸಾಯುವುದಕ್ಕೆ ಸಿದ್ಧನಾಗಿ, ಏಳುವುದಕ್ಕೂ ಶಕ್ತಿಯಿಲ್ಲದೆ ಬಿದ್ದಕಡೆಯಲ್ಲಿ ಬಿದ್ದಿರುವಾಗ ತನ್ನ ಹೆಂಡತಿ ಮಕ್ಕಳು, ತನ್ನನ್ನು ಬಾಯಿಗೆ ಬಂದಹಾಗೆ ಮೂದಲಿಸಿ ತಂದು ಹಾಕಿದ ಅಲ್ಪಸ್ವಲ್ಪ ಕೂಳನ್ನೇ ನಾಯಿಯ ಹಾಗೆ ತಿಂದು, ಆ ತಿಂದ ಪದಾರ್ಥವನ್ನು ಅರಗಿಸಿಕೊಳ್ಳುವುದಕ್ಕೂ ತಕ್ಕಷ್ಟು ಜೀರ್ಣಶಕ್ತಿಯಿಲ್ಲದೆ ರೋಗಬಾಧೆ ಯಿಂದ ನರಳುತ್ತ, ಕದಲಲಾರದೆ ಮಲಗಿರುವನು. ಈ ಸ್ಥಿತಿಯಲ್ಲಿಯೂ ತನ್ನ ದುರವಸ್ಥೆಗೆ ತಾನು ಪರಿತಪಿಸಲಾರನು. ಕೊನೆಕೊನೆಗೆ ಶ್ಲೇಷ್ಮವೃದ್ಧಿ ಯಿಂದ ಕಂಠನಾಳವು ತಡೆದು, ಧಾರಾಳವಾಗಿ ಉಸಿರಾಡುವುದಕ್ಕಾಗಲೀ, ಮಾತಾಡುವುದಕ್ಕಾಗಲೀ ಶಕ್ತಿಯಿಲ್ಲದೆ, ಘುರ್ಘುರಶಬ್ದದಿಂದ ಮೇಲುಸಿರನ್ನೆ ಳೆಯುತ್ತ ನರಳುವನು. ತಾನು ಮಂಚದಲ್ಲಿ ಮಲಗಿ ಈ ಅವಸ್ಥೆಯಲ್ಲಿರು ವಾಗ ಮಂಚದ ಸುತ್ತಲೂ ನಂಟರಿಷ್ಟರು ಗುಂಪುಗೂಡಿ ರೋದಿಸುತ್ತ, ಆಗಾಗ ತನ್ನ ಹೆಸರನ್ನು ಹಿಡಿದು ಕರೆಯುತ್ತಿದ್ದರೂ ಪ್ರತ್ಯುತ್ತರವನ್ನು ಕೊಡುವುದಕ್ಕೂ ಶಕ್ತಿಯಿಲ್ಲದೆ ಒಳಗೊಳಗೇ ಸಂಕಟದಿಂದ ತತ್ತಳಿಸುವನು. ಅಮ್ಮಾ! ಇವೆಲ್ಲವೂ ಪ್ರಾಣಿಗಳಿಗೆ ಯೌವನದಲ್ಲಿಯೂ, ಮುಪ್ಪಿನಲ್ಲಿಯೂ ಉಂಟಾಗತಕ್ಕ ಅನರ್ಥಗಳು! ಇವೆರಡೂ ಕೇವಲ ದುಃಖಪ್ರಚುರವೇ ಹೊರತು, ಈ ಸ್ಥಿತಿಯಲ್ಲಿ ಸ್ವಲ್ಪಮಾತ್ರವೂ ಸುಖವಿಲ್ಲ.

ಇನ್ನು ಮರಣಾವಸ್ಥೆಯನ್ನು ತಿಳಿಸುವೆನು ಕೇಳು! ಮನುಷ್ಯನು ತನ್ನ ಪ್ರಾಯಕಾಲದಿಂದ ಹಿಡಿದು, ಕುಟುಂಬ ಪೋಷಣೆಯಲ್ಲಿಯೇ ವ್ಯಾಪೃತನಾಗಿ, ಒಂದು ಸತ್ಕಾರ್ಯವನ್ನಾದರೂ ಆಚರಿಸುವುದಕ್ಕಿಲ್ಲದೆ, ಇಂದ್ರಿಯಚಾಪಲ್ಯ ವನ್ನೂ ಅಡಗಿಸಿಕೊಳ್ಳಲಾರದೆ, ಜೀವಾವಧಿ ಕಷ್ಟಪಟ್ಟು, ಕೊನೆಗೆ ತನ್ನ ಇಷ್ಟಬಂಧುಗಳೆಲ್ಲರೂ ಸುತ್ತಲೂ ಗುಂಪುಕೂಡಿ ಅಳುತ್ತಿರುವಾಗಲೇ, ಅವರ ಕಣ್ಣಮುಂದೆ ತನ್ನ ಶರೀರವನ್ನು ಬಿಟ್ಟುಹೋಗುವನು. ಒಡನೆಯೇ ಇವನು

ಜೀವಿತಕಾಲದಲ್ಲಿ ನಡೆಸಿದ ದುಷ್ಕರ್ಮಗಳನ್ನು ಲೆಕ್ಕವಿಟ್ಟುಕೊಂಡು ಕಾದಿದ್ದ ಯಮಭಟರು, ಇವನನ್ನು ಕಾಲಪಾಶದಿಂದ ಬಿಗಿಯುವುದಕ್ಕೆ ಬರುವರು. ಅವರನ್ನು ನೋಡಿದಮಾತ್ರಕ್ಕೇ ಇವನು ಭಯದಿಂದ ಮಲಮೂತ್ರಗಳನ್ನು ಸುರಿಸುತ್ತ ಗಡಗಡನೆ ನಡುಗುವನು. ರಾಜದೂತರು ಅಪರಾಧಿಯನ್ನೆಳೆದು ಕೊಂಡು ಹೋಗುವಂತೆ ಒಡನೆಯೇ ಆ ಯಮಭಟರು ಇವನನ್ನು ಯಾತನಾ ದೇಹದಲ್ಲಿ ಪ್ರವೇಶಗೊಳಿಸಿ, ಕೊರಳಿಗೆ ಪಾಶವನ್ನು ಬಿಗಿದು ಬಹುದೂರದ ವರೆಗೆ ಎಳೆದುಕೊಂಡು ಹೋಗುವರು. ನಡುನಡುವೆ ಆ ಯಮಭಟರ ತರ್ಜನಗಳನ್ನೂ, ಹಿಂಸೆಯನ್ನೂ ತಡೆಯಲಾರದೆ ಗಡಗಡನೆ ನಡುಗುವನು. ಆಗಾಗ ಇವನನ್ನು ಆ ದಾರಿಯಲ್ಲಿ ನಾಯಿಗಳು ಕಚ್ಚಿ ತಿನ್ನುವುವು. ಈ ಹಿಂಸೆಗಳನ್ನನುಭವಿಸುವಾಗ, ಹಿಂದೆ ತಾನು ಮಾಡಿದ ದುಷ್ಕೃತ್ಯಗಳೆಲ್ಲವೂ ಅವನ ನೆನಪಿಗೆ ಬರುವುವು. ಅದಕ್ಕಾಗಿ ಬಹಳ ಪಶ್ಚಾತ್ತಾಪಪಡುವನು. ನಿಲ್ಲುವುದಕ್ಕೆ ನೆರಳಾಗಲೀ, ಕುಡಿಯುವುದಕ್ಕೆ ನೀರಾಗಲೀ ಇಲ್ಲದ ಆ ದಾರಿ ಯಲ್ಲಿ ಹೋಗುವಾಗ, ಆ ಪಾಪಿಜೀವನು, ಹಸಿವುಬಾಯಾರಿಕೆಗಳಿಂದ ತಪಿ ಸುತ್ತ, ನಡುನಡುವೆ, ಕಾದ ಮರಳಿನಲ್ಲಿ ಅತಿ ಪ್ರಯಾಸದಿಂದ ನಡೆಯುತ್ತ, ಮೇಲೆ ಬಿಸಿಲಿನ ತಾಪದಿಂದಲೂ, ಕೆಳಗೆ ಕಾಡುಕಿಚ್ಚಿನ ಕಾವಿನಿಂದಲೂ, ಸುತ್ತಲೂ ಅತ್ಯುಷ್ಣವಾಗಿ ಬೀಸುವ ಬಿರುಗಾಳಿಯ ಬಡಿತದಿಂದಲೂ ಯಮ ಭಟರು ಆಗಾಗ ಬೆನ್ನಿನ ಮೇಲೆ ಹೊಡೆಯುತ್ತಿರುವ ಕೊರಡೆಯ ಪೆಟ್ಟು ಗಳಿಂದಲೂ ಚಿತ್ರಹಿಂಸೆಯನ್ನನುಭವಿಸುತ್ತ ಅತಿಪ್ರಯಾಸದಿಂದ ಮುಂದೆ ಸಾಗುವನು. ಕೇವಲ ಗಾಢಾಂಧಕಾರದಿಂದ ಮುಚ್ಚಲ್ಪಟ್ಟ ಈ ಕೆಟ್ಟದಾರಿ ಯಿಂದಲೇ ಪಾಪಿಜೀವಗಳನ್ನು ಯಮದೂತರು ಅತಿ ವೇಗದಿಂದೆಳೆಕೊಂಡು ಬಂದು, ಯಮನ ಸನ್ನಿಧಾನಕ್ಕೆ ತಂದು ಸೇರಿಸುವರು. ಯಮಲೋಕಕ್ಕೆ ಹೋಗಬೇಕಾದ ಈ ದಾರಿಯು ಇಲ್ಲಿಂದ ತೊಂಭತ್ತೊಂಬತ್ತು ಸಾವಿರ ಯೋಜನಗಳಿರುವುವು. ಈ ದಾರಿಯುದ್ದಕ್ಕೂ ಜೀವನು ಯಾತನೆಗಳನ್ನು ಸಹಿಸಲಾರದೆ ಆಗಾಗ ಮೂರ್ಛೆಬೀಳುವನು. ತಿರುಗಿ ಮೆಲ್ಲನೆ ಚೇತರಿಸಿ ಕೊಂಡು ಮುಂದೆ ಸಾಗುವನು. ಇಷ್ಟು ದೂರವಿದ್ದರೂ ಕೂಡ ಈ ಜೀವನು ಎರಡು ಮೂರು ಮುಹೂರ್ತಕಾಲದೊಳಗಾಗಿಯೇ ಸಾಗಿಸಲ್ಪಡುವನು. ಆ ಲೋಕವನ್ನು ಸೇರಿದಮೇಲೆಯೂ ಕೂಡ, ಇಂತಹ ಪಾಪಾತ್ಮರು ಅನುಭವಿಸ

ತಕ್ಕ ಬಾಧೆಗೆ ಮಿತಿಯೇ ಇಲ್ಲ. ಕೆಲವು ಯಮಭಟರು ಅವನ ಶರೀರವನ್ನು ಉರಿಯುವ ಕೊಳ್ಳಿಯಿಂದ ಚುಚ್ಚುವರು! ಕೆಲವರು ಅವನ ಶರೀರಮಾಂಸ ವನ್ನೇ ಕತ್ತಿಯಿಂದ ಕತ್ತರಿಸಿ ಅವನ ಬಾಯಿಗೆ ಕೊಟ್ಟು ತಿನ್ನಿಸುವರು! ನಾಯಿ, ನರಿ, ಹದ್ದು ಮುಂತಾದ ಕ್ರೂರಜಂತುಗಳಿಂದ ದೇಹದ ನರಗಳನ್ನು ಕೀಳಿಸುವರು! ಚೇಳು, ಹಾವು ಮುಂತಾದುವುಗಳಿಂದ ಕಚ್ಚಿಸುವರು! ದೇಹವನ್ನು ತುಂಡುತುಂಡಾಗಿ ಕತ್ತರಿಸುವರು! ಆನೆಯ ಕಾಲಿನಿಂದ ತುಳಿಸು ವರು! ಪರ್ವತಾಗ್ರದಿಂದ ಕೆಳಕ್ಕೆ ನೂಕುವರು! ಹಳ್ಳಕೊಳ್ಳಗಳಲ್ಲಿ ಹಾಕಿ ಮೆಟ್ಟುವರು! ಅಂಧತಾಮಿಸ್ರವೇ ಮೊದಲಾದ ನರಕಗಳಲ್ಲಿ ಕೆಡಹಿ ಬಹಳ ವಾಗಿ ಬಾಧಿಸುವರು! ಸ್ತ್ರೀಯರಾಗಲೀ, ಪುರುಷರಾಗಲೀ ಈ ಯಾತನಾ ದೇಹಗಳನ್ನು ಹೊಂದಿ ಬಹಳವಾಗಿ ಹಿಂಸೆಗಳನ್ನನುಭವಿಸಬೇಕು. ಓ! ಜನನೀ! "ಇಷ್ಟೊಂದು ಕ್ರೂರವಾದ ನರಕಗಳೂ ಉಂಟೆ?" ಎಂದು ನೀನು ಸಂದೇಹಿಸಬೇಕಾದುದಿಲ್ಲ. ಈ ಲೋಕದಲ್ಲಿಯೇ ಈ ಬಗೆಯ ನರಕಬಾಧೆ ಗಳನ್ನನುಭವಿಸುವರೆಷ್ಟೋಮಂದಿಯುಂಟು. ಇಲ್ಲಿಯೇ ಸ್ವರ್ಗಸುಖವಾಗಲೀ, ನರಕಬಾಧೆಯಾಗಲೀ ಉಂಟೆಂದು ಹೇಳುವರು. ಕೇವಲ ಕುಟುಂಬಪೋಷಣ ಕ್ಕಾಗಲೀ, ಉದರಭರಣಕ್ಕಾಗಲೀ ಕಷ್ಟಪಡುತ್ತಿದ್ದವರು, ಕೊನೆಗೆ ಆ ತಮ್ಮ ಕುಟುಂಬಗಳನ್ನೂ, ಆ ತಮ್ಮ ದೇಹಗಳನ್ನೂ ಬಿಟ್ಟು ನರಕದಲ್ಲಿ ಬಿದ್ದು, ತಾವು ಹಿಂದೆ ಪಟ್ಟಶ್ರಮಕ್ಕೆ ಬಡ್ಡಿಯಾಗಿ ಈ ಫಲವನ್ನನುಭವಿಸ ಬೇಕಲ್ಲದೆ ಬೇರೆಯಲ್ಲ. ಇತರ ಭೂತಗಳಿಗೆ ದ್ರೋಹಮಾಡಿ ಸಂಪಾದಿಸಿದ ಹಣದಿಂದ ತಾವು ಪೋಷಿಸಿದ ತಮ್ಮ ದೇಹವನ್ನೂ ಇಲ್ಲಿಯೇ ಬಿಟ್ಟು, ಅದರಿಂದ ತನಗೆ ತಗುಲುಕಟ್ಟಿದ ಪಾಪವನ್ನೇ ಪ್ರಯಾಣದ ಬುತ್ತಿಯನ್ನಾ ಗಿಟ್ಟುಕೊಂಡು ನರಕದ ದಾರಿಯಲ್ಲಿ ತಾನೊಬ್ಬನೇ ಸಾಗಬೇಕಾಗುವುದು. ಅವರವರು ಈ ಕುಟುಂಬಭರಣಕ್ಕಾಗಿ ಮಾಡಿದ ಪಾಪಗಳಿಗೆ ಅವರವರೇ ಫಲವನ್ನನುಭವಿಸಬೇಕಲ್ಲದೆ, ಅವನ ಪಾಪದ್ರವ್ಯದಿಂದ ಉಪಜೀವಿಸುತಿದ್ದ ಕುಟುಂಬದವರಾದರೂ ಆ ಪಾಪಫಲಕ್ಕೆ ಭಾಗಿಗಳಾಗಿ ಅವನನ್ನು ಹಿಂಬಾಲಿಸ ಲಾರರು. "ಎಲ್ಲವನ್ನೂ ಬಿಟ್ಟಂತೆ ಪಾಪವನ್ನೂ ಬಿಟ್ಟು ಹೋಗಬಾರದೇ" ಎಂದರೆ, ಇದು ಸಾಧ್ಯವಲ್ಲ! ಈ ಪಾಪಸಂಬಂಧವು ಈಶ್ವರಸಂಕಲ್ಪದಿಂದ ಅವನನ್ನು ಅನುಸರಿಸಿಯೇ ಬರುವುದು. ಕಳವು ಮಾಡಿದವನು, ಕದ್ದಪದಾರ್ಥ

ವನ್ನೂ ಕಂಕುಳಲ್ಲಿ ಬಚ್ಚಿಟ್ಟುಕೊಂಡು, ಆ ಪದಾರ್ಥವು ತನ್ನಲ್ಲಿರುವವರೆಗೂ ಭಯದಿಂದ ತತ್ತಳಿಸುತ್ತ, ಅದನ್ನು ಬಿಟ್ಟು ಹೋಗುವುದಕ್ಕೂ ಇಷ್ಟವಿಲ್ಲದೆ ಓಡುವಂತೆ, ದಾರಿಯುದ್ದಕ್ಕೂ ಆ ಪಾಪವನ್ನು ಕಟ್ಟಿಕೊಂಡೇ ದುಃಖಿತನಾಗಿ ಓಡುತ್ತಿರುವನು. ಲೋಕದಲ್ಲಿ ಕುಟುಂಬಪೋಷಣವೆಂಬುದು ಒಂದು ಧರ್ಮ ವಾಗಿದ್ದರೂ, ಕೇವಲ ಅಧರ್ಮದಿಂದಲೇ ಆ ಕಾರ್ಯವನ್ನು ನಡೆಸುವವನು, ನರಕದಲ್ಲಿ ಕೊನೆಯದಾದ ಅಂಧತಮಸ್ಸಿನಲ್ಲಿ ಬೀಳುವನು. ಯಮಲೋಕದ ನರಕಯಾತನೆಗಳೆಲ್ಲವನ್ನೂ ಕ್ರಮವಾಗಿ ಅನುಭವಿಸಿ, ಅದರಿಂದ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಹೊಂದಿದಮೇಲೆ, ಶುದ್ಧನಾದ ಜೀವನು, ಪ್ರಾಯಕ ವಾಗಿ ಈ ಭೂಲೋಕದಲ್ಲಿ ಮನುಷ್ಯಜನ್ಮವನ್ನು ಹೊಂದುವನು. ಇಲ್ಲಿಗೆ ಮೂವತ್ತನೆಯ ಅಧ್ಯಾಯವು.

---

## ಗರ್ಭಜನ್ಮಾದಿ ದುಃಖಗಳು

ಅಮ್ಮಾ! ಕೇಳು! ಇದುವರೆಗೆ ನಿನಗೆ ಯೌವನದಲ್ಲಿಯೂ, ವಾರ್ಧಕ ದಲ್ಲಿಯೂ, ಮರಣಾವಸ್ಥೆಯಲ್ಲಿಯೂ, ಮರಣಾನಂತರದಲ್ಲಿಯೂ, ಮನು ಷ್ಯನು ಅನುಭವಿಸಬೇಕಾದ ಕಷ್ಟಗಳನ್ನು ತಿಳಿಸಿದೆನು. ಇನ್ನು ಜೀವನು ತಾಯಿಯ ಗರ್ಭದಲ್ಲಿರುವಾಗ ಅವನಿಗುಂಟಾಗುವ ಕಷ್ಟಗಳನ್ನೂ ತಿಳಿಸು ವೆನು ಕೇಳು! ಜೀವನ ಜನ್ಮಾಂತರದಲ್ಲಿ ತಾನು ನಡೆಸಿದ ಕರ್ಮಗಳ ಫಲ ವನ್ನನುಭವಿಸಿದಮೇಲೆ ಈ ಲೋಕದಲ್ಲಿ ಬೇರೆಬೇರೆ ಶರೀರಗಳನ್ನು ಧರಿಸಿ ಹುಟ್ಟುವನು. ಆದರೆ ಕರ್ಮಫಲಗಳೆಲ್ಲವನ್ನೂ ಅನುಭವಿಸಿ ಮುಗಿಸಿದ ಮೇಲೆ ಶುದ್ಧನಾದ ಜೀವಾತ್ಮನು, ತಿರುಗಿ ಶರೀರದೊಡನೆ ಹುಟ್ಟುವನೆಂದು ಹಿಂದೆ ಹೇಳಿ, ತಿರುಗಿ ತನ್ನ ಕರ್ಮಾನುಸಾರವಾಗಿ ಈಶ್ವರಪ್ರೇರಣೆಯಿಂದ ಬೇರೆಬೇರೆ ಶರೀರವನ್ನು ಧರಿಸಿ ಹುಟ್ಟುವುದೆಂದರೆ ಹೇಗೆ? ಕರ್ಮಗಳೆಲ್ಲವೂ ಕಳೆದುಹೋದಮೇಲೆ ಶರೀರವನ್ನು ಧರಿಸಿ ಹುಟ್ಟುವನೆಂದೂ, ಕರ್ಮವಶ ದಿಂದಲೇ ಈ ದೇಹವನ್ನು ಹೊಂದುವನೆಂದೂ ಹೇಳುವುದು ಪರಸ್ಪರವಿರುದ್ಧ

ವಲ್ಲವೇ” ಎಂದು ನೀನು ಶಂಕಿಸಬಹುದು. ಅದು ಹಾಗಲ್ಲ! ನರಕವನ್ನನು ಭವಿಸಬೇಕಾದ ಕರ್ಮಗಳೆಲ್ಲವೂ ಕ್ಷೀಣಿಸಿದಮೇಲೆ, ಅದರಿಂದ ಪರಿಶುದ್ಧನಾಗಿ, ತಿರುಗಿ ಈ ಲೋಕದಲ್ಲಿ ಜನಿಸುವನೇ ಹೊರತು, ಅವನ ಕರ್ಮಗಳೆಲ್ಲವೂ ಇಷ್ಟರಲ್ಲಿಯೇ ಕ್ಷೀಣಿಸಿ ಹೋದುದಾಗಿ ತಿಳಿಯಕೂಡದು. ಈ ಪಾಪಕರ್ಮ ಗಳು ತೀರಿದಮೇಲೆಯೂ ಕೂಡ, ಶರೀರಸಂಬಂಧವನ್ನುಂಟುಮಾಡತಕ್ಕ ಕರ್ಮಶೇಷವು ತೀರಿಹೋಗಲಾರದು. ಇದು ದೇಹವನ್ನು ಹೊಂದಿಯೇ ಕ್ಷೀಣಿಸಬೇಕಲ್ಲದೆ, ನರಕಾನುಭವದಿಂದ ಕ್ಷೀಣಿಸಲಾರದು. ಆದುದರಿಂದ ಜೀವನು, ಭಗವಂತನ ಸಂಕಲ್ಪಾನುಸಾರವಾಗಿ, ತಮ್ಮ ತಮ್ಮ ಕರ್ಮ ಶೇಷಕ್ಕೆ ತಕ್ಕಂತೆ ಪ್ರಾಣಿಗಳ ಶರೀರದಲ್ಲಿ ಹುಟ್ಟಬೇಕಾಗುವುದು. ಇದಕ್ಕಾಗಿ ಜೀವನು ಮೊದಲು ಪುರುಷನ ವೀರ್ಯವನ್ನು ಸೇರಿ, ಅದರ ಮೂಲಕವಾಗಿ ಸ್ತ್ರೀಯರ ಗರ್ಭಕೋಶದಲ್ಲಿ ಪ್ರವೇಶಿಸಿ ಒಂದು ರಾತ್ರಿಯವರೆಗೆ ಅಲ್ಲಿನ ರಕ್ತದೊಡನೆ ಕಲೆತಿರುವನು. ರಕ್ತಮಿಶ್ರವಾದ ಈ ವೀರ್ಯವು ಐದು ರಾತ್ರಿಗಳ ವರೆಗೆ ಪಕ್ವವಾಗಿ ಗುಳ್ಳೆಯಂತೆ ಉಂಡೆಯಾಗುತ್ತ ಬರುವುದು. ಹತ್ತು ದಿನ ಗಳೊಳಗಾಗಿ ಅದು ಬೋರೆಯಹಣ್ಣಿನ ಆಕಾರಕ್ಕೆ ತಿರುಗಿ ಸ್ವಲ್ಪ ಕಠಿನ ವಾಗುವುದು. ಅದರಿಂದಾಚೆಗೆ ಕೆಲವು ದಿನಗಳೊಳಗಾಗಿ ಒಂದು ಮಾಂಸದ ಮುದ್ದೆಯ ಅಥವಾ ಒಂದು ಮೊಟ್ಟೆಯ ಆಕಾರಕ್ಕೆ ತಿರುಗುವುದು. ಅದರಿಂ ದಾಚೆಗೆ ಒಂದು ತಿಂಗಳೊಳಗಾಗಿ ಆ ಮಾಂಸಪಿಂಡದಲ್ಲಿ ತಲೆಯೂ, ಎರಡ ನೆಯ ತಿಂಗಳು ಮುಗಿಯುವುದರೊಳಗಾಗಿ, ಕೈ, ಕಾಲು, ಮುಂತಾದ ಅವ ಯವ ವಿಭಾಗಗಳೂ, ಮತ್ತು ಸ್ತ್ರೀಪುರುಷ ಚಿಹ್ನವನ್ನು ತೋರಿಸತಕ್ಕ ಲಿಂಗಗಳೂ, ಕಣ್ಣು, ಕಿವಿ, ಮೂಗು ಮುಂತಾದ ರಂಧ್ರಗಳೂ ಏರ್ಪ ಡುವುವು. ಐದನೆಯ ತಿಂಗಳಲ್ಲಿ ಹಸಿವು ಬಾಯಾರಿಕೆಗಳು ಕಾಣುವುವು. ಆರನೆಯ ತಿಂಗಳಲ್ಲಿ ಅದು ಗರ್ಭದ ಚೀಲದಲ್ಲಿ ಬಿಗಿಯಲ್ಪಟ್ಟು, ಸ್ತ್ರೀಯರ ಹೊಟ್ಟೆಯ ಬಲಭಾಗದ ಕಡೆಗೆ ತಿರುಗಿಕೊಂಡಿರುವುದು. ಅಮ್ಮಾ! ಆಗ ಆ ಜೀವನಿಗುಂಟಾಗುವ ಕಷ್ಟವನ್ನು ಕೇಳಬೇಕೆ? ತಾಯಿಯ ಗರ್ಭಕೋಶ ದಲ್ಲಿ ಹುದುಗಿರುವ ಈ ಜೀವನಿಗೆ, ಆ ತಾಯಿಯು ತೆಗೆದುಕೊಳ್ಳುವ ಅನ್ನ ಪಾನಾದಿಗಳಿಂದ, ರಕ್ತಮಾಂಸಗಳೇ ಮೊದಲಾದ ಧಾತುಗಳು ಬೆಳೆಯುತ್ತ ಬಂದಹಾಗೆಲ್ಲಾ, ಅನೇಕ ಕ್ರಿಮಿಗಳಿಗೆ ಉತ್ಪತ್ತಿಸ್ಥಾನವಾಗಿಯೂ, ಅಸಹ್ಯ

ವಾಗಿಯೂ ಇರುವ ಆ ಗರ್ಭದ ಗುಳಿಯಲ್ಲಿ ಬಿದ್ದು ನರಳುತ್ತಿರಬೇಕಲ್ಲದೆ, ಅಲ್ಲಿರತಕ್ಕ ಕ್ರಿಮಿಗಳೆಲ್ಲವೂ ಹಸಿವಿನ ಬಾಧೆಯಿಂದ ಆ ಜೀವನ ಅವಯುವ ಗಳನ್ನು ಕಚ್ಚಿ ತಿನ್ನುತ್ತಿರುವುವು. ಆಗ ಆ ಜೀವನ ದೇಹವು ಬಹಳ ಮೃದು ವಾಗಿರುವುದರಿಂದ ಈ ಕ್ರಿಮಿಗಳ ಕಡಿತದಿಂದುಂಟಾದ ವೇದನೆಗೆ ಸಿಕ್ಕಿ, ಅದನ್ನು ತಡೆಯಲಾರದೆ ಆಗಾಗ ಮೂರ್ಛೆಬಿದ್ದು ಚೇತರಿಸಿಕೊಳ್ಳುವನು. ಇದಲ್ಲದೆ ತಾಯಿಯು ತನ್ನ ಇಚ್ಛಾನುಸಾರವಾಗಿ ತಿನ್ನುವ ಉಪ್ಪು, ಹುಳಿ, ಕಾರ, ಮುಂತಾದ ಆಹಾರದೋಷದಿಂದಲೂ, ಬಿಸಿಬಿಸಿಯಾಗಿ ತೆಗೆದು ಕೊಳ್ಳುವ ಪದಾರ್ಥಗಳ ಉಷ್ಣದಿಂದಲೂ, ಅವನ ದೇಹವು ಬೆಂದು ಬೆಂಡಾ ಗುತ್ತಿರುವುದು. ಈ ಕ್ರೂರವಾದ ಆಹಾರಗಳಿಂದ ಅವನ ಅವಯುವಗಳೆಲ್ಲವೂ ಬಹಳ ವೇದನೆಗೊಳಗಾಗುವುವು. ಮತ್ತು ಗರ್ಭದ ಚೀಲದಿಂದಲೂ, ಉದರ ಹೊರಗೆ ತಾಯಿಯ ನರಗಳ ಕಟ್ಟಿನಿಂದಲೂ ಬಿಗಿಯಲ್ಪಟ್ಟು, ಗೂಡಿನಲ್ಲಿ ಅಡಗಿದ ಹಕ್ಕಿಯಂತೆ, ಮಲಮೂತ್ರಗಳಿಂದ ತುಂಬಿದ ಆ ಗುಳಿಯಲ್ಲಿ, ಅತ್ತಿತ್ತ ಕದಲಲಾರದೆ, ಬೆನ್ನನ್ನೂ, ಕಂಠವನ್ನೂ ಬಗ್ಗಿಸಿ, ತಲೆಯನ್ನು ಹೊಟ್ಟೆಯಲ್ಲಿ ಸೇರಿಸಿ, ತನ್ನ ದೇಹವೇ ತನಗೆ ಸ್ವಾಧೀನವಿಲ್ಲದಂತೆ ಉಡುಗಿ ಕೊಂಡಿರುವನು. ಆಗ ದೈವವಶದಿಂದ ಆತನಿಗೆ ತನ್ನ ಪೂರ್ವಕರ್ಮಗಳ ಸ್ಮರಣೆಯುಂಟಾಗುವುದು. ಹಿಂದಿನ ಜನ್ಮದಲ್ಲಿ ತಾನು ಮಾಡಿದ ಕರ್ಮ ಗಳೆಲ್ಲವನ್ನೂ ಒಂದೊಂದಾಗಿ ಸ್ಮರಿಸಿಕೊಂಡು, ಆಗಾಗ ಪಶ್ಚಾತ್ತಾಪದಿಂದ ನಿಟ್ಟುಸಿರು ಬಿಡುವನು. ಕ್ಷಣಮಾತ್ರವೂ ಮನಸ್ಸಿಗೆ ನೆಮ್ಮದಿಯಿಲ್ಲದೆ ತತ್ತಳಿಸುತ್ತಿರುವನು. ಅಮ್ಮಾ! ಇಂತಹ ಸ್ಥಿತಿಯಲ್ಲಿ ಜೀವನು ಯಾವ ಸುಖವನ್ನು ತಾನೇ ಹೊಂದುವನು? ಅದರಿಂದಾಚೆಗೆ ಏಳನೆಯ ತಿಂಗಳು ಹುಟ್ಟಿದುದು ಮೊದಲು, ಅವನಿಗೆ ಮುಂದೆ ತನಗೆ ಪ್ರಾಪ್ತವಾಗುವ ಸುಖ ದುಃಖಗಳ ಜ್ಞಾನವುಂಟಾಗುವುವು. ಆಗ ಪ್ರಸೂತಿವಾಯುವು ಅವನನ್ನು ಅತ್ತಿತ್ತ ಕದಲಿಸುವುದಕ್ಕಾರಂಭಿಸಿ ನಡುಗಿಸುತ್ತಿರುವುದು. ಆ ಹೊಟ್ಟೆಯಲ್ಲಿ ಹುಟ್ಟಿದ ಇತರ ಕ್ರಿಮಿಗಳ ಗುಂಪಿನಲ್ಲಿ ತಾನೂ ಒಬ್ಬನಂತೆ ಆ ವಾಯುವಿನ ಪ್ರೇರಣೆಯಿಂದ ಒಂದೇ ಸ್ಥಳದಲ್ಲಿರುವುದಕ್ಕೂ ಅವಕಾಶವಿಲ್ಲದೆ ನಾನಾಕಡೆ ಗಳಿಗೆ ಕದಲುತ್ತಿರುವನು. ಆಗ ಅವನಿಗೆ ಜನ್ಮಾಂತರದಲ್ಲಿ ತಾನು ಮಾಡಿದ ಪಾಪಗಳೆಲ್ಲವೂ ಸ್ಮರಣೆಗೆ ಬರುವುದರಿಂದ ತನ್ನಲ್ಲಿ ತಾನು "ಅಯ್ಯೋ! ನಾನು

ಬುದ್ಧಿಗೆಟ್ಟು ಎಂತಹ ಪಾಪಗಳನ್ನು ನಡಿಸಿಬಿಟ್ಟೆನು! ಇನ್ನುಮುಂದೆ ಎಂತಹ ಕ್ರೂರವಾದ ಕಷ್ಟಗಳನ್ನನುಭವಿಸಬೇಕಾಗಿರುವುದು!" ಎಂದು ಮುಂದಿನ ಶರೀರದಲ್ಲಿ ತನಗುಂಟಾಗುವ ಕಷ್ಟಗಳನ್ನೂ ಆಗಲೇ ತಿಳಿದು ಭಯಪಟ್ಟು ನನ್ನನ್ನು ಕುರಿತು, "ಓ ಜಗದ್ರಕ್ಷಕಾ! ನನ್ನ ಕಷ್ಟವನ್ನು ಬಿಡಿಸಿ, ನನ್ನನ್ನುದ್ಧರಿಸಬಾರದೇ" ಎಂದು ದೈನ್ಯದಿಂದ ಮೊರೆಯಿಡುವನು. ಆ ಗರ್ಭದಲ್ಲಿರುವ ಏಳು ಧಾತುಗಳಿಂದ ಬಿಗಿಯಲ್ಪಟ್ಟಿರುವಾಗಲೂ ಅವನು, ಪ್ರಯತ್ನಪೂರ್ವಕವಾಗಿ ಕೈಗಳನ್ನು ಜೋಡಿಸಿ ಅಂಜಲಿಹಸ್ತನಾಗಿ, ಯಾವನ ಸಂಕಲ್ಪದಿಂದ ತನಗೆ ಆ ವಿಧವಾದ ದುಃಸ್ಥಿತಿಯುಂಟಾಯಿತೋ ಆ ಭಗವಂತ ನನ್ನು ಹೀಗೆಂದು ಗದ್ಗದ ಸ್ವರದಿಂದ ಸ್ತೋತ್ರಮಾಡುವನು, "ಓ ಪರಮ ಪುರುಷಾ! ನೀನು ಸಮಸ್ತ ಜಗತ್ತನ್ನೂ ರಕ್ಷಿಸತಕ್ಕವನು. ಲೋಕರಕ್ಷಣ ಕ್ಕಾಗಿಯೇ ಅನೇಕ ರೂಪಗಳನ್ನು ಧರಿಸತಕ್ಕವನು. ನನ್ನ ದುಷ್ಕರ್ಮಗಳಿಗೆ ತಕ್ಕಂತೆ ನನಗೆ ಈ ದುರ್ಗತಿಯನ್ನು ಕಲ್ಪಿಸಿದವನೂ ನೀನೇ! ಆದುದರಿಂದ ಸಮಸ್ತಭಯನಿವಾರಕನಾದ ನಿನ್ನ ಪಾದಗಳನ್ನೇ ನಾನು ಮೊರೆಹೊಕ್ಕಿರು ವೆನು. ದೇವಾ! ಪೂರ್ವಜನ್ಮದಲ್ಲಿ ನಾನು ಸಂಸಾರಭಯನಿವಾರಕನಾದ ನಿನ್ನ ಪಾದಗಳನ್ನಾಶ್ರಯಿಸದೆ ಹೋದುದಕ್ಕಾಗಿಯೇ ನನಗೆ ಇಂತಹ ಗತಿಯು ಪ್ರಾಪ್ತವಾಯಿತು. ಹೇ ನಾಥಾ! ಜೀವನಂತೆ ನೀನೂ ಕೂಡ ಆಗಾಗ ಈ ಪ್ರಕೃತಿಸಂಬಂಧವನ್ನು ಹೊಂದಿ, ಬೇರೆಬೇರೆ ಶರೀರಗಳನ್ನು ಧರಿಸತಕ್ಕವನಾಗಿದ್ದರೂ, ಆ ಮಾಯೆಯ ಗುಣಗಳು ನಿನ್ನನ್ನು ಮುಟ್ಟ ಲಾರವು. ಮುಪ್ಪು, ಸಾವು, ಮುಂತಾದ ವಿಕಾರಗಳೇನೂ ನಿನಗೆ ಸಂಭವಿಸ ಲಾರವು. ನಮ್ಮಂತಹ ಜೀವಾತ್ಮರ ಜ್ಞಾನದಂತೆ ನಿನ್ನ ಜ್ಞಾನವು ಸಂಕು ಚಿತವಾಗತಕ್ಕುದಲ್ಲ. ನೀನು ಕೇವಲ ಜ್ಞಾನಸ್ವರೂಪನು. ಇಂತಹ ನಿನ್ನ ಪಾದಾರವಿಂದಗಳನ್ನು ನಮಸ್ಕರಿಸುವೆನು. ನನ್ನಂತೆಯೇ ನೀನೂ ಪಂಚ ಭೂತಗಳಿಂದ ಕಲ್ಪಿತವಾದ ಈ ದೇಹಾದಿಗಳಿಂದ ಆಗಾಗ ಮರೆಸಲ್ಪಡತಕ್ಕವ ನಾಗಿದ್ದರೂ, ಅದರ ದೋಷವು ಸ್ವಲ್ಪಮಾತ್ರವೂ ನಿನ್ನನ್ನು ಅಂಟಲಾರದು. ನೀನು ಸಮಸ್ತವನ್ನೂ ನಿಯಮಿಸತಕ್ಕವನು. ನಿನ್ನ ಸ್ವರೂಪವು ಯಾವಾ ಗಲೂ ಪುಣ್ಯಪಾಪಕರ್ಮಗಳಿಂದ ಸಂಕೋಚವನ್ನು ಹೊಂದಲಾರದು. ನೀನು ಸರ್ವಜ್ಞನು. ಪ್ರಕೃತಿಪುರುಷರಿಗಿಂತಲೂ ಬೇರೆಯಾಗಿ, ವಿಲಕ್ಷಣ ಮಹಿಮೆ

ಯಿಂದೊಪ್ಪುತ್ತಿರುವವನು. ಇಂತಹ ಪರಮಪುರುಷನಾದ ನಿನ್ನ ಪಾದಾರ ವಿಂದವನ್ನು ಮರೆಹೊಕ್ಕಿರುವೆನು. ಹೇ ದೇವಾ! ನನ್ನಂತಹ ಜೀವನು ನಿನ್ನ ಮಾಯೆಯಿಂದಲೇ ಮೋಹಿತನಾಗಿ, ಸತ್ವಾದಿಗುಣಗಳ ಸಂಬಂಧ ದಿಂದ ಸಂಸಾರದಲ್ಲಿ ಕಟ್ಟುಬೀಳುವುದಕ್ಕೂ, ನಿನ್ನ ಸಂಕಲ್ಪವೇ ಕಾರಣವಲ್ಲದೆ ಬೇರೆಯಲ್ಲ. ಕಟ್ಟಿದವನೇ ಬಿಡಿಸಬೇಕೆಂಬ ನ್ಯಾಯದಂತೆ, ನನ್ನನ್ನು ಈ ಸಂಸಾರದಲ್ಲಿ ಕಟ್ಟುಹಾಕಿದ ನೀನೇ ನನ್ನನ್ನು ಬಿಡಿಸಬೇಕಲ್ಲದೆ, ಈ ಕಾರ್ಯಕ್ಕೆ ಬೇರೆ ಸಮರ್ಥರಿಲ್ಲ. ಈ ಸಂಸಾರಬಂಧದಿಂದಲೇ ನನ್ನಂತಹ ಜೀವಾತ್ಮನಿಗೆ ಜ್ಞಾನಸಂಕೋಚವುಂಟಾಗಿ, ತನ್ನ ನಿಜಸ್ಥಿತಿಯನ್ನು ತಾನು ತಿಳಿಯಲಾರದೆ ತಿರುಗಿ ತಿರುಗಿ ಜನನ ಮರಣಗಳನ್ನು ಹೊಂದುತ್ತಿರುವನು. ಅಂತವರಿಗೆ ಸ್ವರೂಪಜ್ಞಾನವುಂಟಾಗಬೇಕಾದರೂ, ನಿನ್ನ ಅನುಗ್ರಹದಿಂದ ಲ್ಲದೆ ಬೇರೆಯಲ್ಲ. ಆದುದರಿಂದ ನಿನ್ನ ಮಾಯೆಯಿಂದ ಮುಚ್ಚಲ್ಪಟ್ಟ ಜೀವನು, ನಿನ್ನ ಅನುಗ್ರಹದಿಂದಲೇ ಬಿಡುಗಡೆಯನ್ನು ಹೊಂದಬೇಕಾಗಿರು ವುದು. ಭೂತಭವಿಷ್ಯದ್ವರ್ತಮಾನಗಳೆಂಬ ಮೂರು ಕಾಲಗಳಲ್ಲಿಯೂ ಸಂಕುಚಿತವಾಗದೆ, ಜೀವಾತ್ಮಪರಮಾತ್ಮರ ನಿಜಸ್ಥಿತಿಯನ್ನು ತಿಳಿಯತಕ್ಕ ಜ್ಞಾನವು, ನಿನ್ನ ಅನುಗ್ರಹವಿಲ್ಲದೆ ಯಾವ ಜೀವನಿಗೂ ಉಂಟಾಗಲಾರದು. ಸರ್ವೇಶ್ವರನಾದ ನೀನೊಬ್ಬನೇ ಈ ತ್ರಿಕಾಲದಲ್ಲಿಯೂ ತಡೆಯಿಲ್ಲದೆ ಜ್ಞಾನ ವುಳ್ಳವನು! ಬ್ರಹ್ಮಾದಿ ದೇವತೆಗಳಿಗೂ ನೀನೇ ಅಧಿಪತಿಯಾದುದರಿಂದ, ಅವರಿಗೂ ನಿನ್ನ ಅನುಗ್ರಹದಿಂದಲೇ ಈ ಜ್ಞಾನವುಂಟಾಗಬೇಕು. ಬ್ರಹ್ಮ ದೇವನು ಮೊದಲಾಗಿ ನಾವೆಲ್ಲರೂ ಕರ್ಮವೆಂಬ ಅವಿದ್ಯೆಯಿಂದ ಮರೆಸಿ ಹೋದ ಜ್ಞಾನವುಳ್ಳವರು. ಹೀಗೆ ನಿನ್ನನ್ನು ಹೊರತು ಇತರರೆಲ್ಲರೂ ಕರ್ಮಕ್ಕೆ ಕಟ್ಟುಬಿದ್ದಿರುವಾಗ, ನೀನಲ್ಲದೆ ಅದನ್ನು ಬಿಡಿಸತಕ್ಕವರಾರು? ತಾನೇ ಸೆರೆಯಲ್ಲಿ ಸಿಕ್ಕಿಬಿದ್ದ ಮನುಷ್ಯನು ಮತ್ತೊಬ್ಬನನ್ನು ಹೇಗೆ ತಾನೇ ಸೆರೆಯಿಂದ ಬಿಡಿಸಬಲ್ಲನು? ಸ್ಥಾವರಜಂಗಮಾತ್ಮಕವಾದ ಶರೀರಗಳಲ್ಲಿ ಪ್ರವೇಶಿಸಿರುವ ಸಮಸ್ತಜೀವಗಳಲ್ಲಿಯೂ ನೀನು ಅಂತರಾತ್ಮನಾಗಿ, ಅವರನ್ನು ನಿಯಮಿಸತಕ್ಕವನು. ಆದುದರಿಂದ ಆ ಜೀವಾತ್ಮಗಳು ನಿನ್ನ ಅಂಶಗಳೇ ಅಲ್ಲದೆ ಬೇರೆಯಲ್ಲ. ಇಂತಹ ನಿನ್ನನ್ನು ಮರೆಹೋಗುವೆನು. ಜೀವಾತ್ಮ ಗಳಲ್ಲಿ ಅಂತರಾತ್ಮನಾಗಿದ್ದರೂ, ತನಗೆ ಸಹಜವಾದ ಸರ್ವಜ್ಞತ್ವಾದಿ ಗುಣ

ಗಳ ಹೆಚ್ಚು ಕಡಿಮೆಯನ್ನು ಹೊಂದದೆ, ನಮ್ಮಂತವರಿಗೆ ಜ್ಞಾನಪ್ರದಾನವನ್ನು ಮಾಡಿ, ನಮ್ಮ ಸಂಸಾರದ ಕಟ್ಟನ್ನು ಬಿಡಿಸಿ ಮಹೋಪಕಾರವನ್ನು ಮಾಡತಕ್ಕ ಸರ್ವೇಶ್ವರನಾದ ನಿನ್ನನ್ನು ಬಿಟ್ಟರೆ ನಮಗೆ ಬೇರೆ ಗತಿಯೇನು? ಓ ಭಗವಂತಾ! ಬೇರೊಬ್ಬರ (ತಾಯಿಯ) ದೇಹದಲ್ಲಿರುವ ಗರ್ಭಕೋಶವೆಂಬ ಹಳ್ಳದಲ್ಲಿ ಬಿದ್ದು, ಅಲ್ಲಿನ ಕ್ರಿಮಿಗಳಿಂದ ಕಚ್ಚಲ್ಪಡುತ್ತ, ಅಲ್ಲಿನ ರಕ್ತದಲ್ಲಿಯೂ, ಮಲಮೂತ್ರಗಳಲ್ಲಿಯೂ ಮುಳುಗಿ, ಅಲ್ಲಿನ ಜಠರಾಗ್ನಿಯ ಕಾವಿಗೆ ಸಿಕ್ಕಿ ಬೆಂದು, ಮನಸ್ಸಿನಲ್ಲಿ ನೆಮ್ಮದಿಯಿಲ್ಲದೆ ತತ್ತಳಿಸುತ್ತ, ಈ ಸ್ಥಳದಿಂದ ಹೇಗಾದರೂ ತಪ್ಪಿಸಿಕೊಂಡು ಹೊರಗೆ ಬರಬೇಕೆಂದು ಪ್ರಯತ್ನಿಸಿ, ಕಾಲಾವಧಿಯನ್ನು ನಿರೀಕ್ಷಿಸುತ್ತ ದಿನಗಳನ್ನು ಲೆಕ್ಕವಿಡುತ್ತಿರುವ ನನ್ನನ್ನು ನೀನು ಯಾವಾಗ ಈ ಕೂಪದಿಂದ ಉದ್ಧರಿಸಿ ರಕ್ಷಿಸುವೆಯೋ ಕಾಣೆನು! ದೇವಾ! ಸರ್ವನಿಯಾಮಕನಾದ ನಿನ್ನ ಸಂಕಲ್ಪದಿಂದಲೇ ನಾನು ಈ ಗುಳಿಯಲ್ಲಿ ಬಿದ್ದಿರುವೆನು. ದಯಾಸಾಗರನಾದ ನಿನ್ನ ಅನುಗ್ರಹದಿಂದಲ್ಲವೇ ನನಗೆ ಈ ಹತ್ತುತಿಂಗಳ ಕಾಲದಲ್ಲಿಯೇ ಈ ವಿಧವಾದ ಜ್ಞಾನಪ್ರದಾನವನ್ನು ಮಾಡಿದ ನಿನ್ನನ್ನು ನಾನು ಯಾವ ವಿಧವಾದ ಪ್ರತ್ಯುಪಕಾರದಿಂದ ಸಂತೋಷಪಡಿಸಲಿ? ದೀನನಾಥನಾದ ನೀನು ನನಗೆ ಮಾಡಿರುವ ಉಪಕಾರಕ್ಕಾಗಿ ನಿನ್ನ ಮನಸ್ಸಿನಲ್ಲಿ ನೀನೇ ಸಂತೋಷಿಸಬೇಕಲ್ಲದೆ, ನಾನು ಯಾವ ವಿಧದಿಂದಲೂ ನಿನ್ನನ್ನು ಸಂತೋಷಪಡಿಸಲಾರೆನು. ಇದೋ! ಈ ಅಂಜಲಿಯೊಂದು ಹೊರತು, ಬೇರೆ ಯಾವ ಉಪಕಾರವನ್ನೂ ನಾನು ಮಾಡಲಾರೆನು. ನಾನು ಪ್ರಯತ್ನಪೂರ್ವಕವಾಗಿ ಮಾಡಿದ ಈ ಅಂಜಲಿಯನ್ನೇ ನೀನು ದೊಡ್ಡ ಪ್ರತ್ಯುಪಕಾರವನ್ನಾಗಿ ಭಾವಿಸಿ, ನನ್ನನ್ನು ಈ ಸೆರೆಯಿಂದ ಬಿಡಿಸಬೇಕು. ದೇವಾ! ಪರಮಾತ್ಮನಿಗೆ ಸ್ಥಾನವಾಗಿ, ಬ್ರಹ್ಮಪುರವೆಂದು ಕರೆಯಲ್ಪಡುವುದಾಗಿಯೂ, ಅವನವನ ಕರ್ಮಾನುಸಾರವಾಗಿ ಏರ್ಪಟ್ಟುದಾಗಿಯೂ ಇರುವ ದೇಹದಲ್ಲಿ, ಆ ಪ್ರಕೃತಿಗಿಂತಲೂ ಬೇರ್ಪಟ್ಟವನಾಗಿ, ಏಳು ಬಗೆಯ ತ್ವಕ್ಕುಗಳಿಂದ ಮುಚ್ಚಲ್ಪಟ್ಟಿದ್ದಾಗಲೂ, ಶಮದಮಾದಿ ಗುಣಗಳುಳ್ಳ ಜೀವನು (ಯೋಗಿಯು) ಈಶ್ವರದತ್ತವಾದ ಯಾವ ಬುದ್ಧಿಯಿಂದ ಆ ಪರಮಪುರುಷನನ್ನು ಸಾಕ್ಷಾತ್ಕರಿಸುವನೋ, ಅದೇ ವಿಧವಾದ ಬುದ್ಧಿಯಿಂದ ನಾನೂ ಈಗ, ಹೊರಗೂ ಒಳಗೂ ಪ್ರಕಾಶಿಸುವ ನಿನ್ನನ್ನು

ಸಾಕ್ಷಾತ್ಕರಿಸುತ್ತಿರುವೆನು. ಹೇ ದೇವಾ! ಈ ಗರ್ಭನರಕವು ನನಗೆ ವಿಶೇಷ ಬಾಧೆಯನ್ನುಂಟುಮಾಡುತ್ತಿದ್ದರೂ, ಈಗ ದಿವ್ಯಜ್ಞಾನ ಹೇತುವಾದ ಈ ಸ್ಥಳವನ್ನು ಬಿಟ್ಟು ಹೊರಗೆ ಬರುವುದಕ್ಕೆ ನನಗೆ ಇಷ್ಟವಿಲ್ಲ. ನಾನು ಈ ರೂಪದಿಂದ ಹೊರಕ್ಕೆ ಬಂದೊಡನೆಯೇ, ನಿನ್ನ ಮಾಯೆಯು ಬಂದು ನನ್ನನ್ನು ಆವರಿಸಿ, ಈ ದಿವ್ಯಜ್ಞಾನವೆಲ್ಲವನ್ನೂ ಕ್ಷಣಮಾತ್ರದಲ್ಲಿ ನೀಗಿಸಿ ಬಿಡುವುದು. ಅದರಿಂದ ನನಗೆ ಈ ದೇಹಾದಿಗಳಲ್ಲಿ ಅಭಿಮಾನವು ಹೆಚ್ಚುತ್ತ ಬಂದು, ತಿರುಗಿ ತಿರುಗಿ ಹುಟ್ಟಿ ಸಾಯುತ್ತ ಸಂಸಾರಚಕ್ರದಲ್ಲಿ ತಿರುಗಬೇಕಾಗುವುದು. ಆದುದರಿಂದ ಈಗ ನೀನು ನನ್ನನ್ನು ಈ ಗರ್ಭಕುಹರದಿಂದ ತಪ್ಪಿಸಿದರೂ, ಅದಕ್ಕಿಂತಲೂ ಅಧಿಕ ಭಯಂಕರವಾದ ಸಂಸಾರಕೂಪದಲ್ಲಿ ಬೀಳಿಸದೆ, ನನಗೆ ಇದೇ ವಿಧವಾದ ಜ್ಞಾನವು ಮುಂದೆಯೂ ಇರುವಂತೆ ಅನುಗ್ರಹಿಸಬೇಕು. ಅದರಿಂದ ನಿನ್ನ ಮಾಯೆಯನ್ನತಿಕ್ರಮಿಸಿ ಶೀಘ್ರದಲ್ಲಿಯೇ ನಾನು ನಿನ್ನ ರೂಪವನ್ನು ನೋಡಬಹುದು. ಈ ಗರ್ಭಕೂಪದಿಂದ ನನ್ನನ್ನು ತಪ್ಪಿಸುವಂತೆ, ಸಂಸಾರಕೂಪದಿಂದಲೂ ನನ್ನನ್ನು ತಪ್ಪಿಸಿ ರಕ್ಷಿಸಬೇಕು. ಮುಂದೆ ಎಂದೆಂದಿಗೂ ನನಗೆ ಈ ಗರ್ಭವಾಸ ದುಃಖವು ಬಾರದಂತೆಯೂ ಅನುಗ್ರಹಿಸಬೇಕು. ನಿನ್ನ ಪಾದಾಶ್ರಿತರಿಗೆ ಯಾವ ಕಷ್ಟವೂ ಇಲ್ಲದಂತೆ ಕಾಪಾಡಬೇಕಾದುದು ನಿನ್ನ ಭಾರವಲ್ಲವೇ" ಎಂದು ಗರ್ಭಗೋಳದಲ್ಲಿ ಅಪಾರವಾದ ದುಃಖಕ್ಕೊಳಗಾದ ಜೀವನು, ಭಗವಂತನನ್ನು ಪ್ರಾರ್ಥಿಸುತ್ತ ಹತ್ತು ತಿಂಗಳವರೆಗೆ ಅಲ್ಲಿಯೇ ಅಡಗಿದ್ದಮೇಲೆ, ಒಳಗಿನಿಂದ ಪ್ರಸೂತಿವಾಯುವು ಆ ಜೀವನನ್ನು ಹೊರಕ್ಕೆ ತಳ್ಳುವುದಕ್ಕಾಗಿ ಪ್ರಯತ್ನಿಸುವುದು. ಈ ವಾಯುವಿನ ಒತ್ತುವಿಕೆಯಿಂದ ಜೀವನು ತನ್ನ ಸ್ಥಾನದಿಂದ ಕದಲಿ, ತಲೆಯನ್ನು ಕೆಳಮುಖವಾಗಿ ಮಾಡಿ, ಎಷ್ಟೋ ಕಷ್ಟದಿಂದ ತಾಯಿಯ ಗರ್ಭವನ್ನು ಬಿಟ್ಟು ಹೊರಕ್ಕೆ ಬರುವನು. ಅವನು ಹೊರಕ್ಕೆ ತಲೆಯಿಕ್ಕಿದೊಡನೆಯೇ ಅವನಿಗಿದ್ದ ಹಿಂದುಮುಂದಿನ ಜ್ಞಾನವೆಲ್ಲವೂ ನಷ್ಟವಾಗುವುದು. ರಕ್ತದಿಂದ ತೊಯ್ದ ಮೈಯುಳ್ಳವನಾಗಿ, ನೆಲಕ್ಕೆ ಬಿದ್ದು ಹುಳುವಿನಂತೆ ಒದ್ದಾಡುವನು. ಒಡನೆಯೇ ಅಜ್ಞಾನವು ಬಂದು ಕವಿಯುವುದರಿಂದ, ರೋದಿಸುವುದಕ್ಕೆ ತೊಡಗುವನು. ಆವನ ದುಃಖಕ್ಕೆ ಕಾರಣವೇನೆಂಬುದನ್ನು ಯಾರೂ ತಿಳಿಯಲಾರರು. ಇವನ ಹೀಗೆ

ಬಾಯಿಂದ ಮಾತನಾಡಲಾರದೆ ರೋದನಮಾಡುತ್ತಿರುವಾಗ, ಆ ಶಿಶುವಿನ ಅಭಿಪ್ರಾಯವನ್ನು ತಿಳಿಯಲಾರದೆ, ತಾಯಿ ಮುಂತಾದವರು, ತಮಗೆ ತೋರಿದಂತೆ ಚಿಕಿತ್ಸೆಯನ್ನಾರಂಭಿಸುವರು. ಹಸಿವಿನ ಬಾಧೆಯಿಂದ ಅಳುವಾಗ ಅಜೀರ್ಣ ಸಂಬಂಧವಾದ ಹೊಟ್ಟೆಯ ನೋವಿಗಾಗಿ ಅಳುವನೆಂದು ತಿಳಿದು, ಬೇವಿನ ರಸ ಮುಂತಾದ ಔಷಧಿಗಳನ್ನು ಸುರಿಯುವರು. ಹೊಟ್ಟೆಯ ನೋವಿಗಾಗಿ ಅಳುವಾಗ ಹಸಿವಿಗಾಗಿ ಅಳುವನೆಂದು ತಿಳಿದು, ಮೇಲೆ ಮೇಲೆ ಸ್ತನ್ಯವನ್ನು ಕುಡಿಸುತ್ತಿರುವರು. ಅದರಿಂದ ಆ ಶಿಶುವಿನ ದೇಹಕ್ಕೆ ಮತ್ತಷ್ಟು ಬಾಧೆಯುಂಟಾಗುವುದು. ಆಗಾಗ ಆ ಶಿಶುವನ್ನು ತಂದು ತಗಣೆಗಳಿಂದಲೂ, ಸೊಳ್ಳೆಗಳಿಂದಲೂ ತುಂಬಿ ಕಲ್ಮಷವಾದ ಹಾಸಿಗೆಯಲ್ಲಿ ಮಲಗಿಸುವರು. ಇವುಗಳ ಬಾಧೆಯಿಂದ ಬಹಳವಾಗಿ ಸಂಕಟಪಡುತ್ತ, ಮೈಯನ್ನು ತುರಿಸಿಕೊಳ್ಳುವುದಕ್ಕಾಗಲೀ, ಏಳುವುದಕ್ಕಾಗಲೀ, ಕುಳ್ಳಿರುವುದಕ್ಕಾಗಲೀ, ನಡೆಯುವುದಕ್ಕಾಗಲೀ, ಸಾಧ್ಯವಿಲ್ಲದೆ ಸುಮ್ಮನೆ ಅಳುತ್ತಿರುವನು. ಹೀಗೆ ಅನೇಕ ಬಾಧೆಗಳನ್ನನುಭವಿಸುತ್ತ ಎಷ್ಟೋ ಶ್ರಮಪಟ್ಟು ಆ ಬಾಲ್ಯಾವಸ್ಥೆಯನ್ನು ಕಳೆಯುವನು. ಈ ಬಾಲ್ಯಾವಸ್ಥೆಯು ಕಳೆಯುತ್ತ ಬರುವಾಗಲೇ ಅವನ ಮನಸ್ಸಿನಲ್ಲಿ ಕಾಮಕ್ರೋಧಾದಿಗಳು ತಲೆಯೆತ್ತುವುವು. ಈ ಕಾಮಕ್ರೋಧಗಳೂ ಅವನ ಶರೀರದೊಡನೆಯೇ ಬೆಳೆಯುತ್ತ ಬರುವುವು. ತನ್ನ ನಾಶವನ್ನೇ ತಾನು ತಿಳಿಯದೆ, ತನಗೆ ಆಸೆಯು ಹೆಚ್ಚಿದಷ್ಟೂ ತನ್ನ ಇಷ್ಟಕ್ಕೆ ವಿರೋಧಿಗಳಾದವರಲ್ಲಿ ಕೋಪವನ್ನೂ ಹೆಚ್ಚಿಕೊಳ್ಳುವನು. ಪಂಚಭೂತಗಳಿಂದ ಕಲ್ಪಿತವಾದ ದೇಹದಲ್ಲಿ ಸೇರಿಕೊಂಡಿರುವ ಆ ಜೀವನು, ವಿವೇಕಹೀನನಾಗಿ, ಎಲ್ಲವನ್ನೂ ನಾನೇ ನಡೆಸುವೆನೆಂದೂ, ಎಲ್ಲವೂ ತನ್ನದೆಂದೂ ಅಹಂಕಾರ ಮಮಕಾರಗಳಿಂದ ಬೀಗಿ ಬೆರೆಯುವನು. ಹೀಗೆ ದುರ್ಬುದ್ಧಿಯುಳ್ಳ ಮನುಷ್ಯನು, ತಾನು ಯಾವ ಯಾವ ಕರ್ಮಗಳನ್ನು ನಡೆಸಿದರೆ ತನಗೆ ಸಂಸಾರವು ಕಟ್ಟುವುದೋ, ಅಂತಹ ಕರ್ಮಗಳಲ್ಲಿಯೇ ಪ್ರವರ್ತಿಸುತ್ತ, ತಿರುಗಿ ತಿರುಗಿ ಜನನಮರಣಗಳಿಗೆ ಸಿಕ್ಕಿಬಿದ್ದು, ತಿರುಗಿ ದುಃಖಪ್ರಚುರವಾದ ಆ ದೇಹವನ್ನೇ ಹೊಂದುವನು. ಕುಟುಂಬಪೋಷಣಕ್ಕಾಗಿ ಅದರಲ್ಲಿ ಎಷ್ಟೋ ಅಸತ್ಕಾರ್ಯಗಳನ್ನು ನಡೆಸಿ, ನರಕದ ಬಾವಿಯಲ್ಲಿ ಬೀಳುವನು. ಜನನೀ! ಕುಟುಂಬ ವ್ಯಸನದಿಂದುಂಟಾಗುವ ಅನರ್ಥಗಳೆಷ್ಟೆಂಬುದನ್ನು

ಬಲ್ಲೆಯಾ? ಇದರ ಸಹವಾಸವನ್ನು ತಲೆಯೇರಿಸಿಕೊಂಡಷ್ಟೂ, ಮನುಷ್ಯನಿಗೆ ಸತ್ಯ, ಶೌಚ, ದಯೆ, ದಾನ, ಬುದ್ಧಿ, ಸಂಪತ್ತು, ಲಜ್ಜೆ, ಕೀರ್ತಿ, ತಾಳ್ಮೆ, ಶಮೆ, ದಮೆ, ಮುಂತಾದ ಗುಣಗಳೆಲ್ಲವೂ ನಾಶಹೊಂದದಿರವು. ವಿವೇಕಿಯಾದವನು ಇಷ್ಟೊಂದನರ್ಥಕ್ಕೆ ಕಾರಣವಾದ ಈ ದುಸ್ಸಹವಾಸವನ್ನು ಮಾಡಬಾರದು. ಶಿಶ್ನೋದರಪರಾಯಣರಾದ ಅಸತ್ತುಗಳೊಡನೆ ಸೇರಿದವನು, ಅವರಿಂದ ದುರ್ಮಾರ್ಗಕ್ಕೆ ಎಳೆಯಲ್ಪಟ್ಟವನಾಗಿ, ಮೊದಲಿನಂತೆ ನರಕದಲ್ಲಿಯೇ ಬೀಳುವನು. ಯಾರು ಕೇವಲ ವಿಷಯಾಸಕ್ತರಾಗಿರುವರೋ, ಯಾರು ಸ್ವಸ್ವರೂಪವನ್ನು ತಿಳಿಯದೆ ದೇಹವನ್ನೇ ಆತ್ಮವೆಂದು ಭ್ರಮಿಸುವರೋ, ಯಾರು ವಿವೇಕವಿಲ್ಲದ ಮೂಢಬುದ್ಧಿಯುಳ್ಳವರೋ, ಯಾರು ಮನಸ್ಸಿನಲ್ಲಿ ತಾಳ್ಮೆಯಿಲ್ಲದವರೋ, ಯಾರು ಸ್ತ್ರೀಯರ ಮೋಹಪಾಶಕ್ಕೆ ಸಿಕ್ಕಿಬಿದ್ದು, ಅವರ ಕೈಯಾಟದ ಬೊಂಬೆಗಳಂತೆ ಅವರು ಹೇಳಿದ ಹಾಗೆ ಆಡುತ್ತಿರುವರೋ, ಅಂತವರನ್ನು ನೋಡಿದಾಗ, ಅವರ ದುಸ್ಥಿತಿಗಾಗಿ ಶೋಕಿಸಬೇಕೇ ಹೊರತು, ಅಂತವರೊಡನೆ ಕ್ಷಣಮಾತ್ರವೂ ಸಹವಾಸವನ್ನು ಮಾಡಬಾರದು. ಸ್ತ್ರೀಸಂಗದಿಂದಾಗಲೀ, ಆ ಸ್ತ್ರೀಸಂಗವುಳ್ಳವರೊಡನೆ ಸಹವಾಸ ಮಾಡುವುದರಿಂದಾಗಲೀ, ಉಂಟಾಗುವಷ್ಟು ಅನರ್ಥಗಳು ಪುರುಷನಿಗೆ ಬೇರೆ ಯಾವ ಕಾರಣದಿಂದಲೂ ಉಂಟಾಗಲಾರದು. ಇದರಿಂದ ದುಃಖವೇ ಹೊರತು ಎಂದಿಗೂ ಸುಖವಿಲ್ಲ. ಸ್ತ್ರೀಯರ ಮೋಹಪಾಶವೆಂಬುದು, ಮಹಾಜ್ಞಾನಿಗಳನ್ನೂ ಕೂಡ ಬಲವಾಗಿ ಸೆಳೆದು ಕಟ್ಟಿಹಾಕದೆ ಬಿಡಲಾರದು. ಅಮ್ಮಾ! ಇದಕ್ಕೊಂದು ಇತಿಹಾಸವನ್ನು ಹೇಳುವೆನು ಕೇಳು. ಪೂರ್ವದಲ್ಲಿ ಬ್ರಹ್ಮದೇವನು ತನ್ನ ಕುಮಾರಿಯಾದ ಸರಸ್ವತಿಯನ್ನು ನೋಡಿ, ಅವಳ ಸೌಂದರ್ಯಕ್ಕೆ ಮೋಹಿತನಾಗಿ ಅವಳನ್ನೇ ಪರಿಗ್ರಹಿಸುವುದಕ್ಕೆ ಯತ್ನಿಸಿದನು. ಅವಳು ಮೃಗರೂಪವನ್ನು ಧರಿಸಿ ಓಡುತ್ತಿದ್ದರೂ ಬಿಡದೆ, ತಾನೂ ಮೃಗರೂಪವನ್ನೇ ಧರಿಸಿ, ಅವಳನ್ನು ಬೆನ್ನಟ್ಟಿಹೋಗಿ ಹಿಡಿದನು. ಮಹಾತ್ಮನಾಗಿ ಜ್ಞಾನಾಧಿಕನೆನಿಸಿಕೊಂಡ ಅಂತಹ ಬ್ರಹ್ಮನೇ ಹೀಗೆ ಸ್ತ್ರೀಮೋಹದಿಂದ ಮರುಳಾಗಿ, ಲಜ್ಜೆಯನ್ನು ಬಿಟ್ಟು, ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳನ್ನೇ ಸಂಭೋಗಿಸುವುದಕ್ಕೆ ಯತ್ನಿಸಿದನಲ್ಲವೇ? ಇನ್ನು ಸಾಮಾನ್ಯರಿಗೆ ಈ ದುರ್ಬುದ್ಧಿಯು ಹುಟ್ಟುವುದೇನಾಶ್ಚ

ರ್ಯವು? ಸ್ತ್ರೀಸಾಂಗತ್ಯವೆಂಬುದು ಅಯಸ್ಕಾಂತವು ಕಬ್ಬಿಣವನ್ನೆಳೆಯು ವಂತೆ ಪುರುಷರ ಮನಸ್ಸನ್ನು ಕ್ಷಣಮಾತ್ರದಲ್ಲಿ ಆಕರ್ಷಿಸಿಬಿಡುವುದು. ಆ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಮರೀಚಿ ಮೊದಲಾದ ಮಹರ್ಷಿಗಳೂ ಕೂಡ ಈ ಮೋಹಪಾಶವನ್ನು ತಪ್ಪಿಸಿಕೊಳ್ಳಲಾರದೆ ಹೋದರು. ಅತ್ಯಂತ ಜ್ಞಾನಾಧಿಕನಾದ ನಾರಾಯಣಮಹರ್ಷಿಯೊಬ್ಬನು ಹೊರತು ಬೇರೆ ಯಾರೂ ಈ ಸ್ತ್ರೀಮಾಯೆಯನ್ನು ತಪ್ಪಿಸಿಕೊಂಡವರಿಲ್ಲ. ಜನನೀ! ಸ್ತ್ರೀ ರೂಪದಿಂದ ಲೋಕದಲ್ಲಿ ಹರಡಿರುವ ಆ ಭಗವನ್ಮಾಯೆಯ ಪ್ರಭಾವವನ್ನೇ ನೆಂದು ಬಲ್ಲೆ! ಆ ಸ್ತ್ರೀವ್ಯಕ್ತಿಯು ತನ್ನ ಹುಬ್ಬನ್ನು ಒಂದಾವರ್ತಿ ಕುಣಿಸು ವುದರಿಂದಲೇ, ಲೋಕವಿಜಯಿಗಳಾದ ಅನೇಕ ಶೂರರನ್ನೂ ಸ್ವಾಧೀನಪಡಿಸಿ ಕೊಂಡು, ಅವರನ್ನೂ ಕುಣಿದಾಡಿಸಿಬಿಡುವುದು. ನನ್ನನ್ನುಪಾಸನೆಮಾಡಿ ಆದರಿಂದ ಆತ್ಮಜ್ಞಾನವನ್ನು ಕೋರುವವರು ಮೊದಲು ಈ ಸ್ತ್ರೀಸಂಗ ವನ್ನು ಶುದ್ಧಾಂಗವಾಗಿ ತ್ಯಜಿಸಬೇಕು. ಇಲ್ಲದಪಕ್ಷದಲ್ಲಿ ಎಂತಹ ಜ್ಞಾನಾ ಧಿಕನಾದರೂ ಬುದ್ಧಿಗೆಟ್ಟು ಆ ಕಾರ್ಯಗಳಲ್ಲಿ ಪ್ರವರ್ತಿಸಿ, ಘೋರನರಕ ಗಳಲ್ಲಿ ಬೀಳುವನು. ಉಪಚಾರ ಮೊದಲಾದ ನೆವದಿಂದ ಮೆಲ್ಲಮೆಲ್ಲಗೆ ತನ್ನ ಕಡೆಗೆ ಬಂದು ಸೇರುತ್ತಿರುವ ಸ್ತ್ರೀರೂಪವಾದ ಈ ಭಗವನ್ಮಾಯೆಯನ್ನು ನೋಡಿದೊಡನೆ ಪುರುಷನು, ಮೇಲೆ ಹುಲ್ಲಿನಿಂದ ಮುಚ್ಚಲ್ಪಟ್ಟ ಹಾಳು ಬಾವಿಯಂತೆ, ಅದನ್ನು ತನಗೆ ಮೃತ್ಯುಹೇತುವನ್ನಾಗಿ ತಿಳಿಯಬೇಕೇ ಹೊರತು, ಸ್ವಲ್ಪಮಾತ್ರವೂ ಹತ್ತಿರಕ್ಕೆ ಸೇರಿಸಬಾರದು. ಇಂತಹ ಸ್ತ್ರೀ ಯರು ಪುರುಷನಿಗೆ ತಿಳಿಯದ ಹಾಗೆಯೇ ಸುಖಭ್ರಾಂತಿಯನ್ನು ಹುಟ್ಟಿಸಿ ಮಹಾನರ್ಥಗಳನ್ನು ತಂದು ಸೇರಿಸುವರು. ಇದರಂತೆಯೇ ಸ್ತ್ರೀಯರೂ ಕೂಡ ಮೋಕ್ಷಾಪೇಕ್ಷೆಯುಳ್ಳವರಾದರೆ ಪುರುಷರ ಸಹವಾಸವನ್ನು ನಿಶ್ಶೇಷ ವಾಗಿ ತ್ಯಜಿಸಬೇಕು. ಜೀವಾತ್ಮನು ಸ್ತ್ರೀಯರಲ್ಲಿ ಮೋಹಗೊಂಡು, ಮರಣ ಕಾಲದಲ್ಲಿಯೂ ಆ ಸ್ತ್ರೀವ್ಯಕ್ತಿಯನ್ನೇ ಧ್ಯಾನಿಸುತ್ತ ಬರುವುದರಿಂದ, ಮುಂದಿನ ಜನ್ಮದಲ್ಲಿ ತಾನೇ ಸ್ತ್ರೀರೂಪವನ್ನು ಹೊಂದುವನು. ಹಿಂದಿನ ಜನ್ಮದಲ್ಲಿ ಪುರುಷನಾಗಿದ್ದ ಜೀವನೇ ಈಗ ಆತ್ಮಸ್ವರೂಪವನ್ನು ಮರೆತು, ತನ್ನನ್ನು ಹೆಂಗಸಾಗಿ ಭಾವಿಸಿಕೊಳ್ಳುವನು. ಪುರುಷರೂಪದಿಂದ ಲೋಕ ದಲ್ಲಿ ಹರಡಿರುವ ಭಗವನ್ಮಾಯೆಯನ್ನು ಕಂಡು ಮೋಹಗೊಳ್ಳುವನು.

ಅಂತವನನ್ನು ಕೈಹಿಡಿದರೆ ಅವನಿಂದ ತಾನು ಬೇಕಾದ ಉಡಿಗೆಗಳನ್ನೂ, ಐಶ್ವರ್ಯವನ್ನೂ, ಇತರ ಭೋಗಸಾಮಗ್ರಿಗಳನ್ನೂ ಪಡೆಯಬಹುದೆಂದೂ, ಅವನೇ ತನಗೆ ಭರ್ತನೆಂದೂ ಭಾವಿಸುವನು. ಬೇಟೆಗಾರರ ಹಾಡು ಜಿಂಕೆಗಳಿಗೆ ಅನರ್ಥವನ್ನು ತಂದಿಡುವಂತೆ, ಪುರುಷವ್ಯಕ್ತಿಯೆಂಬ ನನ್ನ ಮಾಯೆಯು, ಸ್ತ್ರೀಯರಿಗೆ ಆಸೆಯನ್ನು ಹುಟ್ಟಿಸಿ, ಅನರ್ಥವನ್ನು ತಂದಿಡುವುದಕ್ಕಾಗಿಯೇ ಏರ್ಪಟ್ಟಿರುವುದೇ ಹೊರತು ಬೇರೆಯಲ್ಲ. ಜನನೀ! ಹೀಗೆ ಜೀವನು, ಗರ್ಭಕೋಶದಲ್ಲಿಯೂ, ಜನನಕಾಲದಲ್ಲಿಯೂ, ಬಾಲ್ಯಯೌವನಗಳಲ್ಲಿಯೂ, ಅದರಿಂದಾಚೆಗೆ ಮುಪ್ಪು, ಸಾವು, ಮುಂತಾದ ಅವಸ್ಥೆಗಳಲ್ಲಿಯೂ ಅನುಭವಿಸಬೇಕಾದ ಕಷ್ಟಗಳೆಲ್ಲವನ್ನೂ ನಿನಗೆ ತಿಳಿಸಿದೆನಷ್ಟೇ? ಇದರ ಮೇಲೆ ನಿನಗೆ ಇನ್ನೂ ಕೆಲವು ಸಂದೇಹಗಳುಂಟಾಗಬಹುದು. ಉತ್ಪತ್ತಿವಿನಾಶಗಳೊಂದೂ ಇಲ್ಲದೆ ನಿತ್ಯವಸ್ತುವೆನಿಸಿಕೊಂಡ ಜೀವನಿಗೆ ಜನನಮರಣಗಳೆಂಬುದು ಹೇಗೆ? ಅಥವಾ ಅವನಿಗುಂಟಾಗುವ ಜನನಮರಣಗಳ ಸ್ವರೂಪವೆಂತಹುದು? ಶರೀರಾನುಭವದಿಂದಲೇ ಸರ್ವಕರ್ಮಗಳೂ ಕ್ಷೀಣಿಸುವುದಾದರೆ, ಅವನು ಒಂದು ಶರೀರವನ್ನೆತ್ತಿದಾಗಲೇ ಅವನ ಪ್ರಾರಬ್ಧಕರ್ಮಗಳು ಕ್ಷೀಣಿಸಿಹೋಗಬೇಕಲ್ಲವೆ? ಹೀಗೆ ಕರ್ಮಕ್ಷಯವನ್ನು ಹೊಂದಿದ ಮೇಲೆ ಜೀವನಿಗೆ ತಿರುಗಿ ಮತ್ತೊಂದು ಶರೀರವುಂಟಾಗುವುದೇಕೆ? ಕರ್ಮಸಂಬಂಧವು ನೀಗಿದ ಮೇಲೆ ಶರೀರಸಂಬಂಧವೂ ಬಿಟ್ಟುಹೋಗಬೇಕಲ್ಲವೇ? ಒಂದುವೇಳೆ ಬೇರೆ ಶರೀರಕ್ಕೆ ಹೋಗಬೇಕಾದರೂ, ಜೀವನಿಗೆ ಆ ಶರೀರದಲ್ಲಿಯೂ ಹಿಂದಿನ ಶರೀರದಲ್ಲಿದ್ದ ಭೂತಸೂಕ್ಷ್ಮಗಳೇ ಅನುಸರಿಸಿ ಬರುವುವೇ? ಅಥವಾ ಅವು ಬಿಟ್ಟು ಹೋಗುವುವೇ? ಈ ವಿಧವಾದ ಸಂಶಯಗಳೆಲ್ಲವೂ ನಿನ್ನ ಮನಸ್ಸಿನಲ್ಲಿ ಹುಟ್ಟುವುದಕ್ಕೆ ಅವಕಾಶವುಂಟು. ಈ ಸಂದೇಹಗಳೆಲ್ಲವನ್ನೂ ನೀಗಿಸುವೆನು ಕೇಳು! ಜೀವನು ಒಂದು ಶರೀರವನ್ನು ಬಿಟ್ಟು ಮತ್ತೊಂದು ಶರೀರಕ್ಕೆ ಹೋಗುವಾಗ, ನಡುವೆ, ಒಂದು ಸೂಕ್ಷ್ಮಶರೀರವನ್ನು ಹೊಂದಿ, ಪಂಚಭೂತಗಳಿಂದಲೂ, ಇಂದ್ರಿಯಗಳಿಂದಲೂ, ಮನಸ್ಸಿನಿಂದಲೂ, ಕೂಡಿ ಇದೇ ಆತ್ಮವೆಂಬ ಅಭಿಮಾನಕ್ಕೆ ಪಾತ್ರವಾದ ಆ ಸೂಕ್ಷ್ಮಶರೀರದೊಡನೆ ಮತ್ತೊಂದು ಸ್ಥೂಲಶರೀರಕ್ಕೆ ಹೋಗಿ ಸೇರುವನು. ಹಿಂದಿದ್ದ ಸ್ಥೂಲಶರೀರದಲ್ಲಿ ತಾನು ಮಾಡಿದ ಕರ್ಮಗಳಿಗೆ ಫಲವನ್ನನುಭವಿಸುತ್ತ ಬರುವಾಗಲೇ,

ತಿರುಗಿ ಮತ್ತೊಂದು ಶರೀರವನ್ನು ಹೊಂದುವುದಕ್ಕೆ ಕಾರಣಗಳಾದ ಕರ್ಮಗಳನ್ನು ಯಾವಾಗಲೂ ನಡೆಸುತ್ತಲೇ ಬರುವನು. ಈ ಸೂಕ್ಷ್ಮಶರೀರದ ಸ್ವರೂಪವನ್ನು ಹೇಳುವೆನು ಕೇಳು. ಸ್ಥೂಲಶರೀರದಲ್ಲಿ ಸ್ಪಷ್ಟವಾಗಿ ಕಾಣುತ್ತಿದ್ದ ಪಂಚಭೂತಗಳೇ, ಕಣ್ಣಿಗೆ ಕಾಣದಷ್ಟು ಸೂಕ್ಷ್ಮದಶೆಯನ್ನು ಹೊಂದುವುದರಿಂದ ಅದು ಸೂಕ್ಷ್ಮಶರೀರವೆನಿಸುವುದು. ಜೀವನು ಆ ಸ್ಥೂಲಶರೀರವನ್ನು ಬಿಟ್ಟು ಸೂಕ್ಷ್ಮಶರೀರಕ್ಕೆ ಹೋಗುವುದೇ ಮರಣವೆನಿಸುವುದು. ಆ ಸೂಕ್ಷ್ಮಶರೀರವು ಸ್ಥೂಲದಶೆಯನ್ನು ಹೊಂದಿ, ನಾನೆಂಬ ಅಭಿಮಾನಕ್ಕೆ ವಿಷಯವಾಗುವುದೇ ಜನನವೆನಿಸುವುದು. ಇದರಿಂದ ಜೀವನಿಗೆ ಜನನಮರಣಗಳೆಂಬುದು ಸ್ಥೂಲಸೂಕ್ಷ್ಮದೇಹಗಳ ಬದಲಾವಣೆಯೇ ಹೊರತು ಬೇರೆಯಲ್ಲ. ಪೃಥಿವ್ಯಾದಿಭೂತಗಳೆಲ್ಲವೂ ಸ್ಪಷ್ಟವಾಗಿ ಕಾಣಿಸುತ್ತಿದ್ದ ದೇಹದಲ್ಲಿ, ಅವು ಕಣ್ಣಿಗೆ ಕಾಣಿಸದಷ್ಟು ಸೂಕ್ಷ್ಮದಶೆಯನ್ನು ಹೊಂದುವುದೇ ಮರಣವು. ಹೀಗೆ ಶರೀರಭೇದದಿಂದ ತೋರುವ ಜನನಮರಣಗಳನ್ನು ಆತ್ಮನಲ್ಲಿ ಆರೋಪಿಸುವುದು ಕೇವಲ ಭ್ರಾಂತಿಯಲ್ಲದೆ ಬೇರೆಯಲ್ಲ! ಓ ಜನನೀ! ಈ ದೇಹವನ್ನು ಕುರಿತು ಮತ್ತೆ ಕೆಲವು ವಿಷಯಗಳನ್ನು ತಿಳಿಸುವೆನು ಕೇಳು. ದೇಹದಲ್ಲಿ ನೇತ್ರೇಂದ್ರಿಯಗಳಿಗೆ ಸ್ಥಾನವಾದ ರಂಧ್ರಗಳನ್ನೇ ನಾವು ಕಣ್ಣುಗಳೆಂದು ಹೇಳಿದರೂ, ಆ ರಂಧ್ರಗಳಿಗೆ ಇತರ ವಸ್ತುಗಳನ್ನು ಕಾಣುವ ಶಕ್ತಿಯಿಲ್ಲವಷ್ಟೇ? ಅದರಂತೆಯೇ ಕೇವಲ ಇಂದ್ರಿಯಗಳಿಗೂ ಆ ಶಕ್ತಿಯಿರುವುದಿಲ್ಲ. ಜೀವಾತ್ಮನ ಸಂಬಂಧವಿದ್ದಾಗಲೇ ಇಂದ್ರಿಯಗಳಿಗೆ ಆ ಶಕ್ತಿಯುಂಟಾಗುವುದು. ಆದುದರಿಂದ ನೋಡತಕ್ಕವನು ಆತ್ಮನೇ ಹೊರತು ಇಂದ್ರಿಯವಲ್ಲ. ಹೀಗೆ ಸ್ವತಂತ್ರಶಕ್ತಿಯಿಲ್ಲದ ಇಂದ್ರಿಯವನ್ನೇ ಆತ್ಮವೆಂದು ನಾವು ಹೇಗೆ ತಿಳಿಯಬಾರದೋ, ಹಾಗೆಯೇ ಅಚೇತನವಾದ ದೇಹವನ್ನೂ ಆತ್ಮವೆಂದು ಹೇಳಬಾರದು. ದೇಹಕ್ಕೆ ಕಾಲೋಚಿತವಾಗಿ ಬೇರೆ ಬೇರೆ ವಿಕಾರಗಳುಂಟು. ಆತ್ಮನಿಗೆ ಯಾವ ವಿಕಾರವೂ ಇರುವುದಿಲ್ಲ. ಆತ್ಮನಿಗೆ ಜನನಮರಣಗಳೆಂಬುದು ದೇಹದ ಮೂಲಕವಾಗಿಯೇ ಏರ್ಪಡುವುದು. ಆದುದರಿಂದ ಈ ದೇಹದ ಜನನಮರಣಗಳನ್ನು ಕುರಿತು ನಾವು ಸ್ವಲ್ಪವೂ ಭಯಪಡಬೇಕಾದುದಿಲ್ಲ. ಇದರಿಂದ ಹೆಂಡಿರುಮಕ್ಕಳ ಮರಣವನ್ನು ನೋಡಿ ದುಃಖಿಸುವುದು ಕೇವಲ ಅಜ್ಞತೆಯಲ್ಲದೆ ಬೇರೆಯಲ್ಲ. ಆದುದರಿಂದ ಸುಖ

ದುಃಖಗಳೆರಡನ್ನೂ ಸಮವಾಗಿ ಭಾವಿಸಿ, ಆತ್ಮಸ್ವರೂಪವನ್ನು ತಿಳಿದು, ದೇಹದಲ್ಲಿಯೂ, ಹೆಂಡಿರು ಮಕ್ಕಳು ಮೊದಲಾದ ಪರಿವಾರಗಳಲ್ಲಿಯೂ, ಮನೆಮಠ, ಮುಂತಾದವುಗಳಲ್ಲಿಯೂ ಮಮತೆಯನ್ನು ಬಿಟ್ಟು, ಧರ್ಮಗಳನ್ನನುಷ್ಠಿಸುತ್ತ ಬರಬೇಕು. ಆತ್ಮಸ್ವರೂಪವನ್ನು ತಿಳಿಸತಕ್ಕ ಜ್ಞಾನಯೋಗವನ್ನೂ, ಪರಮಪುರುಷನಲ್ಲಿ ಹೊರತು ಇತರ ಸಮಸ್ತ ವಿಷಯಗಳಲ್ಲಿಯೂ ಜಿಹಾಸೆಯನ್ನು ಹೊಂದಿಸತಕ್ಕ ವೈರಾಗ್ಯವನ್ನೂ ಹಿಡಿದು, ಶಾಸ್ತ್ರಶ್ರವಣದಿಂದ ನಿಸ್ಸಂದೇಹವಾದ ಬುದ್ಧಿಯನ್ನು ಪಡೆದು, ಭಗವಂತನ ಮಾಯೆಯಿಂದೇರ್ಪಟ್ಟ ಈ ಪ್ರಪಂಚವ್ಯಾಪಾರಗಳಲ್ಲಿ ಆಸಕ್ತಿಯಿಲ್ಲದೆ ನಿವೃತ್ತಿಧರ್ಮವನ್ನಾಚರಿಸಬೇಕು. ಈ ಪ್ರಪಂಚವೆಲ್ಲವೂ ಭಗವಂತನ ಮಾಯೆಯಿಂದಲೇ ಸೃಷ್ಟಿಸಲ್ಪಟ್ಟಿರುವುದರಿಂದ, ಇದರೊಳಗಿನ ಒಂದೊಂದು ವಸ್ತುವೂ ಆತ್ಮನನ್ನು ಮರುಳುಮಾಡಿ ದುರ್ಮಾರ್ಗಕ್ಕೆ ಸೆಳೆಯುತ್ತಿರುವುದು. ಆದುದರಿಂದ ಬೇರೊಂದರಲ್ಲಿಯೂ ಮನಸ್ಸಿಡದೆ, ಭಗವಂತನ ಪಾದಾರವಿಂದಗಳನ್ನೇ ಭಕ್ತಿಯಿಂದ ಭಾವಿಸುತ್ತಿರಬೇಕು. ಜೀವನು ತನ್ನೊಡನೆ ಒಂದಾಗಿ ಸೇರಿದಂತಿರುವ ದೇಹದಲ್ಲಿಯೇ ಅಭಿಮಾನವನ್ನು ತೊರೆಯಬೇಕಾಗಿರುವಾಗ, ಇತರ ವಸ್ತುಗಳಲ್ಲಿ ಮಮತೆಯನ್ನು ಬಿಟ್ಟುಬಿಡಬೇಕೆಂಬುದನ್ನು ಹೇಳಬೇಕಾದುದೇನು? ಆದುದರಿಂದ ಓ ಜನನೀ! ಸರ್ವಸಂಗಪರಿತ್ಯಾಗಮಾಡಿ, ಆ ಭಗವಂತನ ಪಾದಾರವಿಂದವನ್ನು ಧ್ಯಾನಿಸುತ್ತ, ಶರೀರಾವಸಾನವನ್ನೇ ಇದಿರುನೋಡುತ್ತ, ನಿವೃತ್ತಿಧರ್ಮವನ್ನು ಹಿಡಿಯತಕ್ಕವನೇ ಪರಮಪುರುಷಾರ್ಥವನ್ನು ಹೊಂದುವನು. ಇಲ್ಲಿಗೆ ಮೂವತ್ತೊಂದನೆಯ ಅಧ್ಯಾಯವು.

---

ಪುಣ್ಯಕರ್ಮಗಳನ್ನಾಚರಿಸಿದವರಿಗೂ,
ಪರಬ್ರಹ್ಮೋಪಾಸನವನ್ನು ಮಾಡಿದವರಿಗೂ
ಪ್ರಾಪ್ತವಾಗುವ ಸದ್ಗತಿಗಳು.

ಅಮ್ಮಾ! ಇದುವರೆಗೆ ನಿನಗೆ ದುಷ್ಕರ್ಮಗಳನ್ನು ನಡೆಸುವುದರಿಂದುಂಟಾಗುವ ನರಕಗತಿಗಳನ್ನು ತಿಳಿಸಿದೆನು. ಇನ್ನು ಸತ್ಕರ್ಮಗಳನ್ನು ನಡೆಸಿ

ದವರಿಗೆ ಪ್ರಾಪ್ತವಾಗುವ ಗತಿಗಳನ್ನೂ ತಿಳಿಸುವೆನು ಕೇಳು! ಈ ಸತ್ಕರ್ಮ ಗಳಲ್ಲಿಯೂ ಕೂಡ ಫಲಾಪೇಕ್ಷೆಯಿಂದ ನಡೆಸುವ ಪ್ರವೃತ್ತಿಧರ್ಮಗಳೆಂದೂ, ಯಾವ ಫಲವನ್ನೂ ಅಪೇಕ್ಷಿಸದೆ ಭಗವದರ್ಪಣರೂಪವಾಗಿ ನಡೆಸತಕ್ಕ ನಿವೃತ್ತಿಧರ್ಮಗಳೆಂದೂ ಎರಡು ಬಗೆಯುಂಟು. ಗೃಹಸ್ಥಾಶ್ರಮದಲ್ಲಿರುವ ವನು, ಪ್ರಾಯಿಕವಾಗಿ, ಆ ಆಶ್ರಮಕ್ಕನುಗುಣಗಳಾದ ಕರ್ಮಗಳನ್ನೇ ಅನುಷ್ಠಿಸುತ್ತ, ಅರ್ಥಕಾಮಗಳಲ್ಲಿಯೇ ಆಸಕ್ತನಾಗಿ, ವಿಶೇಷವಾಗಿ ಪ್ರವೃತ್ತಿ ಧರ್ಮಗಳನ್ನು ನಡೆಸುವನು. ಹೀಗೆ ಕೇವಲ ಗೃಹಸ್ಥಧರ್ಮಗಳಲ್ಲಿರತಕ್ಕ ವನು, ವಿಷಯಾಸಕ್ತಿಯಲ್ಲಿಯೇ ಮೂಢನಾಗಿ, ಭಗವದಾರಾಧನದಲ್ಲಿ ದೃಷ್ಟಿ ಯಿಡದೆ, ಯಾಗಾದಿಗಳಿಂದ ದೇವತೆಗಳನ್ನು ಪೂಜಿಸುವನು. ಶ್ರಾದ್ಧಾದಿ ಗಳಿಂದ ಪಿತೃದೇವತೆಗಳನ್ನು ಪೂಜಿಸುವನು. ಯಾವಾಗಲೂ ಹೀಗೆ ದೇವತೆ ಗಳನ್ನೂ, ಪಿತೃದೇವತೆಗಳನ್ನೂ ಪೂಜಿಸುವುದಕ್ಕಾಗಿ ಬಹುಶ್ರದ್ಧೆಯಿಂದ ಎಷ್ಟೋ ವ್ರತಗಳನ್ನೂ ನಡೆಸುತ್ತ ಬರುವನು. ಹೀಗೆ ಸೋಮಯಾಗ ಗಳನ್ನು ಮಾಡುತ್ತ ಬಂದ ಪುರುಷನು, ಧೂಮಾದಿ ಮಾರ್ಗವಾಗಿ (ಎಂದರೆ, ಧೂಮ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನ, ಪಿತೃಲೋಕ, ಆಕಾಶ, ಚಂದ್ರ ವೆಂಬೀ ಕ್ರಮದಿಂದ) ಚಂದ್ರಲೋಕವನ್ನು ಸೇರುವನು. ಅಲ್ಲಿ ತನ್ನ ಕರ್ಮ ಫಲವನ್ನನುಭವಿಸಿದ ಮೇಲೆ, ಅಲ್ಲಿಂದ ಹಿಂತಿರುಗಿ, ಆಕಾಶ, ವಾಯು, ಧೂಮ, ಮೇಘವೆಂಬೀ ಕ್ರಮದಿಂದ ಕೆಳಕ್ಕಿಳಿದು ಭೂಮಿಗೆ ಬಂದು ಸೇರು ವನು. ಹೀಗೆ ಚಂದ್ರಲೋಕವನ್ನು ಸೇರಿದವರು, ಶಾಶ್ವತವಾಗಿ ಅಲ್ಲಿ ನಿಲ್ಲ ಲಾರದೆ, ತಿರುಗಿ ಅಧೋಗತಿಗೆ ಬರಬೇಕಾದುದರಿಂದ, ಇಂತಹ ಕರ್ಮಗಳ ನ್ನಾಚರಿಸುವುದರಿಂದ ಶಾಶ್ವತಸುಖವು ಕೈಗೂಡಲಾರದು. ಶೇಷಶಾಯಿ ಯಾದ ಭಗವಂತನು, ಸರ್ಪಶರೀರವೆಂಬ ಹಾಸಿಗೆಯಲ್ಲಿ ಯಾವಾಗ ಯೋಗ ನಿದ್ರೆಯಿಂದ ಮಲಗುವನೋ, ಆಗ ಇಂತಹ ಪುಣ್ಯಲೋಕಗಳೆಲ್ಲವೂ ನಾಶ ಹೊಂದುವುವು- ಎಂದರೆ, ಈ ಪುಣ್ಯಲೋಕಗಳೆಲ್ಲವೂ ಕಲ್ಪಾಂತದವರೆಗೆ ಮಾತ್ರವೇ ಇದ್ದು, ಕಲ್ಪಾವಸಾನದಲ್ಲಿ ಭಗವಂತನು ಪ್ರಪಂಚವೆಲ್ಲವನ್ನೂ ಉಪಸಂಹಾರಮಾಡಿಕೊಳ್ಳುವಾಗ ಇವೂ ನಾಶಹೊಂದುವುವು. ಬೇರೆ ಸಾಧಾ ರಣ ಧರ್ಮವನ್ನು ನಡೆಸತಕ್ಕವರು ಇಷ್ಟು ಕಾಲದವರೆಗೂ ಕೂಡ ಅಲ್ಲಿ ನಿಲ್ಲಲಾರರು. ಜನನೀ! ಇನ್ನು ಪರಬ್ರಹ್ಮೋಪಾಸನ ಮಾಡಿದವರಿಗೆ

ಉಂಟಾಗುವ ಸದ್ಗತಿಗಳನ್ನು ತಿಳಿಸುವೆನು ಕೇಳು. ದೃಢಮನಸ್ಸುಳ್ಳ ಯಾವ ಸತ್ಪುರುಷರು, ಇಂದ್ರಿಯಗಳನ್ನು ಜಯಿಸಿ, ಅರ್ಥಕಾಮಗಳನ್ನು ಕೈಗೂಡಿಸತಕ್ಕ ವರ್ಣಾಶ್ರಮಧರ್ಮಗಳನ್ನೇ ಪ್ರಧಾನವಾಗಿಟ್ಟುಕೊಳ್ಳದೆ, ದುಸ್ಸಹವಾಸವನ್ನು ಬಿಟ್ಟು, ತಾವು ನಡೆಸತಕ್ಕ ಒಂದೊಂದು ಕರ್ಮಗಳನ್ನೂ ಭಗವಂತನಲ್ಲಿಯೇ ಅರ್ಪಿಸುತ್ತ, ಶಮದಮಾದಿ ಗುಣಗಳಿಂದ ಕೂಡಿದವರಾಗಿ, ಶುದ್ಧ ಮನಸ್ಸುಳ್ಳವರಾಗಿ, ಭಗವಂತನ ಗುಣಗಳನ್ನು ಕೇಳುವುದರಲ್ಲಿಯೂ, ಅವುಗಳನ್ನು ಕೀರ್ತಿಸುವುದರಲ್ಲಿಯೂ ಶ್ರದ್ಧೆಯುಳ್ಳವರಾಗಿ, ಅಹಂಕಾರ ಮಮಕಾರಗಳನ್ನು ಬಿಟ್ಟು, ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳನ್ನೂ ಭಗವದರ್ಪಣರೂಪವಾಗಿಯೇ ನಡೆಸುತ್ತ ಬರುವರೋ, ಅಂತವರು, ಸೂರ್ಯಬಿಂಬದ್ವಾರದಿಂದ ಅರ್ಚಿರಾದಿಗತಿಯಲ್ಲಿ (ಎಂದರೆ, ಅರ್ಚಿ, ಅಹಸ್ಸು, ಶುಕ್ಲಪಕ್ಷ, ಉತ್ತರಾಯಣ, ಸಂವತ್ಸರ, ವಾಯು, ಸೂರ್ಯ, ಚಂದ್ರ, ವಿದ್ಯುತ್ತು, ವರುಣ, ಇಂದ್ರ, ಬ್ರಹ್ಮಲೋಕಗಳ ಮಾರ್ಗವಾಗಿ) ಪರಮಪುರುಷನನ್ನು ಸೇರುವರು. ಸರ್ವಜ್ಞನಾಗಿಯೂ, ಈ ಲೋಕದ ಬಂಧಮೋಕ್ಷಗಳಿಗೆ ಕಾರಣನಾಗಿಯೂ, ಸರ್ವನಿಯಾಮಕನಾಗಿಯೂ, ಬ್ರಹ್ಮಾದಿಗಳಿಗೂ ಅಧಿಪತಿಯಾಗಿಯೂ, ಈ ಪ್ರಪಂಚದ ಸೃಷ್ಟಿಸ್ಥಿತಿ ಸಂಹಾರಗಳಿಗೆ ಕರ್ತನಾಗಿಯೂ ಇರುವ ಆ ಪರಮಪುರುಷನನ್ನು ಸೇರುವುದಕ್ಕಾಗಿ, ಮೇಲೆ ಹೇಳಿದಂತೆ ನಿವೃತ್ತಿಧರ್ಮವನ್ನು ಹಿಡಿದ ಯೋಗಿಗಳು, ತಾವು ನಡೆಸತಕ್ಕ ಬ್ರಹ್ಮೋಪಾಸನದಲ್ಲಿ ಪೂರ್ಣವಾದ ಸಿದ್ಧಿಯನ್ನು ಹೊಂದುವುದಕ್ಕೆ ಮೊದಲೇ ಮರಣಹೊಂದಿದ ಪಕ್ಷದಲ್ಲಿ, ಅವರು ಎರಡು ಪರಾರ್ಧಕಾಲದವರೆಗೆ ನಿಲ್ಲತಕ್ಕ ಬ್ರಹ್ಮಲೋಕಕ್ಕೆ ಹೋಗಿ, ಅಲ್ಲಿ ಬ್ರಹ್ಮನೊಡನೆ ವಾಸಿಸುತ್ತಿರುವರು. ಯಾವಾಗ ಭಗವಂತನು ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಇಂದ್ರಿಯಗಳು, ಶಬ್ದಾದಿವಿಷಯಗಳು, ತಾಮಸಾಹಂಕಾರ, ಇವೇ ಮೊದಲಾದುವುಗಳಿಂದ ಆವೃತವಾದ ಬ್ರಹ್ಮಾಂಡವನ್ನು ತನ್ನಲ್ಲಿ ಲಯಹೊಂದಿಸುವುದಕ್ಕಾಗಿ, ಸ್ಥೂಲರೂಪದಿಂದ ತನಗೆ ಶರೀರವಾಗಿರುವ ಆ ಜಗತ್ತನ್ನೇ, ನಾಮರೂಪವಿಭಾಗಗಳಿಲ್ಲದ ಸೂಕ್ಷ್ಮದಶೆಯಿಂದ ತನಗೆ ಶರೀರವಾಗಿ ಹೊಂದುವನೋ, ಆಗ ಆ ಲೋಕದಲ್ಲಿರುವವರೆಲ್ಲರೂ, ಬ್ರಹ್ಮಲೋಕವನ್ನು ಸೇರಿದ ಯೋಗಿಗಳು ಕಲ್ಪಾಂತದವರೆಗೆ ಭಗವಂತನಲ್ಲಿ ಹೊರತು ಬೇರೊಂದರಲ್ಲಿ

ದೃಷ್ಟಿಯಿಡದೆ, ಇಂದ್ರಿಯಗಳನ್ನೂ ಮನಸ್ಸನ್ನೂ ತಡೆದು, ವಿರಕ್ತರಾಗಿ ಅಹಂಕಾರ ಮಮಕಾರಗಳೆಲ್ಲವನ್ನೂ ಬಿಟ್ಟ ಮೇಲೆಯೇ, ಕೊನೆಗೆ ಪರಮ ಪುರುಷನ ಸಾನ್ನಿಧ್ಯವನ್ನೂ ಸೇರುವರು. ಅಮ್ಮಾ! ಸತ್ಕರ್ಮಗಳನ್ನಾಚರಿಸಿ ದವರಿಗೆ ಹೀಗೆ ಧೂಮಾದಿಗತಿಯೆಂದೂ, ಅರ್ಚಿರಾದಿಗತಿಯೆಂದೂ ಎರಡು ಮಾರ್ಗವುಂಟು. ಪ್ರವೃತ್ತಿಧರ್ಮವನ್ನು ಹಿಡಿದು ಧೂಮಾದಿಗತಿಯಿಂದ ಪುಣ್ಯಲೋಕಗಳನ್ನು ಸೇರಿದವರು, ತಿರುಗಿ ಭೂಮಿಯಲ್ಲಿ ಜನಿಸಬೇಕಾಗು ವುದು. ನಿವೃತ್ತಿಧರ್ಮವನ್ನು ಹಿಡಿದು, ಸಮಸ್ತ ಕರ್ಮಗಳನ್ನೂ ಭಗವದ ರ್ಪಣವಾಗಿ ಮಾಡಿ ಭಕ್ತಿಯೋಗದಲ್ಲಿ ಪೂರ್ಣವಾದ ಸಿದ್ಧಿಯನ್ನು ಪಡೆದ ವರು, ನೆಟ್ಟಗೆ ಅರ್ಚಿರಾದಿಗತಿಯಿಂದ ಪರಮಪದವನ್ನು ಸೇರಿದ ಮೇಲೆ ಅವರಿಗೆ ಪುನರಾವೃತ್ತಿಯಿಲ್ಲವು. ಓ ಜನನೀ! ಆದುದರಿಂದ ನೀನೂ ಸಮಸ್ತ ಭೂತಗಳ ಹೃದಯಕಮಲದಲ್ಲಿ ನೆಲೆಗೊಂಡಿರುವ ಪುಣ್ಯಕೀರ್ತಿಯಾದ ಆ ಭಗವಂತನನ್ನೇ ದೃಢಮನಸ್ಸಿನಿಂದ ಮರೆಹೊಕ್ಕು, ಸದ್ಗತಿಯನ್ನು ಹೊಂದುವವಳಾಗು. ಮೋಕ್ಷವನ್ನು ಹೊಂದುವುದಕ್ಕೆ ಅನೇಕ ಮಾರ್ಗ ಗಳಿದ್ದರೂ ಭಕ್ತಿಗಿಂತಲೂ ಸುಲಭವಾದ ಮಾರ್ಗವಿಲ್ಲ. ಆ ಮಾರ್ಗವನ್ನೇ ಹಿಡಿದು ನೀನು ಭಗವಂತನನ್ನು ಭಜಿಸುತ್ತಿರು! ಯಾರಿಗಾದರೇನು! ಲೋಕ ದಲ್ಲಿ ದೇಹಾತ್ಮಾಭಿಮಾನವಿರುವವರೆಗೆ ಎಂದಿದ್ದರೂ ಸಂಸಾರದ ಕಟ್ಟು ತಪ್ಪಿ ದುದಲ್ಲ! ಸಮಸ್ತ ಲೋಕಗಳನ್ನೂ ಸೃಷ್ಟಿಸುವ ಮಹಾಮಹಿಮೆಯುಳ್ಳ ಬ್ರಹ್ಮನಾದರೂ ಕೂಡ, ದೇಹಾತ್ಮಾಭಿಮಾನದಿಂದ ವರ್ತಿಸಿದ ಪಕ್ಷದಲ್ಲಿ, ಅವನೂ ಸಂಸಾರಕ್ಕೆ ಕಟ್ಟುಬಿದ್ದೇ ತೀರಬೇಕು. ಮತ್ತು ಯಾವುದೋ ಒಂದು ಪುಣ್ಯವಿಶೇಷದಿಂದ ಬ್ರಹ್ಮಲೋಕವನ್ನು ಸೇರಿ, ಫಲಾಪೇಕ್ಷೆಯಿಲ್ಲದ ಕರ್ಮಗಳಲ್ಲಿ ನಿರತರಾಗಿದ್ದರೂ ಕೂಡ, ದೇಹಾತ್ಮಾಭಿಮಾನವುಳ್ಳವರಾದ ಪಕ್ಷದಲ್ಲಿ ತಿರುಗಿ ಸಂಸಾರದಲ್ಲಿ ಬೀಳುವರು. ಹೀಗಿರುವಾಗ ಬೇರೆ ಸಾಮಾನ್ಯ ಜನರು ಈ ದೇಹಾಭಿಮಾನದಿಂದ ಸಂಸಾರದಲ್ಲಿ ಕಟ್ಟುಬೀಳುವರೆಂಬುದನ್ನು ಹೇಳಬೇಕಾದುದೇನು? ಸೃಷ್ಟಿಕರ್ತನಾಗಿಯೂ, ವೇದಗರ್ಭನಾಗಿಯೂ ಇರುವ ಬ್ರಹ್ಮದೇವನಾಗಲೀ ಮರೀಚಿ ಮೊದಲಾದ ಮಹರ್ಷಿಗಳಾಗಲೀ, ಯೋಗಪ್ರವರ್ತಕರಾದ ಸನಕಾದಿಗಳಾಗಲೀ, ಇತರ ಸಿದ್ಧರಾಗಲೀ ಫಲಾ ಪೇಕ್ಷೆಯಿಲ್ಲದ ಕರ್ಮಗಳನ್ನು ನಡೆಸಿದರಾದರೂ 'ನಾನೇ ಕರ್ಮಗಳನ್ನು

ಮಾಡತಕ್ಕವ' ನೆಂಬ ಅಹಂಭಾವವನ್ನು ಸ್ವಲ್ಪಮಾತ್ರವಾದರೂ ಇಟ್ಟ ಪಕ್ಷ ದಲ್ಲಿ, ಸೂಕ್ಷ್ಮಚಿದಚಿದ್ವಿಶಿಷ್ಟನಾದ ಭಗವಂತನಲ್ಲಿ ಲಯಹೊಂದಿದ್ದು, ತಿರುಗಿ ಸೃಷ್ಟಿದಶೆಯಲ್ಲಿ ಮೊದಲಿನಂತೆಯೇ ಹುಟ್ಟಬೇಕಾಗುವುದೇ ಹೊರತು, ಅಂತವರು ಪರಮಪದವನ್ನು ಸೇರಿ ಭಗವದನುಭವವೆಂಬ ನಿತ್ಯಾನಂದವನ್ನ ನುಭವಿಸಲಾರರು. ಬ್ರಹ್ಮಪದವಿಯೆಂಬ ಐಶ್ವರ್ಯವೂ ಕೂಡ ಪುಣ್ಯಕರ್ಮ ಗಳಿಂದಲೇ ಲಭಿಸತಕ್ಕುದಾದುದರಿಂದ, ಕರ್ಮಾಧೀನವೆನಿಸಿಕೊಳ್ಳುವುದು. ಅದನ್ನನುಭವಿಸಿ ಪರಮಪುರುಷನಲ್ಲಿ ಲೀನವಾಗಿದ್ದು, ತಿರುಗಿ ಇತರ ಲೋಕ ಗಳಂತೆ ಸೃಷ್ಟಿಗೊಳಪಡಬೇಕಾಗುವುದು. ಹೀಗೆ ಫಲಾಪೇಕ್ಷೆಯಿಲ್ಲದೆ ಕರ್ಮ ಗಳನ್ನು ನಡೆಸಿದವರೂ ಕೂಡ ದೇಹಾತ್ಮಾಭಿಮಾನವುಳ್ಳವರಾದರೆ ಸಂಸಾರ ದಲ್ಲಿ ಸಿಕ್ಕಿ ಬೀಳುವರು. ಹೀಗಿರುವಾಗ ಸಂಸಾರಿಕ ಫಲಗಳನ್ನೇ ಅಪೇಕ್ಷಿಸಿ ಕರ್ಮಗಳನ್ನು ನಡೆಸತಕ್ಕ ದೇಹಾಭಿಮಾನಿಗಳಿಗೆ ಹೇಗೆ ತಾನೇ ಆ ಸಂಸಾರದ ಕಟ್ಟು ಬಿಟ್ಟುಹೋಗುವುದು ? ಬ್ರಹ್ಮಪದವಿಯೇ ಮೊದಲಾದ ಐಶ್ವರ್ಯ ಗಳಲ್ಲಿ ಆಸೆಯುಳ್ಳವರು ಅದಕ್ಕೆ ಬೇಕಾದ ಕರ್ಮಗಳಲ್ಲಿಯೇ ಶ್ರದ್ಧೆಯಿಟ್ಟು ನಿತ್ಯಕರ್ಮಗಳನ್ನೂ ಕೂಡ ಆ ಫಲಗಳನ್ನಪೇಕ್ಷಿಸಿಯೇ ನಡೆಸುವರು. ಹೀಗೆ ರಜೋಗುಣದಿಂದ ಮನಸ್ಸು ಕರಗಿದವರು, ಆಯಾ ಫಲಗಳನ್ನು ಕೋರುತ್ತ, ಇಂದ್ರಿಯಗಳನ್ನು ತಡೆಯಲಾರದೆ, ಗೃಹಸ್ಥಧರ್ಮಗಳಲ್ಲಿ ಪ್ರವರ್ತಿಸಿ, ದೇವತೆ ಗಳನ್ನೂ, ಪಿತೃದೇವತೆಗಳನ್ನೂ ಪೂಜಿಸುವರು. ಹೀಗೆ ಧರ್ಮಾರ್ಥಕಾಮ ಗಳಲ್ಲಿ ಅಪೇಕ್ಷೆಯುಳ್ಳ ಪುರುಷರು, ಪುಣ್ಯಶ್ಲೋಕನಾಗಿಯೂ, ಸಂಸಾರ ನಿವರ್ತಕನಾಗಿಯೂ ಇರುವ ಭಗವಂತನಲ್ಲಿ ಮನಸ್ಸನ್ನು ಚೆನ್ನಾಗಿ ನೆಲೆ ಗೊಳಿಸಲಾರರು. ಇಂತಹ ವಿವೇಕಹೀನರಿಗೆ ಹರಿಕಥಾಶ್ರವಣಾದಿಗಳಲ್ಲಿ ತೃಪ್ತಿಯಿರದು. ಉತ್ತಮ ಪದಾರ್ಥಗಳನ್ನು ಬಿಟ್ಟು ಅಮೇಧ್ಯವನ್ನು ತಿಂದು ತೃಪ್ತಿಪಡುವ ಹಂದಿ ಮೊದಲಾದುವುಗಳಂತೆ, ಅಸತ್ಕಥೆಗಳನ್ನು ಕೇಳುವುದರಲ್ಲಿಯೇ ತೃಪ್ತಿಪಡುತ್ತಿರುವರು. ಜನನೀ ! ಇಂಥವರನ್ನು ದೈವ ದಿಂದ ವಂಚಿಸಲ್ಪಟ್ಟವರೆಂದೇ ಹೇಳಬೇಕು. ಇಂತಹ ದುರ್ಭಾಗ್ಯರಿಗೆ ಪ್ರಾಪ್ತ ವಾಗುವ ಗತಿಯಾವುದೆಂಬುದನ್ನು ಹೇಳುವೆನು ಕೇಳು. ಇಂತವರು ಸೂರ್ಯ ನಿಗೆ ದಕ್ಷಿಣದಿಕ್ಕಿನಲ್ಲಿರುವ ಧೂಮಾದಿ ಮಾರ್ಗದಿಂದ ಪಿತೃಲೋಕಕ್ಕೆ ಹೋಗಿ, ಹಿಂತಿರುಗಿ ತಮ್ಮ ತಮ್ಮ ಮಕ್ಕಳಿಗೆ ಮಕ್ಕಳಾಗಿ ಹುಟ್ಟುವರು. ಇಂತವರು

ಹುಟ್ಟಿ, ಗರ್ಭಾಧಾನ ಮೊದಲುಗೊಂಡು, ಶ್ಮಶಾನದಲ್ಲಿ ನಡೆಯತಕ್ಕ ದೇಹ ಸಂಸ್ಕಾರಗಳೆಲ್ಲವನ್ನೂ ಹೊಂದಿದ ಮೇಲೆ, ತಿರುಗಿ ಪರಲೋಕವನ್ನು ಸೇರಿ, ಅಲ್ಲಿನ ಸುಖಗಳನ್ನನುಭವಿಸುತ್ತಿದ್ದು, ತಮ್ಮ ಪುಣ್ಯಫಲವು ಮುಗಿದ ಮೇಲೆ ದೇವತೆಗಳಿಂದ ಕೆಳಕ್ಕೆ ನೂಕಲ್ಪಟ್ಟವರಾಗಿ, ತಿರುಗಿ ಈ ಲೋಕದಲ್ಲಿ ಜನಿಸುವರು. ಜನನೀ! ಇದೇ ಕಾಮ್ಯಕರ್ಮಗಳನ್ನು ನಡೆಸತಕ್ಕವರ ಗತಿಯು. ಆದುದರಿಂದ ನೀನು ಸರ್ವಲೋಕನಮಸ್ಕೃತನಾದ ಆ ಭಗವಂತನ ಪಾದಪದ್ಮಗಳನ್ನೇ ಸರ್ವವಿಷಯದಲ್ಲಿಯೂ ನಂಬಿ ಅವನನ್ನು ಸೇವಿಸುತ್ತಿರು. ಭಗವಂತನಾದ ಆ ವಾಸುದೇವನಲ್ಲಿ ನೆಲೆಗೊಳಿಸಿದ ಭಕ್ತಿರೂಪವಾದ ಜ್ಞಾನವೇ ಶೀಘ್ರದಲ್ಲಿ ವಿರಕ್ತಿಯನ್ನೂ ಹುಟ್ಟಿಸಿ, ಕೊನೆಗೆ ಪರಬ್ರಹ್ಮನನ್ನು ಸಾಕ್ಷಾತ್ಕರಿಸುವಂತೆಯೂ ಮಾಡುವುದು. ಯಾವಾಗ ಭಗವದುಪಾಸನೆ ಮಾಡತಕ್ಕ ಚೇತನ ಮನಸ್ಸು, ಶಬ್ದಾದಿ ವಿಷಯಗಳನ್ನು ಕಂಡಾಗಲೂ, ಅದರಿಂದ ತೋರಿಬರುವ ಸುಖದುಃಖಗಳೆಂಬ ಭೇದವನ್ನು ಗ್ರಹಿಸಿದಂತೆ ತೋರುವುದೋ, ಯಾವಾಗ ಉಪಾಸಕನ ಮನಸ್ಸು, ಶಬ್ದಾದಿ ವಿಷಯಗಳಲ್ಲಿ ಪ್ರವೃತ್ತಿಯನ್ನು ಬಿಟ್ಟು, ಇಷ್ಟರೆಂದೂ, ವಿರೋಧಿಗಳೆಂದೂ ಭೇದಬುದ್ಧಿಯನ್ನಿಡದೆ, ಎಲ್ಲವೂ ಬ್ರಹ್ಮಾತ್ಮಕವೆಂಬ ಸಮಬುದ್ಧಿಯನ್ನು ಹೊಂದಿ, ಶುಭಾಶ್ರಯವಾದ ಭಗವದ್ವಿಗ್ರಹವೊಂದರಲ್ಲಿಯೇ ನೆಲೆಗೊಳ್ಳುವುದೋ, ಆಗ ಅಂತಹ ಮನಸ್ಸಿನಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು. ಕೇವಲ ಜ್ಞಾನಸ್ವರೂಪನಾಗಿ, ಪರಮಾತ್ಮನೆಂದೂ, ಈಶ್ವರನೆಂದೂ ಹೇಳಲ್ಪಡುವ ಆ ಭಗವಂತನೊಬ್ಬನೇ ಪೃಥಿವಿ ಮೊದಲಾದ ಪಂಚಭೂತ ಸ್ವರೂಪದಿಂದಲೂ, ಅವುಗಳಿಂದ ಕಲ್ಪಿತವಾದ ದೇಹವುಳ್ಳ ದೇವಮನುಷ್ಯಾದಿ ರೂಪಗಳಿಂದಲೂ ಕಾಣುತ್ತಿರುವನು. ಆದುದರಿಂದ ಸಮಸ್ತ ಜಗತ್ತೂ ಬ್ರಹ್ಮಾತ್ಮಕವೆಂದೇ ತಿಳಿ! ಯೋಗಿಗಳು ಸಾಂಗವಾದ ಈ ಭಕ್ತಿಯೋಗವನ್ನು ಹಿಡಿದುದಕ್ಕೆ ಪ್ರಕೃತಿ ಸಂಬಂಧವನ್ನು ನೀಗಿ, ಎಲ್ಲೆಯಿಲ್ಲದ ಆನಂದಸ್ವರೂಪವಾಗಿಯೂ, ಪಾಪನಿವೃತ್ತಿಯೇ ಮೊದಲಾದ ಅಷ್ಟಗುಣಗಳಿಂದ ಕೂಡಿದುದಾಗಿಯೂ ಇರುವ ತಮ್ಮ ಶುದ್ಧ ಸ್ವರೂಪವನ್ನು ಹೊಂದುವುದೇ ಫಲವು. ಈ ಜೀವನಂತೆಯೇ ಪರಮಾತ್ಮನಿಗೂ ಆ ಪ್ರಕೃತಿ ಸಂಬಂಧವಿದ್ದರೂ, ಅದರಲ್ಲಿ ಒಂದು ವಿಶೇಷವುಂಟು. ಸತ್ವಾದಿ ಗುಣಗಳ ಸಂಬಂಧವಿಲ್ಲದೆ, ಕೇವಲ

ಜ್ಞಾನಸ್ವರೂಪನಾದ ಜೀವನು, ಇತರ ವಸ್ತುಗಳನ್ನು ಗೋಚರಿಸುವ ಹಾಗೆ ಮಾಡತಕ್ಕ ಇಂದ್ರಿಯಗಳಿಂದಲೂ, ಪಂಚಭೂತಗಳಿಂದಲೂ ಏರ್ಪಟ್ಟ ದೇವ ಮನುಷ್ಯಾದಿ ರೂಪಗಳನ್ನು ಹೊಂದಿದಾಗ, ಅದನ್ನು ತಾನೆಂದೇ ಭ್ರಮಿಸು ವನು. ಭಗವಂತನು ಸರ್ವಜ್ಞನಾದುದರಿಂದ ಅವನಿಗೆ ಆ ಭ್ರಾಂತಿಯಿಲ್ಲ. ಮತ್ತು ಎಲೆ ಮಾತೆ! ಮೊದಲು ಮಹತ್ತತ್ವದಿಂದ ಅಹಂಕಾರತತ್ವವಾಗಿ ಮಾರ್ಪಟ್ಟು, ಅದರಲ್ಲಿಯೇ ಸಾತ್ವಿಕ, ರಾಜಸ, ತಾಮಸಗಳೆಂದು ಮೂರು ವಿಧವಾಗಿ, ಅದರಲ್ಲಿ ಪೃಥಿವಿ ಮೊದಲಾದ ಭೂತಗಳ ಸ್ವರೂಪದಿಂದ ಐದು ವಿಧವಾಗಿಯೂ ಬೇರ್ಪಟ್ಟ ತತ್ವಗಳೂ, ಈ ತತ್ವಗಳ ಸಮುದಾಯರೂಪ ವಾದ ಅಂಡವೂ, ಅದರಲ್ಲಿ ಕಾಣಿಸಿಕೊಂಡ ಬ್ರಹ್ಮನೂ, ಮೂಲಪ್ರಕೃತಿ ವಿಶಿಷ್ಟನಾದ ಯಾವ ಭಗವತನಿಂದಲೇ ಉತ್ಪನ್ನವಾದುವೋ ಅಂತಹ ಭಗ ವಂತನಿಗೆ ಈ ಸಮಸ್ತ ಪ್ರಪಂಚವೂ ಶರೀರವೆಂಬುದರಲ್ಲಿ ಸಂದೇಹವೇನಿದೆ? ಹೀಗೆ ಸಮಸ್ತ ಜಗತ್ತೂ ಬ್ರಹ್ಮಾತ್ಮಕವೆಂಬ ವಿಷಯವನ್ನು, ವಿರಕ್ತನಾ ಗಿಯೂ, ನಿಸ್ಸಂಗನಾಗಿಯೂ, ದೃಢಚಿತ್ತನಾಗಿಯೂ ಇರುವ ಯೋಗಿಯು, ಶ್ರದ್ಧೆಯಿಂದಲೂ, ಭಕ್ತಿಯಿಂದಲೂ, ವೈರಾಗ್ಯದಿಂದಲೂ ಸ್ಪಷ್ಟವಾಗಿ ತಿಳಿದುಕೊಳ್ಳಬಹುದು. ಓ ಜನನೀ! ಇದುವರೆಗೆ ನಾನು ನಿನಗೆ ಪ್ರಕೃತಿ, ಪುರುಷ, ಪರಮಾತ್ಮರೆಂಬ ಮೂರು ತತ್ವಗಳ ನಿಶ್ಚಯವನ್ನು ತಿಳಿಸತಕ್ಕ ಜ್ಞಾನಯೋಗವನ್ನು ವಿವರಿಸಿದೆನು. ಭಗವದುಪಾಸನಾರೂಪವಾದ ಭಕ್ತಿ ಯೋಗವನ್ನೂ ತಿಳಿಸಿದೆನು. ಈ ಜ್ಞಾನಯೋಗಕ್ಕಾಗಲೀ, ಭಕ್ತಿಯೋಗ ಕ್ಕಾಗಲೀ, ಭಗವಂತನೆಂದು ಹೇಳಲ್ಪಡುವ ಆ ಪರಮಪುರುಷನೊಬ್ಬನೇ ಉದ್ದೇಶ್ಯವಸ್ತುವೆಂದು ತಿಳಿ. ಇವೆಲ್ಲಕ್ಕೂ ಭಗವಂತನೊಬ್ಬನೇ ಹೇಗೆ ಪ್ರಾಪ್ಯ ನಾಗುವನೆಂದು ಶಂಕಿಸಬೇಡ. ಹಾಲು ಮೊದಲಾದ ಒಂದೇ ಪದಾರ್ಥವು, ನೇತ್ರೇಂದ್ರಿಯಕ್ಕೆ ಬಿಳುಪು, ಕಪ್ಪು, ಮೊದಲಾದ ಬಣ್ಣದಿಂದಲೂ, ನಾಲಗೆಗೆ, ರುಚಿ, ಕಹಿ ಮೊದಲಾದ ಗುಣದಿಂದಲೂ, ತ್ವಗಿಂದ್ರಿಯಕ್ಕೆ ಶೀತೋಷ್ಣಾದಿ ಗುಣಗಳಿಂದಲೂ, ತೋರ್ಪಡುವಂತೆ, ಭಗವಂತನೊಬ್ಬನೇ ಆಯಾ ಶಾಸ್ತ್ರ ಮಾರ್ಗಗಳಿಂದ ಬೇರೆ ಬೇರೆ ವಿಧದಲ್ಲಿ ಉಪಾಸನೆ ಮಾಡಲ್ಪಡುವನು. ಮತ್ತು ಪಾಂಚರಾತ್ರದಲ್ಲಿ ಹೇಳಲ್ಪಟ್ಟ ಪೂಜಾವಿಧಿಗಳಿಂದಲೂ, ವೇದದ ಪೂರ್ವಭಾಗದಲ್ಲಿ ಹೇಳಲ್ಪಟ್ಟ ಯಜ್ಞಾದಿಗಳಿಂದಲೂ, ದಾನಾದಿ ಸತ್ಕರ್ಮ

ಗಳಿಂದಲೂ, ತಪಸ್ಸಿನಿಂದಲೂ, ವೇದಾರ್ಥಗಳ ವಿಮರ್ಶೆಗಳಿಂದಲೂ, ಇಂದ್ರಿಯ ನಿಗ್ರಹದಿಂದಲೂ, ಫಲಾಪೇಕ್ಷೆಯಿಂದಲೂ, ಫಲಾಪೇಕ್ಷೆಯಿಲ್ಲದೆಯೂ ನಡೆಸತಕ್ಕ ಸಕಾಮ ನಿಷ್ಕಾಮಗಳೆಂಬ ಎರಡು ಬಗೆಯ ಕರ್ಮಗಳಿಂದಲೂ, ನಿವೃತ್ತಿಧರ್ಮದಿಂದಲೂ, ನಾನಾಬಗೆಯ ಅಂಗಗಳುಳ್ಳ ಭಕ್ತಿಯೋಗದಿಂದಲೂ, ಪ್ರಕೃತಿಗಿಂತಲೂ, ವಿಲಕ್ಷಣವಾದ ಆತ್ಮತತ್ವವನ್ನು ತಿಳಿಸತಕ್ಕ ಜ್ಞಾನಯೋಗದಿಂದಲೂ, ದೃಢವಾದ ವೈರಾಗ್ಯದಿಂದಲೂ, ಇವೇ ಮೊದಲಾಗಿ ಇನ್ನೂ ನಾನಾವಿಧ ಕಾರ್ಯಗಳಿಂದಲೂ, ಸಮಸ್ತ ಕಲ್ಯಾಣ ಗುಣ ಪರಿಪೂರ್ಣನಾಗಿ, ಹೇಯಗುಣವಿಲ್ಲದೆ, ಸ್ವಯಂಪ್ರಕಾಶವುಳ್ಳವನಾದ ಆ ಭಗವಂತನೊಬ್ಬನೇ ಬೇರೆ ಬೇರೆ ದೇವತಾಸ್ವರೂಪದಿಂದ ಉಪಾಸಿಸಲ್ಪಡುವನು. ಓ ಜನನೀ! ಸಾತ್ವಿಕ, ರಾಜಸ, ತಾಮಸಗಳೆಂಬ ಮೂರು ವಿಧವಾದ ಭಕ್ತಿಯನ್ನೂ, ಅದರಲ್ಲಿಯೂ, ಸರ್ವೋತ್ತಮನಿವೆಸಿಕೊಂಡ ನೈರ್ಗುಣ್ಯರೂಪವಾದ (ಆತ್ಯಂತಿಕ) ಭಕ್ತಿಯನ್ನೂ ನಿನಗೆ ತಿಳಿಸಿದೆನು. ಹೀಗೆ ನಾಲ್ಕು ಬಗೆಯ ಭಕ್ತಿಯೋಗಗಳನ್ನಲ್ಲದೆ, ಸಮಸ್ತ ಭೂತಗಳನ್ನೂ ನಾಶಹೊಂದಿಸುತ್ತ ಯಾರಿಗೂ ತಿಳಿಯದೆ ನಡೆದುಹೋಗತಕ್ಕ ಕಾಲಸ್ವರೂಪವನ್ನೂ ತಿಳಿಸಿದೆನು. ಮತ್ತು ಜೀವಾತ್ಮನು ಯಾವುದರಲ್ಲಿ ಪ್ರವೇಶಿಸಿ ತನ್ನ ನಿಜಸ್ಥಿತಿಯನ್ನೇ ತಾನು ತಿಳಿಯದೆ ಹೋಗುವನೋ ಅಂತಹ ಅವಿದ್ಯೆಯ ಸ್ವರೂಪವನ್ನೂ, ಆ ಅವಿದ್ಯೆಯ ಕಾರ್ಯಗಳಿಂದ ವಿಚಿತ್ರವಾಗಿ ಹರಡಿರುವ ಸಂಸಾರ ಗತಿಗಳನ್ನೂ ನಿನಗೆ ತಿಳಿಸಿದೆನು. ಓ ಜನನೀ! ನಾನು ಇದುವರೆಗೆ ನಿನಗುಪದೇಶಿಸಿದ ಈ ವೇದಾಂತಾರ್ಥಗಳನ್ನು ತಕ್ಕ ಅಧಿಕಾರಗಳಿಲ್ಲದೆ, ಅಸತ್ಪಾತ್ರಗಳಿಗೆ ಉಪದೇಶಿಸಬಾರದು. ಈ ವೇದಾಂತಾರ್ಥವನ್ನುಪದೇಶಹೊಂದುವುದಕ್ಕೆ ಅಧಿಕಾರಿಗಳಲ್ಲದವರಾರೆಂಬುದನ್ನು ತಿಳಿಸುವೆನು ಕೇಳು! ಇತರರನ್ನು ಭಯಪಡಿಸಿ ಹಿಂಸಿಸತಕ್ಕ ಸ್ವಭಾವವುಳ್ಳವರು, ವಿನಯಗುಣವಿಲ್ಲದ ಮೂರ್ಖರು, ಧೂರ್ತರು, ಆಚಾರಹೀನರು, ಡಾಂಭಿಕರು, ವಿಷಯಾಸಕ್ತರು, ಕುಟುಂಬಧರ್ಮದಲ್ಲಿಯೇ ವಿಶೇಷಾಸಕ್ತಿಯುಳ್ಳವರು, ನನ್ನಲ್ಲಿ ಭಕ್ತಿಯಿಲ್ಲದವರು, ನನ್ನ ಭಕ್ತರನ್ನು ವಿರೋಧಿಸತಕ್ಕವರು, ಇಂತವರೆಲ್ಲರೂ, ಈ ವೇದಾಂತ ತತ್ವವನ್ನು ಉಪದೇಶ ಹೊಂದುವುದಕ್ಕೆ ಯೋಗ್ಯರಲ್ಲ. ಶ್ರದ್ಧೆಯುಳ್ಳವರಾಗಿಯೂ, ಶಾಂತರಾಗಿಯೂ, ನನ್ನಲ್ಲಿ ಭಕ್ತಿಯುಳ್ಳವರಾ

ಗಿಯೂ, ಸದಾಚಾರನಿಷ್ಠರಾಗಿಯೂ, ಮಾತ್ಸರ್ಯಾದಿ ದುರ್ಗುಣವಿಲ್ಲದವರಾಗಿಯೂ, ಶುದ್ಧರಾಗಿಯೂ, ಬುದ್ಧಿವಂತರಾಗಿಯೂ, ಸಮಸ್ತ ಭೂತಗಳಲ್ಲಿಯೂ ಮೈತ್ರಿಯುಳ್ಳವರಾಗಿಯೂ, ವಿರಕ್ತರಾಗಿಯೂ, ಸಮಸ್ತ ವಸ್ತುಗಳಿಗಿಂತಲೂ ನನ್ನನ್ನೇ ಪ್ರಿಯವಸ್ತುವನ್ನಾಗಿ ಭಾವಿಸತಕ್ಕವರಾಗಿಯೂ ಇರುವ ಸತ್ಪುರುಷರು ಮಾತ್ರವೇ ಈ ವೇದಾಂತಾರ್ಥವನ್ನು ಉಪದೇಶಹೊಂದುವುದಕ್ಕೆ ತಕ್ಕ ಅಧಿಕಾರಿಗಳು. ಅಮ್ಮಾ! ನಾನು ಹೇಳಿದ ಈ ವೇದಾಂತಾರ್ಥವನ್ನು ಯಾವನು ಮತ್ತೊಬ್ಬರಿಗೆ ಉಪದೇಶಿಸುವನೋ, ಅಂತಹ ಪುರುಷನು ನನ್ನಲ್ಲಿಯೇ ನಟ್ಟ ಮನಸ್ಸುಳ್ಳವನಾಗಿ ನನ್ನ ಸಾನ್ನಿಧ್ಯವನ್ನು ಸೇರುವನು" ಎಂದನು. ಇಲ್ಲಿಗೆ ಮೂವತ್ತೆರಡನೆಯ ಅಧ್ಯಾಯವು.

---

{ ದೇವಹೂತಿಯು ಕಪಿಲನನ್ನು ಸ್ತೋತ್ರಮಾಡಿ, ಯೋಗಮಾರ್ಗವನ್ನು ಹಿಡಿದು ಮುಕ್ತಿಯನ್ನು ಹೊಂದಿದುದು. ಕಪಿಲಮುನಿಯು ಕಣ್ಮರೆಯಾದುದು. }

ಆಮೇಲೆ ಮೈತ್ರೇಯ ಮಹಾಮುನಿಯು, ವಿದುರನನ್ನು ಕುರಿತು, "ವಿದುರಾ! ಕೇಳು: ಕಪಿಲಮಹಾಮುನಿಯು ಮಾಡಿದ ಈ ಜ್ಞಾನೋಪದೇಶದಿಂದ ದೇವಹೂತಿಯು ಪರಮಸಂತುಷ್ಟಳಾದಳು. ಅವಳ ಜ್ಞಾನೋದಯಕ್ಕೆ ಮರೆಯಾಗಿದ್ದ ಅಜ್ಞಾನವೆಂಬ ತೆರೆಯು ನೀಗಿತು. ಆಗ ಕರ್ದಮಪುತ್ರಿಯಾದ ಆ ದೇವಹೂತಿಯು, ಪ್ರಕೃತಿಪುರುಷೇಶ್ವರರೆಂಬ ಮೂರು ತತ್ವಗಳ ನಿಜಸ್ಥಿತಿಯನ್ನು ತಿಳಿದ ಮಹಾಯೋಗಿಗಳಿಗೂ ಧ್ಯಾನಗೋಚರನಾದ ಆ ಕಪಿಲರೂಪಿಯಾದ ಭಗವಂತನನ್ನು ಹೀಗೆಂದು ಸ್ತೋತ್ರಮಾಡಲಾರಂಭಿಸಿದಳು. "ಹೇ ದೇವಾ! ಸಾಕ್ಷಾತ್ತಾಗಿ ನಿನ್ನ ನಾಭಿಕಮಲದಿಂದಲೇ ಹುಟ್ಟಿ ಈ ಸಮಸ್ತ ಲೋಕಗಳನ್ನೂ ಸೃಷ್ಟಿಸತಕ್ಕ ಬ್ರಹ್ಮನು ಕೂಡ, ನಿನ್ನನ್ನು ಪ್ರತ್ಯಕ್ಷವಾಗಿ ನೋಡಲಾರದೆ ಧ್ಯಾನದಿಂದ ನಿನ್ನನ್ನು ಸಾಕ್ಷಾತ್ಕರಿಸಿದನು.

ಮೊದಲು ಮಹಾಸಮುದ್ರದಲ್ಲಿ ನೀನೊಬ್ಬನೇ ಏಕಾಕಿಯಾಗಿ ಮಲಗಿದ್ದವನು. ಈಗ ಭೂಮಿ ಮೊದಲಾದ ಪಂಚಭೂತಗಳಾಗಿಯೂ, ಏಕಾದಶೇಂದ್ರಿಯಗಳಾಗಿಯೂ, ಶಬ್ದಾದಿ ವಿಷಯಗಳಾಗಿಯೂ ವಿಸ್ತರಿಸಿದ ಪ್ರಕೃತಿಯೂ, ಜೀವಗಳೂ ಆಗ ನಿನಗೆ ಶರೀರರೂಪವಾಗಿಯೇ ಇದ್ದುವು. ಚರಾಚರಾತ್ಮಕವಾದ ಈ ಸಮಸ್ತಪ್ರಪಂಚವನ್ನೂ ಜಠರಪ್ರದೇಶದಲ್ಲಿಟ್ಟುಕೊಂಡು, ತನ್ನೊಳಗೆ ಸೇರಿದ್ದ ಆ ಪ್ರಕೃತಿಯ ಗುಣಗಳನ್ನು ಹರಡಿಸಿ ಈ ಪ್ರಪಂಚರೂಪದಿಂದ ಕಾಣಿಸತಕ್ಕ ನಿನ್ನ ಸ್ವರೂಪವನ್ನು, ನಿನ್ನಿಂದ ಸಾಕ್ಷಾತ್ತಾಗಿ ಹುಟ್ಟಿದ ಬ್ರಹ್ಮದೇವನೇ ಪ್ರತ್ಯಕ್ಷದಲ್ಲಿ ಕಾಣಲಾರದ ಮೇಲೆ, ಇನ್ನು ನಮ್ಮಂತವರ ಪಾಡೇನು ? ಓ! ಮಹಾತ್ಮಾ! ನೀನು ಪೂರ್ಣಕಾಮನಾದುದರಿಂದ ಉದ್ದೇಶಿಸಿ ನಡೆಸಬೇಕಾದ ಕಾರ್ಯವೊಂದೂ ಇರುವುದಿಲ್ಲ. ಹೀಗೆ ನೀನು ನಿರ್ವ್ಯಾಪಾರನಾಗಿದ್ದರೂ, ಲೀಲಾರ್ಥವಾಗಿಯೇ ಸತ್ವಾದಿಗುಣಗಳನ್ನವಲಂಬಿಸಿ, ಬ್ರಹ್ಮರುದ್ರಾದಿ ಶರೀರಗಳಲ್ಲಿ ಪ್ರವೇಶಿಸಿ, ನಿನ್ನ ಸಂಕಲ್ಪಶಕ್ತಿಯಿಂದಲೇ ಸೃಷ್ಟಿ, ಸ್ಥಿತಿ, ಸಂಹಾರ ಮೊದಲಾದುವುಗಳನ್ನು ನಡೆಸುತ್ತಿರುವೆ! ನೀನು ಊಹಿಸುವುದಕ್ಕೂ ಸಾಧ್ಯವಿಲ್ಲದ ಅನಂತಶಕ್ತಿಯುಳ್ಳವನಾದುದರಿಂದ, ನಿನಗೆ ಅಸಾಧ್ಯವಾದ ಕಾರ್ಯವೊಂದೂ ಇರುವುದಿಲ್ಲ. ಎಲೈ ದೇವದೇವನೆ! ನೀನು ಮಹಾಪ್ರಳಯದಲ್ಲಿಯೂ ಕೂಡ, ಸಮಸ್ತ ಪ್ರಪಂಚವನ್ನೂ ನಿನ್ನಲ್ಲಿಯೇ ಅಡಗಿಸಿಕೊಂಡು, ಆ ಪ್ರಳಯಸಾಗರದ ಮಧ್ಯದಲ್ಲಿ ಒಂದು ಸಣ್ಣ ಮಗುವಿನಂತೆ, ಆಲದೆಲೆಯ ಮೇಲೆ ಮಲಗಿ, ಕಾಲ್ಬೆರಳನ್ನು ಬಾಯಲ್ಲಿಟ್ಟು ರುಚಿನೋಡುತ್ತ, ಲೋಕಮೋಹಕವಾದ ಮಾಯಾಶಿಶುಸ್ವರೂಪದಿಂದ ಕಾಣಿಸಿಕೊಳ್ಳುವೆ. ಹೀಗೆ ಸರ್ವಜಗತ್ಕಾರಣನಾಗಿಯೂ, ಸರ್ವನಿಯಾಮಕನಾಗಿಯೂ, ಇರುವ ಪರಮಪುರುಷನಾದ ನೀನು ಸಾಮಾನ್ಯಸ್ತ್ರೀಯಾದ ಈ ನನ್ನ ಗರ್ಭದಲ್ಲಿ ಹುಟ್ಟಿದ ಮೇಲೆ, ನನ್ನ ಭಾಗ್ಯವನ್ನೇನೆಂದು ಹೇಳಲಿ! ನನ್ನನ್ನು ಕೃತಾರ್ಥಳನ್ನಾಗಿ ಮಾಡಿದೆ. ಎಲೈ ಮಹಾತ್ಮನೇ! ಪಾಪಿಗಳನ್ನು ನಿಗ್ರಹಿಸಿ, ಭಕ್ತರನ್ನು ರಕ್ಷಿಸುವುದಕ್ಕಾಗಿ ಇದಕ್ಕೆ ಮೊದಲೇ ವರಾಹಾದ್ಯವತಾರಗಳನ್ನು ಧರಿಸಿದ ನೀನು, ಈ ಲೋಕಕ್ಕೆ ತತ್ವಜ್ಞಾನವನ್ನುಪದೇಶಿಸುವುದಕ್ಕಾಗಿ ಈಗ ನನ್ನ ಗರ್ಭದಲ್ಲಿ ಈ ಕಪಿಲರೂಪದಿಂದವತರಿಸಿದೆ. ದೇವಾ! ನೀನು ಈ ನಿನ್ನ ಅವತಾರದ ಪ್ರಯೋಜನ

ಕ್ಕಾಗಿ ತತ್ವೋಪದೇಶದಿಂದ ಲೋಕೋಜ್ಜೀವನವನ್ನು ಮಾಡುವುದು ಹಾಗಿರಲಿ! ಒಂದಾವರ್ತಿ ನಿನ್ನ ನಾಮವನ್ನು ಭಜಿಸಿದರೂ, ನಿನ್ನ ಸತ್ಕಥೆಗಳನ್ನು ಕಿವಿಯಿಂದ ಕೇಳಿದರೂ, ನಿನ್ನ ಸ್ವರೂಪವನ್ನು ಮನಸ್ಸಿನಲ್ಲಿ ಧ್ಯಾನಿಸಿದರೂ ಕೂಡ, ಚಂಡಾಲಾದಿ ನೀಚಜಾತಿಗೂ ಮುಕ್ತಿಯು ಕೈಗೂಡುವುದು. ಹೀಗಿರುವಾಗ ನಿನ್ನನ್ನು ಪುತ್ರನನ್ನಾಗಿ ಪಡೆದು ನಿನ್ನ ಸ್ವರೂಪವನ್ನು ಕಣ್ಣಾರೆ ನೋಡುತ್ತಿರುವ ನನಗೆ, ನಿನ್ನ ಅನುಗ್ರಹದಿಂದ ಮುಕ್ತಿಯುಂಟಾಗುವುದರಲ್ಲಿ ಸಂದೇಹವೇನಿದೆ? ಓ ಮಹಾತ್ಮಾ! ಯಾವನ ನಾಲಗೆಯ ತುದಿಯಲ್ಲಿ ನಿನ್ನ ನಾಮಾಕ್ಷರಗಳಿರುವುವೋ, ಅವನು ಚಂಡಾಲನಾಗಿದ್ದರೂ, ಅವನನ್ನೇ ಮಹಾತ್ಮನೆಂದು ಹೇಳಬೇಕು. ಏಕೆಂದರೆ, ಅಂತ್ಯಕಾಲದಲ್ಲಿ ಯಾರು ನಿನ್ನ ನಾಮಕೀರ್ತನವನ್ನು ಮಾಡುವರೋ, ಅಂತವರು ಅನೇಕ ತಪಸ್ಸುಗಳನ್ನು ಮಾಡಿದವರಾಗಿಯೂ, ಅನೇಕ ಯಜ್ಞಯಾಗಾದಿ ಸತ್ಕರ್ಮಗಳನ್ನು ನಡೆಸಿದವರಾಗಿಯೂ, ಅನೇಕ ತೀರ್ಥಯಾತ್ರೆಗಳನ್ನು ಮಾಡಿದವರಾಗಿಯೂ, ವೇದಾಧ್ಯಯನ ಮಾಡಿದವರಾಗಿಯೂ ಇದ್ದಲ್ಲದೆ, ಆ ವಿಧವಾದ ಮಹಿಮೆಯನ್ನು ಹೊಂದಲಾರರು. ಅಂತ್ಯಕಾಲದಲ್ಲಿ ನಿನ್ನ ನಾಮಸ್ಮರಣವು ಲಭಿಸುವುದಕ್ಕಾಗಿಯೇ ಸತ್ಪುರುಷರೆಲ್ಲರೂ ಇಷ್ಟೊಂದು ಪ್ರಯತ್ನಪಡುವರು. ಮತ್ತು ಎಲೈ ಪರಮಪುರುಷನೆ! ನೀನು ಸರ್ವಜೀವಗಳಿಗೂ ಅಂತರ್ಯಾಮಿಯಾಗಿ ಅವರಿಂದ ಧ್ಯಾನಿಸಲ್ಪಡತಕ್ಕವನು. ಎಣೆಯಿಲ್ಲದ ಮಹಿಮೆಯುಳ್ಳವನು. ಸಮಸ್ತ ಯೋಗಿಗಳಿಗೂ ಧ್ಯಾನಯೋಗ್ಯನು. ಜೀವಾಂತರ್ಯಾಮಿಯಾಗಿದ್ದರೂ, ಜ್ಞಾನಸಂಕೋಚವಿಲ್ಲದೆ ಸ್ವಯಂಪ್ರಕಾಶವುಳ್ಳವನು. ವೇದಗರ್ಭನು. ಸರ್ವವ್ಯಾಪಿಯಾದುದರಿಂದ ವಿಷ್ಣುವೆಂದು ಕೀರ್ತಿಸಲ್ಪಡತಕ್ಕವನು. ಇಂತಹ ಪರಮಪುರುಷನಾದ ನಿನ್ನ ಪಾದಪದ್ಮಗಳನ್ನು ಮರೆಹೊಗುವೆನು" ಎಂದಳು. ಹೀಗೆ ಸ್ತುತಿಸಲ್ಪಟ್ಟ ಕಪಿಲಮುನಿಯು, ಗಂಭೀರವಾಕ್ಯದಿಂದ ತನ್ನ ತಾಯಿಯಾದ ಆ ದೇವಹೂತಿಯನ್ನು ಕುರಿತು, "ಅಮ್ಮಾ! ನಾನು ಇದುವರೆಗೆ ನಿನಗೆ ಹೇಳಿದ ಭಕ್ತಿಯೋಗವೆಂಬ ಮೋಕ್ಷೋಪಾಯವನ್ನು, ಬಹಳ ಸುಖವಾಗಿಯೇ ಸಾಧಿಸಬಹುದು. ಇದೇ ಮಾರ್ಗವನ್ನವಲಂಬಿಸಿದರೆ ಶೀಘ್ರದಲ್ಲಿಯೇ ಮೋಕ್ಷವು ಕೈಗೂಡುವುದು. ಇದೇ ನನ್ನ ಸಿದ್ಧಾಂತವು. ನೀನು ಇದೇ ಮಾರ್ಗವನ್ನು ಹಿಡಿದು ಶ್ರದ್ಧೆಯಿಂದ ನಡೆ

ಯುವವಳಾಗು! ಬ್ರಹ್ಮೋಪಾಸನವನ್ನು ನಡೆಸಿದ ಅನೇಕ ಮಹಾತ್ಮರೂ ಇದನ್ನೇ ಉತ್ತಮಮಾರ್ಗವೆಂದು ನಿಶ್ಚಯಿಸಿರುವರು. ಈ ಮಾರ್ಗವನ್ನವಲಂಬಿಸಿದವರು ಸಂಸಾರಭಯವಾಗಲೀ, ಮೃತ್ಯುಭಯವಾಗಲೀ, ಯಾವುದೂ ಇಲ್ಲದ ನನ್ನ ಸ್ಥಾನವನ್ನು ಸುಲಭವಾಗಿ ಸೇರಬಹುದು. ಈ ನನ್ನ ಮತವನ್ನು ನಿರಾಕರಿಸಿದವರಿಗೆ ಎಂದಿದ್ದರೂ ಮೃತ್ಯುಭಯವು ತಪ್ಪದು! ಆದುದರಿಂದ ನೀನು ಈ ವಿಷಯದಲ್ಲಿ ಬಹಳ ಎಚ್ಚರದಿಂದಿರಬೇಕು." ಎಂದನು. ಕಪಿಲನು ಹೀಗೆ ತನ್ನ ತಾಯಿಯಾದ ದೇವಹೂತಿಗೆ ಜ್ಞಾನಮಾರ್ಗವನ್ನು ಪದೇಶಿಸಿದಮೇಲೆ, ಆಕೆಯ ಅನುಮತಿಯನ್ನು ಪಡೆದು, ಕಣ್ಮರೆಯಾಗಿ ಹೊರಟು ಹೋದನು. ಇತ್ತಲಾಗಿ ದೇವಹೂತಿಯೂ ಕೂಡ ತನ್ನ ಪುತ್ರನಾದ ಕಪಿಲಮಹಾಮುನಿಯ ಉಪದೇಶವನ್ನನುಸರಿಸಿ, ಯೋಗಾಭ್ಯಾಸದಿಂದ ಸರಸ್ವತಿನದಿಯ ತೀರಪ್ರದೇಶಕ್ಕೆ ಅಲಂಕಾರಭೂತವಾದ ಆ ಪುಣ್ಯಾಶ್ರಮದಲ್ಲಿಯೇ ಭಗವದ್ಧ್ಯಾನದಲ್ಲಿ ದೃಢಮನಸ್ಸಿಟ್ಟು ಯೋಗನಿಷ್ಠಳಾಗಿದ್ದಳು. ತ್ರಿಸಂಧ್ಯಾಕಾಲಗಳಲ್ಲಿಯೂ ಸ್ನಾನಮಾಡುವುದರಿಂದ ಪಿಂಗಳವರ್ಣವಾಗಿಯೂ, ಸಹಜವಾಗಿಯೇ ಸುರುಳಿಗಟ್ಟಿದ ಮುಂಗುರುಳುಗಳಿಂದ ಶೋಭಿತವಾಗಿಯೂ ಇದ್ದ ಜಡೆಯನ್ನು ಧರಿಸಿ, ನಾರುಮಡಿಯನ್ನುಟ್ಟು, ಕ್ರೂರತಪಸ್ಸಿನಿಂದ ಕಂದಿದ ಮೈಯುಳ್ಳವಳಾಗಿ ದೃಢಭಕ್ತಿಯಿಂದ ಭಗವಂತನನ್ನು ಧ್ಯಾನಿಸುತಿದ್ದಳು. ತನ್ನ ಪತಿಯಾದ ಕರ್ದಮಪ್ರಜಾಪತಿಯು ಬಹುಕಾಲದವರೆಗೆ ನಡೆಸುತ್ತಿದ್ದ ತಪಸ್ಸಿನಿಂದಲೂ, ಯೋಗಾಭ್ಯಾಸದಿಂದಲೂ ಮಹಾಮಹಿಮೆಗೊಂಡುದಾಗಿಯೂ ವಿಮಾನಚಾರಿಗಳಾದ ದೇವತೆಗಳಿಗೂ ಆಶೆಹುಟ್ಟಿಸತಕ್ಕುದಾಗಿಯೂ, ಇದುವರೆಗೆ ತನ್ನ ಗೃಹಧರ್ಮಗಳಿಗೆ ಸ್ಥಾನವಾಗಿಯೂ ಇದ್ದ ತನ್ನ ಗೃಹದಲ್ಲಿಯೂ, ಅಲ್ಲಿನ ಸಮಸ್ತ ಭೋಗಸಾಮಗ್ರಿಗಳಲ್ಲಿಯೂ ಆಸೆಯನ್ನು ತೊರೆದು ಭಗವದುಪಾಸನವೊಂದರಲ್ಲಿಯೇ ಮನಸ್ಸಿಟ್ಟಳು. ಹಿಂದೆ ಕರ್ದಮನು ಈ ದೇವಹೂತಿಯ ಮನಸ್ಸಂತೋಷಾರ್ಥವಾಗಿ ತನ್ನ ತಪೋಮಹಿಮೆಯಿಂದ ನಿರ್ಮಿಸಿದ ಆ ದಿವ್ಯಭವನದ ಸೊಗಸನ್ನೂ, ಅಲ್ಲಿನ ಭೋಗಸಾಮಗ್ರಿಗಳನ್ನೂ ಕೇಳಬೇಕೆ? ನೊರೆಹಾಲಿನಂತೆ ಬಿಳುಪಾದ ಹಾಸಿಗೆಗಳು! ಅದರ ಮೇಲೆ ಸುವರ್ಣದ ಕುಸುರಿಗಳಿಂದ ಚಿತ್ರಿತಗಳಾದ ಮೇಲ್ಪುಪ್ಪಟಿಗಳು! ಅಂದವಾದ ಸುಪ್ಪತ್ತಿಗೆಗಳು! ಸುವರ್ಣ

ಮಯವಾಗಿ ಸುಖಸ್ಪರ್ಶವುಳ್ಳ ಆಸ್ತರಣಗಳು! ಪಚ್ಚೆ, ಕೆಂಪು ಮುಂತಾದ ನವರತ್ನಗಳಿಂದ ಕೆತ್ತಲ್ಪಟ್ಟು, ನಡುನಡುವೆ ಸ್ತ್ರೀ ಪ್ರತಿಮೆಗಳಿಂದಲಂಕೃತಗಳಾದ ಸ್ಫಟಿಕದ ಗೋಡೆಗಳು! ಈ ಗೋಡೆಗಳ ಮೇಲೆ ಅವಿಚ್ಛಿನ್ನವಾಗಿ ಬೆಳಗುತ್ತಿರುವ ರತ್ನದೀಪದ ಸಾಲುಗಳು! ಇಂತಹ ಗೋಡೆಗಳಿಂದಾವೃತವಾದ ಮಹೋನ್ನತವಾದ ಉಪ್ಪರಿಗೆಯ ಸುತ್ತಲೂ ಅಂದವಾದ ಗೃಹೋದ್ಯಾನಗಳು! ಅದರಲ್ಲಿ ಪುಷ್ಪಸಮೃದ್ಧಗಳಾದ ಮಂದಾರಪಾರಿಜಾತಾದಿ ಕಲ್ಪವೃಕ್ಷ ಸಮೂಹಗಳು! ಅಲ್ಲಲ್ಲಿ ಕಿವಿಗಿಂಪಾಗಿ ಕೂಗುತ್ತಿರುವ ಪಕ್ಷಿಮಿಥುನಗಳ ಮಧುರಧ್ವನಿಗಳು! ನಡುನಡುವೆ ಭ್ರಮರಜಂಕಾರಗಳು! ಆ ತೋಟದ ನಡುವೆ ತಾವರೆ ನೈದಿಲೆಗಳಿಂದ ತುಂಬಿ ಘಮಘಮಿಸುತ್ತಿರುವ ನಡೆಬಾವಿಗಳು! ಸರ್ವಸೌಭಾಗ್ಯವಿಶಿಷ್ಟವಾದ ಇಂತಹ ಉಪವನಗಳಲ್ಲಿ, ಕಿನ್ನರದಂಪತಿಗಳು ಆಗಾಗ ಬಂದು ತಮ್ಮ ಗುಣಗಳನ್ನು ಎಡೆಬಿಡದೆ ಗಾನಮಾಡುತ್ತಿರುವರು. ಮತ್ತು ಕರ್ದಮನು ಈ ಒಂದೊಂದು ಕ್ರೀಡಾಸರೋವರದಲ್ಲಿಯೂ ಉದ್ಯಾನವನದಲ್ಲಿಯೂ, ಎಷ್ಟೋ ಪ್ರೇಮದಿಂದ ತನ್ನನ್ನು ಉಪಲಾಲಿಸುತ್ತಿದ್ದನು. ಹೀಗೆ ಈ ಭೋಗಸ್ಥಾನಗಳಲ್ಲಿ ಅನೇಕ ಭೋಗಗಳನ್ನನುಭವಿಸುತ್ತಿದ್ದ ದೇವಹೂತಿಯು ದೇವತಾಸ್ತ್ರೀಯರಿಗೂ ಆಸೆಹುಟ್ಟಿಸತಕ್ಕ ಅವೆಲ್ಲವನ್ನೂ ಹುಲ್ಲಿಗಿಂತಲೂ ಕಡೆಯಾಗಿ ಭಾವಿಸಿ, ಕೇವಲ ಭಗವದ್ಧ್ಯಾನವೊಂದರಲ್ಲಿಯೇ ಮನಸ್ಸಿಟ್ಟು ಅವೆಲ್ಲವನ್ನೂ ಬಿಟ್ಟು ಹೊರಟಳು. ಹೀಗೆ ದೇವಹೂತಿಯು ಕೇವಲ ವಿರಕ್ತಿಯಿಂದ ಸರ್ವಸಂಗಪರಿತ್ಯಾಗಮಾಡಿ ಹೊರಟಾಗಲೂ ಕೂಡ, ತನ್ನ ಪುತ್ರನಾದ ಕಪಿಲಮುನಿಯನ್ನು ಬಿಟ್ಟು ಹೋಗಬೇಕೆಂಬ ವ್ಯಸನವು ಮಾತ್ರ ಅವಳ ಮನಸ್ಸನ್ನು ಬಹಳವಾಗಿ ಬಾಧಿಸುತ್ತಿತ್ತು. ಹಿಂದೆ ತನ್ನ ಪತಿಯಾದ ಕರ್ದಮನು ತನ್ನನ್ನು ಬಿಟ್ಟು ಹೋದುದೊಂದು, ಈಗಿನ ಪುತ್ರವಿರಹವೊಂದು, ಇವೆರಡೂ ಅವಳ ಮನಸ್ಸನ್ನು ಬಹಳವಾಗಿ ಬಾಧಿಸುತ್ತಿತ್ತು. ಈ ದುಃಖದಿಂದ ತಲೆಯನ್ನು ತಗ್ಗಿಸಿ ಕಂದಿದ ಮುಖವುಳ್ಳವಳಾಗಿದ್ದಳು. ಚಿದಚಿದೀಶ್ವರ ತತ್ವವನ್ನು ತಿಳಿದವಳಾಗಿದ್ದರೂ ಕೂಡ ಆ ದೇವಹೂತಿಯು, ಈ ಪುತ್ರವಿರಹವನ್ನು ಸಹಿಸಲಾರದೆ, ಕರುವನ್ನಗಲಿದ ಹಸುವಿನಂತೆ ದುಃಖದಿಂದ ತಪಿಸುತಿದ್ದಳು. ಸರ್ವಸಂಗಪರಿತ್ಯಾಗಮಾಡಿ, ಕೇವಲ ವೈರಾಗ್ಯದಿಂದ ತಪೋವನಕ್ಕೆ ಹೊರಟ ದೇವಹೂತಿಗೆ,

ಇನ್ನೂ ಈ ಪುತ್ರಮೋಹವು ಮಾತ್ರ ಬಿಟ್ಟು ಹೋಗಲಿಲ್ಲವೇ ಎಂದು ನೀನು ಶಂಕಿಸಬಹುದು. ವಿದುರಾ! ಅದು ಹಾಗಲ್ಲ! ಕೇವಲ ಭಗವದ್ಧ್ಯಾನಪರಳಾದ ದೇವಹೂತಿಯ ಮನಸ್ಸು, ಪುತ್ರಸ್ನೇಹ ನೆವದಿಂದ ಭಗವಂತನಲ್ಲಿಯೇ ನೆಲೆಗೊಂಡಿತ್ತಲ್ಲದೆ, ವಿಷಯದಲ್ಲಿ ಪ್ರವರ್ತಿಸಲಿಲ್ಲ. ಹೀಗೆ ದೇವಹೂತಿಯು ತನ್ನ ಮನೆಯಲ್ಲಿಯೇ ಸ್ವಲ್ಪಕಾಲದವರೆಗೆ ಪುತ್ರವಿರಹದಿಂದ ಕೊರಗುತ್ತಿದ್ದು, ಅಲ್ಲಿಂದ ಹೊರಟ ಮೇಲೆ, ತನ್ನ ಮಗನಾದ ಕಪಿಲಮುನಿಯೂ ಹೇಳಿದ್ದಂತೆಯೇ ಯೋಗಿಗಳಿಗೆ ಧ್ಯಾನಗೋಚರನಾಗಿಯೂ, ಪ್ರಸನ್ನಮುಖವುಳ್ಳವನಾಗಿಯೂ ಇರುವ ಭಗವಂತನ ಸ್ವರೂಪವನ್ನು, ಮೊದಲು ಸಾಕಲ್ಯವಾಗಿಯೂ ಆ ಮೇಲೆ ಆತನ ಬೇರೆ ಬೇರೆ ಅವಯವಗಳ ಸೌಂದರ್ಯವನ್ನು ಪ್ರತ್ಯೇಕವಾಗಿಯೂ, ಧ್ಯಾನಿಸುತ್ತಬಂದಳು. ಬ್ರಹ್ಮಪ್ರಾಪ್ತಿಗೆ ಹೇತುವಾದ ಜ್ಞಾನಯೋಗ ಕರ್ಮಯೋಗಗಳಿಂದಲೂ, ವೈರಾಗ್ಯದಿಂದ ಸಹಕರಿಸಲ್ಪಟ್ಟ ಭಕ್ತಿಯೋಗದಿಂದಲೂ, ಮನಸ್ಸನ್ನು ಶುದ್ಧಿಗೊಳಿಸಿ, ಆ ಶುದ್ಧಮನಸ್ಸಿನಿಂದ, ಸರ್ವಜ್ಞನಾಗಿಯೂ, ಸ್ವಯಂಪ್ರಕಾಶವುಳ್ಳವನಾದುದರಿಂದ ಮಾಯಾಗುಣಗಳಾಕ ಶೋಕಮೋಹಾದಿಗಳೊಂದೂ ಇಲ್ಲದವನಾಗಿಯೂ ಇರುವ ಭಗವಂತನನ್ನು ಧ್ಯಾನಿಸುತ್ತ, ಜೀವಾತ್ಮರಿಗೆ ಆಧಾರಭೂತನಾದ ಪರಮಾತ್ಮನಲ್ಲಿ ಮನಸ್ಸನ್ನು ನಿಶ್ಚಲವಾಗಿ ನಿಲ್ಲಿಸಿ, ಶೀತೋಷ್ಣಾದಿಗಳನ್ನೂ ಲಕ್ಷ್ಯಮಾಡದೆ, ಆತ್ಮಾನುಭವರೂಪವಾದ ಆನಂದವನ್ನನುಭವಿಸುತಿದ್ದಳು. ಅವಳ ಮನಸ್ಸು ಪ್ರಕೃತಿ ವಿಲಕ್ಷಣನಾದ ಅಂತರಾತ್ಮನೊಬ್ಬನಲ್ಲಿಯೇ ಅವಿಚ್ಛಿನ್ನವಾಗಿ ನೆಲೆಗೊಂಡುದರಿಂದ, ಅವಳಿಗೆ ಆ ಪ್ರಕೃತಿ ಗುಣದಿಂದುಂಟಾಗತಕ್ಕ ದೇಹಾತ್ಮಾಭಿಮಾನವೇ ಮೊದಲಾದ ಭ್ರಮವೆಲ್ಲವೂ ಕ್ರಮಕ್ರಮವಾಗಿ ಬಿಟ್ಟುಹೋಯಿತು. ನಿದ್ರೆಯಿಂದೆದ್ದವನಿಗೆ ಕನಸಿನಲ್ಲಿ ಕಂಡ ಪದಾರ್ಥಗಳು ಹೇಗೋ ಹಾಗೆ, ಅವಳಿಗೆ ತನ್ನ ದೇಹವೇ ಅಸಾರವೆಂದು ತೋರಿತು. ಅವಳ ಶರೀರಕ್ಕೆ ತಕ್ಕ ಪೋಷಣೆಯಿಲ್ಲದಿದ್ದರೂ, ಅವಳ ಮನಸ್ಸಿಗೆ ಅದರ ಚಿಂತೆಯೊಂದೂ ಅಂಟದುದರಿಂದ ಅವಳ ದೇಹವು ಸ್ವಲ್ಪಮಾತ್ರವೂ ಕೃಶಿಸಲಿಲ್ಲ! ಅಭ್ಯಂಗನಾದಿಗಳೊಂದೂ ಇಲ್ಲದೆ ಅವಳ ದೇಹವು ಕೊಳೆ ಮುಚ್ಚಿದ್ದರೂ, ಅವಳ ಮನಸ್ಸು ನಿಷ್ಕಲ್ಮಷವಾಗಿದ್ದುದರಿಂದ ಹೊಗೆಯಿಲ್ಲದ ಅಗ್ನಿಯಂತೆ ಪ್ರಕಾಶಿಸುತ್ತಿದ್ದಳು. ಮತ್ತು ಆಕೆಯು ತನ್ನ ಮನಸ್ಸನ್ನು ಶ್ರೀಹರಿಯಲ್ಲಿ ನೆಲೆಗೊಳಿಸಿ, ಅದರಿಂ

ದುಂಟಾದ ಆನಂದಸಾಗರದಲ್ಲಿ ಮುಳುಗಿದ್ದುದರಿಂದ, ಇತ್ತಲಾಗಿ, ತಲೆಗೆದರಿ ಬಟ್ಟೆಯಿಲ್ಲದೆ ನಿರ್ವಾಣವಾಗಿದ್ದ ತನ್ನ ದೇಹವನ್ನೂ ತಾನು ಅರಿಯದಂತಿದ್ದಳು. ಹೀಗೆ ದೇವಹೂತಿಯು ಕಪಿಲಮುನಿಯಿಂದುಪದೇಶಿಸಲ್ಪಟ್ಟ ಯೋಗಮಾರ್ಗವನ್ನು ಹಿಡಿದು, ಮಹಾನಂದಸ್ವರೂಪನಾದ ಪರಮಪುರುಷನನ್ನು ಶೀಘ್ರದಲ್ಲಿಯೇ ಸೇರಿಬಿಟ್ಟಳು. ಆಃ! ಇದಲ್ಲವೇ ಆಶ್ಚರ್ಯವು! ಸಾಮಾನ್ಯವಾಗಿ ಸ್ತ್ರೀಯರೇ ಚಪಲ ಸ್ವಭಾವವುಳ್ಳವರು! ಮತ್ತು ವಿವೇಕಹೀನರು! ಅದರಲ್ಲಿಯೂ ಈ ದೇವಹೂತಿಯು ದೇವತೆಗಳಿಗೂ ಆಸೆ ಹುಟ್ಟಿಸತಕ್ಕ ಎಣೆಯಿಲ್ಲದ ಭೋಗಗಳನ್ನು ಅನುಭವಿಸಿ ರುಚಿಕಂಡವಳು! ಇಂತವಳೇ ಅವೆಲ್ಲವನ್ನು ತೃಣಪ್ರಾಯವಾಗಿ ತೊರೆದು, ಯೋಗಮಾರ್ಗವನ್ನು ಹಿಡಿದು ಪರಬ್ರಹ್ಮವನ್ನು ಸೇರಿದ ಮೇಲೆ, ಇದಕ್ಕಿಂತಲೂ ಆಶ್ಚರ್ಯವೇನುಂಟು! ಓ ವಿದುರಾ! ಆ ದೇವಹೂತಿಯು ಯೋಗಸಿದ್ಧಿಯನ್ನು ಪಡೆದ ಪುಣ್ಯಸ್ಥಳವು ಈಗಲೂ ಸಿದ್ಧಾಶ್ರಮವೆಂಬ ಹೆಸರಿನಿಂದ ಮೂರು ಲೋಕದಲ್ಲಿಯೂ ಪ್ರಸಿದ್ಧಿಗೊಂಡಿರುವುದು. ಮತ್ತು ಆ ದೇವಹೂತಿಯ ಶರೀರವು, ಅವಳು ನಡೆಸುತ್ತಿದ್ದ ಯೋಗಬಲದ ಮಹಿಮೆಯಿಂದ, ನೆರೆ, ಸುಕ್ಕು, ಮುಂತಾದ ಮುಪ್ಪಿನ ವಿಕಾರಗಳೊಂದೂ ಇಲ್ಲದೆ ದೃಢವಾಗಿದ್ದುದಲ್ಲದೆ, ಅವಳು ಆ ದೇಹವನ್ನು ತೊರೆದಕೂಡಲೇ ಅದು, ಒಂದು ನದೀರೂಪದಿಂದ ಪ್ರವಹಿಸಿ, ಸರ್ವಾರ್ಥಸಿದ್ಧಿಯನ್ನುಂಟುಮಾಡುತ್ತ, ಅನೇಕ ಸಿದ್ಧಗಣಗಳಿಂದ ಸೇವಿತವಾಗಿದ್ದಿತು. ಅತ್ತಲಾಗಿ ಕಪಿಲಮುನಿಯು, ತಾಯಿಯ ಅನುಮತಿಯನ್ನು ಪಡೆದು, ಅಲ್ಲಿನ ಕರ್ದಮಾಶ್ರಮದಿಂದ ಈಶಾನ್ಯ ದಿಕ್ಕಿಗೆ ಹೊರಟನು. ದಾರಿಯಲ್ಲಿ, ಸಿದ್ಧ, ಚಾರಣ, ಗಂಧರ್ವಾಪ್ಸರಸ್ಸುಗಳೂ ಮಹರ್ಷಿಗಳೂ ತನ್ನನ್ನು ಸ್ತುತಿಸುತ್ತ, ಹಿಂಬಾಲಿಸಿ ಬರಲು, ಅದೇ ದಾರಿಯಾಗಿ ಸಮುದ್ರತೀರವನ್ನು ಸೇರಿದನು. ಅಲ್ಲಿ ಸಮುದ್ರನು ತನ್ನನ್ನು ಸತ್ಕರಿಸಿ, ತನಗೆ ಸ್ಥಳವನ್ನು ಕೊಡಲು, ಅದನ್ನೇ ತನಗೆ ನಿವಾಸಸ್ಥಾನವಾಗಿ ಮಾಡಿಕೊಂಡು, ಲೋಕಕ್ಷೇಮಾರ್ಥವಾಗಿ ತಾನು ಅಲ್ಲಿಯೇ ತಪಸ್ಸು ಮಾಡುತ್ತ ನಿಂತನು. ಈಗಲೂ ಅಲ್ಲಿ ಕಪಿಲರೂಪಿಯಾದ ಆ ಭಗವಂತನು ಸಾಂಖ್ಯಪ್ರವರ್ತಕರಾದ ಅನೇ[illegible] ಯೋಗವನ್ನವಲಂಬಿಸಿರುವನು. ಓ [illegible] ವಮನುವಿನ



ಚರಿತ್ರವನ್ನು ಹೇಳುವುದಕ್ಕೆ ತೊಡಗಿ, ಪ್ರಸ್ತಾವವಶದಿಂದ ಕಪಿಲ ದೇವಹೂತಿಯರ ಸಂವಾದರೂಪವಾದ ಈ ಸಾಂಖ್ಯತತ್ವವನ್ನೂ ತಿಳಿಸಿದೆನು. ಲೋಕಪಾವನವಾಗಿಯೂ, ರಹಸ್ಯವಾಗಿಯೂ ಇರುವ ಈ ಆತ್ಮಯೋಗವನ್ನು ಯಾರು ಕೇಳುವರೋ, ಅವರು ಭಗವಂತನಲ್ಲಿ ಭಕ್ತಿಯೋಗವನ್ನು ಹೊಂದಿ, ಆ ಭಗವಂತನ ಪಾದಮೂಲವನ್ನು ಸೇರುವರು" ಎಂದು ಮೈತ್ರೇಯ ಮಹರ್ಷಿಯು ವಿದುರನಿಗೆ ಹೇಳಿದ ವಿಚಾರವನ್ನು, ಶುಕಮುನಿಯು ಪರೀಕ್ಷಿದ್ರಾಜನಿಗೆ ತಿಳಿಸಿದುದಾಗಿ, ಸೂತಕಪೌರಾಣಿಕನು ಶೌನಕಾದಿಗಳಿಗೆ ಹೇಳಿದನು. ಇಲ್ಲಿಗೆ ಮೂವತ್ತಮೂರನೆಯ ಅಧ್ಯಾಯವು.

ತೃತೀಯಸ್ಕಂಧವು ಸಮಾಪ್ತವು.

ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ.

ಶುಭಂ ಭೂಯಾತ್.

---

Printed at The Ananda Press, Mylapore, Madras 4—1954

